# ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ

## (ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ರಾಜಣ್ಣ ಎಂ.

ಮಾರ್ಗದರ್ಶಕರು
ಡಾ. ಎ.ಎಸ್. ಪ್ರಭಾಕರ
ಸಹಪ್ರಾಧ್ಯಾಪಕರು,
ಬುಡಕಟ್ಟು ಅಧ್ಯಯನ ವಿಭಾಗ




ಸಮಾಜ ವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೨

# ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನ

## (ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)

(ಸಮಾಜಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
**ರಾಜಣ್ಣ ಎಂ.**

ಮಾರ್ಗದರ್ಶಕರು
**ಡಾ. ಎ.ಎಸ್. ಪ್ರಭಾಕರ**
ಸಹಪ್ರಾಧ್ಯಾಪಕರು,
ಬುಡಕಟ್ಟು ಅಧ್ಯಯನ ವಿಭಾಗ






ಸಮಾಜ ವಿಜ್ಞಾನಗಳ ನಿಕಾಯ
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೨

# ಮಾರ್ಗದರ್ಶಕರ ಪ್ರಮಾಣ ಪತ್ರ

ರಾಜಣ್ಣ ಎಂ ಅವರು **"ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗಳ ಅಧ್ಯಯನ"**(ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಿದ್ದಾರೆ. ಇದು ಅವರು ಸ್ವತಃ ಕ್ಷೇತ್ರಕಾರ್ಯ ಕೈಗೊಂಡು, ಸಂಗ್ರಹಿಸಿದ ಸಂಶೋಧನ ಸಾಮಗ್ರಿಯ ಆಧಾರದ ಮೇಲೆ ರಚಿತವಾಗಿದೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಇದನ್ನು ಭಾಗಶಃ ಆಗಲಿ, ಪೂರ್ಣವಾಗಲಿ, ಬೇರಾವುದೇ ಡಿಪ್ಲೊಮ ಅಥವಾ ಪದವಿಗಾಗಿ ಒಪ್ಪಿಸಿಲ್ಲವೆಂದು ಈ ಮೂಲಕ ದೃಢೀಕರಿಸಿದೆ.

**ದಿನಾಂಕ:** ೨೨/೮/೧೨
**ಸ್ಥಳ : ವಿದ್ಯಾರಣ್ಯ**

**(ಡಾ. ಎ.ಎಸ್. ಪ್ರಭಾಕರ)**
ಮಾರ್ಗದರ್ಶಕರು ಹಾಗೂ ಸಹಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬.

## ಸಂಶೋಧಕರ ಪ್ರಮಾಣ ಪತ್ರ

**"ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗಳ ಅಧ್ಯಯನ"**(ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ) ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಎ.ಎಸ್. ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಪದವಿ ಇಲ್ಲವೆ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ದಿನಾಂಕ:** ೨೩/೮/೧೨
**ಸ್ಥಳ : ವಿದ್ಯಾರಣ್ಯ**

(ರಾಜಣ್ಣ ಎಂ.)
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬.

# ಪರಿವಿಡಿ

## ಕೋಷ್ಟಕಗಳ ವಿವರ

**ಛಾಯಾಚಿತ್ರಗಳು**

# ಅಧ್ಯಾಯ ಒಂದು

# ಮಲೆಕುಡಿಯ ಸಮುದಾಯ

**ಪೀಠಿಕೆ**

# ಮಲೆಕುಡಿಯ ಸಮುದಾಯ

**ಪೀಠಿಕೆ**

ತುಳುನಾಡಿನ ಸಂಸ್ಕೃತಿ ಮತ್ತು ಜೀವನ ಪರಂಪರೆ ಮೌಲ್ಯಗಳು ಶ್ರೀಮಂತವಾಗಿದ್ದು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಎಲ್ಲಾ ಜಾತಿ ಮತ್ತು ಧರ್ಮಗಳು ಸಹ ತುಳುನಾಡಿನ ಸಂಸ್ಕೃತಿಯ ಭಾಗವಾಗಿದೆ. ಅಂತೆಯೇ ಈ ಪ್ರದೇಶದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ತುಳುನಾಡಿನ ಒಂದು ಭಾಗವಾಗಿದೆ. ಇವರ ಜೀವನ ಪದ್ಧತಿ ರೂಢಿ, ಪರಂಪರೆ, ಜಾತ್ರೆ, ಉತ್ಸವ, ಆಚರಣೆ ಮೌಲ್ಯಗಳೆಲ್ಲವೂ ತುಳುನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಕಾಡಿನ ಬದುಕಿನ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡು, ತುಳುನಾಡಿನ ಬದುಕಿಗೆ ಹೊಂದಿಕೊಂಡು ಬಂದಿದ್ದಾರೆ. ಒಂದು ಕಡೆ ಶಿವಪಾರ್ವತಿಯ ಪ್ರಧಾನ ಆರಾಧಕರು ಭಕ್ತರಾಗಿದ್ದಾರೆ.  ಮತ್ತೊಂದು ಕಡೆ ವಿಷ್ಣುವನ್ನು ಆರಾಧಿಸುತ್ತಾರೆ. ಇದೆಲ್ಲವನ್ನೂ ಮೀರಿ ಇವರು ಪ್ರಕೃತಿ ಪೂಜೆ, ನಾಗಾರಾಧನೆ, ಪಿತೃಪೂಜೆ, ದೈವಗಳ ಆರಾಧಕರಾಗಿ ತಮ್ಮ ಪ್ರಾಚೀನ ಪರಂಪರೆಯನ್ನು ಉಳಿಸಿಕೊಂಡು ಬಂದಿದ್ದಾರೆ. ಇದು ಇವರ ಪ್ರಾಚೀನ ಪರಂಪರೆಯ ಸಂಕೇತವಾಗಿದೆ. ಇವರು ವಾಸವಾಗಿರುವ ಪ್ರದೇಶಗಳಲ್ಲಿನ ಸಮೀಪದಲ್ಲಿ ಒಂದಲ್ಲ ಒಂದು ಶಿವ ದೇವಾಲಯವಿರುತ್ತದೆ. ಈ ದೇವರ ಆರಾಧಕರು ಪರಮ ಭಕ್ತರು ಮಾತ್ರವಲ್ಲ ಇವರು ಜಾತ್ರೆ ಉತ್ಸವಗಳಲ್ಲಿ ಇವರು ಮಾಡುತ್ತಾ ಬಂದಿರುವ ಸೇವಾ ಪರಂಪರೆಯು ಇವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಪ್ರತಿನಿಧಿಸುತ್ತವೆ.

ಅನಾದಿ ಕಾಲದಿಂದಲೂ ಕಾಡಿನಲ್ಲಿದ್ದು, ಇಂದು ನಾಡಿನ ಬದುಕು ಸಾಗಿಸುತ್ತಿರುವ ಇವರು ಅರಣ್ಯ ಗಿರಿ ಶಿಖರದ ಪ್ರದೇಶಗಳ ತುತ್ತತುದಿಯಲ್ಲಿ ಇಲ್ಲವೆ, ಇಳಿಜಾರಾದ ಅಂಚಿನಲ್ಲಿ ಇವರು ಬದುಕುತ್ತಿದ್ದಾರೆ. ಇವರು ಬದುಕಿ ಬಾಳಿದ ಇವರದ್ದೇ ಆದ ನೆಲಕ್ಕೆ ಇಂದಿಗೂ ಹಕ್ಕು ದಾಖಲೆಗಳಿಲ್ಲದೇ ಇರುವ ದುರಂತ ಹಾಗೂ ಆಘಾತಕಾರಿಯ ದೃಶ್ಯ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗ, ಇವರ ಕುಟುಂಬವಾರು ಸಮೀಕ್ಷೆಯ ಸಮಯದಲ್ಲಿ ಇವರಿಂದ ಮಾಹಿತಿ ಪಡೆಯವಾಗಲೇ ಅರ್ಥವಾಯಿತು. ಇವರ ವಾಸದ ನೆಲೆ, ಕೃಷಿ ಮಾಡಿಕೊಂಡು ಬರುತ್ತಿರುವ ಭೂಮಿಗೆ ದಾಖಲೆಗಳಿಗಾಗಿ ಅಲೆದಾಡಿ ಇದು ಸಾಧ್ಯಾವಾಗದೇ ಅಸಹಾಯಕ ಬದುಕು ಸಾಗಿಸುತ್ತಿರುವುದು, ಇವರ ಬದುಕಿನ ಸ್ಥಿತಿಗತಿಗೆ ಹಿಡಿದ ಕೈಗನ್ನಡಿಯಾಗಿದೆ.

ಇದು ಇವರ ಮೂಲಭೂತವಾದ ಸಮಸ್ಯೆಯಾಗಿದೆ. ಒಂದು ಕಡೆ ನೆರಿಯಾ, ನಾರಾವಿ, ಬಂಜಾರುಮಲೆಯಂತಹ ಪ್ರದೇಶಗಳಲ್ಲಿ ಪ್ಲಾಂಟರ್ಸ್ ಕಾಯಿದೆ ಇವರ ಬದುಕಿಗೆ ಗಂಡಾಂತರವಾದರೆ, ಶಿಶಿಲ, ಹತ್ಯಡ್ಕ, ಸುಬ್ರಹ್ಮಣ್ಯ, ಧರ್ಮಸ್ಥಳ, ಕೊಕ್ಕಡ, ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಮುಂತಾದ ಕಡೆಗಳಲ್ಲಿ ಅರಣ್ಯ ಕಾಯಿದೆ ಇವರ ಬದುಕನ್ನು ಈಗಲೂ ಕತ್ತಲಾಗಿಸಿದೆ. ಈ ಕಾಯಿದೆಗಳ ಪರಿಣಾಮವಾಗಿ ಈಗಲೂ ಸಹ ಕಾಡಿನಲ್ಲಿದ್ದರೂ, ನಾಡಿಗೆ ಬಂದರೂ ಏನೂ ವ್ಯತ್ಯಾಸವೇ ಇಲ್ಲದಂತಹ ಸ್ಥಿತಿ ನಿರ್ಮಾಣವಾಗಿದೆ.

ಕರ್ನಾಟಕದಲ್ಲಿ ಗುರುತಿಸಲಾದ ಬುಡಕಟ್ಟು ಸಮುದಾಯಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಮರಾಠಿನಾಯ್ಕ, ಮಲೆಕುಡಿಯ, ಕೊರಗ ಈ ಮೂರು ಸಮುದಾಯಗಳನ್ನು ಬುಡಕಟ್ಟು ಸಮುದಾಯಗಳೆಂದು ಪರಿಗಣಿಸಲಾಗಿದೆ. ಈ ಸಮುದಾಯಗಳಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯವು ಒಂದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯಗಳ ಅಧ್ಯಯನದಲ್ಲಿ ಒಂದು ವಿಶಿಷ್ಟವಾದ ಪ್ರಾಚೀನ ಪರಂಪರೆ, ಜೀವನ ಶೈಲಿ, ಸಂಸ್ಕೃತಿ, ಜೀವನ ಕೌಶಲ್ಯಗಳು ಹಾಗೂ ದೈವ ಆರಾಧನೆಯಲ್ಲಿ ಪ್ರಸಿದ್ಧರಾದ ಮಲೆಕುಡಿಯರು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ತಮ್ಮದೇ ಆದ ಪರಿಮಿತಿಯೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಈ ಸಮುದಾಯವನ್ನು ಕುರಿತು ಇದುವರೆಗೂ ನಡೆಸಿದ ಹಲವಾರು ವಿದ್ವಾಂಸರ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳ ಪರಿಕಲ್ಪನೆಗೆ ತಮ್ಮದೇ ಆದ ಇತಿಹಾಸವಿದೆ. ಸಮುದಾಯದ ಪರಿಕಲ್ಪನೆಯಲ್ಲಿ 'ಆದಿವಾಸಿ ಸಮುದಾಯ' ಎಂದು ಕರೆಯುವ 'ಆದಿವಾಸಿಗಳು' ಎಂಬ ಕಲ್ಪನೆ ಅಕ್ಷರಪೂರ್ವ ಸಂಸ್ಕೃತಿ 'Pre-literate culture'ನ್ನು ಪ್ರತಿನಿಧಿಸುತ್ತದೆ. ಈಗ ಭಾರತದ ಸಂವಿಧಾನದಲ್ಲಿ ಪರಿಶಿಷ್ಟಪಂಗಡ ಎಂದು ಕರೆಯಲಾಗುವ ಆದಿವಾಸಿ ಸಮುದಾಯವು ಭಾರತದ ಹಿಂದುಳಿದ ವರ್ಗಗಳ ಎರಡನೇ ದೊಡ್ಡ ಸಮೂಹವಾಗಿದೆ. ೧೯೯೧ರ ಜನಗಣತಿಯ ವರದಿಯ ಪ್ರಕಾರ ಭಾರತದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ೭.೮.೮% ರಷ್ಟು ಜನಸಂಖ್ಯೆ ಪರಿಶಿಷ್ಟ ಪಂಗಡದವರಿದ್ದಾರೆ.

ಭಾರತದ ೨೩ ರಾಜ್ಯಗಳಲ್ಲಿ ಪ್ರವಾಸ ಮಾಡಿದ್ದ ರಾಮಚಂದ್ರ ಗುಹಾರವರು ಅರುಣಾಚಲ ಪ್ರದೇಶವನ್ನು ತನ್ನ ನೆಚ್ಚಿನ ನಿರೀಕ್ಷೆಗಳ ರಾಜ್ಯವೆಂದು ಪರಿಗಣಿಸಿದ್ದರು. ಅರ್ಥಶಾಸ್ತ್ರದ ವಿಧ್ಯಾರ್ಥಿಯಾಗಿದ್ದ ಗುಹಾರವರು ಅರುಣಾಚಲ ಪ್ರದೇಶವನ್ನು ಕುರಿತು ವಿಧ್ಯಾರ್ಥಿಯಾಗಿದ್ದಾಗಲೇ ಓದಿ ತಿಳಿದುಕೊಂಡಿದ್ದರು. ತನ್ನ ಕಾಲೇಜು ಗ್ರಂಥಾಲಯದಲ್ಲಿ "The Tribal world of verior Elvin" ಎಂಬ ಪುಸ್ತಕವನ್ನು ತೆಗೆದುಕೊಂಡು ಓದುತ್ತಾರೆ. ಆಕ್ಸ್‌ಫರ್ಡ್ ವಿದ್ವಾಂಸರಾಗಿದ್ದ ವೆರಿಯರ್ ಎಲ್ವಿನ್‌ರವರು ಭಾರತದ ಆದಿವಾಸಿ ಜನರೊಟ್ಟಿಗೆ ತನ್ನ ಬದುಕನ್ನು ಕಟ್ಟಿಕೊಂಡಿದ್ದ ಕಥೆಯನ್ನೊಳಗೊಂಡ ವಿವರ ಈ ಪುಸ್ತಕದಲ್ಲಿತ್ತು. ಈ ಗ್ರಂಥದ ಅಧ್ಯಯನದಿಂದಾಗಿ ಅರ್ಥಶಾಸ್ತ್ರದಲ್ಲಿ ಪದವಿ ಪಡೆಯಬೇಕೆಂದಿದ್ದ ರಾಮಚಂದ್ರಗುಹಾ ಅರ್ಥಶಾಸ್ತ್ರ ವಿಧ್ಯಾರ್ಥಿಯಿಂದ ಮಾನವಶಾಸ್ತ್ರಕ್ಕೆ ತನ್ನ ಅಧ್ಯಯನ ಕ್ಷೇತ್ರವನ್ನು ಬದಲಾಯಿಸಿಕೊಳ್ಳುತ್ತಾರೆ. ಎಲ್ವಿನ್‌ರ ಈ ಪುಸ್ತಕವು ಸುಮಾರು ೨೦ ವರ್ಷಗಳ ಕಾಲ ಭಾರತದ ಮಧ್ಯಭಾಗದಲ್ಲಿ ನೆಲೆಸಿರುವ ಆಧಿವಾಸಿ ಸಮುದಾಯಗಳನ್ನು

ಕುರಿತ ಕೃತಿಯಾಗಿದೆ. ಈ ಪ್ರದೇಶಗಳನ್ನು ಈಗ ಛತ್ತೀಸ್‌ಘಡ, ಪಧ್ಯಪ್ರದೇಶ, ಹಾಗೂ ಒಡಿಸ್ಸಿ ಎಂದು ಕರೆಯಲಾಗುತ್ತದೆ. ಭಾರತದ ಸ್ವಾತಂತ್ರ್ಯದ ನಂತರ ಎಲ್ವಿನ್‌ರವರು ಭಾರತದ ನಾಗರೀಕರೂ ಆಗುತ್ತಾರೆ. ಆಗ ಅರುಣಾಚಲ ಪ್ರದೇಶವನ್ನು ಈಶಾನ್ಯದ ಗಡಿ ಕಾರ್ಯಾಲಯ ಎಂದು ಕರೆಯಲಾಗುತ್ತಿತ್ತು. ೧೯೫೪ರಲ್ಲಿ ಅವರನ್ನು ನೆಫಾ(NEFA) ಆದಿವಾಸಿ ವ್ಯವಹಾರಗಳ ಸಲಹೆ ಗಾರರನ್ನಾಗಿ ನೇಮಕ ಮಾಡಲಾಯಿತು. ಹತ್ತು ವರ್ಷಗಳ ಕಾಲ ಸೇವೆ ಮಾಡಿದ ನಂತರ ಎಲ್ವಿನ್‌ರವರು ನಿಧನರಾಗುತ್ತಾರೆ.

ಈ ಹತ್ತು ವರ್ಷಗಳ ಸೇವಾ ಅವಧಿಯಲ್ಲಿ ಆದಿವಾಸಿ ಸಮುದಾಯಗಳು ಇಲ್ಲಿನ ಲೇವಾದೇವಿ ಗಾರರು ಹಾಗೂ ಭೂ ಮಾಲೀಕರಿಂದ ಶೋಷಣೆಗೆ ಒಳಗಾಗಿ ಖಿನ್ನತೆಗೆ ಒಳಗಾಗಿರುವ ಸಂಗತಿ ಯಿಂದ ತನ್ನ ನೈತಿಕ ಸ್ಥೈರ್ಯವನ್ನು ಕಳೆದುಕೊಂಡಿದ್ದರು. ಸರ್ಕಾರ ಇವರ ವಾಸದ ಪ್ರದೇಶಗಳಾದ ಕಾಡನ್ನು ವಶಕ್ಕೆ ತೆಗೆದುಕೊಂಡಿತ್ತು. ಇವರ ಸಂಸ್ಕೃತಿ ಹೀನಾಯಸ್ಥಿತಿಗೆ ತಲುಪಿತ್ತು. ಆದರೆ ನೆಫಾ(NEFA)ದ ಆದಿವಾಸಿ ಸಮುದಾಯವು ಅರುಣಾಚಲದಲ್ಲಿರುವ ದೂರ ಪ್ರದೇಶದಿಂದಾಗಿ ರಕ್ಷಿತರಾಗಿದ್ದಾರೆ ಎಂಬುದನ್ನು ಎಲ್ವಿನ್ ಕಂಡುಕೊಂಡಿದ್ದರು. ಇವರು ತನ್ನ ಭೂಮಿ ತಾವು ವಾಸವಾಗಿದ್ದ ಕಾಡುಗಳ ಮೇಲೆ ನಿಯಂತ್ರಣವನ್ನು ಹೊಂದಿದ್ದರು. ಹಿಂದೂ ಅಥವಾ ಕ್ರೈಸ್ತ ಧರ್ಮಗಳ ಧರ್ಮ ಪ್ರಚಾರದಿಂದ ಇವರು ಮುಕ್ತರಾಗಿದ್ದರು. ಅಲ್ಲದೆ ಇವರು ಏಕತೆಯನ್ನು ಪ್ರದರ್ಶಿಸುತ್ತಿದ್ದರು. ತಮ್ಮ ಸಂಸ್ಕೃತಿ, ಕಲೆ, ಸಂಗೀತ, ನೃತ್ಯದ ಬಗ್ಗೆ ಅಪಾರವಾದ ಗೌರವವನ್ನು ಹೊಂದಿದ್ದರು. ಸಮುದಾಯದ ಹಿತರಕ್ಷಣೆಗೆ ಸರ್ಕಾರ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಎಲ್ವಿನ್ ಮನಗೊಂಡಿದ್ದರು. ಆಧುನಿಕ ಔಷಧ ಪದ್ಧತಿ, ವಿಜ್ಞಾನ, ಶಿಕ್ಷಣದ ಸಂಪರ್ಕ ಮೂಲಕ ಈ ಆದಿವಾಸಿ ಸಮುದಾಯಗಳನ್ನು ಸಂರಕ್ಷಿಸಿ ಅಭಿವೃದ್ಧಿಪಡಿಸಬೇಕೆಂಬುದನ್ನು ಎಲ್ವಿನ್ ಭಾವಿಸಿದ್ದರು. ಎಲ್ವಿನ್‌ರವರ ಮೇಲೆ ಪ್ರಭಾವ ಬೀರಿದ್ದ, ಭಾರತದಲ್ಲಿ ೧೯೩೦ರ ದಶಕದಲ್ಲಿ ಎಲ್ವಿನ್ ವಾಸವಾಗಿದ್ದ ಮದ್ಯಪ್ರದೇಶದ ಮಾಂಡ್ಲಾ ಜಿಲ್ಲೆಯ ಗ್ರಾಮಗಳಿಗೆ ರಾಮಚಂದ್ರಗುಹಾರವರು ಭೇಟಿ ನೀಡುತ್ತಾರೆ. ಅವರು ಕೆಲಸ ಮಾಡಿದ ನೆಫಾ(NEFA)ದ ಕಾರ್ಯ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿದ್ದ ಷಿಲ್ಲಾಂಗ್‌ಗೆ ಸಹ ಭೇಟಿ ನೀಡುತ್ತಾರೆ. ಇಲ್ಲಿಂದ ಇವರ ವಿಧವಾ ಪತ್ನಿ ಹಾಗೂ ಮಕ್ಕಳನ್ನು ಭೇಟಿ ಮಾಡುತ್ತಾರೆ. ನಂತರ ಇಲ್ಲಿಂದ ಮುಂದೆ ಬಸ್ತಾರ್‌ಗೆ ಭೇಟಿ ಕೊಡುತ್ತಾರೆ. ಈ ಬಸ್ತಾರ್‌ನಲ್ಲಿ ಎಲ್ವಿನ್‌ರವರು ತಮ್ಮ ಮಹತ್ವದ ಪುಸ್ತಕಗಳನ್ನು ಬರೆದಿದ್ದರು. ಈಗ ಈ ಬಸ್ತಾರ್ ಪ್ರದೇಶವು ಭಾರತ ಸರ್ಕಾರ ಮತ್ತು ಮಾವೋವಾದಿಗಳ ಘರ್ಷಣೆಯ ಕೇಂದ್ರವಾಗಿದೆ. ನಂತರ ಎಲ್ವಿನ್ ಇದ್ದ ಅರುಣಾಚಲ ಪ್ರದೇಶದಲ್ಲಿ ತಮ್ಮ ಬದುಕಿನ ಕೊನೆಯ ಕ್ಷಣಗಳನ್ನು ಕಳೆದಿದ್ದರು ಎಂಬುದನ್ನು ಗುಹಾರವರು ತಿಳಿಸಿದ್ದಾರೆ.

ಅನಂತರ ರಾಮಚಂದ್ರಗುಹಾರವರು ಗುವಾಹಟಿಯಿಂದ ಅಸ್ಸಾಂ ರಾಜ್ಯದಲ್ಲಿ ಪ್ರವಾಸ ಮಾಡಿ ಅರುಣಾಚಲ ಪ್ರದೇಶದ ರಾಜದಾನಿ ಇಟಾ ನಗರವನ್ನು ತಲುಪುತ್ತಾರೆ. ಇಲ್ಲಿನ ವಿಶ್ವವಿದ್ಯಾಲಯದಲ್ಲಿ ಉಪನ್ಯಾಸವನ್ನು ನೀಡುತ್ತಾರೆ. ಇಲ್ಲಿನ ಬುದ್ಧಿಜೀವಿಗಳು ಸೇರಿದಂತೆ ವಿವಿಧ ವರ್ಗಗಳ ಜನರನ್ನು ಭೇಟಿ ಮಾಡುತ್ತಾರೆ. ಅರುಣಾಚಲ ರಾಜ್ಯದ ಮಹಿಳಾ ಆಯೋಗದ ಅಧ್ಯಕ್ಷರಾದ ಜಾರ್ಜುಮ್ ಎಟೆ. ಜಾರ್ಜುಮ್ ಮತ್ತು ಮೋಜಿರಿಬಾ ಈ ಇಬ್ಬರು ಗುಹಾರವರ ಮೇಲೆ ತುಂಬಾ ಪ್ರಭಾವವನ್ನು ಬೀರಿದ್ದರು. ಇವರ ಬುದ್ಧಿವಂತಿಕೆ, ಜ್ಞಾನ ಸಂಪತ್ತು ಇವರನ್ನು ಆಕರ್ಷಿಸಿದ್ದವು. ಅರುಣಾಚಲ ಪ್ರದೇಶದ ವಿವಿಧ ಸಮುದಾಯಗಳ ಸಂಸ್ಕೃತಿ ಮತ್ತು ಜೀವನ ಶೈಲಿಯ ಮೇಲೆ ಆಧುನಿಕ ತಂತ್ರಜ್ಞಾನಗಳ ಪರಿಣಾಮವನ್ನು ಕುರಿತು ಅಧ್ಯಾಯನ ಮಾಡುತ್ತಿದ್ದ ಇವರ ಫಿಲಂ ಮೇಕರ್ ಆಗಿದ್ದ ಮೋಜಿರಿಬಾ ಅವರ ಪ್ರಭಾವವಿತ್ತು.

ಅರುಣಾಚಲದ ಆದಿವಾಸಿಗಳ ಜೊತೆಗೆ ಇದ್ದು ಅರುಣಾಚಲ ಆದಿವಾಸಿ ಅಧ್ಯಯನ ಸಂಸ್ಥೆಯಲ್ಲಿ ಬೋಧನೆ ಮಾಡುತ್ತಿದ್ದ ಇಟಾ ನಗರದ ರಾಜೀವಗಾಂಧಿ ವಿಶ್ವವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸ್ಥಳೀಯರಲ್ಲದ ಕಲ್ಕತ್ತ ಮೂಲದ ಸಾರಿತ್ ಚೌಧರಿ ಮತ್ತು ಸುಚೇತಸೇನ್ ಚೌಧರಿ ಇಬ್ಬರು ಮಾನವಶಾಸ್ತ್ರಜ್ಞರನ್ನು ರಾಮಚಂದ್ರಗುಹಾರವರು ಭೇಟಿ ಮಾಡುತ್ತಾರೆ. ಈ ಇಬ್ಬರು ಮಾನವಶಾಸ್ತ್ರಜ್ಞ ದಂಪತಿಗಳು ತಮ್ಮ ಕ್ಷೇತ್ರದ ಸೇವಾ ವೃತ್ತಿಗೆ ಬದ್ಧರಾಗಿದ್ದರು. ವೆರಿಯರ್ಎಲ್ವಿನ್ ಏನಾದರೂ ತಮ್ಮ ಜೀವಿತದ ಅವಧಿಯಲ್ಲಿ ಈ ದಂಪತಿಗಳನ್ನು ಕಂಡಿದ್ದರೆ ಇವರ ಪ್ರಭಾವಕ್ಕೆ ಒಳಗಾಗುವುದರಲ್ಲಿ ಯಾವುದೇ ಸಂಶಯವಿಲ್ಲ ಎಂದು ಗುಹಾ ಹೇಳಿದ್ದಾರೆ.

ವೆರಿಯರ್ಎಲ್ವಿನ್ ಏನಾದರೂ ಈ ದಂಪತಿಯನ್ನು ಭೇಟಿಯಾಗುವುದಷ್ಟು ಕಾಲ ಬದುಕಿದ್ದರೆ ನಾನು ಎಲ್ವಿನ್‌ರವರ ಪ್ರಭಾವಕ್ಕೆ ಒಳಗಾದಂತೆ ಎಲ್ವಿನ್ ಸಹ ಈ ದಂಪತಿಗಳ ಪ್ರಭಾವಕ್ಕೆ ಒಳಗಾಗುತ್ತಿದ್ದರು ಎಂದುಕೊಳ್ಳುತ್ತೇನೆ ಎಂದು ಗುಹಾ ಹೇಳಿದ್ದಾರೆ. ಆಧುನಿಕ ಕಲ್ಯಾಣ ಹಾಗೂ ಸಾಂಸ್ಕೃತಿಕ ಪುನರುತ್ಥಾನಕ್ಕೆ ಸರ್ಕಾರ ಕ್ರಮಕೈಗೊಳ್ಳುವ ಮೂಲಕ ಅರುಣಾಚಲದ ಆದಿವಾಸಿಗಳನ್ನು ರಾಷ್ಟ್ರದಲ್ಲಿ ಸಹ ಪಾಲುದಾರರಾಗುವಂತೆ ಮಾಡಬಹುದು ಎಂಬ ಆಶಯವನ್ನು ವೆರಿಯರ್ಎಲ್ವಿನ್ ಹೊಂದಿದ್ದರು. ಈಗ ಈ ರಾಜ್ಯದ ಅರಣ್ಯ ಪ್ರಕೃತಿ ಸಂಪತ್ತು ಬಳಕೆಯ ಬಗ್ಗೆ ಕೇಂದ್ರ ಸಕಾರ ಗಮನಹರಿಸಿ, ಇಲ್ಲಿನ ನದಿಗಳಿಗೆ ಅಣೆಕಟ್ಟು ನಿರ್ಮಿಸಿರುತ್ತದೆ. ದೆಹಲಿ ಮತ್ತು ಮುಂಬೈ ನಗರ ಪ್ರದೇಶಗಳಿಗೆ ವಿದ್ಯುತ್ ಒದಗಿಸಲು ಇಲ್ಲಿನ ಭೂಮಿ, ಅರಣ್ಯ ಪ್ರದೇಶಗಳನ್ನು ಮುಳಗಡೆ ಮಾಡಲಾಗುತ್ತದೆ. ಇದಕ್ಕಾಗಿ ಇಲ್ಲಿರುವ ಆದಿವಾಸಿಗಳ ಒಕ್ಕಲೆಬ್ಬಿಸುವ ಕೆಲಸವು ನಡೆಯುತ್ತಿದೆ. ಈ ಹಿಂದೆ ಇಲ್ಲಿದ್ದ ಸಮುದಾಯ ಆಧಾರಿತ ಸಮಾಜವು ಭ್ರಷ್ಟಾಚಾರಕ್ಕೆ ಒಳಗಾಗಿ ಗುಂಪುಗಾರಿಕೆ ಸೃಷ್ಟಿಸಲಾಗಿದೆ. ಈ ಪರಿಸರದಲ್ಲಿ ಈ ಸ್ಪರ್ಧೆ, ಪೈಪೋಟಿ ಸಂಶಯಗಳು ಹುಟ್ಟುತ್ತವೆ. ಎಂಬುದನ್ನು ರಾಮಚಂದ್ರಗುಹಾರವರು ಆದಿವಾಸಿಗಳ ಸ್ವರ್ಗದಲ್ಲಿ ಸರ್ಪ ಎಂಬ ಅಂಕಣದಲ್ಲಿ ವಿವರಿಸಿದ್ದಾರೆ. ಭಾರತದ ಬುಡಕಟ್ಟು ಸಮುದಾಯಗಳ ಅಧ್ಯಯನಕ್ಕೆ ಒಂದು ಹೊಸ ರೂಪ ಕೊಟ್ಟ ವೆರಿಯರ್ಎಲ್ವಿನ್‌ರವರ ಹೊರತಾದ ಬುಡಕಟ್ಟು ಸಮುದಾಯದ ಅಧ್ಯಯನ ಅಪೂರ್ಣವಾಗುತ್ತದೆ. ಈ ಹಿನ್ನಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗಳ ಅಧ್ಯಯನದಲ್ಲಿ ಇವರ ಚಿಂತನೆಯು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿದೆ.

### ೧.೧. ಅಧ್ಯಯನದ ಉದ್ದೇಶಗಳು

ಕೃಷಿಯನ್ನು ತನ್ನ ಪ್ರಧಾನ ವೃತ್ತಿಯನ್ನಾಗಸಿಕೊಂಡು, ಅರಣ್ಯವನ್ನು ನಂಬಿ ಬದುಕುತ್ತಿರುವ ಇವರು ಅರಣ್ಯ ಉತ್ಪತ್ತಿ ಮೂಲಗಳಿಂದ ಈಗ ದೂರ ಉಳಿದು, ಕಾಡಿನಿಂದ ನಾಡಿಗೆ ಸ್ಥಳಾಂತರಗೊಂಡು, ಗ್ರಾಮ ನಗರ ಪ್ರದೇಶಗಳಲ್ಲಿನ ಆಧುನಿಕ ಬದುಕಿನೊಂದಿಗೆ ಹೊಂದಿಕೊಳ್ಳುತ್ತಾ ಬಂದಿದ್ದಾರೆ. ತನ್ನ ಮೂಲ ಸಂಸ್ಕೃತಿ ಪರಂಪರೆಯನ್ನು ಉಳಿಸಿಕೊಂಡು ಬರಲು ಪ್ರಯತ್ನ ಮಾಡುತ್ತಿರುವುದು ಒಂದು ಕಡೆ ಕಂಡುಬಂದರೆ, ಇಂದಿನ ನಾಗರೀಕತೆಯ ಬದುಕಿನ ಯಾವುದೇ ಸೌಲಭ್ಯಗಳನ್ನು ಪಡೆಯದೆ, ಅನುಭವಿಸದೆ, ನಾಗರೀಕ ಬದುಕಿನಿಂದ ದೂರವೇ ಉಳಿದು ಇಂದಿಗೂ ಕಾಡಿನ ಬದುಕನ್ನು ನಂಬಿ ಜೀವನ ಮಾಡುತ್ತಿರುವ ನೆರಿಯಾ, ನಾರಾವಿ, ಬಾಂಜಾರುಮಲೆ, ಅಂಬಟೆಮಲೆಯಂತಹ ಪ್ರದೇಶಗಳಲ್ಲಿ ನೆಲೆಸಿರುವ, ಕಾಡಿನ ಬದುಕನ್ನೇ ಆಧರಿಸಿದ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನವು ಪ್ರಸ್ತುತ ಅಧ್ಯಯನದ ವಿಷಯವಾಗಿದೆ.

ಕರ್ನಾಟಕ ರಾಜ್ಯದ ಬುಡಕಟ್ಟು ಸಮುದಾಯಗಳ ಅಧ್ಯಯನದಲ್ಲಿ ಮಲೆಕುಡಿಯ ಸಮುದಾಯದ ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಒಂದು ಔಚಿತ್ಯಪೂರ್ಣವಾದುದಾಗಿದೆ. ಇವರ ಇಂದಿನ ಜ್ವಲಂತ ಬದುಕಿನ ಸ್ಥಿತಿಯ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾದ ಅನಿವಾರ್ಯತೆ ಒದಗಿದೆ. ಕರ್ನಾಟಕದ ಬುಡಕಟ್ಟು ಸಮುದಾಯಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿನ ಮಲೆಕುಡಿಯ ಬುಡಕಟ್ಟು ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಮುಖ್ಯ ಉದ್ದೇಶಗಳು:

೧. ಮಲೆಕುಡಿಯ ಸಮುದಾಯದ ಅರ್ಥ ಮತ್ತು ಮೂಲನೆಲೆಗಳನ್ನು ಕುರಿತು ಅಧ್ಯಯನ ಮಾಡುವುದು. ಆರೋಗ್ಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಿಶ್ಲೇಷಣೆ ಮಾಡುವುದು.
೨. ಮಲೆಕುಡಿಯರ ಬದುಕಿನ ಚಾರಿತ್ರಿಕತೆಯನ್ನು ಕುರಿತು ವಿವರಿಸುವುದು.
೩. ವರ್ತಮಾನದಲ್ಲಿ ಮಲೆಕುಡಿಯರ ಸಾಮಾಜಿಕ ಅಧಿಕಾರ, ಕುಟುಂಬದ ನಿರ್ವಹಣೆ, ಆರ್ಥಿಕತೆಯ ಸ್ವರೂಪ ಮತ್ತು ವರ್ತಮಾನದ ದುಡಿಮೆಯ ಮಾದರಿಗಳನ್ನು ಕುರಿತು ಅಧ್ಯಯನ ಮಾಡುವುದು ಹಾಗೂ ಮಲೆಕುಡಿಯರ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳನ್ನು ವಿವರಿಸುವುದು.
೪. ಸರ್ಕಾರದ ಅಭಿವೃದ್ಧಿ ಯೋಜನೆಗಳು ಮಲೆಕುಡಿಯ ಸಮುದಾಯದ ಮೇಲೆ ಆದ ಪರಿಣಾಮಗಳನ್ನು ಕುರಿತು ಅಧ್ಯಯನ ಮಾಡುವುದು.

## ೧.೨. ಅಧ್ಯಯನದ ವ್ಯಾಪ್ತಿ

ನಮ್ಮ ಅಧ್ಯಯನದ ವ್ಯಾಪ್ತಿಯು ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಿಸಿರುತ್ತದೆ. ಈ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲೂಕುಗಳ ವ್ಯಾಪ್ತಿಯಲ್ಲಿನ ಮಲೆಕುಡಿಯ ಸಮುದಾಯದ ನೆಲೆಗಳು ನಮ್ಮ ಅಧ್ಯಯನಕ್ಕೆ ಒಳಪಡುತ್ತವೆ. ಈ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯ ಪ್ರದೇಶವು ಉಡುಪಿ, ಕಾರ್ಕಳವನ್ನು ಒಳಗೊಂಡಿತ್ತು. ಉಡುಪಿ ಒಂದು ತಾಲ್ಲೂಕು ಕೇಂದ್ರವಾಗಿತ್ತು. ಇದಕ್ಕೂ ಹಿಂದೆ ಇದು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿತ್ತು. ಈಗಿನ ಕೇರಳದ ಕಾಸರಗೋಡು ಪ್ರದೇಶವು ಸಹ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಭಾಗವಾಗಿತ್ತು. ಈಗಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲೂಕುಗಳು ಒಳಪಟ್ಟಿವೆ. ಈ ಪ್ರದೇಶಗಳಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯದವರು ಈ ಐದು ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಕಂಡುಬರುತ್ತಾರೆ. ಅಲ್ಲದೇ ಈ ಜಿಲ್ಲೆಯ ಗಡಿ ಭಾಗಗಳಾದ ಕೇರಳದ ಕಾಸರಗೋಡು, ಮಡಿಕೇರಿ, ಶಿರಾಡಿ, ಚಿಕ್ಕಮಗಳೂರು, ಉಡುಪಿ ಜಿಲ್ಲೆಗಳ ವ್ಯಾಪ್ತಿಗಳಲ್ಲಿನ ಗಡಿ ಪ್ರದೇಶಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ. ಬೆಳ್ತಂಗಡಿ ತಾಲೂಕಿನಲ್ಲಿ ಇವರು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಎರಡನೇ ಸ್ಥಾನದಲ್ಲಿ ಸುಳ್ಯ ತಾಲೂಕು ಬರುತ್ತದೆ. ಇದರ ನಂತರ ಪುತ್ತೂರು. ಬಂಟ್ವಾಳ, ಮಂಗಳೂರು ತಾಲೂಕು ಪ್ರದೇಶಗಳು ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತವೆ.

## ದಕ್ಷಿಣ ಕನ್ನಡದ ಮೂಲ

ಕರ್ನಾಟಕದ ಪಶ್ಚಿಮ ಕರಾವಳಿ ಪ್ರದೇಶದ ದಕ್ಷಿಣ ತುದಿಯಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ನಾಮನಿಷ್ಪತ್ತಿಯ ಬಗ್ಗೆ ವಿವಿಧ ಅಭಿಪ್ರಾಯಗಳಿವೆ. ದಕ್ಷಿಣ-ಉತ್ತರ ಕನ್ನಡ ಜಿಲ್ಲೆಗಳು ೧೮೬೦ರಲ್ಲಿ

ಪ್ರತ್ಯೇಕಗೊಳ್ಳುವುದಕ್ಕೆ ಮೊದಲು, ಇಡೀ ಕರಾವಳಿ ಪ್ರದೇಶಕ್ಕೆ 'ಕೆನರಾ CANARA' ಎಂದೇ ಕರೆಯಲಾಗುತ್ತಿತ್ತು, ನಂತರ ದಕ್ಷಿಣ ಕೆನರಾ ಹಾಗೂ ಉತ್ತರ ಕೆನರಾ ಎಂಬ ಹೆಸರು ಬಂದಿತು. 'ಕೆನರಾ CANARA' ಪದವು 'ಕನ್ನಡ' ಪದದ ಪೋರ್ಚುಗೀಸ್ ರೂಪವಾಗಿದ್ದು, ಅವರು ಮೊದಲ ಬಾರಿಗೆ ಈ ಭಾಗದ ಜನರೊಂದಿಗೆ ಸಂಪರ್ಕ ಪಡೆದಾಗ, ಜನಸಾಮನ್ಯರ ವ್ಯವಹಾರಿಕ ಭಾಷೆ ಕನ್ನಡವಾಗಿದ್ದ ಕಾರಣ, ಅವರನ್ನು ಕನ್ನರಿ ಜನರೆಂದೂ, ಅವರಿದ್ದ ಪ್ರದೇಶವನ್ನು 'ಕನರಾ' ಎಂದೂ ಕರೆದಿದ್ದು, ಪೋರ್ಚುಗೀಸ್ ಭಾಷೆಯಲ್ಲಿ 'ಡ' ಹೆಚ್ಚು ಬಳಕೆಯಲ್ಲಿಲ್ಲದ್ದರಿಂದ 'ಕನ್ನಡ' ಪದವು 'ಕನರಾ' ರೂಪ ಪಡೆದು ರೂಢಿಗೆ ಬಂದಂತೆ ತೋರುತ್ತದೆ. ಆದರೆ ೧೮೬೦ರಲ್ಲಿ ಕೆನರಾ ಜಿಲ್ಲೆಯನ್ನು ಭೌಗೋಳಿಕವಾಗಿ ವಿಭಜಿಸಿದಾಗ ದಕ್ಷಿಣ ಕೆನರಾ ಹಾಗೂ ಉತ್ತರ ಕೆನರಾ ಜಿಲ್ಲೆಗಳು ಬೇರ್ಪಟ್ಟವು. ೧೯೫೬ರಲ್ಲಿ ಏಕೀಕೃತ ಕರ್ನಾಟಕವು ರೂಪಗೊಂಡ ನಂತರ ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಉತ್ತರ ಕನ್ನಡ ಜಿಲ್ಲೆಗಳು ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದವು.

## ದಕ್ಷಿಣ ಕನ್ನಡದ ಉಗಮ

ಪೊಲಿಕೆನರಾ ೨೦೦ ಸಂಪುಟದ ಪುಟ. ೮೮ರಲ್ಲಿ ಕೆಯ್ಯೂರು ಕಿಞಣ್ಣ ರೈ ಅವರು 'ನನ್ನ ಬಾಲ್ಯದ ದಕ್ಷಿಣಕನ್ನಡ' ಲೇಖನದಲ್ಲಿ 'ಕೆನರಾ' ಎಂಬ ಹೆಸರನ್ನು ಮೊಟ್ಟಮೊದಲು ಈ ಜಿಲ್ಲೆಗೆ ಇಟ್ಟವರು ಪೋರ್ಚುಗೀಸರು ಎಂದಿದ್ದಾರೆ. ಅವರ ಭಾಷೆಯಲ್ಲಿ 'ಡ' ಕಾರದ ಉಚ್ಚಾರವಿಲ್ಲವಾಗಿ **ಕನ್ನಡ-ಕೆನರ** ಆಯಿತು ಎಂದು ಅಭಿಪ್ರಾಯಪಟ್ಟಿದ್ದಾರೆ.[೧] ಕೆನರಾ-೨೦೦ರ ಸಂಪುಟದ ಪುಟ ೭೮ ರಲ್ಲಿ ಕೇಶವ ಉಚ್ಚಿಲರವರು ಶತಮಾನದ ಬೀಸುನೋಟ ಲೇಖನದಲ್ಲಿ ದಕ್ಷಿಣ ಕನ್ನಡಕ್ಕೆ ಬಂದ ಮಾರಕರೋಗ ಪ್ಲೇಗ್‌ನ್ನು ನೇತ್ರಾವತಿ ನದಿ ರೌದ್ರನರ್ತನದಿಂದ ಆದ ಸಾವು ನೋವುಗಳ ಉಲ್ಲೇಖವಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ೨೧ನೇ ಶತಮಾನ ಮಾಹಾಮಾರಿ ಪ್ಲೇಗ್‌ನ ಮೂಲಕವೇ ಆರಂಭವಾಗಿದೆ. ಈ ವರ್ಷದಲ್ಲಿ ಮುಂಬಾಯಿಯಲ್ಲಿ ಪ್ಲೇಗ್ ಹರಡಿಕೊಂಡಿತು. ಮಾಹಾಮಾರಿಯ ಪ್ಲೇಗ್ ಭಯದಿಂದಾಗಿ ಮುಂಬೈಯಲ್ಲಿದ್ದ ದಕ್ಷಿಣ ಕನ್ನಡ ಜನರು ಭಯಭೀತರಾಗಿ ದಕ್ಷಿಣ ಕನ್ನಡಕ್ಕೆ ಬರತೊಡಗುತ್ತಾರೆ. ಮುಂಬಯಿಯಲ್ಲಿ ಹರಡಿದ್ದ ಈ ಪ್ಲೇಗು ಮಂಗಳೂರಿಗೆ ಬರಬಹುದು ಎಂದು ಮುಂಬಯಿಯಿಂದ ಮಂಗಳೂರಿಗೆ ಬರುವ ಹಡಗುಗಳಲ್ಲಿನ ಜನರು ಇಲ್ಲಿನ ಸಮುದ್ರದಲ್ಲಿ ಸ್ನಾನ ಮಾಡಿಸಿ ಅವರ ಬಟ್ಟೆಗಳನ್ನು ಹೊರಗೆ ಇಟ್ಟು ಆ ಮೇಲೆ ಆ ಜನರನ್ನು ಮಂಗಳೂರಿನ ಊರೊಳಗೆ ಬಿಡಲಾಯಿತು. ಆದರೆ ಆ ವರ್ಷ ಮಂಗಳೂರಿಗೆ ಪೋನ್ ಬರುತ್ತದೆ. ಅಧಿಕೃತ ದಾಖಲೆಗಳ ಅಂಕಿಅಂಶಗಳ ಪ್ರಕಾರ ೮೩೬ ಜನರು ಈ ಪ್ಲೇಗ್ ರೋಗಕ್ಕೆ ಬಲಿಯಾಗುತ್ತಾರೆ. ನಂತರ ೧೯೦೭ರಲ್ಲಿ ಮತ್ತು ಪ್ಲೇಗ್ ಮತ್ತು ಪ್ರವಾಹ ಎರಡು ಒಟ್ಟಿಗೆ ಒಂದು ಇಲ್ಲಿನ ಜನರಿಗೆ ತೊಂದರೆಯಾಗುತ್ತದೆ. ೧೯೦೭ನೇ ಆಗಸ್ಟ್ ೭ರಂದು ನೇತ್ರಾವತಿ ನದಿ ಉಕ್ಕಿ ಹರಿದು ಬಂದ ನೆರೆಯಿಂದ ಜನ ಜೀವನಕ್ಕೆ ಧಕ್ಕೆಯಾಗುತ್ತದೆ. ೧೮೭೬ರಿಂದ ಈಚೆಗೆ ಇದುವರೆಗೆ ಇಂತಹ ನೆರೆ ಬಂದಿರಲಿಲ್ಲವಂತೆ ಎಂಬುದನ್ನು ಕೇಶವ ಉಚ್ಚಿಲರು ಹೇಳಿದ್ದಾರೆ. ಟಿ.ಡಬ್ಲ್ಯೂ. ವೆನ್ ಅವರು 'Mangalore' ಎಂಬ ಕೃತಿಯನ್ನು ಇಂಗ್ಲಿಷ್‌ನಲ್ಲಿ ಬರೆದಿದ್ದಾರೆ. ೧೯೩೦ ದಶಕದ ಒಂದು ಇಂಗ್ಲಿಷ್ ಕಾದಂಬರಿಯಲ್ಲಿ ಮಂಗಳೂರಿನ ವರ್ಣನೆ ಮಾಡಿದ್ದಾರೆ. ಹಿಲ್ಟನ್‌ಬ್ರಾನ್‌ರವರು 'ಟೋರ್ಟವಾಲ್' ಎಂಬ ಕಾದಂಬರಿಯಲ್ಲಿ ಮಂಗಳೂರನ್ನು 'ಟೋರ್ಟ್‌ವಾಲ್' ಎಂದು ಕರೆದಿದ್ದಾರೆ. ಇಲ್ಲಿ ನೇತ್ರಾವತಿಯನ್ನು 'ಘೂಮ್ರಿ' ಎಂದು ಕರೆದಿರುವ ಉಲ್ಲೇಖವಿದೆ.[೨]

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯು ವಿಶಿಷ್ಟ ಸಂಸ್ಕೃತಿಯನ್ನು ಹೊಂದಿರುವ ಪ್ರದೇಶವಾಗಿದೆ. ಈ ಪ್ರದೇಶವನ್ನು ತುಳುನಾಡು ಎಂತಲೇ ಕರೆಯಲಾಗುತ್ತದೆ. ಈ ತುಳುನಾಡು ಐತಿಹಾಸಿಕವಾಗಿ ಪ್ರಾಚೀನವಾದ ಹಿನ್ನಲೆಯನ್ನು ಹೊಂದಿದೆ. ಪುರಾಣದ ಪ್ರಕಾರ ಇದು ಪರಶುರಾಮನ ಕ್ಷೇತ್ರ 'ಸಪ್ತ ಕೊಂಕಣ' ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಈ ಪ್ರದೇಶದಲ್ಲಿ ತುಳು ಭಾಷೆಯನ್ನು ಮಾತನಾಡುವ ಜನರು ಬಹುಸಂಖ್ಯಾತರಾಗಿದ್ದಾರೆ. ಇದರಿಂದಾಗಿ ಈ ಪ್ರದೇಶವನ್ನು 'ತುಳುನಾಡು' ಎಂದು ಕರೆಯಲಾಗುವುದು.

'ತುಳುನಾಡು' ದಕ್ಷಿಣದ ಕಾಸರಗೋಡು, ಉತ್ತರದಲ್ಲಿ ಗೇರುಸೊಪ್ಪೆ, ಪಶ್ಚಿಮದಲ್ಲಿ ಅರಬ್ಬೀ ಸಮುದ್ರವನ್ನು ಒಳಗೊಂಡಿದೆ. ತುಳು ಈ ಪ್ರದೇಶದ ಪ್ರಧಾನವಾದ ಭಾಷೆಯಾಗಿದೆ. ಎಂಬುದು ಅನಂತಪುರದ 'ತುಳು ಶಾಸನ'ದ ಆಧಾರದಿಂದ ತಿಳಿದುಬರುತ್ತದೆ. ಈ ಪ್ರದೇಶವನ್ನೂ ಹಿಂದೆ ಹಲವಾರು ಹೆಸರುಗಳಿಂದ ಕರೆಯಲಾಗುತ್ತಿತ್ತು. ಜನಾಂಗದ ಆಧಾರದ ಮೇಲೆ ತುಳುನಾಡು ಎಂದು, ಪೌರಾಣಿಕ ಮೂಲದ ಐತಿಹ್ಯದಲ್ಲಿ ಪರಶುರಾಮನ ಕ್ಷೇತ್ರ, ತುಳುವ 'ತೌಲವ' ಎಂಬ ಹೆಸರುಗಳಿಂದ ಕರೆಯಲಾಗುತ್ತಿತ್ತು. ತುಳುನಾಡು ಕುರಿತ ಪೌರಾಣಿಕ, ಪ್ರಾದೇಶಿಕ ಪರಂಪರೆಯನ್ನು ಒಳಗೊಂಡ ಜಿಲ್ಲೆಗಳಲ್ಲಿ ದಕ್ಷಿಣಕನ್ನಡ, ಉಡುಪಿ, ಕಾಸರಗೋಡು ಪ್ರದೇಶಗಳು ಬರುತ್ತವೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಭಾಷಾ ನಿಕಾಯದ ಡಾ.ಎ. ಸುಬ್ಬಣ್ಣ ರೈ ಅವರ ಮಾರ್ಗದರ್ಶನದಲ್ಲಿ ಮೀನಾಕ್ಷಿ ಕೆ. ಅವರು ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ ದೇವಾಂಗ ಸಮುದಾಯದ ಅಧ್ಯಯನ ಮೇ, ೨೦೦೨ರ ಮಹಾಪ್ರಬಂಧದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಐತಿಹಾಸಿಕ ಪರಿಚಯವನ್ನು ಮಾಡಿದ್ದಾರೆ. 'ತುಳುವ ನಾಡು, ತುಳು ರಾಜ್ಯ ಎಂದು ಕರೆಯುವ ಈ ಪ್ರದೇಶವು ಉತ್ತರದಲ್ಲಿ ಕೊಂಕಣದಿಂದ ಆರಂಭವಾಗಿ ದಕ್ಷಿಣದಲ್ಲಿ ಈಗಿನ ಚಂದ್ರಗಿರಿ ಪಯಸ್ವಿನಿ ನದಿಯ ತನಕ ವಿಸ್ತರಿಸಿದೆ' ಎಂದು ಕೇರಳೋತ್ಪತ್ತಿಯಲ್ಲಿ ಉಲ್ಲೇಖಿಸಲಾಗಿದೆ.[೩] ಡಾ.ಎ.ಬಿ. ಸಾಲೆತ್ತೂರ್ ಅವರು ಪ್ರಾಚೀನ ಕರ್ನಾಟಕ ತುಳುವ ಚರಿತ್ರೆಯ ಪುಟ. ೨೮ರ ಉಲ್ಲೇಖದ ಪ್ರಕಾರ. 'ಪಯಸ್ವಿನಿ ನದಿ ಉತ್ತರಕ್ಕೆ ತುಳುವಿನ ಮೂವತ್ತೆರಡು ಗ್ರಾಮಗಳೆಂದು ಭೂತಗಳ ನುಡಿಗಟ್ಟುಗಳು ಹೇಳುತ್ತವೆ. ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ಹರಿಜನ-ಗಿರಿಜನ ವರ್ಗದ ಮೂಲ ನಿವಾಸಿಗಳು ವಾಸಿಸುತ್ತಿದ್ದರು. ಅವರು 'ದುಡಿ' ಎಂಬ ಮೃದಂಗದ ಒಂದು ಪ್ರಭೇದವನ್ನು ಬಾರಿಸಿ, 'ತುಳು'ವವರು ಎಂದು ಕರೆಸಿಕೊಂಡರು. 'ತುಳ್ಳು' ಎಂದರೆ ಕುಣಿಯುವವರು ಎಂಬಂರ್ಥ ಬರುತ್ತದೆ. ಅವರು ತಮ್ಮ ಮದುವೆಗೆ 'ತುಳ್ಳಲ್' ಅಥವಾ 'ಚುಳ್ಳೆಲ್' ಎಂದು ಹೇಳುತ್ತಾರೆ. ಇದರಿಂದಾಗಿಯೇ ಇವರಿಗೆ 'ತುಳು' ಎಂಬ ಪದವು ಹುಟ್ಟಿಕೊಂಡಿರುವ ಸಾಧ್ಯತೆಗಳಿವೆ'[೪] ಎಂಬುದನ್ನು ಪ್ರಬಂಧದ ಪುಟ ೧೯ರಲ್ಲಿ ಉಲ್ಲೇಖಿಸ ಲಾಗಿದೆ. ದಕ್ಷಿಣ ಕನ್ನಡ ಮತ್ತು ಕಾಸರಗೋಡು ಪ್ರದೇಶವು ತುಳುನಾಡು ಎಂದು ಗುರುತಿಸಿಕೊಳ್ಳಲ್ಪಟ್ಟರೂ ವಿಸ್ತಾರವಾಗಿ ಇದು ಕಿನಾರೆ ಕಿನಾರ ಕೆನೆರಾ ಆಗಿರುವ ಸಾಧ್ಯತೆಗಳೇ ಹೆಚ್ಚು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕೆನಾರಾ(Canara) ಎಂದರೆ ಹಿಂದಿ ಭಾಷೆಯಲ್ಲಿ 'ಕಡಲತಡಿ' ಎಂದರ್ಥ. ಭಾರತಕ್ಕೆ ಬಂದ ಆಂಗ್ಲರು ಇಲ್ಲಿನ ಬಹುತೇಕ ಜನರ ಭಾಷೆಯಿಂದ ಪ್ರಚಲಿತರಾಗಿ ದಕ್ಷಿಣ ಕಡಲ ತೀರದ ಈ ಪ್ರದೇಶವನ್ನು South Canara(ಸೌತ್ ಕೆನರಾ) ಎಂದು ಕರೆದಿರಬಹುದು. ಹಾಗೆಯೇ ಉತ್ತರ ತೀರದ ಈ ಪ್ರದೇಶವನ್ನು North Canara(ನಾರ್ತ್ ಕೆನರಾ)ಎಂದು ಗುರುತಿಸಿರಬಹುದು(ಪುಟ.೧೯) ಎಂದು

ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಆಧಾರವಾಗಿ ಉಪ್ಪಳದ ರಾಮಭಟ್ಟರವರ 'ಗಡಿನಾಡಿನಕಿಡಿ'(ಪುಟ-೨೯)ರ ಉಲ್ಲೇಖವನ್ನು ನೀಡಿದ್ದಾರೆ. ಇವರ ಪ್ರಕಾರ ಪಶ್ಚಿಮ ಘಟ್ಟದ ಕೆಳಗಿನ ಪ್ರದೇಶವನ್ನು 'ಪರಶುರಾಮನ ಸೃಷ್ಠಿ' ಎಂದು ಕರೆಯುತ್ತಾರೆ. ಘಟ್ಟದ ಮೇಲಿನಿಂದ ಇಳಿದು ಬಂದ ಮೂಲ ಪುರುಷನೊಬ್ಬನು ಕೊಡಲಿಯಿಂದ ಇಲ್ಲಿನ ದುರ್ಗಮವಾದ ಅರಣ್ಯ ಪ್ರದೇಶವನ್ನು ಕಡಿದು ಜನರ ವಾಸಕ್ಕೆ ಯೋಗ್ಯವಾಗುವಂತೆ ಮಾಡಿದುದರಿಂದ ಈ ಹೆಸರು ಬಂದಿರಬಹುದು ಎಂಬ ಉಲ್ಲೇಖವಿದೆ. ಈ ಪ್ರಬಂಧದ ಪುಟ ೨೨ ಮತ್ತು ೨೩ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ವಿವಿಧ ಸಮುದಾಯದ ಜನರು ಬೇರೆಬೇರೆ ಕಡೆಗಳಿಂದ ವಲಸೆ ಬಂದಿರುವ ಬಗ್ಗೆ ಉಲ್ಲೇಖವಿದೆ.[೫]

೨೦೦೦ರ ವರ್ಷದಲ್ಲಿ 'ಪೊಲಿಕೆನರಾ' ೨೦೦ರ ಪುಟ.೬೪೮ರ ಸಂಪುಟವನ್ನು ಕಪಿಲ್‌ಮೋಹನ್ ಜಿಲ್ಲಾಧಿಕಾರಿಗಳ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾಡಳಿತದ ವತಿಯಿಂದ ಪ್ರಕಟಿಸಲಾಗಿದೆ. ಕೆನರಾ ಜಿಲ್ಲೆ ಅಸ್ತಿತ್ವಕ್ಕೆ ಬಂದು ೧೮೦೦ಕ್ಕೆ ೨೦೦ ವರ್ಷಗಳನ್ನು ಪೂರೈಸಿದನ್ನು ಸೂಚಿಸುವುದಕ್ಕಾಗಿ ಈ ಸಂಪುಟವನ್ನು ಜಿಲ್ಲಾಡಳಿತದ ವತಿಯಿಂದಲೇ ೨೦೦೦ ವರ್ಷದಲ್ಲಿ ಹೊರ ತರಲಾಗಿದೆ. ೧೮೦೦ ದಕ್ಷಿಣ ಕನ್ನಡ ಪ್ರದೇಶವು ಟಿಪ್ಪುವಿನ ಆಡಳಿತದಿಂದ ಪತನದ ನಂತರ ಕೆನರಾ ವಸಹಾತು ಶಾಹಿ ಆಡಳಿತಕ್ಕೆ ಒಳಪಟ್ಟು ಮದ್ರಾಸು ಆಧಿಪತ್ಯಕ್ಕೆ ಸೇರ್ಪಡಿಸಲಾಯಿತು. ತುಳು ಸಂಸ್ಕೃತಿಯ ಪ್ರತೀಕವಾದ ಪೊಲಿ ಎಂಬುದು ಒಂದು ಆಚರಣೆ ಆಗಿದೆ. ಇದು ಶಕ್ತಿ, ಸುಖ, ಸಮೃದ್ಧಿಯ ಸಂಕೇತವಾಗಿದೆ. ಬೆಳೆ ಕಟಾವಿನ ನಂತರ ಪೈರು ಮನೆ ಅಂಗಳಕ್ಕೆ ಬರುವಾಗ ವಿನಯದಿಂದ ತುಳುವರ ಶಕ್ತಿಯನ್ನು ಆರಾಧನೆ ಮಾಡುತ್ತಾ, ತನ್ನ ಪರಿಶ್ರಮದಿಂದ ಬೆಳೆದ ಪೈರು, ಹೊನ್ನಕಾಳು ದ್ವಿಗುಣವಾಗಲಿ ಎಂದು ಪ್ರಾರ್ಥಿಸುವುದನ್ನು 'ಪೊಲಿ' ಎಂದು ಕರೆಯಲಾಗುವುದು. ತಾನು ಪಟ್ಟ ಶ್ರಮಕ್ಕೆ ತಕ್ಕ ಪ್ರತಿಫಲ ಪಕೃತಿಯಿಂದ ದೊರೆಯುತ್ತದೆ ಎಂಬ ನಂಬಿಕೆ ತುಳುವರಲ್ಲಿದೆ. ಇದು 'ಪೊಲಿ' ಪ್ರಾರ್ಥನೆಯಾಗಿದೆ. ಸುಮಾರು ೧೮೦೦ರಲ್ಲಿ ೨೦೦ ವರ್ಷಗಳ ಹಿಂದೆ ಸರ್ ಥಾಮಸ್ ಮನ್ರೋ ಅವರ ನೇತ್ರತ್ವದಲ್ಲಿ 'ಕೆನರಾ ಜಿಲ್ಲೆ' ಉದಯವಾಯಿತು. ಆಗ ಮಂಗಳೂರು ಜಿಲ್ಲಾ ಕೇಂದ್ರವಾಗಿತ್ತು, ಈಗಿನ ಮಂಗಳೂರು ಮತ್ತು ಉತ್ತರ ಕನ್ನಡದ ಕಾರವಾರ, ಉಡುಪಿ ಜಿಲ್ಲೆಗಳು ಸೇರಿದಂತೆ ಕೇರಳದ ಕಾಸರಗೋಡನ್ನು ಒಳಗೊಂಡ ಪ್ರದೇಶವನ್ನು 'ಕೆನರಾ' ಎಂದು ಕರೆಯಲಾಯಿತು. ೧೮೦೦ರಿಂದ ೧೮೦೦ ರವರೆಗೆ ೨೦೦೦ ವರ್ಷಗಳ ಅವಧಿಯವರೆಗೆ ೧೧೫ ಜಿಲ್ಲಾಧಿಕಾರಿಗಳು ಈ ಜಿಲ್ಲೆಯ ಆಡಳಿತವನ್ನು ನಡೆಸಿದ್ದಾರೆ. ತುಳು ನಾಡನ್ನು ಹಲವಾರು ಅರಸು ಮನೆತನಗಳು ಆಳ್ವಿಕೆ ನಡೆಸಿದ್ದಾರೆ. ಪ್ರಮುಖ ಅರಸು ಮನೆತನಗಳಾದ ಬಂಗ, ಚೌಟ, ಅಜಿಲ, ಸಾಮಂತ, ಮೂಲ, ಡೊಂಬಹೆಗಡೆ, ಭೈರರಸ, ತೊಳಹಾರ, ಹೊನ್ನ, ಕಂಬಳಿ, ಬಿನ್ನಾಣಿ, ಮೊದಲಾದ ೧೫ ಅರಸು ಮನೆತನಗಳ ಐತಿಹಾಸಿಕ ವಿವರಣೆಯನ್ನು ಗಣಪತಿಲಾಲ್ ಐಗಳ್‌ರವರು ನೀಡಿದ್ದಾರೆ.[೬]

ಸಮುದ್ರ ಕರಾವಳಿ ತೀರದ ಏಳು ಪ್ರದೇಶಗಳಲ್ಲಿ ಒಂದಾಗಿ ಸಪ್ತ ಕೊಂಕಣಿ ಎಂದು ಕರೆಯಲಾಗುತ್ತಿತ್ತು. ಇಲ್ಲಿಯ ಜನರ ಭಾಷೆ 'ತುಳು' ಆಗಿದೆ. ಈ ಪ್ರದೇಶವನ್ನು 'ತುಳುನಾಡು' ಎಂದು ಕರೆಯಲಾಗುತ್ತದೆ. ತುಳುನಾಡಿನ ಪ್ರಾಚೀನತೆ ಕುರಿತು ಕೇರಳದ ಪುರಾಣ ಗ್ರಂಥವು ಆಧಾರವಾಗಿದೆ. 'ಕೇರಳವು ತುಳುವರಿಂದ ಪ್ರತ್ಯೇಕವಾಗುವ ಮೊದಲು 'ತುಳುಂಬನ್' ಪೆರುಮಾಳ್' ನೆಂಬ ಅರಸನು ತುಳುನಾಡಿನ ಕೋಟೇಶ್ವರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಈ ನಾಡನ್ನು ಆಳುತ್ತಿದ್ದನು. ಈ ರಾಜನಿಂದಾಗಿ ಈ ನಾಡಿಗೆ

'ತುಳುನಾಡು' ಎಂಬ ಹೆಸರು ಬಂದಿತು. ಪುರಾಣಗಳ ಐತಿಹ್ಯದ ಪ್ರಕಾರ ಪರಶುರಾಮನ ಸೃಷ್ಟಿಯಿಂದ ತುಳುನಾಡು ಹುಟ್ಟಿದೆ ಎಂಬ ವಿವರಣೆ ಇದೆ. ಪೌರಾಣಿಕವಾಗಿ ಪರಶುರಾಮನ ಸೃಷ್ಟಿ, ಐತಿಹಾಸಿಕವಾಗಿ ಅರಸನ ಮನೆತನದ ಸೃಷ್ಟಿ ಎಂಬ ವಾದಗಳಿವೆ. ಸಾಹಿತ್ಯಕವಾಗಿ ಅನೇಕ ಮಹಾನ್ ಕವಿಗಳನ್ನು ಕಂಡ ನಾಡಾಗಿದೆ. ತುಳು ಎಂಬ ಪದ 'ತುರು' ಪದದ ಪರ್ಯಾಯ ಪದವಾಗಿದೆ. ತುರು ಪದವು ಕಾಲಾನುಕ್ರಮದಿಂದ 'ತುಳು' ಎಂದು ಮಾರ್ಪಾಡಾಗಿದೆ ಎಂಬ ವಾದವಿದೆ. ತುಳುನಾಡು ವಿಜಯನಗರವನ್ನು ಸೇರಿದ್ದು, ತುಳುನಾಡ ಸಂಸ್ಕೃತಿ ಉಳಿಯಲು ಪ್ರಮುಖ ಕಾರಣವಾಯಿತು ಎಂಬುದು ತಿಳಿದುಬರುತ್ತದೆ. ಮುಸ್ಲಿಂರಿಂದ ಹಿಂದೂ ಸಾಮ್ರಾಜ್ಯವನ್ನು ರೂಪಿಸಿಕೊಳ್ಳುವ ಸಲುವಾಗಿ ಆ ಕಾಲದ ಸಂಸ್ಥಾನಗಳ ಆರಸರು ವಿಜಯನಗರ ಸಾಮ್ರಾಜ್ಯವನ್ನು ಸೇರಿಕೊಂಡರು, ಹಲವಾರು ಅರಸರು ವಿಜಯನಗರದ ಸಾಮಂತರಾದರು. ಹೀಗೆ ತುಳುನಾಡು ವಿಜಯನಗರದ ಆಡಳಿತಕ್ಕೆ ಒಳಪಟ್ಟಿತು. ಅಲ್ಲಿಂದ ತುಳುನಾಡ ಸಂಸ್ಕೃತಿ ಭಾಷೆ, ಜನಾಂಗ, ವೃತ್ತಿ, ಕಸುಬುಗಳು, ಧರ್ಮ, ಉಡುಗೆ ತೊಡುಗೆ, ಊಟ, ಹಬ್ಬ, ಜಾತ್ರೆ ಉತ್ಸವ, ಪರಂಪರೆಗಳು ಉಳಿದು ಬೆಳೆದುಕೊಂಡು ಬಂದಿರುವುದು ಡಾ. ಬಿ.ಎ.ವಿವೇಕ್‌ರೈ ಪ್ರಧಾನ ಸಂಪಾದಕತ್ವ ದಲ್ಲಿ ಪ್ರಕಟವಾದ ದ್ರಾವಿಡ ಸಾಹಿತ್ಯ ಚರಿತ್ರೆ ಮಾಲೆ ಸಂಪುಟ. ೧. "ತುಳು ಸಾಹಿತ್ಯ ಚರಿತ್ರೆ" ಯಲ್ಲಿ ತಿಳಿದುಬರುತ್ತದೆ.[೭]

**ದಕ್ಷಿಣ ಕನ್ನಡದ ರಚನೆ:** ಶತಮಾನದ ಆರಂಭದಲ್ಲಿ ದಕ್ಷಿಣ ಕನ್ನಡ ಪ್ರದೇಶದ ವ್ಯಾಪ್ತಿಯು ಹಿಂದೆ ಈಗಿನ ಕೇರಳದ ಕಾಸರಗೋಡು ಅಲ್ಲದೆ ಹಿಂದೂ ಮಹಾಸಾಗರದಲ್ಲಿರುವ ದ್ವೀಪ ಪ್ರದೇಶವು ದಕ್ಷಿಣ ಕನ್ನಡದ ಆಡಳಿತಕ್ಕೆ ಒಳಪಟ್ಟಿದ್ದು, ಮಂಗಳೂರು, ಉಡುಪಿ, ಕುಂದಾಪುರ, ಉಪ್ಪಿನಂಗಡಿ ಮತ್ತು ಕಾಸರಗೋಡು ಈ ಐದು ತಾಲೂಕುಗಳನ್ನು ಒಳಗೊಂಡಿತ್ತು. ಆ ಕಾಲದ ಕಂದಾಯ ಆಡಳಿತದ ಅನುಕೂಲಕ್ಕಾಗಿ ಈ ಜಿಲ್ಲೆಯನ್ನು ಮೂರು ವಿಭಾಗಗಳನ್ನಾಗಿ ಮಾಡಲಾಗಿತ್ತು. ಈ ಜಿಲ್ಲೆಯ ಆಡಳಿತವನ್ನು ನೋಡಿಕೊಳ್ಳಲು ಆಗ ಜಿಲ್ಲಾಕಲೆಕ್ಟರ್ ಇದ್ದರು. ಗ್ರಾಮ ಮಟ್ಟದಲ್ಲಿ ಪಟೇಲರು ಕಾನೂನು ವ್ಯವಸ್ಥೆಯ ಅಧಿಕಾರಿಗಳಾಗಿದ್ದರು. ಶ್ಯಾನುಭೋಗರು ಕಂದಾಯ ಅಧಿಕಾರಿಗಳಾಗಿದ್ದರು. ನಂತರ ಈ ಪ್ರದೇಶದ ವ್ಯಾಪ್ತಿಯಲ್ಲಿ ಹಲವಾರು ಬದಲಾವಣೆಗಳಾಗಿ ಹೊಸ ಹೊಸ ತಾಲೂಕುಗಳು ಆಸ್ತಿತ್ವಕ್ಕೆ ಬಂದವು.

೧. ೧೯೨೭ರಲ್ಲಿ ಉಪ್ಪಿನಂಗಡಿ ತಾಲೂಕನ್ನು ಪುತ್ತೂರು ತಾಲೂಕು ಎಂದು ಪುನರ್ ನಾಮಕರಣ ಮಾಡಲಾಯಿತು.

೨. ೧೯೫೪ರಲ್ಲಿ ಬೆಳ್ತಂಗಡಿ ತಾಲೂಕು ಆಸ್ತಿತ್ವಕ್ಕೆ ಬಂದಿತು.

೩. ೧೯೨೦ರಲ್ಲಿ ಮೂಡುಬಿದಿರೆ ಹೊಸ ತಾಲೂಕು ರಚನೆಯಾಯಿತು. ಎರಡು ವರ್ಷಗಳ ನಂತರ ಇದು ಕಾರ್ಕಳ ತಾಲೂಕು ಆಗಿ ಪರಿವರ್ತನೆಯಾಯಿತು.

೪. ೧೯೫೬ರಲ್ಲಿ ರಾಜ್ಯಗಳ ಪುನರ್ ವಿಂಗಡನೆಯಾದಾಗ ದಕ್ಷಣ ಕನ್ನಡದ ವ್ಯಾಪ್ತಿಯಲ್ಲಿ ಕಾಸರಗೋಡು ಕೇರಳಕ್ಕೆ ಸೇರಿತು.

೫. ೧೯೫೯ರಲ್ಲಿ ಬಂಟ್ವಾಳ ತಾಲೂಕು ರಚನೆಯಾಯಿತು.

೬. ೧೯೬೬ರಲ್ಲಿ ಸುಳ್ಯ ತಾಲೂಕು ರಚನೆಯಾಯಿತು.

೭. ೧೯೯೭ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಿಂದ ಉಡುಪಿ ಪ್ರತ್ಯೇಕ ಜಿಲ್ಲೆಯಾಗಿ ರಚನೆಯಾಯಿತು. ಹೊಸದಾಗಿ ಬಂದ ಉಡುಪಿ ಜಿಲ್ಲೆಗೆ ಉಡುಪಿ, ಕಾರ್ಕಳ, ಕುಂದಾಪುರ ತಾಲೂಕುಗಳನ್ನು ಸೇರಿಸಲಾಯಿತು.

## ದಕ್ಷಿಣ ಕನ್ನಡ ವಿಸ್ತೀರ್ಣ

ಭೌಗೋಳಿಕವಾಗಿ ಭಾರತದ ದಕ್ಷಿಣ ಪ್ರಸ್ಥಭೂಮಿಯಿಂದ ದಕ್ಷಿಣ ಕನ್ನಡ ಜಿಲ್ಲೆಯನ್ನು ಪಶ್ಚಿಮ ಘಟ್ಟಗಳು ಬೇರ್ಪಡಿಸುತ್ತವೆ. ಜಿಲ್ಲೆಯು ಪಶ್ಚಿಮ ಘಟ್ಟಗಳಿಂದ ಪಶ್ಚಿಮದೆಡೆ ಸಮುದ್ರದ ಕಡೆಗೆ ವಿಸ್ತರಿಸಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ೭೬ ನಾಟಿಕಲ್ ಮೈಲಿಗಳಷ್ಟು(೧೪೧ ಕಿ.ಮೀ.) ಉದ್ದದ ಬಹತೇಕ ನೇರವಾದ ಕರಾವಳಿ ತೀರವನ್ನು ಹೊಂದಿತ್ತು. ಉಡುಪಿ ಜಿಲ್ಲೆಯ ರಚನೆಯ ಬಳಿಕ ದಕ್ಷಿಣ ಕನ್ನಡ ಜಿಲ್ಲೆಯ ಕರಾವಳಿ ತೀರವು ಸುಮಾರು ೪೨ ಕಿ.ಮೀ. ಉದ್ದವಾಗಿದೆ. ಕರಾವಳಿ ತೀರವು ಅನೇಕ ಕಡೆ ನದಿಗಳಿಂದ, ಹೊಳೆಗಳಿಂದ ಮತ್ತು ಕೊಲ್ಲಿಗಳಿಂದ ಛೇದಿಸಲ್ಪಟ್ಟಿದೆ. ಜಿಲ್ಲೆಯು ಉತ್ತರ ಅಕ್ಷಾಂಶ ೧೨°೨೭ರಿಂದ ೧೩°೧೩ರವರೆಗೆ ಮತ್ತು ಪೂರ್ವ ರೇಖಾಂಶ ೭೪°೪೭ರಿಂದ ೭೫°೪೫ರವರೆಗೆ ಇರುವ ಪ್ರದೇಶದಲ್ಲಿ ವಿಸ್ತರಿಸಿದೆ.

ಜಿಲ್ಲೆಯು ಉತ್ತರದಲ್ಲಿ ಉಡುಪಿ ಜಿಲ್ಲೆಯ ಮತ್ತು ಕಾರ್ಕಳ ತಾಲೂಕುಗಳಿಂದ, ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕು, ಪೂರ್ವದಲ್ಲಿ ಹಾಸನ ಜಿಲ್ಲೆಯ ಸಕಲೇಶಪುರ ತಾಲೂಕು ಮತ್ತು ಪೂರ್ವ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಕೊಡಗು ಜಿಲ್ಲೆಯ ಮಡಿಕೇರಿ ಮತ್ತು ಸೋಮವಾರಪೇಟೆ ತಾಲೂಕುಗಳನ್ನು, ದಕ್ಷಿಣದಲ್ಲಿ ಕೇರಳ ರಾಜ್ಯದ ಕಣ್ಣಾನೂರು ಜಿಲ್ಲೆಯಿಂದ ಮತ್ತು ಪಶ್ಚಿಮ ಅರಬ್ಬಿ ಸಮುದ್ರದಿಂದ ಸುತ್ತುವರೆಯಲ್ಪಟ್ಟಿದೆ. ದಕ್ಷಿಣ ಕನ್ನಡ ಜಿಲ್ಲೆಯು ೨೦೦೧ರ ಜನಗಣತಿ ವರದಿಯಂತೆ ೪೫೬೦ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವು ರಾಜ್ಯದ ಒಟ್ಟು ವಿಸ್ತೀರ್ಣದ ಶೇ.೨.೩ರಷ್ಟು ಆಗಿದೆ. ರಾಜ್ಯದಲ್ಲಿನ ಇತರ ಜಿಲ್ಲೆಗಳೊಂದಿಗೆ ಹೋಲಿಸಿದರೆ ಒಟ್ಟು ೨೭ ಜಿಲ್ಲೆಗಳ ಪೈಕಿ ಈ ಜಿಲ್ಲೆಯು ವಿಸ್ತೀರ್ಣದಲ್ಲಿ ೨೩ನೇ ಸ್ಥಾನವನ್ನು ಪಡೆದಿದೆ. ಜಿಲ್ಲೆಯ ತಾಲೂಕುಗಳ ಪೈಕಿ ೧,೩೭೬ ಚದರ ಕಿ.ಮೀ. ವಿಸ್ತೀರ್ಣ ಹೊಂದಿರುವ ಬೆಳ್ತಂಗಡಿ ತಾಲೂಕು ಮೊದಲ ಸ್ಥಾನ ಪಡೆದರೆ, ೭೩೬ ಚ.ಕಿ.ಮೀ. ವಿಸ್ತೀರ್ಣ ಹೊಂದಿರುವ ಬಂಟ್ವಾಳ ತಾಲೂಕು ಕೊನೆಯ ಸ್ಥಾನ ಪಡೆದಿದೆ.[೪]

## ಕೋಷ್ಟಕ ೧.೨(೧)

## ದಕ್ಷಿಣ ಕನ್ನಡ ಜಿಲ್ಲೆಯ ಜನಗಣತಿಯ ವಿವರ–೨೦೧೧*

| ವಿವರ | ೨೦೧೧ | ೨೦೦೧ |
|---|---|---|
| ಒಟ್ಟು ಜನಸಂಖ್ಯೆ | ೨,೦೮೩,೬೨೫ | ೧,೮೯೭,೭೩೦ |
| ಪುರುಷರು | ೧,೦೩೨,೫೭೭ | ೯೩೮,೪೩೪ |
| ಮಹಿಳೆಯರು | ೧,೦೫೧,೦೪೮ | ೯೫೯,೨೯೬ |
| ಜನಸಂಖ್ಯೆ ಬೆಳವಣಿಗೆ | ೯.೮೦% | ೧೪.೫೯% |
| ಭೂ ಪ್ರದೇಶ (ಚ.ಕಿ.ಮೀ) | ೪,೫೫೯ | ೪,೫೫೯ |
| ಆನಸಾಂದ್ರತೆ (ಕಿ.ಮೀ೨) | ೪೫೭ | ೪೧೬ |
| ರಾಜ್ಯದ ಸರಾಸರಿ ಜನಸಂಖ್ಯೆ ಪ್ರಮಾಣ | ೩.೪೧% | ೩.೫೯% |
| ಲಿಂಗ ಪ್ರಮಾಣ (ಪ್ರತಿ ೧೦೦೦ ಕ್ಕೆ) | ೧೦೧೮ | ೧೦೨೨ |
| ಮಕ್ಕಳ ಲಿಂಗಾನುಪಾತ (೦–೬ ವಯಸ್ಸು) | ೯೪೬ | ೯೫೨ |
| ಸರಾಸರಿ ಸಾಕ್ಷರತೆ ಪ್ರಮಾಣ | ೮೮.೬೨ | ೮೩.೩೫ |
| ಪುರುಷ ಸಾಕ್ಷರತೆ ಪ್ರಮಾಣ | ೯೩.೩೧ | ೮೯.೭೦ |
| ಮಹಿಳಾ ಸಾಕ್ಷರತಾ ಪ್ರಮಾಣ | ೮೪.೦೪ | ೭೭.೨೧ |
| ಮಕ್ಕಳ ಜನಸಂಖ್ಯೆ ಒಟ್ಟು (೦–೬ ವಯಸ್ಸು) | ೨೦೨,೬೭೦ | ೨೨೮,೦೬೦ |
| ಬಾಲಕರ ಜನಸಂಖ್ಯೆ (೦–೬ ವಯಸ್ಸು) | ೧೦೪,೧೬೯ | ೧೧೬,೮೫೪ |
| ಬಾಲಕಿಯರ ಜನಸಂಖ್ಯೆ (೦–೬ ವಯಸ್ಸು) | ೯೮,೫೦೧ | ೧೧೧,೨೦೬ |
| ಅಕ್ಷರಸ್ಥರು ಒಟ್ಟು | ೧,೬೬೬,೮೩೪ | ೧,೩೯೧,೭೩೮ |
| ಪುರುಷ ಅಕ್ಷರಸ್ಥರು | ೮೬೬,೩೩೧ | ೭೩೬,೯೬೨ |
| ಮಹಿಳಾ ಅಕ್ಷರಸ್ಥರು | ೮೦೦,೫೦೩ | ೬೫೪,೭೭೬ |
| ಮಕ್ಕಳ ಸರಾಸರಿ ಒಟ್ಟು (೦–೬ ವಯಸ್ಸು) | ೯.೭೩% | ೧೨.೦೨% |
| ಬಾಲಕರ ಸರಾಸರಿ (೦–೬ ವಯಸ್ಸು) | ೧೦.೦೯ | ೧೨.೪೫% |
| ಬಾಲಕಿಯರ ಸರಾಸರಿ (೦–೬ ವಯಸ್ಸು) | ೯.೩೭% | ೧೧.೫೯ |

*ಜನಗಣತಿ ನಿರ್ದೇಶನಾಲಯ ಅಂತರ್ಜಾಲ ಮಾಹಿತಿ ೨೦೧೧

## ಕೋಷ್ಟಕ ೧.೨(೨)

## ದಕ್ಷಿಣ ಕನ್ನಡ ಜಿಲ್ಲೆಯ ೨೦೧೧ರ ಜನಗಣತಿಯ ವಿವರ(ಶೇಕಡ ಲಿಂಗವಾರು ಪ್ರಮಾಣಗಳಲ್ಲಿ)*.

| ವಿವರ | ಗ್ರಾಮ | ನಗರ |
|---|---|---|
| ಜನಸಂಖ್ಯೆ ಶೇ. | ೫೨.೪೦ % | ೪೭.೬೦ % |
| ಒಟ್ಟು ಜನಸಂಖ್ಯೆ | ೧,೦೯೧,೮೮೮ | ೯೯೧,೭೩೭ |
| ಪುರುಷರು | ೫೪೧,೦೬೫ | ೪೯೧,೫೧೨ |
| ಮಹಿಳೆಯರು | ೫೫೦,೮೨೩ | ೫೦೦,೨೨೫ |
| ಲಿಂಗ ಪ್ರಮಾಣ | ೧೦೧೮ | ೧೦೧೮ |
| ಮಕ್ಕಳ ಲಿಂಗಾನುಪಾತ | ೯೫೪ | ೯೩೬ |
| ಮಕ್ಕಳ ಜನಸಂಖ್ಯೆ (೦–೬) | ೧೦೮,೭೨೧ | ೯೩,೯೪೯ |
| ಗಂಡು ಮಕ್ಕಳು (೦–೬) | ೫೫,೬೩೮ | ೪೮,೫೩೧ |
| ಹೆಣ್ಣು ಮಕ್ಕಳು (೦–೬) | ೫೩,೦೮೩ | ೪೫,೪೧೮ |
| ಮಕ್ಕಳ ಶೇಕಡಾ | ೯.೯೬ % | ೯.೪೭ % |
| ಗಂಡು ಮಕ್ಕಳ ಶೇಕಡಾ | ೧೦.೨೮ % | ೯.೮೭ % |
| ಹೆಣ್ಣು ಮಕ್ಕಳ ಶೇಕಡಾ | ೯.೬೪ % | ೯.೦೮ % |
| ಅಕ್ಷರಸ್ಥರು | ೮೩೯,೦೭೯ | ೮೨೭,೭೫೫ |
| ಪುರುಷ ಅಕ್ಷರಸ್ಥರು | ೪೪೨,೨೪೯ | ೪೨೪,೦೮೨ |
| ಮಹಿಳಾ ಅಕ್ಷರಸ್ಥರು | ೩೯೬,೮೩೦ | ೪೦೩,೬೭೩ |
| ಸರಾಸರಿ ಸಾಕ್ಷರತೆ | ೮೫.೩೪ % | ೯೨.೨೦ % |
| ಪುರುಷ ಸಾಕ್ಷರತೆ | ೯೧.೧೧ % | ೯೫.೭೩ % |
| ಮಹಿಳಾ ಸಾಕ್ಷರತೆ | ೭೯.೭೩ % | ೮೮.೭೬ % |

*ಜನಗಣತಿ ನಿರ್ದೇಶನಾಲಯ ಅಂತರ್ಜಾಲ ಮಾಹಿತಿ ೨೦೧೧

ಕೋಷ್ಟಕ: ೧.೨(೩)

ವೃತ್ತ ಚಿತ್ರ: ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆಯ ಸರಾಸರಿ ಪ್ರಮಾಣ-೨೦೧೧




(ಜನಗಣತಿ ನಿರ್ದೇಶನಾಲಯ ಅಂತರ್ಜಾಲ ಮಾಹಿತಿ ೨೦೧೧)

ಕೋಷ್ಟಕ: ೧.೨(೪)

ಸ್ತಂಭಾಕೃತಿಯ ಭಾವಚಿತ್ರ: ದಕ್ಷಿಣ ಕನ್ನಡ ಜಿಲ್ಲೆಯ ಜನಸಂಖ್ಯೆಯ ಪ್ರಮಾಣ-೨೦೧೧




(ಜನಗಣತಿ ನಿರ್ದೇಶನಾಲಯ ಅಂತರ್ಜಾಲ ಮಾಹಿತಿ ೨೦೧೧)

## ದಕ್ಷಿಣ ಕನ್ನಡ ಜಿಲ್ಲೆಯ ವೈಶಿಷ್ಟ್ಯತೆಗಳು

ಕರ್ನಾಟಕದ ಕರಾವಳಿ ತೀರ ಪ್ರದೇಶದಲ್ಲಿ ಬರುವ ದಕ್ಷಿಣ ಕನ್ನಡ ಜಿಲ್ಲೆ ತನ್ನದೇ ಆದ ವೈಶಿಷ್ಟ್ಯತೆಗಳನ್ನು ಒಳಗೊಂಡಿದೆ. ತುಳುನಾಡಿನ ಸಂಸ್ಕೃತಿ ಪರಂಪರೆಯ ಜೊತೆಗೆ ಇಲ್ಲಿ ಹಲವಾರು ಧರ್ಮ ಪರಂಪರೆಗಳ ನೆಲೆಯಾಗಿದೆ. ಹಿಂದೂ, ಕ್ರೈಸ್ತ, ಇಸ್ಲಾಂ, ಜೈನ, ಕೊಂಕಣಿ ಧರ್ಮಗಳನ್ನು ಆಚರಿಸುವ ಜನರು ಇಲ್ಲಿದ್ದಾರೆ. ಈ ಜಿಲ್ಲೆಯ ಬಹುತೇಕ ಕುಟುಂಬಗಳಲ್ಲಿನ ಜನರು ಜಗತ್ತಿನ ಒಂದಲ್ಲಾ ಒಂದು ದೇಶದಲ್ಲಿ ಉದ್ಯೋಗ ಮಾಡುತ್ತಿರುವುದು ಕಂಡುಬರುತ್ತದೆ. ವಿದೇಶಿ ದುಡಿಮೆ, ಉದ್ಯೋಗ ಸಂಪರ್ಕದಿಂದಾಗಿ ಈ ಪ್ರದೇಶದ ಜೀವನ ಪದ್ಧತಿ ಆಧುನಿ ಶೈಲಿಯೊಂದಿಗೆ ಶಿಸ್ತುಬದ್ಧತೆಯನ್ನು ಅಳವಡಿಸಿಕೊಂಡಿರುವುದು ಗೋಚರವಾಗುತ್ತದೆ. ಪ್ರಾದೇಶಿಕ ಅಭಿಮಾನ ಮತ್ತು ಗೌರವ ಭಾವನೆ ಈ ಜಿಲ್ಲೆಯ ಜನರಲ್ಲಿ ಬೇರು ಬಿಟ್ಟಿದೆ. ಇವರು ವಾರ್ಷಿಕ ಜಾತ್ರೆ, ಉತ್ಸವ, ನೇಮ, ಕೋಲಗಳ ಆಚರಣೆಗಳಲ್ಲಿ ಇವರ ಸಾಂಸ್ಕೃತಿಕ ಮತ್ತು ಪ್ರಾದೇಶಿಕ ಐಕ್ಯತೆ ಕಂಡುಬರುತ್ತದೆ. ಪ್ರಾಕೃತಿಕ ಸಂಪತ್ತು, ಕರಾವಳಿ ಸಮುದ್ರ ತೀರದಲ್ಲಿ ಸಾವಯವ ಕೃಷಿಯನ್ನೇ ತಮ್ಮ ಜೀವನಾಧಾರವಾಗಿಸಿಕೊಂಡು ಬದುಕುವ ಇಲ್ಲಿನ ಜನರು ಸರಳಸಂಪನ್ನರು ಮತ್ತು ಅಷ್ಟೇ ಶ್ರಮಜೀವಿಗಳಾಗಿದ್ದಾರೆ. ಸೋಮಾರಿತನಕ್ಕೆ ಇಲ್ಲಿ ಅವಕಾಶವಿಲ್ಲ. ದುಡಿಮೆಗೆ ಇಲ್ಲಿ ಹೆಚ್ಚಿನ ಪ್ರಾಧಾನ್ಯತೆ ಇದೆ.

ವಾಣಿಜ್ಯ ಬೆಳೆಗಳಾದ ಅಡಿಕೆ, ತೆಂಗು, ಬಾಳೆ, ಗೇರು, ಕಾಳುಮೆಣಸು, ರಬ್ಬರ್, ಕೋಕಾ ಮತ್ತು ಭತ್ತ ಇಲ್ಲಿ ಬೆಳೆಯುವ ಬೆಳೆಗಳಾಗಿವೆ. ತುಳುನಾಡು, ತುಳುವ, ತುಳು ಭಾಷೆ ಎಂದರೆ ಏನೋ ಒಂದು ರೀತಿಯ ಸೆಳೆತ, ಆಕರ್ಷಣೆ ಮತ್ತು ಅಭಿಮಾನವಿದೆ. ಬ್ಯಾಂಕಿಂಗ್ ಉದ್ಯಮ, ಶಿಕ್ಷಣ, ಕೈಗಾರಿಕೆ, ವ್ಯಾಪಾರವಾಣಿಜ್ಯ ಅದರಲ್ಲೂ ವಿಶೇಷವಾಗಿ ಹೋಟೆಲ್ ಉದ್ಯಮದಲ್ಲಿ ಈ ಜಿಲ್ಲೆ ಯಶಸ್ಸಿನ ಹಾದಿಯಲ್ಲಿರುವ ಜಿಲ್ಲೆಯಾಗಿದೆ. ಈ ಜಿಲ್ಲೆಯಲ್ಲಿ ಹಲವಾರು ಜಾತಿ, ಜನಾಂಗ, ಧರ್ಮಗಳಿದ್ದರೂ ಇಲ್ಲಿ ಜಾತಿಗಿಂತ ಧರ್ಮವೇ ಪ್ರಧಾನವಾದ ಅಂಶವಾಗಿದೆ. ಈ ಜಿಲ್ಲೆಯಲ್ಲಿ ಹಿಂದಿನಿಂದಲೂ ಕೋಮು ಗಲಬೆ ಪ್ರಕರಣಗಳು ನೆಡೆಯುತ್ತಲೇ ಬಂದಿವೆ. ಕ್ಷುಲ್ಲಕ ಕಾರಣಕ್ಕಾಗಿ ನಡೆಯುವ ಕೋಮು ದಳ್ಳುರಿ ಈ ಜಿಲ್ಲೆಯ ಜನಜೀವನವನ್ನೇ ಆತಂಕಗೊಳಪಡಿಸುತ್ತದೆ. ಇದು ಈಗಲೂ ಸಹ ಆಗಿಂದಾಗ್ಗೆ ಪುನರಾವರ್ತನೆ ಆಗುತ್ತಿರುವುದು ಈ ಜಿಲ್ಲೆಯ ಒಂದು ದುರಂತವಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ವೈಶಿಷ್ಟ್ಯತೆಗಳಲ್ಲಿ ಸ್ಥಳನಾಮಗಳು, ಕುಟುಂಬ ಪದ್ಧತಿ, ವೃತ್ತಿ, ಧರ್ಮ ಜನಾಂಗ, ಉಡುಪು, ಊಟ, ಹಬ್ಬಗಳು, ಮನೋರಂಜನೆ, ನಂಬಿಕೆಗಳು, ಭಾಷೆ, ಪ್ರೇಕ್ಷಣೆಯ ಸ್ಥಳಗಳು ಮತ್ತು ಋತುಮಾನವನ್ನು ಆಧರಿಸಿದ ಜೀವನಶೈಲಿ ಈ ಪ್ರದೇಶದ ಪ್ರಮುಖ ವೈಶಿಷ್ಟ್ಯತೆಗಳಾಗಿವೆ.

**ಸ್ಥಳನಾಮ:** ದಕ್ಷಿಣಕನ್ನಡ ಜಿಲ್ಲೆಯ ಪ್ರದೇಶಗಳು ಇಲ್ಲಿನ ಸ್ಥಳಗಳು ತಮ್ಮದೇ ಆದ ವೈಶಿಷ್ಟ್ಯತೆಯನ್ನು ಹೊಂದಿವೆ. ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗದ ವತಿಯಿಂದ ಡಾ. ಬಿ.ಎ. ವಿವೇಕ್ ರೈ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾದ ದ್ರಾವಿಡ ಸಾಹಿತ್ಯ ಚರಿತ್ರೆ ಮಾಲೆ ಸಂಪುಟ ೧. "ತುಳು ಸಾಹಿತ್ಯ ಚರಿತ್ರೆ"ಯಲ್ಲಿನ ಪುಟ ೧೦೭ರಲ್ಲಿ ಕೆಯ್ಯೂರು ರಘುಪತಿಭಟ್ಟರವರು ತುಳುನಾಡಿನ ಸ್ಥಳ ನಾಮ ಸ್ವರೂಪ ಕುರಿತು ಮಾಹಿತಿ ನೀಡಿದ್ದಾರೆ. ಪ್ರಾಚೀನ ಕಾಲದ ಆದಿಮಾನವನ ಜೀವನ ವಿಕಾಸದ ಒಂದು ಹಂತದವರೆಗೆ

ಆದ ಚಾರಿತ್ರಿಕ ಇತಿಹಾಸವನ್ನು ವಿಶ್ಲೇಷಣೆ ಮಾಡುತ್ತಾ, ಒಂದು ಕಡೆ ಸ್ಥಿರವಾಗಿ ನೆಲೆ ನಿಲ್ಲುವುದರ ಮೂಲಕ ಪಶುಸಂಗೋಪನೆ ಕೃಷಿಯೊಂದಿಗೆ ತನ್ನದೇ ಆದ ವಾಸದ ಮನೆಯನ್ನು ನಿರ್ಧರಿಸುವವರೆಗಿನ ಜೀವನದ ವ್ಯವಸ್ಥೆ ಸ್ಥಳನಾಮದ ಚರಿತ್ರೆಯಾಗಿದೆ.[೯] ಈ ಸ್ಥಳಗಳ ಬಗ್ಗೆ ಇರುವ ಹೆಸರು, ಪದಗಳ ಬಳಕೆ, ಪ್ರಕಾರಗಳ ಕುರಿತು ಇವರು ವಿಶ್ಲೇಷಣೆ ಮಾಡಿದ್ದಾರೆ. ನಾನು ಅಧ್ಯಯನ ಮಾಡುವ ಮಲೆಕುಡಿಯ ಸಮುದಾಯದ ನೆಲೆಗಳು ಸ್ಥಳಗಳ ಹೆಸರು ಸೇರಿದಂತೆ, ಈ ಸಮುದಾಯದವರು ಹೆಸರಿನ ಮುಂದೆ ತಮ್ಮ ಸಮುದಾಯದ ಸೂಚಕವಾದ ಮಲೆಕುಡಿಯ, ಮಲೆತ್ತಾಯ, ಮಲೆ, ಗೌಡ, ಪದಗಳನ್ನು ಸೇರಿಸುತ್ತಾರೆ. ಹೀಗಾಗಿ ಈ ಸ್ಥಳನಾಮಗಳ ಕುರಿತು ದೊರೆಯಬಹುದಾದ ಮಾಹಿತಿಗೆ ಪೂರಕವಾದ ವಿವರಣೆ ಇದೆ. ಕೆಯ್ಯೂರು ರಘುಪತಿಭಟ್ಟರು ಇಲ್ಲಿ ಬಳಕೆಯಲ್ಲಿರುವ ಗುಡ್ಡೆ, ಬೆಟ್ಟ, ಪದವು, ಮಾಣೆ, ಕದರಿ, ಕುಕ್ಕ್ ಕೋಡು, ಕೋಡಿ, ಕುಂದ, ಕೊಂಬು, ಕುಂಚಿ, ಅಡಕ, ಕೋಟಿ, ಕುಡಿ, ಕಟ್ಟ, ಕಲ್ಲು ಅಡ್ಕ, ತರ್ಬೆ, ಅಗ್ಗ, ಅಡ್ಡ, ಆರ, ಇಡು, ಇಡ್ಯ, ಈರ, ಬರಿ, ಕಂಬಳ, ಕಟ್ಟೆ, ಕಬೆ, ಕರಿ, ಕುಕ್ಕೆ, ಕುಳ, ಕೂವೆ, ಕೇವೆ, ಕೂಪು, ಕೋಟ, ಕೋಣೆ, ಗಂಪ, ಕುಂಡಿ, ಚೇರು, ಜಂಗಿ, ಜೆಪ್ಪು, ಜೋಗಿ, ತುಂಬಿ, ತೆಂಗು, ದೊಂಚೆ, ನಟ್ಟೆ, ನಾಳ, ನೀರೆ, ನೆಲ್ಲಿ, ನೇರ್ಯ, ಪಂಜೆ, ಪಟ್ಟೆ, ಪಡ್ರೆ, ಸದು, ಪದು, ಬಾಳೆ, ಬಿಜೈ, ಬೆಳ್ಳ, ಬೆಳ್ಳಿ, ಬಾಜಿ, ಬಾರೆ, ಬಾರ್‍ಯ, ಮಂಕೆ, ಮಂಚಿ, ಮಗ್ರ, ಮಜಿ, ಮಲ್ಲ, ಮಾಳ, ಮಿಂಚು, ಮಗು, ಮೂಡ, ಮೇಣ, ವಗ್ಗ, ವದ್ದ, ಶೆಡ್ಡ, ಸಾಗು, ನಾಯಾ, ಸುಳ್ಯ, ಸುಳ್ಳ, ಸೇಡ, ಸೇವ, ಹಳ್ಳಿ, ಹುಂಚಿ, ಹೆಗ್ರೆ, ಗೆರಸ ಮುಂತಾದ ಪದಗಳ ಕುರಿತು ಉಲ್ಲೇಖ ನೀಡಿದ್ದಾರೆ. ೪. ಮಲೆಕುಡಿಯ ಸಮುದಾಯದ ನೆಲೆಗಳು, ಸ್ಥಳನಾಮಗಳು ಸಾಮ್ಯತೆಯನ್ನು ಸೂಚಿಸುತ್ತವೆ.[೧೦]

**ಕುಟುಂಬ ಪದ್ಧತಿ:** ಇಲ್ಲಿ ಮಾತೃಪ್ರಧಾನವಾದ ಕುಟುಂಬಪದ್ಧತಿ ಆಚರಣೆಯಲ್ಲಿದೆ. ಭೂತಾಳಪಾಂಡ್ಯನ ಅಳಿಯ ಸಂತಾನಪದ್ಧತಿ ಆಧಾರಿತ ಕುಟುಂಬಪದ್ಧತಿ ತುಳು ನಾಡಿನಲ್ಲಿ ಅಸ್ತಿತ್ವದಲ್ಲಿದೆ. ಅಲ್ಲದೆ ಆಯಾ ಧರ್ಮ ಸಮುದಾಯಗಳ ಪರಂಪರೆಗನುಗುಣವಾದ ಕುಟುಂಬ ಪದ್ದತಿ ಕಂಡುಬರುತ್ತದೆ.

**ವೃತ್ತಿ:** ಇಲ್ಲಿಯ ವೃತ್ತಿಗಳು ಜಾತಿ ಪ್ರಧಾನವಾಗಿರುವುದು ಸಾಮಾನ್ಯ ಸಂಗತಿಯಾಗಿದೆ. ಪೂಜೆ, ಯಜ್ಞ, ಆರಾಧನೆಯಲ್ಲಿ ಬ್ರಾಹ್ಮಣ ಭಟ್ಟರು ಪ್ರಧಾನವಾಗಿದ್ದಾರೆ. ಗೌಡರು ಕೃಷಿ ಪ್ರಾಧಾನ್ಯತೆ ಹೊಂದಿದ್ದಾರೆ. ಶೆಟ್ಟಿ, ಬಂಟರು, ಭಂಡಾರಿಗಳು ಸಹ ಕೃಷಿ ವ್ಯಾಪಾರವನ್ನು ಅವಲಂಬಿಸಿದ್ದಾರೆ, ಅಲ್ಲದೆ ಸಾಂಪ್ರದಾಯಿಕ ಜಾತಿ ವೃತ್ತಿಗಳಾದ ಮಡಿಕೆ ಮಾಡುವ, ಬುಟ್ಟಿ ಹೆಣೆಯುವ, ಮೂರ್ತೆದಾರಿಕೆ, ಬಟ್ಟೆ ಒಗೆಯುವುದು, ಕ್ಷೌರಿಕ, ಚಿನ್ನದ ಕೆಲಸ ಅಲ್ಲದೆ ಸಾಂಪ್ರದಾಯಿಕ ಕೃಷಿ ಪದ್ದತಿ ಮತ್ತು ವಾಣಿಜ್ಯ ಬೆಳೆಗಳನ್ನು ಆಧರಿಸಿದ ಕೃಷಿ ಪದ್ಧತಿಯು ಈ ಪ್ರದೇಶದ ವೃತ್ತಿಗಳಾಗಿವೆ.

**ಧರ್ಮ:** ಧಾರ್ಮಿಕವಾಗಿ ಹಿಂದೂ, ಕ್ರೈಸ್ತ, ಮುಸ್ಲಿಂ, ಜೈನ, ಧರ್ಮಗಳು ಕಂಡುಬರುತ್ತವೆ.

**ಉಡುಪು:** ಇಲ್ಲಿನ ಉಡುಪುಗಳು ತುಳುನಾಡ ಸಂಸ್ಕೃತಿಯ ಪ್ರತೀಕಗಳಾಗಿವೆ. ಇಲ್ಲಿನ ಜನರು ಧರಿಸುವ ಉಡುಪು ಈ ಪ್ರದೇಶದ ಜನರ ಜಾತಿ, ಧರ್ಮಗಳ ಸಂಕೇತಗಳಾಗಿ ಗೋಚರಿಸುತ್ತವೆ.

**ಊಟ:** ತುಳುನಾಡಿನಲ್ಲಿ 'ಕುಚಲಕ್ಕಿ' ಪ್ರಸಿದ್ಧವಾದ ಅಕ್ಕಿಯಾಗಿದೆ. ಇದು ಇವರ ನೆಚ್ಚಿನ ಊಟ, ಗಂಜಿ ಊಟದ ಬಳಕೆ ಇವರಲ್ಲಿದೆ. ಬಾಳೆ ಎಲೆ ಊಟ, ಬೆಚ್ಚನೀರು, ಓಲೆಬೆಲ್ಲ, ಕಲ್ಲುಸಕ್ಕರೆ, ಇಲ್ಲಿನ ಊಟದ ಸಂಸ್ಕೃತಿಯ ಪದ್ಧತಿಯಾಗಿದೆ. ನೀರುದೋಸೆ, ಶರಬತ್ತು, ಪಾನಕ, ಪೋಡಿ, ಬನ್ಸ್ ಇಲ್ಲಿನ ಉಪಹಾರ ಪದ್ಧತಿಯಾಗಿದೆ.

**ಹಬ್ಬಗಳು:** ಪತ್ತನಾಜೆ, ಪೊಲಿ, ಆಟಿ, ಸೋಣ, ದೀಪಾವಳಿ, ಕೆಡ್ಡಸ, ಕದಿರು, ಭೂತಾರಾಧನೆ, ಕಂಬಳ, ನಾಗಮಂಡಲ, ಮಾರಿ, ನೇಮ, ಶಿವರಾತ್ರಿ, ಚೌತಿ, ಯುಗಾದಿ ನೂಲಹುಣ್ಣಿಮೆ, ನವರಾತ್ರಿ ಗಣಹೋಮ, ಬ್ರಹ್ಮಕಲಶ, ಉತ್ಸವ, ರಂಗಪೂಜೆ, ಭಜನೆ, ಹೊಸ ಅಕ್ಕಿ ಊಟ, ನಾಗರಪಂಚಮಿ, ಸಂಕಷ್ಟಿ, ಷಷ್ಠಿ, ಬಿಸು ಇವೆಲ್ಲಾ ಹಬ್ಬಗಳು ತುಳುನಾಡಿನ ಸಂಸ್ಕೃತಿಯ ಪ್ರತೀಕಗಳಾಗಿವೆ.

**ಮನೋರಂಜನೆ:** ತುಳುನಾಡಿನ ಮನೋರಂಜನೆಯು ಇಲ್ಲಿನ ಜಾನಪದ ಸೊಗಡಿನೊಂದಿಗೆ ಕೂಡಿದೆ. ಕಂಬಳ, ಕೋಳಿಅಂಕ, ಕುಸ್ತಿ, ಚನ್ನೆಮಣೆ ಆಟ, ಅಂಕಗದ್ದೆ, ಮಲ್ಲಕಂಬ, ಮೊದಲಾದ ಆಟಗಳು ಹಿಂದಿನ ಕಾಲದಿಂದ ಆಚರಣೆಯಲ್ಲಿದ್ದು, ಇವು ಇಲ್ಲಿನ ಜನಪದ ಕಲೆಗಳನ್ನು ಉಳಿಸಿ ಬೆಳೆಸುವ ಸಂಕೇತಗಳಾಗಿವೆ ಕ್ರಿ.ಶ.೧೪೦೨ರಲ್ಲಿ ದೊರೆತ ಬಾರಕೂರು ಶಾಸನದಲ್ಲಿ ಕಂಬಳ ಗದ್ದೆಯ ಬಗ್ಗೆ ಉಲ್ಲೇಖವಿದೆ.

**ನಂಬಿಕೆಗಳು:** ತುಳುನಾಡಿನ ನಂಬಿಕೆಗಳು, ಆಚರಣೆಗಳು ವಿಶಿಷ್ಟವಾಗಿದ್ದು ಇವು ಹಿಂದಿನಿಂದಲೂ ಆಚರಣೆಯಲ್ಲಿ ಬಂದಿವೆ. ಪ್ರತಿಯೊಂದು ಹಬ್ಬಗಳ ಆಚರಣೆಯ ತಳಹದಿ ಈ ನಂಬಿಕೆಗಳಾಗಿವೆ. ಆಟಿ ಅಮವಾಸ್ಯೆ ದಿನ ಮರದ ಕೆತ್ತೆಯ ಕಷಾಯ, ದಾನಬಿಡುವುದು, ಇತ್ಯಾದಿಗಳ ಆಚರಣೆ ಕಂಡುಬರುತ್ತದೆ. ಅರೆಗುದ್ದಲಿ, ದೈವಾರಾಧನೆ, ನೇಮ, ಕೋಲ, ಬಲಿ ಆಯನಗಳ ಮೂಲಕ ಆರಾಧಿಸುವುದು ಇಲ್ಲಿನ ಪದ್ಧತಿಯಾಗಿದೆ. ಇಲ್ಲಿ ಹಲವಾರು ಜಾನಪದ ಆಟಗಳು ಆಚರಣೆಯಲ್ಲಿವೆ. ಅಕ್ಕೂ-ಚಿಕ್ಕು, ಅಟ್ಟ-ಮುಟ್ಟ, ಮರಕೋತಿ, ಹುಲಿದನ ಆಟಗಳು. ಯಕ್ಷಗಾನ ತಾಳಮದ್ದಳೆ, ಸಂಧಿ, ಒಗಟು, ಗಾದೆಗಳು, ಪದ್ಯ, ಪಾಡ್ದನಗಳು, ಅಜ್ಜಿಕಥೆಗಳು ಎಲ್ಲವೂ ಇಲ್ಲಿನ ಪರಿಸರ ಸಂಸ್ಕೃತಿ ಜೀವನದ ಸೇತು ಬಂಧಗಳಾಗಿವೆ.

**ಭಾಷೆಗಳು**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ, ಜೈನ ಪರಂಪರೆಯ ಧರ್ಮದ ಜನರಿದ್ದಾರೆ. ತುಳು ಇಲ್ಲಿನ ಪ್ರಧಾನ ಭಾಷೆಯಾಗಿದೆ, ಅಲ್ಲದೆ ಕನ್ನಡ, ಹವ್ಯಕ ಕನ್ನಡ, ಅರೆಭಾಷೆ ಕನ್ನಡ, ಕುಂದಾಪುರ ಕನ್ನಡ, ಕೊಂಕಣಿ, ಗೋವಾ ಕೊಂಕಣಿ, ಬ್ಯಾರಿ ಭಾಷೆಗಳಿವೆ.

ತುಳುನಾಡಿನ ಸಂಸ್ಕೃತಿ ಜನಾಂಗಿಕವಾಗಿ ವೈವಿಧತೆಯನ್ನು ಹೊಂದಿದೆ. ಇಲ್ಲಿ ಹಲವಾರು ಜಾತಿ-ಉಪಜಾತಿ ಜನಾಂಗಗಳು ಕಂಡುಬರುತ್ತವೆ. ಬ್ರಾಹಣ, ಭಟ್ಟ, ಗೌಡ, ಶೆಟ್ಟಿ, ಪೂಜಾರಿ, ಜೈನ, ಹೆಗಡೆ, ಕುಂಬಾರರು, ಗಾಣಿಗರು, ಮಲೆಕುಡಿಯರು, ಅಕ್ಕಸಾಲಿಗರು, ಜೋಗಿಗಳು, ಕಮ್ಮಾರರು, ಬಿಲ್ಲವರು, ಮೂರ್ತೆದಾರರು, ಮರಾಠಿನಾಯ್ಕ್, ಕೊರಗರು, ಬಡಗಿಗಳೂ, ಮಡಿವಾಳರು, ಸೇರಿಗಾರರು, ನೇಕಾರರು, ಶೆಟ್ಟಿಗಾರರು, ಅರ್ಚಕರು, ಭಂಡಾರಿಗಳು ಅಲ್ಲದೆ ಭೈರ, ಸಮಗಾರ, ಆದಿ ದ್ರಾವಿಡ, ಮೊಗೇರ, ಮನ್ಸ, ನಲಿಕೆ, ಪರವ ಮುಂತಾದ ಜಾತಿ ಸಮುದಾಯದ ಜನಾಂಗಗಳು ಇಲ್ಲಿ ಕಂಡುಬರುತ್ತವೆ. ಪ್ರಾಟೆಸ್ಟಂಟ್ ಕ್ಯಾಥೋಲಿಕ್ ಕ್ರೈಸ್ತರು, ಬ್ಯಾರಿ ಜನರು ಇಲ್ಲಿ ನೆಲೆಸಿದ್ದಾರೆ. ಮಲೆಕುಡಿಯ ಬಡಕಟ್ಟು ಸಮುದಾಯದವರು ಈ ಜಿಲ್ಲೆ ವ್ಯಾಪ್ತಿಯಲ್ಲಿ ನೆಲೆಸಿದ್ದಾರೆ.

**ಪ್ರೇಕ್ಷಣೀಯ ಸ್ಥಳಗಳು**

ಭಾರತ ದೇಶದ ಸಂಸ್ಕೃತಿಯು ಸಿಂಧೂ ನದಿ ತೀರ ಪ್ರದೇಶಗಳಲ್ಲಿ ಬೆಳೆದು ಬಂದಿದೆ. ಅಂತೆಯೇ ದಕ್ಷಣ ಕನ್ನಡ ಜಿಲ್ಲೆಯಲ್ಲಿ ಹಲವಾರು ನದಿಗಳು ಹರಿಯುತ್ತವೆ. ಬೆಳ್ತಂಗಡಿ ತಾಲ್ಲೂಕಿನಲ್ಲಿ ನೇತ್ರಾವತಿ, ಕುಮಾರಧಾರಾ, ಫಲ್ಗುಣಿ, ಪಯಸ್ವಿನಿ ನದಿಗಳು ಹರಿಯುತ್ತವೆ. ನೇತ್ರಾವತಿ ನದಿ ತೀರದಲ್ಲಿ ಪ್ರಸಿದ್ಧವಾದ

ಶ್ರೀಕ್ಷೇತ್ರ ಧರ್ಮಸ್ಥಳ ಮಂಜುನಾಥ ಸ್ವಾಮಿ ದೇವಸ್ಥಾನವಿದೆ. ಇದು ಮಂಗಳೂರಿನಿಂದ ೭೫ಕಿ.ಮೀ. ದೂರದಲ್ಲಿದೆ. ಶ್ರೀ ಮಂಜುನಾಥ ಸ್ವಾಮಿಯು ಇಲ್ಲಿನ ಆರಾಧ್ಯ ದೈವವಾಗಿದೆ. ೧೧.೯ಮೀ. ಎತ್ತರದ ಒಂದೇ ಕಲ್ಲಿನಿಂದ ಕೆತ್ತಿದ ಗೊಮ್ಮಟೇಶ್ವರ ವಿಗ್ರಹವಿದೆ. ಚಂದ್ರನಾಥಬಸದಿ, ಮಂಜೂಷ ವಸ್ತು ಸಂಗ್ರಹಾಲಯಗಳನ್ನು ಹೊಂದಿದೆ. ಸುಳ್ಯ ತಾಲ್ಲೂಕಿನ ಶ್ರೀಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನವು ದಕ್ಷಿಣಕನ್ನಡ ಜಿಲ್ಲೆಯ ಒಂದು ಪ್ರಸಿದ್ಧ ಯಾತ್ರಾ ಸ್ಥಳವಾಗಿದೆ. ಉಳ್ಳಾಲದ ಸೋಮೇಶ್ವರ ದೇವಸ್ಥಾನವು ಮಂಗಳೂರಿನಿಂದ ೧೨ಕಿ.ಮೀ.ಗಳ ದೂರದಲ್ಲಿದೆ. ಉಳ್ಳಾಲದ ಪ್ರಸಿದ್ಧ ಸೈಯದ್ ಮದನಿ ದರ್ಗಾವು ಮುಸ್ಲಿಮರ ಪ್ರಮುಖ ಪ್ರಾರ್ಥನಾ ಮಂದಿರವಾಗಿದೆ. ಇದು ದಕ್ಷಣ ಭಾರತದ ಅಜ್ಮೀರ್ ಎಂದು ಕರೆಯಲ್ಪಡುತ್ತದೆ. ಮೂಡಬಿದಿರೆಯ ಸಾವಿರ ಕಂಬದ ಜೈನ ಬಸದಿ ಕರ್ನಾಟಕದ ಅತಿ ವಿಸ್ತಾರವಾದ ಬಸದಿಯಾಗಿದೆ. ಕ್ರಿ.ಶ. ೧೪೨೯-೩೦ರಲ್ಲಿ ರಚಿತವಾದ ಈ ಬಸದಿಯಲ್ಲಿ ಅಪೂರ್ವವಾದ ಲೋಹದ ವಿಗ್ರಹಗಳಿವೆ. ಇಲ್ಲಿ ಸುಮಾರು ೨೦ ಬಸದಿಗಳಿವೆ. ಇಲ್ಲಿನ ಅರಸರ ಅರಮನೆ ಮರದ ಕೆತ್ತನೆಯಿಂದ ಆಕರ್ಷಿತವಾಗಿದೆ. ಮಂಗಳೂರಿನ ಕದ್ರಿ ಶ್ರೀ ಮಂಜುನಾಥ ಸ್ವಾಮಿ ದೇವಸ್ಥಾನ, ಮಂಗಳಾದೇವಿ ದೇವಸ್ಥಾನ, ಕುದ್ರೋಳಿಯ ಶ್ರೀ ಗೋಕರ್ಣನಾಥೇಶ್ವರ ದೇವಸ್ಥಾನ ಮತ್ತು ಸೈಂಟ್ ಅಲೋಶಿಯಸ್ ಚರ್ಚ್‌ಗಳು ಪ್ರಸಿದ್ಧವಾಗಿವೆ. ಮಂಗಳೂರಿನಂದ ೨೨ಕಿ.ಮೀ. ದೂರದ ಪೊಳಲಿಯ ರಾಜರಾಜೇಶ್ವರಿ ದೇವಸ್ಥಾನ, ಕಟೀಲು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ, ಮೂಲ್ಕಿಯ ಬಪ್ಪನಾಡು ಶ್ರೀದೇವಿ ದೇವಸ್ಥಾನ, ಬೋಲೂರಿನ ಟಿಪ್ಪು ಸುಲ್ತಾನನ ಬತೇರಿ, ಗುರುಪುರದ ಕೋಟೆ, ಪಿಳಿಕುಳದ ನಿಸರ್ಗಧಾಮಗಳು ಪ್ರಸಿದ್ಧ ಯಾತ್ರಾ ಸ್ಥಳಗಳಾಗಿವೆ. ಪುತ್ತೂರು ತಾಲೂಕಿನ ಪ್ರಸಿದ್ಧ ಯಾತ್ರಾ ಸ್ಥಳ **'ಬೆಂದ್ರ್ ತೀರ್ಥ'**ವಿದೆ.

### ೧.೩. ಅಧ್ಯಯನದ ವಿಧಾನ

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿನ ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಕೆಳಗಿನ ವಿಧಾನಗಳನ್ನು ಅನುಸರಿಸಲಾಗಿದೆ.

೧. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ
೨. ಕ್ಷೇತ್ರಕಾರ್ಯ ವಿಧಾನ
೩. ಚಾರಿತ್ರಿಕ ವಿಧಾನ
೪. ಪ್ರಶ್ನಾವಳಿ ವಿಧಾನ
೫. ಸಂದರ್ಶನ ವಿಧಾನ
೬. ಗುಂಪುಚರ್ಚೆ
೭. ಅವಲೋಕನಾ ವಿಧಾನ
೮. ಏಕವ್ಯಕ್ತಿ ಅಧ್ಯಯನ ವಿಧಾನ
೯. ಮಾದರಿ ವಿಧಾನ
೧೦. ಸಾಂಖ್ಯಿಕ ವಿಧಾನ

**೧. ಲಭ್ಯ ಸಾಹಿತ್ಯಿಕ ಆಕರಗಳ ಅಧ್ಯಯನ**

ಮಲೆಕುಡಿಯ ಸಮುದಾಯವನ್ನು ಕುರಿತಂತೆ ಇದುವರೆಗೆ ನಡೆದ ಅಧ್ಯಯನಗಳಿಂದ ಪ್ರಕಟವಾದ ಸಾಹಿತ್ಯಿಕ ಗ್ರಂಥಗಳು, ಸಂಶೋಧನಾ ಮಹಾಪ್ರಬಂಧಗಳು, ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳು, ನಿಘಂಟು, ವಿಶ್ವಕೋಶಗಳು, ಗೆಜೆಟಿಯರ್‌ಗಳು, ಸ್ಮರಣ ಸಂಚಿಕೆ, ಸಂಪುಟಗಳು, ಪತ್ರಿಕಾವರದಿ, ಲೇಖನಗಳನ್ನು ಲಭ್ಯ ಸಾಹಿತಿಕ ಆಕರಗಳನ್ನಾಗಿ ಪರಿಗಣಿಸಲಾಗಿದೆ.

**೨. ಕ್ಷೇತ್ರಕಾರ್ಯ ವಿಧಾನ**

ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿಂದತೆ ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯ ಬೆಳ್ತಂಗಡಿ, ಸುಳ್ಯ, ಬಂಟ್ವಾಳ, ಪುತ್ತೂರು ಮತ್ತು ಮಂಗಳೂರು ನಗರ ಪ್ರದೇಶಗಳಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯದ ಆಯ್ದ ೫೦ ಪ್ರದೇಶಗಳಲ್ಲಿನ ೫೦೦ ಕುಟುಂಬಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಕ್ಷೇತ್ರಕಾರ್ಯದಲ್ಲಿ ಕುಟುಂಬವಾರು ಸಮೀಕ್ಷೆ, ವ್ಯಕ್ತಿಗಳ ಸಂದರ್ಶನ, ಪೂರಕವಾದ ಪ್ರಶ್ನಾವಳಿ, ಟಿಪ್ಪಣಿ, ಛಾಯಾ ಚಿತ್ರ, ವೀಡಿಯೋ ಮಾಧ್ಯಮಗಳನ್ನು ಬಳಸಲಾಗಿದೆ. ಇಲ್ಲಿ ಲಭ್ಯವಾದ ಮಾಹಿತಿಯನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ.

**೩. ಚಾರಿತ್ರಿಕ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಐತಿಹಾಸಿಕ ಹಿನ್ನಲೆ ಅತ್ಯವಶ್ಯಕವಾಗಿದೆ. ಇದುವರೆಗೆ ನಡೆದ ಅಧ್ಯಯನಗಳಿಂದ ಲಭ್ಯವಾದ ಮಾಹಿತಿಯನ್ನು ಐತಿಹಾಸಿಕ ಆಧಾರಗಳಿಂದ ಪಡೆಯುವುದರ ಮೂಲಕ ಈ ಸಮುದಾಯದ ಚಾರಿತ್ರಿಕ ಹಿನ್ನಲೆಯನ್ನು ತಿಳಿದುಕೊಳ್ಳಲಾಗಿದೆ. ಈ ವಿಧಾನದ ಮೂಲಕ ಲಭ್ಯವಾದ ಮಾಹಿತಿಯು ಇವರ ಜೀವನ ವಿಧಾನ, ಪರಂಪರೆ, ಆಚರಣೆ, ಆರಾಧನಾ ಪದ್ಧತಿ, ಹೋರಾಟಗಳು ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿರುತ್ತವೆ.

**೪. ಪ್ರಶ್ನಾವಳಿ ವಿಧಾನ**

ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಿರುವ ಮಾಹಿತಿಯನ್ನು ಪ್ರಶ್ನಾವಳಿ ವಿಧಾನದ ಮೂಲಕ ನಡೆಸಲಾಗಿದೆ. ಈ ಪ್ರಶ್ನಾವಳಿಯನ್ನು ಸಮುದಾಯದ ಆಯ್ದ ನೂರು ವ್ಯಕ್ತಿಗಳ ಸಂದರ್ಶನದಲ್ಲಿ ಮತ್ತು ಆಯ್ದ ೫೨೩ ಕುಟುಂಬಗಳನ್ನು ಮಾದರಿ ಸಮೀಕ್ಷೆಯಲ್ಲಿ ಬಳಸಲಾಗಿದೆ. ಇಲ್ಲಿ ಲಭ್ಯವಾದ ಮಾಹಿತಿಯು ನಮ್ಮ ಅಧ್ಯಯನಕ್ಕೆ ನೆರವಾಗಿರುತ್ತದೆ.

**೫. ಸಂದರ್ಶನ ವಿಧಾನ**

ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದ ಆಯ್ದ ಪ್ರದೇಶಗಳಲ್ಲಿನ ಕುಟುಂಬಗಳ, ವ್ಯಕ್ತಿಗಳ, ಸಂಘ ಸಂಸ್ಥೆಗಳ ಪದಾಧಿಕಾರಿಗಳು, ಮುಖಂಡರುಗಳ, ವಿವಿಧ ಇಲಾಖೆಗಳ ಅಧಿಕಾರಿಗಳ ಸಂದರ್ಶಿಸಲು ಸಂದರ್ಶನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಸಂದರ್ಶನದಿಂದ ಲಭ್ಯವಾದ ಮಾಹಿತಿ, ಅಂಕಿ ಅಂಶಗಳು, ಐತಿಹ್ಯ ವಿವರಣೆಗಳು ನಮ್ಮ ಅಧ್ಯಯನಕ್ಕೆ ನೆರವಾಗಿರುತ್ತವೆ.

## ೬. ಗುಂಪುಚರ್ಚೆ

ನಮ್ಮ ಅಧ್ಯಯನದ ಕ್ಷೇತ್ರದ ವ್ಯಾಪ್ತಿಗೆ ಒಳಪಡುವ ಪ್ರದೇಶಗಳ ಜಾತ್ರೆ, ಉತ್ಸವ, ನೇಮ, ಕೋಲ, ವಾರ್ಷಿಕೋತ್ಸವ ಸಂದರ್ಭಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಈ ಸಮುದಾಯದ ಜನರೊಂದಿಗೆ ಮತ್ತು ಮಲೆಕುಡಿಯರ ಸಂಘದ ಪದಾಧಿಕಾರಿಗಳೊಂದಿಗೆ ಗುಂಪು ಚರ್ಚೆ, ಸಂವಾದ ನಡೆಸುವುದರ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ. ಬೆಳ್ತಂಗಡಿಯ ಮಲೆಕುಡಿಯರ ಸಂಘ, ಧರ್ಮಸ್ಥಳ, ಸುಬ್ರಮಣ್ಯ, ಕೊಕ್ಕಡ, ಹಾಲಂಗಾಯ್, ಶಿಶಿಲ, ಬಾಂಜಾರುಮಲೆ, ನಾಯಿದಗುರಿಯಲ್ಲಿ ಗುಂಪು ಚರ್ಚೆಗಳಿಗೆ ಅವಕಾಶ ದೊರೆತಿದ್ದು, ಬೆಳ್ತಂಗಡಿಯ ಮಲೆಕುಡಿಯರ ಸಂಘದ ಪದಾಧಿಕಾರಿಗಳೊಂದಿಗೆ, ಕರ್ನಾಟಕ ರಾಜ್ಯ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಡಾ. ಮಂಗಳಾಶ್ರೀಧರ್ ಮತ್ತು ವ್ಯವಸ್ಥಾಪಕ ನಿರ್ದೇಶಕರಾದ ಹೆಚ್.ಡಿ.ದೇವರಾಜ್ ಮತ್ತು ಇವರನ್ನೊಳಗೊಂಡ ಅಧಿಕಾರಿಗಳ ತಂಡವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯದ ನೆಲೆಗಳಿಗೆ ಭೇಟಿ ನೀಡಿ ಈ ಸಮುದಾಯದ ಜನರೊಂದಿಗೆ ಸಮಾಲೋಚನೆ ಮತ್ತು ಗುಂಪುಚರ್ಚೆಯನ್ನು ನಡೆಸಲಾಗಿದೆ. ಇದು ನಮ್ಮ ಅಧ್ಯಯನಕ್ಕೆ ನೆರವಾಗಿರುತ್ತದೆ.

## ೭. ಅವಲೋಕನಾ ವಿಧಾನ

ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಮಾದರಿ ಗ್ರಾಮಪ್ರದೇಶಗಳು, ಕುಟುಂಬಗಳ ಹಬ್ಬ, ಆಚರಣೆ, ಮದುವೆ, ಜಾತ್ರೆ, ಉತ್ಸವ, ಸಮಾವೇಶಗಳಲ್ಲಿ ಭಾಗವಹಿಸಿ ಇವರಲ್ಲಿನ ಸಾಮಾಜಿಕ ಆರ್ಥಿಕ ಸ್ಥಿತಿಗತಿಗೆ ಪೂರಕವಾದ ಮಾಹಿತಿಯನ್ನು ಸಂಗ್ರಹಿಸಲು ಅವಲೋಕನಾ ವಿಧಾನವು ನೆರವಾಗಿರುತ್ತದೆ. ಅಕ್ಕರೆಕೋಡಿ, ಹಾಲಂಗಾಯ್, ನೆರಿಯಾಗಳಲ್ಲಿ ನಡೆದ ನೇಮ, ಕೋಲಾ, ಉತ್ಸವಗಳು, ಬಾಂಜಾರುಮಲೆಯ ಮಾರಿಹಬ್ಬ, ಸುಬ್ರಮಣ್ಯ, ಕೊಕ್ಕಡ, ಶಿಶಿಲ, ಗುಂಡ್ಯ ಜಾತ್ರೆಗಳಲ್ಲಿ ಭಾಗವಹಿಸಿದಾಗ ಅವಲೋಕನಾ ವಿಧಾನವು ಸಹಾಯಕವಾಗಿದೆ.

## ೮. ಏಕವ್ಯಕ್ತಿ ಅಧ್ಯಯನ ವಿಧಾನ

ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡ ಪ್ರದೇಶಗಳ ಕುಟುಂಬಗಳ ಅಧ್ಯಯನದಲ್ಲಿ ಏಕವ್ಯಕ್ತಿ ಅಧ್ಯಯನ ವಿಧಾನವನ್ನು ಬಳಸಲಾಗಿದೆ. ಈ ಸಮುದಾಯದ ಕುಟುಂಬಗಳ ಹಿರಿಯರು, ಮುಖಂಡರು, ಕೃಷಿಕರು, ಕಾರ್ಮಿಕರು, ದಿನಗೂಲಿಗಳು, ಸರಕಾರಿ ನೌಕರರು, ಸಂಘ ಸಂಸ್ಥೆಗಳ ಮುಖಂಡರು, ಸ್ಥಳೀಯರು, ಚಳುವಳಿಯ ಹೋರಾಟಗಾರರು, ಸಮಾಜಕಲ್ಯಾಣ ಇಲಾಖೆ ಸಿಬ್ಬಂದಿ, ಲ್ಯಾಂಪ್ಸ್, ಐಟಿಡಿಪಿ, ಅರಣ್ಯ, ಕಂದಾಯ ಇಲಾಖೆಗಳ ಅಧಿಕಾರಿಗಳಿಂದ ಲಭ್ಯವಾದ ಮಾಹಿತಿಯನ್ನು ಪಡೆಯಲು ಏಕವ್ಯಕ್ತಿ ಅಧ್ಯಯನ ವಿಧಾನವು ಸಹಾಯಕವಾಗಿದೆ.

## ೯. ಮಾದರಿ ವಿಧಾನ

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಬಂಟ್ವಾಳ, ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ವಾಸವಾಗಿರುವ ಒಟ್ಟು ನೆಲೆ ಪ್ರದೇಶಗಳಲ್ಲಿನ ತಾಲೂಕುವಾರು ಶೇಕಡ ೧೦ರ ಅನುಪಾತದಲ್ಲಿ ೫೦ ಪ್ರದೇಶಗಳನ್ನು ಆಯ್ಕೆಮಾಡಿಕೊಂಡು, ಅಧ್ಯಯನಕ್ಕೆ ಮಾದರಿ ವಿಧಾನ ಮೂಲಕ ೫೦೦ ಕುಟುಂಬಗಳನ್ನು ಮಾದರಿ ಸಮೀಕ್ಷೆ ನಡೆಸಲಾಗಿದೆ. ಇಡೀ ಜಿಲ್ಲೆಯಲ್ಲಿ ವಾಸವಾಗಿರುವ ಈ ಸಮುದಾಯದ ಮಾದರಿ ಅಧ್ಯಯನದಿಂದ ಲಭ್ಯವಾದ ಮಾಹಿತಿಯು ಪ್ರಸ್ತುತ ಅಧ್ಯಯನಕ್ಕೆ ಸಹಾಯಕವಾಗಿದೆ.

## ೧೦. ಸಾಂಖ್ಯಿಕ ವಿಧಾನ

ಅಧ್ಯಯನದ ಮಾಹಿತಿ ಸಂಗ್ರಹಣೆಯಲ್ಲಿ ಅಂಕಿ ಅಂಶಗಳು ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಸಂಶೋಧನೆಯ ಪ್ರತಿ ಹಂತದ ವಿಧಾನಗಳಲ್ಲಿ ಪರಿಗಣಿಸಲಾದ ಅಂಕಿ ಅಂಶಗಳಲ್ಲಿ ಸಾಂಖ್ಯಿಕ ವಿಧಾನವನ್ನು ಅವಲಂಭಿಸಿದೆ. ಕ್ಷೇತ್ರಕಾರ್ಯ, ಸಂದರ್ಶನ, ಪ್ರಶ್ನಾವಳಿ, ಜನಗಣತಿ, ಸಮೀಕ್ಷೆ, ವಿವಿಧ ಇಲಾಖೆಗಳಿಂದ ಲಭ್ಯವಾದ ಅಂಕಿಅಂಶಗಳ ವಿವರ ಯೋಜನೆಗಳ ಜಾರಿಯಿಂದ ಲಭ್ಯವಾದ ಅಂಕಿ ಅಂಶಗಳು ನಮ್ಮ ಅಧ್ಯಯನಕ್ಕೆ ಪೂರಕವಾಗಿರುತ್ತವೆ.

## ಪ್ರಸ್ತುತ ಅಧ್ಯಯನ

ಬುಡಕಟ್ಟು ಸಮುದಾಯಗಳ ಅಧ್ಯಯನದಲ್ಲಿ ಮಲೆಕುಡಿಯ ಸಮುದಾಯದ ಕುರಿತು ಅಧ್ಯಯನ ಮಾಡುವ ಅವಶ್ಯಕತೆ ಒಂದು ಔಚಿತ್ಯಪೂರ್ಣವಾದುದಾಗಿದೆ. ಇವರ ಪ್ರಸ್ತುತ ಜ್ವಲಂತ ಬದುಕಿನ ಸ್ಥಿತಿಯ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾದ ಅನಿವಾರ್ಯತೆ ಇದೆ. ಕರ್ನಾಟಕದ ಬುಡಕಟ್ಟು ಸಮುದಾಯಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿನ ಮೆಲಕುಡಿಯ ಬುಡಕಟ್ಟು ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಒಟ್ಟು ೬ ಅಧ್ಯಾಯಗಳನ್ನು ಮಾಡಲಾಗಿದೆ.

## ಅಧ್ಯಾಯ ಒಂದು: ಮಲೆಕುಡಿಯ ಸಮುದಾಯ

ಈ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಅಧ್ಯಾಯನದ ವ್ಯಾಪ್ತಿ, ಅಧ್ಯಯನದ ವಿಧಾನ, ಇದುವರೆಗೂ ನಡೆದ ಅಧ್ಯಯನದ ಪರಿಶೀಲನೆ, ಮಲೆಕುಡಿಯ ಪದದ ಅರ್ಥ, ಇತರೆ ಹೆಸರುಗಳು, ಮಲೆಕುಡಿಯರ ಮೂಲ. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ನೆಲೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

## ಅಧ್ಯಾಯ ಎರಡು: ಮಲೆಕುಡಿಯರ ಸಾಮಾಜಿಕ ಸ್ಥಿತಿಗತಿ

ಈ ಅಧ್ಯಾಯದಲ್ಲಿ ಮಲೆಕುಡಿಯರು ಎಂದರೆ ಯಾರು, ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ವರ್ಗೀಕರಣ, ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ವೈಶಿಷ್ಟ್ಯೆತೆಗಳು, ಕುಟುಂಬ ಪದ್ಧತಿ. ಬರಿಗಳು, ಮಕ್ಕಳ ಕಟ್ಟು, ಅಳಿಯ ಕಟ್ಟು, ವೈವಾಹಿಕ ಸ್ಥಿತಿ, ಸಂಸ್ಕಾರ ವಿಧಿಗಳು ಮಲೆಕುಡಿಯ ಸಮುದಾಯದಲ್ಲಿನ ಆಂತರಿಕ ಶ್ರೇಣೀಕರಣ, ದಕ್ಷಣಕನ್ನಡದ ಸಾಮಾಜಿಕ ಪರಿಸರದಲ್ಲಿ ಮಲೆಕುಡಿಯರ ಸ್ಥಾನಮಾನ, ವರ್ತಮಾನದಲ್ಲಿ ಮಲೆಕುಡಿಯರ ಸಾಮಾಜಿಕ ಸ್ಥಾನಮಾನಗಳೇನು ಎಂಬುದನ್ನು ಕುರಿತು ಅಧ್ಯಯನ ಮಾಡಲಾಗಿದೆ.

## ಅಧ್ಯಾಯ ಮೂರು: ಮಲೆಕುಡಿಯರ ಆರ್ಥಿಕ ಸ್ಥಿತಿಗತಿ

ಈ ಅಧ್ಯಾಯದಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ಕುಲಕಸಬುಗಳು, ಪಾರಂಪರಿಕ ವೃತ್ತಿಗಳು, ವೃತ್ತಿ ಕೌಶಲ್ಯ-ಕರಕುಶಲತೆ, ವೈದ್ಯ ಪದ್ದತಿ, ಕುಟುಂಬ ಮತ್ತು ಆರ್ಥಿಕತೆ, ಕೃಷಿ ಮತ್ತು ಪಶು ಸಂಗೋಪನೆ, ಸಮುದಾಯ ಮತ್ತು ಆರ್ಥಿಕತೆ, ಪಾರಂಪರಿಕ ಆರಾಧನೆಗಳು ಮತ್ತು ಮಲೆಕುಡಿಯರ ಆರ್ಥಿಕತೆಯಲ್ಲಿ ಬಾಂಜಾರುಮಲೆಯ ಮಾರಿ-ಗಿಂಡಿ ಪೂಜೆ, ನೆರಿಯಾದ ಉತ್ಸವ, ಕುಕ್ಕೆ ಸುಬ್ರಹ್ಮಣ್ಯ ಬ್ರಹ್ಮರಥೋತ್ಸವ, ಧರ್ಮಸ್ಥಳ ರಥೋತ್ಸವ, ಕೊಕ್ಕಡ ರಥೋತ್ಸವ, ಪುರುಷ ಪೂಜೆ, ಶಿಶಿಲದ ರಥೋತ್ಸವ, ನೇಮ ದೈವ, ಕೋಲ, ಗುಂಡ್ಯ ತೋಟದ ಉತ್ಸವಗಳಲ್ಲಿ ಕಂಡುಬರುವ ಈ ಸಮುದಾಯದ ಆರ್ಥಿಕ

ಅವಲಂಬಿತ ಬದುಕಿನ ಪಾರಂಪರಿಕ ಆರಾಧನೆಗಳನ್ನು ಕುರಿತು ಅಧ್ಯಾಯನ ಮಾಡಲಾಗಿದೆ. ಅಲ್ಲದೇ ಇವರ ಆಧುನಿಕ ವೃತ್ತಿಗಳಲ್ಲಿ ಬೀಡಿ ಕಾರ್ಮಿಕರು, ಕಾರ್ಖಾನೆಗಳಲ್ಲಿ ದುಡಿಮೆ, ಸರಕಾರಿ, ಖಾಸಗಿ ಉದ್ಯೋಗಗಳು ಇವರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳನ್ನು ವಿವರಿಸುತ್ತವೆ. ಈ ಸಮುದಾಯದ ಶೈಕ್ಷಣಿಕ ಸ್ಥಿತಿ ಮತ್ತು ಮಲೆಕುಡಿಯರ ಸಂಘಟನೆ ಮತ್ತು ನಾಯಕತ್ವದಲ್ಲಿ ಮಲೆಕುಡಿಯರ ಸಂಘ ಮತ್ತು ಮಲೆಕುಡಿಯರ ನಾಯಕತ್ವ ಕುರಿತು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ನಾಲ್ಕು: ಸರ್ಕಾರದ ಅಭಿವೃದ್ಧಿ ಯೋಜನೆಗಳು ಮತ್ತು ಮಲೆಕುಡಿಯರ ಹೋರಾಟ**

ಈ ಅಧ್ಯಾಯದಲ್ಲಿ ಮಲೆಕುಡಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ದಿಕ್ಸೂಚಿಯಾಗಿರುವ ಸರ್ಕಾರದ ಅಭಿವೃದ್ದಿ ಯೋಜನೆಗಳು ಮತ್ತು ಈ ಯೋಜನೆಗಳ ಅನುಷ್ಠಾನ ಮತ್ತು ವಿರೋಧಕ್ಕೆ ಸಂಬಂಧಿಸಿಂತೆ ಕಂಡುಬಂದ ವಾದ-ವಿವಾದಗಳು ಈ ಸಮುದಾಯದ ಆರ್ಥಿಕತೆಗೆ ಸಂಬಂಧಿಸಿದ ಹೋರಾಟಗಳಾಗಿ ರೂಪುಗೊಂಡವು. ಇವುಗಳಲ್ಲಿ ನೆರಿಯಾದ ಭೂ ಹೋರಾಟ, ಕುದುರೆಮುಖ ರಾಷ್ಟ್ರೀಯ ಉದ್ಯಾನವನ, ಪುನರ್ವಸತಿ ಯೋಜನೆ ಹೋರಾಟ, ಅರಣ್ಯ ವಾಸಿಗಳ ಸ್ಥಳಾಂತರ ಹೋರಾಟ, ಪುನರ್ವಸತಿ ಫಲಾನುಭವಿಗಳ-ನಿರಾಶ್ರಿತರ ಹೋರಾಟ, ಪಾರಂಪಾರಿಕ ಅರಣ್ಯ ಹಕ್ಕು ಕಾಯಿದೆಗೆ ಸಂಬಂದಿಸಿದ ಹೋರಾಟ, ಗುಂಡ್ಯ ಜಲವಿದ್ಯುತ್ ಯೋಜನೆ ಹೋರಾಟ ಮತ್ತು ಇವರ ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂದಿಸಿದ ಹೋರಾಟಗಳು, ಸಾಮಾಜಿಕ ಹೋರಾಟಗಳಲ್ಲಿ ಪ್ರಮುಖವಾದ ಸುಬ್ರಹ್ಮಣ್ಯದ ಮಡೆಸ್ನಾನಗಳನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಐದು: ವರ್ತಮಾನದ ಸಾಮಾಜಿಕ ಆರ್ಥಿಕ ಸ್ಥಿತಿಗಳು ಮತ್ತು ಸವಾಲುಗಳು**

ಈ ಅಧ್ಯಾಯದಲ್ಲಿ ಮಲೆಕುಡಿಯ ಸಮುದಾಯದ ಸಾಮಾಜಿಕ ಅನನ್ಯತೆ, ಭೂಮಿ ಸಮಸ್ಯೆ, ಸ್ಥಳಾಂತರ ಸಮಸ್ಯೆ, ನಿರ್ವಸಿತ-ನಿರಾಶ್ರಿತರ ಸಮಸ್ಯೆ, ಕಾನೂನು ಸಮಸ್ಯೆ, ರಾಜಕೀಯ ಪರಾಧೀನತೆ-ಪ್ರಾತಿನಿಧ್ಯ ಸಮಸ್ಯೆ, ನಕ್ಸಲ್ ಹೋರಾಟದ ಪ್ರದೇಶಗಳ ಸಮಸ್ಯೆ ಮತ್ತು ಸವಾಲುಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಆರು: ಸಮಾರೋಪ**

ಇದುವರೆಗಿನ ಅಧ್ಯಯನದಿಂದ ಲಭ್ಯವಾದ ಪಲಿತಗಳು ಮತ್ತು ಸಲಹೆಗಳನ್ನು ಸಮಾರೋಪದಲ್ಲಿ ನೀಡಲಾಗಿದೆ. ಈ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಈ ಅಧ್ಯಯನಗಳ ಮಾನದಂಡಗಳನ್ನು ಪರಿಗಣಿಸಲಾಗಿದೆ. ಇಲ್ಲಿ ಗೋಚರವಾದ ಅಂಶಗಳು ಈ ಸಮುದಾಯದ ಸ್ಥಿತ್ಯಂತರಗಳನ್ನು ನಿರ್ಧರಿಸುತ್ತವೆ. ಆಧುನಿಕ ಸಮಾಜದ ಬದಲಾದ ಕಾಲಘಟ್ಟಗಳಿಗನುಸಾರವಾಗಿ ಈ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಇಂದಿನ ಇವರ ಬದುಕಿನ ಸವಾಲುಗಳಾಗಿವೆ.

**ಅಧ್ಯಯನದ ಫಲಿತಗಳು ಮತ್ತು ಸಲಹೆಗಳು:** ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳನ್ನು ಫಲಿತಗಳಲ್ಲಿ ವಿವರಿಸಲಾಗಿದೆ. ಮತ್ತು ಈ ಸಮುದಾಯದ ಫಲಿತಗಳಿಗೆ ಸಲಹೆಗಳನ್ನು ನೀಡಲಾಗಿದೆ.

## ೧.೪. ಇದುವರೆಗೆ ನಡೆದ ಅಧ್ಯಯನಗಳ ಪರಿಶೀಲನೆ

ಮಲೆಕುಡಿಯ ಸಮುದಾಯವನ್ನು ಕುರಿತು ಇದುವರೆಗೆ ನಡೆದ ಅಧ್ಯಯನಗಳು, ಸಂಶೋಧನೆ, ಗ್ರಂಥಗಳ ಪರಾಮರ್ಶೆ, ಉಲ್ಲೇಖಗಳನ್ನು ನಮ್ಮ ಅಧ್ಯಯನದಲ್ಲಿ ಪೂರಕವಾದ ಆಧಾರಗಳನ್ನಾಗಿ ಪರಿಗಣಿಸಿಲಾಗಿದೆ.

೧. ೧೯೫೧ರಲ್ಲಿ ಡಾ. ಶಿವರಾಮಕಾರಂತರ "ಕುಡಿಯರ ಕೂಸು" ಕಾದಂಬರಿಯು ಮಲೆಕುಡಿಯ ಸಮುದಾಯದ ಜೀವನವಿಧಾನ, ನಂಬಿಕೆ, ಆಚರಣೆಗಳು, ವೃತ್ತಿ, ಕಲ್ಕುಡ ದೈವದ ಆರಾಧನೆ, ಸಂಸ್ಕೃತಿಯ ಕುರಿತು ವಿವರವನ್ನು ನೀಡುತ್ತದೆ. ಕುಡಿಯರಕೂಸು ಕಾದಂಬರಿಯು ಕಾಡಿನ ಬದುಕಿನಲ್ಲಿ ಲೀನವಾದ ಮಲೆಕುಡಿಯರ ಜೀವನವನ್ನು ಒಳಗೊಂಡ ಒಂದು ಮಹತ್ವದ ಕೃತಿಯಾಗಿದೆ. ನಿಸರ್ಗದ ಬದುಕಿನ ಚಿತ್ರಣಗಳನ್ನು ಒಳಗೊಂಡ ಕಾದಂಬರಿಯು ಆ ಕಾಲದ ಮಲೆಕುಡಿಯ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ಕುರಿತ ಮಾಹಿತಿ ನೀಡುತ್ತದೆ.

೨. 'ಗಿರಿಜನ ನಾಡಿಗೆ– ಪಯಣ' ಬುಡಕಟ್ಟು ಅಧ್ಯಯನದ ವಿದ್ವಾಂಸರಾದ ಹಿ.ಚಿ. ಬೋರಲಿಂಗಯ್ಯ ರವರು ಬರೆದಿರುವ 'ಗಿರಿಜನ ನಾಡಿಗೆ ಪಯಣ' ಕೃತಿಯಲ್ಲಿ ಪುಟ.೪೭ರಲ್ಲಿ 'ಚಾರ್ಮಾಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ ಬೆಂಗಳೂರು ವತಿಯಿಂದ ೧೯೯೧ರಲ್ಲಿ ಪ್ರಥಮ ಮುದ್ರಣವಾಗಿ ೨೦೦೦ರಲ್ಲಿ ೨ನೇ ಮುದ್ರಣವನ್ನು ಕಂಡಿರುವ ಈ ಕೃತಿಯಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದ ಆ ಕಾಲದ ಸ್ಥಿತಿಗತಿ ಮತ್ತು ಸವಾಲುಗಳನ್ನು ಜಾಗೃತಗೊಳಿಸಿದ್ದಾರೆ. ಇದರ ಫಲವಾಗಿ ಬಾಂಜಾರುಮಲೆಯ ಮಲೆಕುಡಿಯರು ಓಡಾಡಲು ಅಲ್ಲಿನ ಭೂಮಾಲೀಕರ ಗೇಟು ತೆಗೆಯಲು ಮಾಡಿದ ಒಂದು ಹೋರಾಟವೇ ಆಗಿದೆ.[೧೧]

**ಪ್ರಭಾಕರ ಎ.ಎಸ್.** ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು ೨೦೦೦ ಮತ್ತು ಬುಡಕಟ್ಟು ಅಭಿವೃದ್ಧಿ ಮೀಮಾಂಸೆ ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಗ್ರಂಥಗಳು ಮಲೆಕುಡಿಯ ಬುಡಕಟ್ಟು ಸಮುದಾಯದ ಅಧ್ಯಯನಕ್ಕೆ ಪೂರಕವಾಗಿವೆ.

**ಡಾ. ಎ.ಎಸ್. ಪ್ರಭಾಕರ್**ರವರ ಸಂಪಾದಕತ್ವದ **ಆದಿವಾಸಿ ಆಖ್ಯಾನ** ಸಮುದಾಯಗಳ ಅಧ್ಯಯನಕ್ಕೊಂದು ಆಕರ ಗ್ರಂಥದಲ್ಲಿ ಪ್ರಕಟವಾದ ಹಲವಾರು ಚಿಂತನೆಗಳು ನಮ್ಮ ಅಧ್ಯಯನಕ್ಕೆ ಆಕರಗಳಾಗಿವೆ. ಪುಟ ೧೫೪ರಲ್ಲಿ ಆರ್ ವಿಜಯಲಕ್ಷ್ಮಿರವರ ಕರ್ನಾಟಕದ ಬುಡಕಟ್ಟು ನೆಲೆಗಳು ಕುರಿತು ಮಾಹಿತಿ ಇದೆ. ಪುಟ. ೧೬೦ರ ಕ್ರಮಸಂಖ್ಯೆ ೨೭ರಲ್ಲಿ ಕುಡಿಯ ಮಲೆಕುಡಿಯರು ಕುರಿತ ವಿವರಣೆ ಇದೆ. ಮಲೆಕುಡಿಯರು, ಕುಡಿಯರು, ಮೇಲಕುಡಿ, ಮಲೈಕುಡಿ ಎಂಬ ವಿವಿಧ ಹೆಸರುಗಳಲ್ಲಿ ಕರೆಯುವ ಈ ಸಮುದಾಯವು ಚಿಕ್ಕಮಗಳೂರು, ದಕ್ಷಿಣ ಕನ್ನಡ, ಉಡುಪಿ, ಕೊಡಗು ಜಿಲ್ಲೆಗಳಲ್ಲಿ ನೆಲೆಸಿರುವುದರ ಕುರಿತು ತಿಳಿಸಲಾಗಿದೆ(ಪುಟ–೧೬೦)[೨]. ಇವರು ಪಶ್ಚಿಮ ಘಟ್ಟಕ್ಕೆ ಹೊಂದಿಕೊಂಡಿರುವ ಕೇರಳದಲ್ಲಿ ವಾಸಿಸುತ್ತಿದ್ದಾರೆ ಎಂದು ಆರ್.ವಿಜಯಲಕ್ಷ್ಮಿರವರು ಅಭಿಪ್ರಾಯಪಟ್ಟಿದ್ದಾರೆ.

**ಪ್ರಶಾಂತ್ .ಹೆಚ್.ಡಿ.** ಸಂ, **ಜನಸಮುದಾಯ ಸಂಪುಟ**, ಪ್ರಥಮ ಮುದ್ರಣ–೨೦೦೦, ಹಂಪಿ ವಿಶ್ವವಿದ್ಯಾಲಯದ ಪ್ರಸಾರಾಂಗದ ವತಿಯಿಂದ ಪ್ರಕಟಿತವಾದ **ಕರ್ನಾಟಕ ರಾಜ್ಯಕೋಶ**–೪(ಪುಟ.೨೦)

ರಲ್ಲಿ 'ಕುಡಿಯ'ರ ಕುರಿತು ಮಾಹಿತಿ ದೊರೆಯುತ್ತದೆ. ತುಳು ಮಾತನಾಡುವ ಈ ಜನರನ್ನು ಇದೇ ಅರ್ಥದಲ್ಲಿ ಬರುವ ರೀತಿಯಲ್ಲಿ 'ಮಲೆತ್ತಾಯ' ಎಂದು ಕರೆಯುತ್ತಾರೆ ಎಂಬ ಉಲ್ಲೇಖವಿದೆ.[೧೩]

ಶ್ರೀಧರಗೌಡರವರು ಮಂಗಳೂರು ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ 'Impact of Science and Technology of Tribal Occupation. A study on Malekudiya of Belthangady Taluk' ಎಂಬ ವಿಷಯದ ಕುರಿತು ಅಧ್ಯಯನ ಮಾಡಿದ್ದಾರೆ. ಇದು ಒಂದು ಅಪ್ರಕಟಿತ ಪ್ರಬಂಧ ವಾಗಿದೆ. ಇದು ಮಲೆಕುಡಿಯರ ವೃತ್ತಿಯಲ್ಲಿನ ಕೌಶಲ್ಯದ ಮೇಲೆ ವಿಜ್ಞಾನ ತಂತ್ರಜ್ಞಾನ ಹೇಗೆ ಪ್ರಭಾವ ಬೀರುತ್ತದೆ ಎಂಬುದರ ಬಗ್ಗೆ ಇವರು ಅಧ್ಯಯನ ಮಾಡಿದ್ದಾರೆ. ನಂತರ ಶ್ರೀಧರ ಗೌಡ ಇವರು ೧೯೯೬ರಲ್ಲಿ ಈ ಅಧ್ಯಯನದ ವಿಷಯವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಡಾ.ಮಹಮ್ಮದ್‌ಪೀರ್ ಅವರ ಮಾರ್ಗದರ್ಶನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಮಲೆಕುಡಿಯರ ಸಾಮಾಜಿಕ ಬದಲಾವಣೆ ಎಂಬ ವಿಷಯದ ಕುರಿತು ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿರುತ್ತಾರೆ.

**ಲಾರೆನ್ಸ್ ಡಿಸೋಜ** ರವರ 'Malekudiyas a Primitive Tribe of South India' ೧೯೯೪ ಮತ್ತು MALEKUDIYAS, UNESCO, CO-ACTION LEARNING CENTRE, MANGALORE. ಮೂಲಕ ಪ್ರಕಟವಾದ ಗ್ರಂಥಗಳಲ್ಲಿ ಮಲೆಕುಡಿಯರ ಜೀವನ ಪದ್ಧತಿ, ಆಚರಣೆ, ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರಗಳ ಕುರಿತು ನಮಗೆ ಮಾಹಿತಿಯನ್ನು ನೀಡುತ್ತದೆ. ಇವರು ಮಲೆಕುಡಿಯ ಸಮುದಾಯವನ್ನು ಅಧ್ಯಯನ ಮಾಡಿ ಇವರ ಆಸಕ್ತಿಯ ಫಲವಾಗಿ ಮಲೆಕುಡಿಯರಿಗಾಗಿ ಕಲಿಕಾ ಕೇಂದ್ರಗಳನ್ನು ತೆರೆದಿರುತ್ತಾರೆ.[೧೪]

**ಪ್ರೊ. ಬಿ.ಎ. ವಿವೇಕರೈ ಮತ್ತು ಯದುಪತಿಗೌಡ**ರವರು ಮಂಗಳೂರು ವಿಶ್ವವಿದ್ಯಾಲಯದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ತುಳು ಪೀಠದ ವತಿಯಿಂದ "ಮಲೆಕುಡಿಯರು"[೧೫] ೧೯೯೬ ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ಗ್ರಂಥದಲ್ಲಿ ಇವರು ಮಲೆಕುಡಿಯ ಜನಾಂಗದ ಜಾನಪದ ಕವಿತೆ, ಸಂಧಿ, ಕಥೆ, ಆಚರಣೆ, ವೈದ್ಯಪದ್ಧತಿ ಕುರಿತು ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡಿದ್ದಾರೆ.

**ಪಟೇಲ್. ಹೆಚ್.ಎಮ್.ಎಮ್**ರವರು 'Encyclopedic Profile of Indian Tribes' ೧೯೯೮ ಪುಟ ೬೨೭, ೬೨೮ರಲ್ಲಿ ಮಲೆಕುಡಿಯರ ಕುರಿತು ವಿವರಿಸಿದ್ದಾರೆ. ಇಲ್ಲಿ ಇವರು ಮಲೆಕುಡಿಯರ ಅರ್ಥ, ವಾಸದ ನೆಲೆಗಳು, ಧರ್ಮ, ಆಚರಣೆ, ಇವರ ಪಂಗಡಗಳು, ವಿವಾಹ, ಕುಟುಂಬ ಪದ್ದತಿ ಕುರಿತು ವಿವರಣೆ ನೀಡಿದ್ದಾರೆ.

Abbe J.A. Dubasರವರ 'Hindu manners, customs and cermonies' ೧೮೦೬ ಎಂಬ ಗ್ರಂಥದಲ್ಲಿ ಮಲ್ಯೆಕೊಂಡಿಗರು(Malai Kondigaru) ಜನಾಂಗದ ಲಕ್ಷಣಗಳನ್ನು ಕುರಿತ ವಿವರಣೆ ಇದೆ. South Canara Manual Vol.೧-೨, ೧೮೫೮ರಲ್ಲಿ ನಮಗೆ ಮಲೆಕುಡಿಯರ ಬಗ್ಗೆ ಪ್ರಥಮ ಮಾಹಿತಿ ಸಿಗುತ್ತದೆ. Edgar Thurston ಅವರ Caste and Tribes of South India ೧೯೦೯ ಎಂಬ ಕೃತಿಯಲ್ಲಿ ಮಲೆಕುಡಿಯರ ವಾಸಸ್ಥಳ, ಆಚರಣೆ ನಂಬಿಕೆಗಳನ್ನು ಉಲ್ಲೇಖಿಸಿದ್ದಾರೆ.

**ಮ.ಗಣಪತಿ ರಾವ್‌ರವರ** 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ೧೯೨೩ ಎಂಬ ಕೃತಿಯಲ್ಲಿ ಈ ಜನಾಂಗದ ವಾಸದ ವಿವರ, ಜೀವನವಿಧಾನ, ಆಹಾರ ಪದ್ಧತಿ, ವಾಸದ ಮನೆ ನಿರ್ಮಾಣದ ವಿಧಾನದ ವಿವರವಿದೆ.

**ಕೆ.ಅನಂತಕೃಷ್ಣ ಅಯ್ಯರ್** ಅವರ Mysore Tribes and castes ೧೯೩೧ ಎಂಬ ಕೃತಿಯಲ್ಲಿ ಮಲೆಕುಡಿಯರ ಬಗ್ಗೆ ಮಾಹಿತಿ ನೀಡಿದ್ದಾರೆ.

**ಎಲ್.ಬಿ.ಕೃಷ್ಣ ಅಯ್ಯರ್** ಅವರ Coorg Tribes and Castes ೧೯೪೮ ಎಂಬ ಕೃತಿಯಲ್ಲಿ ಮಲೆಕುಡಿಯರ ಬಗ್ಗೆ ಮಾಹಿತಿ ನೀಡಿದ್ದಾರೆ.

**ಡಾ.ಶಿವರಾಮಕಾರಂತರವರು "ಜನಾಂಗ ವೈವಿಧ್ಯ"** ಎಂಬ ಲೇಖನದಲ್ಲಿ ಮಲೆಕುಡಿಯರ ಮೂಲದ ಬಗ್ಗೆ ವಿಶ್ಲೇಷಣೆ ಮಾಡಿದ್ದಾರೆ.

**Coorg Gazetter ೧೯೬೫ರಲ್ಲಿ ಸತ್ವನ್ ಕೊಡಗಿನ ತೇಮಲೆ** ಮತ್ತು ಪೂಮಲೆಕುಡಿಯರ ಜೀವನ ಕ್ರಮ ಸಂಪ್ರದಾಯದ ಬಗ್ಗೆ ವಿವರಣೆ ಇರುತ್ತದೆ.

**ಅಭಿಶಂಕರರವರ ಸಂಪಾದಕತ್ವದಲ್ಲಿ** Karnataka State Gazettor South Canara District ೧೯೭೩ ರಲ್ಲಿ ದಕ್ಷಿಣ ಕನ್ನಡದ ಮಲೆಕುಡಿಯರ ಬಗ್ಗೆ ವಿವರಣೆ ಇರುತ್ತೆದೆ.

**ಎಸ್.ಎ.ಜಿಲಾನಿ, ಮುಖ್ಯ ಸಂಪಾದಕರು ದಕ್ಷಿಣ ಕನ್ನಡ ಜಿಲ್ಲೆ ಪರಿಷ್ಕೃತ ಆವೃತ್ತಿ, ರಾಜ್ಯ ಗೆಜೆಟಿಯರ್ ೨೦೦೭ನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಮಗ್ರ ಮಾಹಿತಿ ದೊರೆಯುತ್ತದೆ.**

**ಬಿ.ಕೆ.ದಾಸ್‌ರವರು ೧೯೮೮೧ರ ಜನಗಣತಿಯ ವರದಿಯಲ್ಲಿ** A Brief ethnographic note on malaikudiya – A Scheduled Tribe ಎಂಬ ಲೇಖನದಲ್ಲಿ ಮಲೆಕುಡಿಯರ ಜೀವನಕ್ರಮ, ಕಟ್ಟುಪಾಡುಗಳು, ಆಚರಣೆಗಳು, ಐತಿಹಾಸಿಕ ಮತ್ತು ಬಳಿಗಳಗಳ ಬಗ್ಗೆ ವಿವರಣೆ ನೀಡಿದ್ದಾರೆ.

**ಡಾ. ಕೆ.ಚಿನ್ನಪ್ಪ ಗೌಡರವರ** 'ನೆಲೆ ತಪ್ಪಿದ ಕುಡಿಯರು' ೧೯೮೭ ಎಂಬ ಲೇಖನದಲ್ಲಿ ಮಲೆಕುಡಿಯರ ಶಬ್ದದ ಅರ್ಥ, ನಿಷ್ಪತ್ತಿ, ವಿವಿಧ ಪಂಗಡಗಳು, ಆಧುನಿಕ ಕಾಲದ ಮಲೆಕುಡಿಯ ಜನಾಂಗ, ಆಹಾರ ಪದ್ಧತಿ, ಜೀವನ ವಿಧಾನ, ವೈದ್ಯ ಪದ್ಧತಿಗಳ ಬಗ್ಗೆ ಜನಾಂಗದ ಸಾಂಸ್ಕೃತಿಕ ವಿಶ್ಲೇಷಣೆಯನ್ನು ಮಾಡಿದ್ದಾರೆ.

**ಡಾ. ಚಂದ್ರಶೇಖರ ಕಂಬಾರ** ಅವರ ಸಂಪಾದಕತ್ವದ ಜಾನಪದ **ವಿಶ್ವಕೋಶ ೧೯೯೩** ಮಲೆಕುಡಿಯರ ಉಲ್ಲೇಖವಿದೆ.

ಡಾ. ಡಿ.ಬಿ.ರಾಮಚಂದ್ರಾಚಾರ್‌ರವರ 'ಕುಡಿಯರ ಸಂಸ್ಕೃತಿ' ೧೯೯೩ ಎಂಬ ಗ್ರಂಥದಲ್ಲಿ **ಕರ್ನಾಟಕ ಸಾಹಿತ್ಯ ಅಕಾಡೆಮಿಯ** ವತಿಯಿಂದ ಉಪ ಸಂಸ್ಕೃತಿ, ಅಧ್ಯಯನ ಮಾಲೆಯ ಅಡಿಯಲ್ಲಿ ಪ್ರಕಟವಾದ ಗ್ರಂಥದಲ್ಲಿ ಮಲೆಕುಡಿಯರ ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಭಾಷೆ, ಸಾಹಿತ್ಯ, ಇವರಲ್ಲಿರುವ ಆಚರಣೆಗಳು, ಕಲೆಗಳು, ಕ್ರೀಡೆಗಳು, ಸಾಮಾಜಿಕ ಬದಲಾವಣೆ ಹಾಗೂ ಮಲೆಕುಡಿಯರ ಕುರಿತ ಅಧ್ಯಯನ, ಸಂಶೋಧನೆಯ ಮುಂದಿನ ಸವಾಲುಗಳನ್ನು ಕುರಿತು ವಿವರಿಸಿದ್ದಾರೆ. ಮಲೆಕುಡಿಯ ಸಮುದಾಯವನ್ನು ಕುರಿತು ನಲವತ್ತು ದಿನಗಳ ಕಾಲ ಮಾಹಿತಿ ಸಂಗ್ರಹವನ್ನೂ ಮಾಡಿದ್ದಾರೆ. ಇವರು ಕ್ಷೇತ್ರಕಾರ್ಯದಲ್ಲಿ ಎದುರಿಸಿದ ಹಲವಾರು ಸಮಸ್ಯೆಗಳನ್ನು ಗುರುತಿಸಿದ್ದಾರೆ(ಪುಟ. ೧೦೩).[೮]

**ಪ್ರೊ. ಹಿ.ಚಿ.ಬೋರಲಿಂಗಯ್ಯರವರ** ಸಂಪಾದಕತ್ವದಲ್ಲಿ ಪ್ರಕಟವಾದ "ಕರ್ನಾಟಕ ಜಾನಪದ ಕಲೆಗಳ ಕೋಶ" ೧೯೯೬, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪುಟ. ೧೯೯-೨೦೦ರಲ್ಲಿ ಕುಡಿಯರ ಕುಣಿತದ ವಿವರಣೆ ಇದೆ.

**ಪ್ರೊ. ಹೆಚ್.ಜೆ. ಲಕ್ಕಪ್ಪಗೌಡ** ಅವರ ಪ್ರಧಾನ ಸಂಪಾದಕತ್ವದಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ವತಿಯಿಂದ ಪ್ರಕಟವಾದ **ಕರ್ನಾಟಕ ಬುಡಕಟ್ಟುಗಳು** ಸಂಪುಟ.೧ ೧೯೯೮ರಲ್ಲಿ ಡಿ.ನಾಗಣ್ಣರವರು 'ಕುಡಿಯರು-ಮಲೆಕುಡಿಯರು' ಲೇಖನದಲ್ಲಿ ಮಲೆಕುಡಿಯರ ಕುರಿತ ವಿವರಣೆ ನೀಡಿದ್ದಾರೆ.

**ಡಾ. ಎ.ಎಸ್. ಪ್ರಭಾಕರ** ಅವರ ಕುಡಿಯ ಮಲೆ ಕುಡಿಯ, **ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ** ವಿಶೇಷ ನೆರವಿನ ಕಾರ್ಯಕ್ರಮ, ಕರ್ನಾಟಕ ಬುಡಕಟ್ಟುಗಳ ವಿಸ್ತೃತ ಅಧ್ಯಯನದಲ್ಲಿ ಇವರ ನೆಲೆಗಳು, ಜನಸಂಖ್ಯೆ ಮತ್ತು ವೃತ್ತಿಗಳ ಕುರಿತು ಮಾಹಿತಿ ನೀಡಿದ್ದಾರೆ.

**ಡಾ. ಕೆ.ಸುಂದರ್‌ನಾಯಕ್,** ಐ.ಎಫ್.ಎಸ್. ಅಧಿಕಾರಿರವರು "ಕರಾವಳಿ ಕರ್ನಾಟಕದ ಮರಾಠಿ ಜನಾಂಗ ಪರಂಪರೆ ಮತ್ತು ಆಧುನಿಕತೆ" ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಡಾ.ಕೆ.ಚನ್ನಪ್ಪಗೌಡರ ಮಾರ್ಗದರ್ಶನದಲ್ಲಿ ಕರ್ನಾಟಕ ಕರಾವಳಿ ತೀರಪ್ರದೇಶದ ಬುಡಕಟ್ಟು ಸಮುದಾಯದಲ್ಲಿನ ಮರಾಠಿ ಜನಾಂಗದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡಿದ ವಿವರಣೆ ಇರುತ್ತದೆ.

ಡಾ. ಮಂಗಳಾಶ್ರೀಧರ್‌ರವರ, ಬುಡಕಟ್ಟು ವೈದ್ಯಸಂಸ್ಕೃತಿ ಕುರಿತ ಅಧ್ಯಯನವು ಬುಡಕಟ್ಟು ಸಮುದಾಯಗಳಲ್ಲಿನ ವೈದ್ಯ ಪದ್ಧತಿಯನ್ನು ಕುರಿತಂತೆ ಮಾಹಿತಿ ನೀಡುತ್ತದೆ.

ಮಲ್ಲಿಕಾರ್ಜುನ ಸೊಬರದರವರು ಕುಣಬಿ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ ಉತ್ತರ ಕನ್ನಡ ಜಿಲ್ಲೆಯನ್ನು ಪರಿಗಣಿಸಿ ಕುರಿತ ಅಧ್ಯಯನವು ಬುಡಕಟ್ಟು ಸಮುದಾಯದ ಅಧ್ಯಯನಕ್ಕೆ ಸಹಾಯಕವಾಗಿದೆ.

**ಎ.ಎಸ್. ಪ್ರಭಾಕರ** ಅವರ "ಡೊಂಬರು ಓಂದು ಚಾರಿತ್ರಿಕ ಹಿನ್ನೋಟ" ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ ೨೦೦೬ರಲ್ಲಿ ಅಲೆಮಾರಿಗಳ ಶಾಪಗ್ರಸ್ಥ ಪ್ರಯಾಣದ ಕುರಿತ ಚಿಂತನೆಯಲ್ಲಿ ಕ್ರಿಮಿನಲ್ ಟ್ರೈಬ್ಸ್ ಬಗ್ಗೆ ವಿಶ್ಲೇಷಿಸಿದ್ದಾರೆ.

**ಡಾ. ಅಮೃತ ಸೋಮೇಶ್ವರ**(ಸಂ), ಅವರ "ತುಳುವ ಜಾನಪದ ಕೆಲವು ನೋಟಗಳು" ಕೃತಿಯಲ್ಲಿ ತುಳುನಾಡಿನ ಸಂಸ್ಕೃತಿ ಪರಂಪರೆ, ಜಾನಪದ, ದೈವರಾದನೆ, ಹರಕೆಗಳು ನ್ಯಾಯ ಪದ್ಧತಿ, ನಂಬಿಕೆ, ಆಚರಣೆ, ಯಕ್ಷಗಾನ ಕುರಿತು ಮಾಹಿತಿ ದೊರೆಯುತ್ತದೆ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

**ಕೆ. ಮೋಹನ್‌ಕೃಷ್ಣ ರೈ** ಅವರ "ತುಳು ಸಂಸ್ಕೃತಿ ಚತುರ್ಮುಖೀ ಅಧ್ಯಯನ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜಾತಿ ಆಧಾರಿತ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ.

**ಡಾ. ಎಂ. ಭಾಗ್ಯಲಕ್ಷ್ಮಿ** ಅವರ ಗಣಿಗಾರಿಕೆ ಮತ್ತು ಅಭಿವೃದ್ಧಿ, ಸಖಿ ಪ್ರಕಾಶನ, ಹೊಸಪೇಟೆ, ೨೦೦೭ರಲ್ಲಿ ಗಣಿಗಾರಿಕೆಯ ಬೆಳವಣಿಗೆ ಮತ್ತು ಪರಿಣಾಮ ಕುರಿತ ಅಧ್ಯಯನ ಲಭ್ಯವಾಗುತ್ತದೆ.

ಕೇಶವನ್ ಪ್ರಸಾದ್ ಕೆ. ಅವರ 'ಬುಂಡೆಬೆಸ್ತರು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧ರಲ್ಲಿ ಅಲೆಮಾರಿ ಅರೆ ಅಲೆಮಾರಿ ಸಮುದಾಯಗಳ ಅಧ್ಯಯನದ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಸ್ಥಿತಿಗತಿ ಮಾಹಿತಿ ಲಭ್ಯವಾಗುತ್ತದೆ.

ದಿನಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳು, ವರದಿಗಳು, ದೂರದರ್ಶನದಲ್ಲಿ ಪ್ರಸಾರವಾದ ಕಾರ್ಯಕ್ರಮಗಳು ಪ್ರಸ್ತುತ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಪೂರಕವಾದ ಆಧಾರಗಳಾಗಿವೆ.

### ೧.೫. ಮಲೆಕುಡಿಯ ಪದದ ಅರ್ಥ

ಮಲೆಕುಡಿಯ ಪದವು 'ಮಲೆ' ಮತ್ತು 'ಕುಡಿ' ಎಂಬ ಎರಡು ಪದಗಳಿಂದ ಉತ್ಪತ್ತಿಯಾಗಿದೆ. 'ಮಲೆ' ಎಂದರೆ ಬೆಟ್ಟ, ಗಿರಿ, ಶಿಖರ, ಕಾನನ ಎಂದರ್ಥಕೊಡುತ್ತದೆ. 'ಕುಡಿ' ಎಂದರೆ ತುದಿ, ಕೊನೆ ಎಂದರ್ಥ. ಅಂದರೆ ಬೆಟ್ಟದ ತುದಿಯಲ್ಲಿ ವಾಸಿಸುವವರು ಎಂಬರ್ಥ ಬರುತ್ತದೆ. 'Encyclopedic Profile of Indian Tribes' ಎಂಬ ಗ್ರಂಥದಲ್ಲಿ ಹೆಚ್.ಎಮ್.ಎಮ್. ಪಟೇಲ್ ಅವರು ಪುಟ. ೬೨೭-೬೨೮ರಲ್ಲಿ ಮಲೆಕುಡಿಯರ ಕುರಿತು ಮಲೆಕುಡಿಯ ಸಮುದಾಯವು ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡವಾಗಿದೆ. ಇವರು ಕರ್ನಾಟಕದ ಕೊಡಗು, ದಕ್ಷಿಣಕನ್ನಡ ಮತ್ತು ಚಿಕ್ಕಮಗಳೂರು ಜಿಲ್ಲೆಯ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇವರ ಹೆಸರು 'ಮಲೆಕುಡಿಯರು' ಇದು ಗುಡ್ಡಗಾಡು, ಗಿರಿಶಿಖರ ಪ್ರದೇಶಗಳೊಂದಿಗೆ ನಂಟನ್ನು ಹೊಂದಿರುವುದನ್ನು ಸಂಕೇತಿಸುತ್ತದೆ. 'ಮಲೆ' ಎಂಬ ಪದವು ಗಿರಿ, ಶಿಖರ, ಬೆಟ್ಟ, ಪರ್ವತ ಎಂಬ ಅರ್ಥ ಬರುತ್ತದೆ. 'ಕುಡಿ' ಎಂದರೆ ಕೊನೆ, ತುದಿ ಎಂಬರ್ಥವಿದೆ.

### ೧.೬. ಇತರ ಹೆಸರುಗಳು

ಮಲೆಕುಡಿಯರನ್ನು, ಕುಡಿಯ, ಮಲೆಕುಡಿಯ, ಬಾರಿಕೆ ಗೌಡ, ಗೌಡ ಇತ್ಯಾದಿ ಹೆಸರುಗಳಿಂದ ಕರೆಯುವರು. 'ಮಲೆಕುಡಿ' ಎಂಬುದು 'ಮಲೆ' ಮತ್ತು 'ಕುಡಿ' ಎಂಬ ಎರಡು ಪದಗಳಿಂದ ಕೂಡಿದೆ 'ಮಲೆ' ಎಂದರೆ ಬೆಟ್ಟ, 'ಕುಡಿ' ಎಂದರೆ 'ತುದಿ' ಎಂದರ್ಥ. ಬೆಟ್ಟದ ತುದಿಯಲ್ಲಿ ವಾಸಿಸುವವರು, ಅಥವಾ ಬೆಟ್ಟಗಳ ಮಕ್ಕಳು ಎಂದೂ ಆಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯ ಬುಡಕಟ್ಟು ಸಮುದಾಯದವರಿಗೆ ಒಂದೊಂದು ಪ್ರದೇಶದಲ್ಲಿ ಒಂದೊಂದು ಹೆಸರಿನಲ್ಲಿ ಕರೆಯಲಾಗುತ್ತದೆ. ಕುಂದಾಪುರದ ಕಮಲಶಿಲೆಯಿಂದ ಮಡಿಕೇರಿಯವರಗೆ ನೆಲೆಸಿರುವ ಈ ಸಮುದಾಯದವರನ್ನು ಮಡಿಕೇರಿಯಲ್ಲಿ ಕುಡಿಯರು ಎಂದು, ಧರ್ಮಸ್ಥಳದಲ್ಲಿ ಬರ್ಕೆ ಎಂದು, ಕಾರ್ಕಳದಲ್ಲಿ ಗೌಡ, ಗೌಡಾಲು ಎಂದು, ಬಂಟ್ವಾಳ ತಾಲೂಕಿನ ಕನ್ಯಾನ ಸಮೀಪದ ಅಕ್ಕರೆಕೋಡಿ ಮತ್ತು ಪುತ್ತೂರು ತಾಲೂಕಿನ ಪಾಣಾಜೆಯಲ್ಲಿ ಮಲತ್ತಾಯ ಎಂದು, ಬಂಟ್ವಾಳದ ಅರಳದಲ್ಲಿ ಇವರನ್ನು ಮುಗೂಲ್ಯ, ಮುಗಳಿಯ ಎಂದು ಕರೆಯುತ್ತಾರೆ. ಕರ್ನಾಟಕ ಸರ್ಕಾರದ ಪರಿಶಿಷ್ಟ ಪಂಗಡಗಳ ಪಟ್ಟಿಯ ಅಧಿಸೂಚನೆಯಲ್ಲಿ ಮಲೆಕುಡಿಯ, ಮಲ್ಯೆಕುಡಿ, ಮಲೆಯಖಂಡ, ಮಲೇರು ಎಂಬ ಹೆಸರುಗಳಿಂದ ಕರೆಯಲಾಗುತ್ತದೆ.

ಕಾಸರಗೋಡಿನಲ್ಲಿ ಮಲೆತ್ತಾಯ ಬಾರಿಕೆ ಎಂದಿದೆ. ನಾನು ಕ್ಷೇತ್ರಕಾರ್ಯಕ್ಕೆ ಅಧ್ಯಯನಕ್ಕಾಗಿ ಹೋದಾಗ ಈ ಸಮುದಾಯದವರು ತಮ್ಮ ಹೆಸರಿನ ಮುಂದೆ ಈ ಹೆಸರುಗಳನ್ನು ಸೇರಿಸಿ ಹೇಳಿದಾಗ ನನಗೆ ಈ ವೈವಿಧ್ಯತೆಗಳ ಕುರಿತು ಮಾಹಿತಿ ಲಭ್ಯವಾಯಿತು. ಇವರ ಹೆಸರಿನಲ್ಲಿ ಪ್ರಾದೇಶಿಕದ ಭಿನ್ನತೆಗಳು ಕಂಡು ಬಂದರೂ ಸಹ ಇವರು ಮಾತನಾಡುವ ತುಳು ಭಾಷೆಯಲ್ಲಿ ಇವರನ್ನು 'ಮಲತ್ತಾಯ ದಕ್ಕಲು' ಎಂತಲೇ ಕರೆಯುವುದು ವಾಡಿಕೆ ಇದೆ.

ಜನಸಮುದಾಯ ಸಂಪುಟ, ಸಂಪಾದಕರು, ಹೆಚ್.ಡಿ. ಪ್ರಶಾಂತ್ ಅವರ ಪ್ರಥಮ ಮುದ್ರಣ-೨೦೦೦ರಲ್ಲಿ ಹಂಪಿ ವಿಶ್ವವಿದ್ಯಾಲಯದ ಪ್ರಸಾರಾಂಗದ ವತಿಯಿಂದ ಪ್ರಕಟಿತವಾದ **ಕರ್ನಾಟಕ ರಾಜ್ಯಕೋಶ-೪**ರಲ್ಲಿ, ಪುಟ-೨೦ರಲ್ಲಿ 'ಕುಡಿಯ'ರ ಕುರಿತು ಮಾಹಿತಿ ದೊರೆಯುತ್ತದೆ. ತುಳು ಮಾತನಾಡುವ ಈ ಜನರನ್ನು ಇದೇ ಅರ್ಥದಲ್ಲಿ ಬರುವ ರೀತಿಯಲ್ಲಿ 'ಮಲೆತ್ತಾಯ' ಎಂದು ಕರೆಯುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ, ಬೆಳ್ತಂಗಡಿ, ಸುಳ್ಯ ಭಾಗಗಳಲ್ಲಿ ಮಲೆಕುಡಿಯರು ವಾಸವಾಗಿದ್ದಾರೆ.ಕುಡಿಯ-ಮಲೆ ಕುಡಿಯರು ಬೇರೆ-ಬೇರೆ ಬುಡಕಟ್ಟು ಪಂಗಡದವರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಎಡ್ಗರ್‌ಥರಸ್ಟನ್ ಮತ್ತು ರಂಗಾಚಾರಿಯವರು ಕುಡಿಯ, ಮತ್ತು ಮಲೆಕುಡಿಯ ಗುಂಪುಗಳು ಒಂದೇ ಎಂದು ಅಭಿಪ್ರಾಯಪಟ್ಟಿದ್ದಾರೆ.[೧೬]

ಕನ್ನಡ ವಿಶ್ವಕೋಶ, ಸಂಪುಟ-೪ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ೧೯೭೨ರ ಪುಟ.೨೦ರಲ್ಲಿ **'ಮಲಯ ಕುಡಿ'** ಬಗ್ಗೆ ಉಲ್ಲೇಖವಿದೆ.

'ಕನ್ನಡ ನಿಘಂಟು' ಕನ್ನಡ ಸಾಹಿತ್ಯ ಪರಿಷತ್ತು ೨ನೇ ಸಂಪುಟ, ೧೯೭೬ರ ಪುಟ ೧೯೧೨ರಲ್ಲಿ **'ಕುಡಿಯ'** ಎಂಬ ಪದಕ್ಕೆ ಒಕ್ಕಲಿಗ, ಒಕ್ಕಲು ಮಗ, ಎಂಬರ್ಥವಿದೆ. ಕುಡಿಮಲೆ ಎಂಬುದಕ್ಕೆ ಮೊನಚಾದ ತುದಿ ಎಂಬರ್ಥವಿದೆ. **'ಕುಡಿಯೊಕ್ಕಲಿಗ'** ಎಂಬುದಕ್ಕೆ ಒಕ್ಕಲಿಗರಲ್ಲಿ ಒಂದು ಪಂಗಡ ಎಂದು ಇದೆ. ಈ ಸಂಪುಟದ ಪುಟ ೧೯೧೨ರಲ್ಲಿ **"ಮಲಕುಡಿಯನ್"** ಎಂಬ ಪದವಿದೆ. ಇದಕ್ಕೆ ಕೊಡ, ಕುಡಿ, ಈಡಿಗ, ಹೆಂಡ ಇಳಿಸುವವರು ಎಂದು ಇದೆ. ಈ ಸಂಪುಟದ ಪುಟ.೧೯೪೮ರಲ್ಲಿ ಕುಕ್ಕೆ ಎಂಬ ಪದಕ್ಕೆ "ಬಿದಿರಿನಿಂದ ಹೆಣೆದ ಬುಟ್ಟಿ" ಎಂಬರ್ಥವಿದೆ. ಇದಕ್ಕೆ ಮಕರಿ, ಹೆಡಿಗೆ, ಎಂಬ ಅರ್ಥವಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ವತಿಯಿಂದ ಡಾ.ಹಿ.ಚಿ.ಬೋರಲಿಂಗಯ್ಯ ಮತ್ತು ಎ.ಎಸ್.ಪ್ರಭಾಕರರವರ ಸಂಪಾದಕತ್ವದಲ್ಲಿ ೨೦೦೫ರಲ್ಲಿ ಪ್ರಕಟವಾದ ಬುಡಕಟ್ಟು ಅಧ್ಯಯನ-೪ರ ಸಂಪುಟದಲ್ಲಿ ಪುಟ.೧೯೫ರಲ್ಲಿ ಕೆ.ಎಂ. ಮೈತ್ರಿ ಅವರ ಮಲೇರು ಮತ್ತು ಮಾಲೇರು ಕೆಲವು ಸಂದೇಹಗಳು ಮತ್ತು ಉತ್ತರಗಳು ಎಂಬ ಲೇಖನದಲ್ಲಿ ಮಲೇರು, ಕುಡಿಯ, ಮೆಲಕುಡಿ, ಮಲೈಕುಡಿ, ಮಲಯೆಖಂಡಿ, ಮಾಲೇರು ಕುರಿತಂತೆ ಇರುವ ಸಂದೇಹಗಳು ಮತ್ತು ಇವರಿಗೆ ಇರುವ ಸಂವಿಧಾನಾತ್ಮಕ ಸೌಲಭ್ಯಗಳನ್ನು ಪಡೆಯುವಲ್ಲಿನ ಸಂದರ್ಭದಲ್ಲಿ ಗೊಂದಲಗಳ ಕುರಿತ ವಿಶ್ಲೇಷಣೆ ಮಾಡಿದ್ದಾರೆ.

**ಮಲೈಕುಡಿ(Malaikudi)**

ಕರ್ನಾಟಕದ ಸಹ್ಯಾದ್ರಿ ಪರ್ವತಶ್ರೇಣಿಯ ದಕ್ಷಿಣಕನ್ನಡ ಚಿಕ್ಕಮಗಳೂರು, ಕೇರಳದ ಕಣ್ಣನೂರು ಕಾಸರಗೋಡು ಜಿಲ್ಲೆಗಳಲ್ಲಿ ನೆಲೆಸಿರುವ ಮಲೈಕುಡಿಗಳು ಮಲೆಯ ಮಕ್ಕಳಾಗಿದ್ದು ಕೆ.ಎಂ. ಮೈತ್ರಿ ಅವರು

ಹೇಳಿದ್ದಾರೆ. ಮಲೆ ಎಂದರೆ ಬೆಟ್ಟ, ಕುಡಿ ಎಂದರೆ ಎತ್ತರ ಅಥವಾ ಮಗು ಎಂದರ್ಥ ಎಂದು ಪುಟ.೨೦೧ರಲ್ಲಿ ಹೇಳಿದ್ದಾರೆ.[೫] ಮಲೈಕುಡಿಗಳ ಹಿನ್ನೆಲೆಯನ್ನು ಕುಡಿಯ ಬುಡಕಟ್ಟಿನಲ್ಲಿ ಪ್ರಸ್ತಾಪಿಸಲಾಗಿದೆ.

೧೯೩೧ರಲ್ಲಿ ಇವರನ್ನು ಮಲೇರು, ಎಂದು ೧೯೬೧ರಲ್ಲಿ ಮೆಲಕುಡಿ ಎಂದು ಕರೆಯಲಾಗಿದೆ. ೧೯೭೬ರ ಪರಿಷ್ಕೃತ ಪಟ್ಟಿಯಲ್ಲಿ ಕರ್ನಾಟಕದಲ್ಲಿ ಮಲಕುಡಿ, ಮಲೈಕುಡಿ, ಮಲಯೆಖಂಡಿ ಎಂದು ಕರೆಯಲಾಗುವುದು. ಕುಡಿಯ, ಮಲೆಕುಡಿಯ, ಮಲೈಕುಡಿ, ಮಲಯೆಖಂಡಿ, ಮಲೇರು ಇವು ಒಂದೇ ಬುಡಕಟ್ಟುಗಳಾಗಿವೆ(ಪುಟ. ೨೦೧).[೯] ಕರ್ನಾಟಕದಲ್ಲಿ ೧೯೯೧ರಲ್ಲಿ ಇವರ ಜನಸಂಖ್ಯೆ ೭,೭೦೪ ಇವರಲ್ಲಿ ೧೮ ಹೊರಬಾಂಧವ್ಯ ಬಳಿಗಳಿವೆ. ಅವು ಬಂಗಾರದನ್ನೆ, ಸಾಲಿಯನ್ನ, ಕರಂಬರನ್ನೆ ಇತ್ಯಾದಿ. ಕೇರಳದಲ್ಲಿ ಇವರನ್ನು ಕುಡಿಯ, ಮಲಕುಡಿ ಎಂಬ ಹೆಸರಿನ ಪರಿಶಿಷ್ಟಪಂಗಡ ಪಟ್ಟಿಗೆ ಸೇರಿಸಲಾಗಿದೆ. ೧೯೮೧ರಲ್ಲಿ ಕೇರಳದಲ್ಲಿ ಇವರ ಜನಸಂಖ್ಯೆ ೩೯.೧೩% ತಮಿಳುನಾಡಿನಲ್ಲಿ ಇವರನ್ನು ಮಲಯೆಖಂಡಿ ಎಂದು ಕರೆಯಲಾಗುವುದು. ಮಲೈಕುಡಿಯರಲ್ಲಿ ಹಲವರು ಗೌಡರ(Gowdas), ಬಾರೆದಕ್ಲು(Baredaklu) ಎಂಬ ಗೌರವ ಸೂಚಕ ಪದಗಳನ್ನು ಬಳಸುತ್ತಾರೆ(ಪುಟ.೨೦೨).[೨೦] ಗೌಡ ಎಂದರೆ ಸಮುದಾಯದ ಮುಖ್ಯಸ್ಥ ಎಂದರ್ಥ. ಇವರು ಕಾಡುಹಂದಿ, ಮೊಲ, ಕೋಳಿ ಹುಂಜಗಳನ್ನೂ ಬೇಟೆಯಾಡುತ್ತಾರೆ. ಮದ್ಯಪಾನ ಸೇವಿಸುತ್ತಾರೆ. ಎಂಬ ಉಲ್ಲೇಖವಿದೆ.

ಹಳೆಯ ಮೈಸೂರಿನ ಆರಂಭ ೧೯೩೧ರಲ್ಲಿ ಇವರನ್ನು ಮಲೇರು(Maleru) ಎಂದು ೧೯೬೦ ರಲ್ಲಿ ಮೇಲಕುಡಿ(Melakudi). ಎಂದು ಪ್ರತ್ಯೇಕಿಸಿ ಬುಡಕಟ್ಟು ಪಟ್ಟಿಯಲ್ಲಿ ಸೇರಿಸಲಾಗಿದೆ. ಕರ್ನಾಟಕದ ೧೯೭೬ರಲ್ಲಿ ಪ್ರಕಟವಾದ ಪರಿಷ್ಕೃತ ಪಟ್ಟಿಯಲ್ಲಿ ಕುಡಿಯ, ಮಲಕುಡಿ, ಮಲೈಕುಡಿ, ಮಲೆಯೇಕುಡಿ ಎಂಬ ಹೆಸರುಗಳಲ್ಲಿ ಇವರನ್ನು ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿಸಲಾಗಿದೆ. ಈ ಬುಡಕಟ್ಟುಗಳೆಲ್ಲಾ ಒಂದೇ ಕುಟುಂಬ ವರ್ಗಕ್ಕೆ ಸೇರಿದವರಾಗಿಲ್ಲ. ಕಾಲಾಂತರದಲ್ಲಿ ಪ್ರಾದೇಶಿಕ ಭಿನ್ನತೆಯಿಂದಾಗಿ ಈ ಬುಡಕಟ್ಟುಗಳು ಪ್ರತ್ಯೇಕ ಬುಡಕಟ್ಟುಗಳೆಂದು ಪರಿಗಣಿಸಲ್ಪಟ್ಟಿವೆ. ಈ ಬುಡಕಟ್ಟುಗಳ ನೆಲೆ, ಬಳಿ, ದೈವಾರಾಧನೆ ಹಾಗೂ ಹಬ್ಬ ಆಚರಣೆಗಳಲ್ಲಿ ಸಾಮ್ಯತೆಗಳಿವೆ ಎಂದು ಪುಟ. ೨೦೧ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಮಲೈಕುಡಿಗಳು ದ್ರಾವಿಡ ಮೂಲದ ತುಳು ಭಾಷೆಯನ್ನು ಮಾತೃಭಾಷೆಯನ್ನಾಗಿ ಹೊಂದಿದ್ದಾರೆ. ವ್ಯವಹಾರಕ್ಕಾಗಿ ಕನ್ನಡ ಲಿಪಿ ಹಾಗೂ ಭಾಷೆಯನ್ನು ಬಳಸುತ್ತಾರೆ. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ಇವರ ಜನಸಂಖ್ಯೆ ೭,೭೦೪ ದಾಖಲಾಗಿದೆ.

**ಕುಡಿಯ, ಮಲಕುಡಿ: ಮಲಯನ್**

ಕುಡಿಯನ್, ಕುಡಿಯ, ಮಲೆಕುಡಿಯ ಹೆಸರುಗಳಿಂದ ಕರೆಯಲಾಗುತ್ತದೆ. ಮಲೆಗಳ ತುದಿಗಳಲ್ಲಿ ವಾಸಿಸುವರು ಎಂದರ್ಥ. ಮಲೆ ಎಂದರೆ ಗಿರಿ, ಶಿಖರ, ಬೆಟ್ಟಗುಡ್ಡ ಎಂದರ್ಥ. ಕುಡಿ ಎಂದರೆ ತುದಿ, ಸಂತಾನ ಎಂದರ್ಥ. ಮಲೆಯಾಳಂ ಭಾಷೆಯಲ್ಲಿ 'ಗುಡಿಸಲು' ಎಂದರ್ಥವಿದೆ.

೧೯೫೬ರ ಪರಿಶಿಷ್ಟ ಜಾತಿ ಪಂಗಡಗಳ ಪರಿಷ್ಕೃತ ಪಟ್ಟಿಯಲ್ಲಿ III ಭಾಗ, VIIIರ ಮೈಸೂರು ರಾಜ್ಯದ ಕ್ರಮ ಸಂಖ್ಯೆ–೭ರಲ್ಲಿ ಕೊಡಗು, ಬೆಳಗಾವಿ, ಬಿಜಾಪುರ, ರಾಯಚೂರು, ಬೀದರ ಜಿಲ್ಲೆಗಳನ್ನು ಹಾಗೂ ಅಂದಿನ ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲೂಕು ಹೊರತುಪಡಿಸಿ ಮಲೆಕುಡಿಯರನ್ನು

ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಿ ಪ್ರಕಟಿಸಲಾಗಿದೆ. ಇದೇ ಪಟ್ಟಿಯಲ್ಲಿನ ಕ್ರಮ ಸಂಖ್ಯೆ(೪)–೧೧ರಲ್ಲಿ ದಕ್ಷಿಣ ಕನ್ನಡ ಮತ್ತು ಅಂದಿನ ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕಿಗೆ ಸೀಮಿತಗೊಂಡಂತೆ ಕುಡಿಯ, ಅಥವಾ ಮಲೆಕುಡಿಯರನ್ನು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಲ್ಪಟ್ಟಿದೆ. ಇದೇ ಪಟ್ಟಿಯಲ್ಲಿನ ಕ್ರ.ಸಂ(೭)–೨ರ ಪ್ರಕಾರ ಕೊಡಗು ಜಿಲ್ಲೆಗೆ ಸೀಮಿತಗೊಂಡಂತೆ ಕುಡಿಯರನ್ನು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಲಾಗಿದೆ. ೧೯೬೦ರಿಂದಲೇ ಹಳೆ ಮೈಸೂರು ರಾಜ್ಯದಲ್ಲಿ ಮಲೆಕುಡಿಯರನ್ನು ಬುಡಕಟ್ಟು ಪಟ್ಟಿಗೆ ಸೇರಿಸಿದ್ದಾರೆ. ೧೯೭೭ರಲ್ಲಿ ಇದರ ಪ್ರಾದೇಶಿಕ ಮಿತಿಯನ್ನು ಸಡಿಲಿಸಿ ಕರ್ನಾಟಕಕ್ಕೆ ವಿಸ್ತರಿಸಲಾಯಿತು. ಅರಣ್ಯಗಳಲ್ಲಿ ಸಿಗುವ ಬೆತ್ತದಿಂದ ಮುಕ್ಕುರಿ, ತಡಿಕೆ, ಕುಕ್ಕೆ ಪೆಟ್ಟಿಗೆ ತಯಾರಿಸುವುದು, ಕಾಡುತ್ಪತ್ತಿ ಮಾರಾಟ ಮಾಡುತ್ತಾರೆ. ಕೇರಳದ ಕಾಸರಗೋಡು ಜಿಲ್ಲೆಯಲ್ಲಿರುವ ಕುಡಿಯರನ್ನು ಗೌಡ, ಮಲಕುಡಿಯ, ಮಲಯಗೌಡ ಎಂದು ಕರೆಯುವರು.

**ಕರ್ನಾಟಕ ಸರ್ಕಾರದ ಪಂಗಡಗಳ ಪಟ್ಟಿ**ಯಲ್ಲಿ ಕ್ರ.ಸಂ.೩೧ರಲ್ಲಿ Malaikudi ಎಂದಿದೆ. Central Acts and ordinances Law and Parlimentary affairs secretariate Notification No. Law 58 LCR 1977. Order: Notification No. 03 C 12016/34, 76-SC T-V.Dated 27-July-1942.Gary India ministory of Home affairs (under power 5 1899) in sub section(2) of sanction 1 of the S.C & S.T orders(Amendment) Act 1976(108 of 1976). List of S.T serial No.31. Malaikudi ಆಗಿರುತ್ತದೆ.[೨೧]

**ಬರ್ಕೆ**

ನಿಡ್ಲೆಯ ವೀರಪ್ಪ ಹೇಳುವ ಪ್ರಕಾರ ಸುಮಾರು ೧೯೬೪ರಲ್ಲಿ ನಾನು ಧರ್ಮಸ್ಥಳದ ಹಾಸ್ಟೆಲ್‌ನಲ್ಲಿ ಇದ್ದಾಗ ಆಗಿನ ಜಿಲ್ಲಾಧಿಕಾರಿಗಳಾಗಿದ್ದ ಹೆಚ್.ಎಲ್ ನಾಗೇಗೌಡರು ನಮ್ಮ ಹಾಸ್ಟೆಲ್‌ಗೆ ಬಂದರು. ನಿಮಗೆ ಮಲೆಕುಡಿಯ ಎಂಬ ಹೆಸರು ಇಟ್ಟವರು ಯಾರು ಗೊತ್ತೇ? ಎಂದು ಕೇಳಿದರು. ನಮಗೆ ಇದು ಗೊತ್ತಿರಲಿಲ್ಲ. ಆಗ ಅವರೇ ಹೇಳಿದರು. ಈ ಮಲೆಕುಡಿಯ ಎಂಬ ಪದವನ್ನು ಸರ್ಕಾರ ಇಟ್ಟಿದೆ. ಜಾತಿ ಪಟ್ಟಿಯಲ್ಲಿನ ಆದೇಶದಲ್ಲಿ ಈ 'ಮಲೆಕುಡಿಯ' ಬಳಕೆಯಾಗಿದೆ, ಗೊತ್ತೇ? ಎಂದು ಕೇಳಿದರು. ಎಂಬುದನ್ನು ವೀರಪ್ಪರವರು ನೆನಪು ಮಾಡಿಕೊಳ್ಳುತ್ತಾರೆ. ಇದು ಏಕೆ? ಹೇಗೆ? ಎಂದು ನಾನು ಮರು ಪ್ರಶ್ನೆ ಹಾಕಿದಾಗ ನೋಡಿ ನಮ್ಮ ಧರ್ಮಸ್ಥಳದಲ್ಲಿ ನಮ್ಮನ್ನು ಮಲೆಕುಡಿಯರು ಅಂತ ಹೇಳುವುದಿಲ್ಲ. 'ಬರ್ಕೆ, ಬರ್ಕೆಲು' ಎಂದು ಕರೆಯುತ್ತಾರೆ. ಅಂದರೆ ಹಿಂದೆ ನಮ್ಮವರು ಕುಮರಿ ಕೃಷಿ ಮಾಡುತ್ತಿದ್ದರಿಂದ ಅಲ್ಲಿ ಬಳಸುವ ಬರ್ಕೆ ಎಂಬ ಪದ ಬಳಸಿದ್ದಾರೆ. ಬರ್ಕೆ ಎಂಬುದು ಇದು ಜೈನ ಪದ ಇರಬೇಕು ಎನ್ನುತ್ತಾರೆ. ತುಳುವಿನಲ್ಲಿ ಇದಕ್ಕೆ ಗಟ್ಟಿ ಎಂತಲೂ ಆಗುತ್ತದೆ. ಇವರ ಜೊತೆಗೆ ನಿಡ್ಲೆಯ ಸರ್ಕಾರಿ ಹಿರಿಯ ಮಾದರಿ ಶಾಲೆಯ ಮುಖ್ಯ ಶಿಕ್ಷಕಿಯಾದ ಶ್ರೀಮತಿ ಮೋನಮ್ಮರವರು ಸಹ ಈ ಪದ ಬಳಕೆ ಬಗ್ಗೆ ಮಾತನಾಡುತ್ತಾ, ಹೌದು ನೋಡಿ, ನಮ್ಮ ಮಲೆಕುಡಿಯ ಪದ ಈಗ ಎಲ್ಲಾ ಕಡೆ ಒಂದೇ ರೀತಿ ಇಲ್ಲವಲ್ಲಾ ಇಲ್ಲಿ ಬರ್ಕೆ ಆಗಿದೆ. ಇನ್ನೊಂದು ಕಡೆ ಮಲೆಕುಡಿಯ ಎಂದಿದೆ. ಮತ್ತೆ ಕಾರ್ಕಳ ಕಡೆಗೆ ಗೌಡ, ಗೌಡ್ಲು ಅಂತ ಇದೆ ಅಲ್ಲವಾ? ನನ್ನ ಸಂಬಂಧಿಕರು ಇಲ್ಲಿದ್ದಾರೆ ಎನ್ನುತ್ತಾರೆ.

ತುಳುನಾಡಿನಲ್ಲಿ ಹಲಸಿನ ಹಣ್ಣಿನ ತಳಿಗಳಲ್ಲಿ ಎರಡು ಬಗೆಗಳು ಒಂದು ತುಳುವ ಮತ್ತೊಂದು ಬರ್ಕೆ ಎಂದು ಕರೆಯುತ್ತಾರೆ. ಹಲಸಿನ ಹಣ್ಣಿನ ತೊಳೆಗಳು ಮೆದುವಾಗಿರುವು ತಳಿಯನ್ನು ತುಳುವ ಎಂದು ಕರೆಯುತ್ತಾರೆ. ತುಳುವ ಎಂದರೆ ಮೆದು ಎಂದರ್ಥ. ಮತ್ತೊಂದು ತಳಿಯ ಹಲಸಿನ ಹಣ್ಣಿನ ತೊಳೆಗಳು ತುಂಬಾ ಗಟ್ಟಿಯಾಗಿರುತ್ತವೆ. ಇದಕ್ಕೆ ತುಳುವಿನಲ್ಲಿ ಬರ್ಕೆ ಎಂದು ಕರೆಯಲಾಗುತ್ತದೆ. ಬರ್ಕೆ ಎಂದರೆ ಗಟ್ಟಿ ಎಂದರ್ಥ ಬರುತ್ತದೆ. ಎಂಬ ವಿವರಣೆಯನ್ನು ಪುತ್ತೂರಿನ ಹರಿನಾರಾಯಣ ಕೆದಿಲಾಯರವರು ವಿವರಿಸುತ್ತಾರೆ. ತುಳುವರು ಮೆದುವಾದವರೆಂತಲು, ಘಟ್ಟದವರು ಗಟ್ಟಿಯವರೆಂತಲೂ ಕಲ್ಪನೆಯಿದೆ ಎನ್ನುತ್ತಾರೆ. ಬರ್ಕೆ ಎಂದು ಕರೆಯುವುದಕ್ಕೆ ಧರ್ಮಸ್ಥಳದ ವಯೋವೃದ್ಧೆ ಗೌರಿರವರು ಒಂದು ಕಥೆಯನ್ನು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ನಮ್ಮ ಮಲೆತ್ತಾಯರ ಒಬ್ಬ ರಾಜನಿದ್ದ. ಈ ರಾಜ ಕಾಲಲ್ಲಿ, ಕೈಯಲ್ಲಿ ಕಡಗ ಹಾಕಿಕೊಂಡು ತುಂಬಾ ವೈಭವದಿಂದ ಇದ್ದ. ಈ ರಾಜ ನಮ್ಮ ಮಲತ್ತಾಯರ ಜನರನ್ನು ಹುಡುಕಿಕೊಂಡು ಧರ್ಮಸ್ಥಳಕ್ಕೆ ಬರುತ್ತಾನೆ. ಇಲ್ಲಿಗೆ ಬಂದು ನಮ್ಮ ಮಲತ್ತಾಯ ಜನರನ್ನು ನಾನು ಕರೆದುಕೊಂಡು ಹೋಗುತ್ತೇನೆ. ನನ್ನೊಂದಿಗೆ ಕಳಿಸಿಕೊಡಿ ಎಂದು ಇಲ್ಲಿನ ಹೆಗ್ಗಡೆ ಧಣಿಗಳಲ್ಲಿ ಕೇಳುತ್ತಾನಂತೆ. ಇವರನ್ನು ಇಲ್ಲಿಂದ ಕಳಿಸಬೇಕಲ್ಲ ಎಂದು ತಿಳಿದ ನಮ್ಮ ಹಿಂದಿನ ಹೆಗ್ಗಡೆ ಮನೆತನದ ಧಣಿಗಳು, ಇಲ್ಲಿ ನಿಮ್ಮ ಮಲೆತ್ತಾಯದವರು ಇಲ್ಲಿ ಯಾರೂ ಇಲ್ಲ, ಇಲ್ಲಿರುವವರು ಬರ್ಕೆಯವರು ಎಂದು ಹೇಳುತ್ತಾರೆ. ಆಗಿನಿಂದ ನಮ್ಮವರನ್ನು ಬರ್ಕೆಯವರು ಎಂತಲೇ ಕರೆಯಲಾಗಿದೆ. ಎಂಬುದನ್ನು ಇಲ್ಲಿನ ವಯೋವೃದ್ಧರಾದ ಗೌರಿರವರು ಹೇಳುತ್ತಾರೆ. ಹಾಗಾದರೆ ಆ ರಾಜನ ಹೆಸರು ಗೊತ್ತಾ ಅಂತ ಗೌರಿಯವರಿಗೆ ಕೇಳಿದಾಗ ಆ ಹೆಸರು ನಮಗೆ ಗೊತ್ತಿಲ್ಲ ನಮಗೆ ಗೊತ್ತಿರುವುದಿಷ್ಟೆ ಎಂಬ ಉತ್ತರವನ್ನು ಕೊಡುತ್ತಾರೆ. ಇದರಿಂದ ನಮಗೆ ತಿಳಿದು ಬರುವ ಸಂಗತಿ ಎಂದರೆ ಈ ಸಮುದಾಯದಲ್ಲಿ ಹೀಗೆ ಆಳುವ ದೊರೆಗಳಾಗಿದ್ದರು ಎಂಬುದು ತಿಳಿಯುತ್ತದೆ. ಇದು ಇವರು ಮೌಖಿಕ ಕಥನವಾಗಿದೆ. ಇದಕ್ಕೆ ಎಲ್ಲಿಯೂ ದಾಖಲೆ ಆಧಾರಗಳು ಲಭ್ಯವಿರುವುದಿಲ್ಲ.

**ಮಲೆತ್ತಾಯ**

ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದವರು ತಮ್ಮ ಹೆಸರಿನ ಮುಂದೆ ತನ್ನ ಸಮುದಾಯದ ಹೆಸರಿನ ಜೊತೆಗೆ ಮಲೆತ್ತಾಯ, ಮಲೆಕುಡಿಯ ಹೆಸರನ್ನು ಸೇರಿಸಿ ಹೇಳುತ್ತಾರೆ. ಆದರೆ ಬಂಟ್ವಾಳ ತಾಲೂಕಿನ ಕನ್ಯಾನದ ಅಕ್ಕರೆಕೋಡಿಯಲ್ಲಿ ನೆಲೆಸಿರುವ ಕೃಷ್ಣಪ್ಪ ಮತ್ತು ಇವರ ಸಹೋದರರು ತನ್ನ ಹೆಸರಿನ ಮುಂದೆ ಕೃಷ್ಣಪ್ಪ ಮಲೆತ್ತಾಯ, ಸಂಜೀವ ಮಲೆತ್ತಾಯ ಎಂದು ಹೇಳುತ್ತಾರೆ. ಈ "ಮಲೆತ್ತಾಯ" ಎಂಬುದು ಹೇಗೆ ಏಕೆ ಬಂದಿತು ಎಂಬುದನ್ನು ಪರಿಶೀಲಿಸಿದಾಗ ಕನ್ನಡ ಮತ್ತು ತುಳುವಿನಲ್ಲಿ 'ಮಲೆ' ಎಂದರೆ ಗುಡ್ಡ, ಗಿರಿ, ಶಿಖರ ಎತ್ತರದ ಪ್ರದೇಶ ಎಂಬರ್ಥ ಬರುತ್ತದೆ. 'ತ್ತಾಯ' ಎಂದರೆ ಅಲ್ಲಿರುವವ, ಅಲ್ಲಿ ನೆಲೆಸಿರುವವರು ಅಲ್ಲಿನ ನಿವಾಸಿಗಳು ಎಂಬ ಅರ್ಥವಿದೆ. ಶಿವಳ್ಳಿ ಬ್ರಾಹ್ಮಣರಲ್ಲೂ ಸಹ ಈ 'ತ್ತಾಯ' ಬಳಕೆಯಲ್ಲಿದೆ.

ಡಿ. ನಾಗಣ್ಣರವರ ಪ್ರಕಾರ ದಕ್ಷಿಣಕನ್ನಡ ಜಿಲ್ಲೆಯ ಮಲೆಕುಡಿಯರನ್ನು ಮಲೆಕುಡಿಯ, ಕುಡಿಯ, ಬಾರಿಕೆ, ಗೌಡ ಇತ್ಯಾದಿ ಹೆಸರುಗಳಿಂದ ಕರೆಯುವರು ಎನ್ನುತ್ತಾರೆ. ಸುಳ್ಕೇರಿ, ಕುತ್ಲೂರು, ಮುನ್ನಡ್ಕ ಕಡೆಗಳಲ್ಲಿ ತಮ್ಮನ್ನು ಗೌಡ ಎಂತಲೇ ಗುರುತಿಸಿಕೊಳ್ಳುತ್ತಿದ್ದಾರೆ.

## ೧.೭. ಮಲೆಕುಡಿಯರ ಮೂಲ

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡುಕಟ್ಟು ಸಮುದಾಯದ ಮೂಲದ ಕುರಿತು ಇದುವರೆಗೆ ನಡೆದ ಅಧ್ಯಯನಗಳಲ್ಲಿ ಲಭ್ಯವಾದ ಆಧಾರಗಳಲ್ಲಿನ ಪರಿಕಲ್ಪನೆಯು ಸೇರಿದಂತೆ ಇವರ ಮೂಲವನ್ನು ಹುಡುಕಲು ಅಧ್ಯಯನ ಮಾಡಿದಾಗ ನಮಗೆ ಡಾ.ಕೆ.ಶಿವರಾಮಕಾರಂತರು ನೀಡಿದ ಉಲ್ಲೇಖವನ್ನು ಇಲ್ಲಿ ಪರಿಗಣಿಸಬಹುದು.

ಡಾ.ಕೆ. ಶಿವರಾಮಕಾರಂತ ಅವರ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಸಹ್ಯಾದ್ರಿ ಸೆರಗಿನಲ್ಲಿ ಮಲೆಕುಡಿಯರೆಂಬ ಒಂದು ಪ್ರತ್ಯೇಕವಾದ ಗುಂಪು ಕೆಲವು ಶತಮಾನಗಳಿಂದಲೂ ವಾಸಿಸುತ್ತಾ ಬಂದಿದೆ ಎಂದಿದ್ದಾರೆ. ಇದರಿಂದ ಇವರು ಈ ಪ್ರದೇಶದ ಪ್ರಾಚೀನವಾದ, ಮೂಲ ನಿವಾಸಿಗಳು ಎಂಬುದು ತಿಳಿಯುತ್ತದೆ. ತೀರ ಮೊದಲು ಇವರು ಇಲ್ಲಿಗೆ ಎಲ್ಲಿಂದ ಬಂದರೋ ಏನೋ? ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ಇವರ ಮೂಲದ ಬಗ್ಗೆ ಡಾ.ಕೆ.ಶಿವರಾಮಕಾರಂತರಿಗೆ ಇದ್ದ ಅನುಮಾನ, ಪ್ರಶ್ನೆಯನ್ನು ಸೂಚಿಸುತ್ತದೆ. ಮಲೆಕುಡಿಯರು ವಾಸವಾಗಿರುವ ಮಲೆಗಳಲ್ಲಿ ಏಲಕ್ಕಿ ಬೆಳೆ ಹೆಚ್ಚು ಬೆಳೆಯುತ್ತಿರುವುದರಿಂದ ಕೆಳಗಿನ ಬಯಲು ಪ್ರದೇಶದಲ್ಲಿ ಶ್ರೀಮಂತ ಜನರು ಈ ಬೆಟ್ಟಗಳ ಒಡೆತನವನ್ನು ಪಡೆದುಕೊಂಡರು. ಇಲ್ಲಿ ವಾಸಿಸುವ ಮಲೆಕುಡಿಯರಿಗೆ ಬೇಕಾದ ಬಟ್ಟೆ, ಉಪ್ಪು ಒದಗಿಸಿದರು. ಇಲ್ಲಿ ಇಬ್ಬರು ಧಣಿಗಳಲ್ಲಿ ವೈಷಮ್ಯ ಬಂದುದರಿಂದ ಮಲೆಕುಡಿಯರ ಎರಡು ಬಳಿ(ಗೊತ್ರ)ಗಳೊಳಗೆ ನಡೆಯುತ್ತಿದ್ದು ವಿವಾಹ ಸಂಬಂಧ ನಿಂತು ಹೋಯಿತು. ನಂತರ ಅವರು ಒಂದೇ ಬಳಿ ಒಳಗೇ ವಿವಾಹ ಸಂಬಂಧ ಬೆಳೆಸುವ ವ್ಯವಸ್ಥೆ ಬೆಳವಣಿಗೆಯಾದ ಮಾಹಿತಿಯನ್ನು ಡಾ.ಕೆ. ಶಿವರಾಮಕಾರಂತರು ನೀಡಿದ್ದಾರೆ. ಈ ಬಿಕ್ಕಟ್ಟಿನ ಕಾಲದ ಅವಧಿಯಲ್ಲಿ ಡಾ.ಕೆ. ಶಿವರಾಮಕಾರಂತರು ಮಲೆಕುಡಿಯರು ಇದ್ದಲ್ಲಿಗೇ ಹೋಗಿ ಅವರನ್ನು ವಿಚಾರಿಸಿದ್ದಾರೆ. ನಂತರ ಅವರ ಜೀವನ ಸಮಸ್ಯೆಗಳನ್ನು ಕುರಿತು ಕುಡಿಯರ ಕೂಸು ಕಾದಂಬರಿಯಲ್ಲಿ ಬರೆದಿರುವ ಸಂಗತಿಯನ್ನು ಅವರೇ ಸ್ವತಹಃ ಈ ಬರಹ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ(ಪುಟ-೪೧ ಅವಲೋಕನ)[೨] ೧೦ ವರ್ಷಗಳನಂತರ, ಇದರ ಇಂಗ್ಲಿಷ್ ಅನುವಾದದ ಮಾಹಿತಿಯಿಂದ ಪ್ರಚೋದಿತರಾದ ಡಾ. ವಾನ್‌ಫ್ಯೂರರ್‌ಹೈಮನ್‌ಡ್ರಾರ್ಫ್ ಎಂಬ ಪ್ರಸಿದ್ಧ ಮಾನವ ಶಾಸ್ತ್ರಜ್ಞರನ್ನು ಡಾ.ಕೆ. ಶಿವರಾಮ ಕಾರಂತರು ಮಲೆಕುಡಿಯರು ವಾಸವಾಗಿರುವ ಪ್ರದೇಶಕ್ಕೆ ಕರೆದುಕೊಂಡು ಹೋಗುತ್ತಾರೆ. ಆ ಮಲೆಕುಡಿಯರನ್ನು ಕಂಡ ಕೂಡಲೇ ಡಾ.ಹೈಮನ್‌ಡ್ರಾರ್ಫರು ಇವರು 'ಚೆಂಚು'ಗಳಂತೆ ಇದ್ದಾರೆ ಎಂದು ಉದ್ಗರಿಸಿದ್ದಾರೆ. ಸುಪ್ರಸಿದ್ಧ ಮಾನವ ಶಾಸ್ತ್ರಜ್ಞರಾದ ಇವರು ಆಂಧ್ರಪ್ರದೇಶದ ಚೆಂಚುಗಳೊಂದಿಗೆ ವಾಸ ಮಾಡಿದ್ದರು. ಮಧ್ಯಪ್ರದೇಶದ ಆದಿವಾಸಿಗಳೊಡನೆ ನೆಲೆಸಿದ್ದರು. ನಾಗಾಲ್ಯಾಂಡಿನ ಆದಿವಾಸಿಗಳು, ನೇಪಾಳದ ಅಪೌತಾನಿ ಜನಗಳನ್ನು ಕುರಿತು ಅಧ್ಯಯನ ಮಾಡಿದ್ದ ಇವರು ಈ ಪ್ರದೇಶದ ಮಲೆಕುಡಿಯರು ಆಂಧ್ರದ ಚೆಂಚುಗಳ ಬಳಗ-ಪಂಗಡಕ್ಕೆ ಸೇರಿದವರು ಎಂದು ಡಾ.ವಾನ್‌ಫ್ಯೂರರ್‌ಹೈಮನ್‌ಡ್ರಾರ್ಫ್‌ರವರು ಅಭಿಪ್ರಾಯಪಟ್ಟಿದ್ದಾರೆ. ಆಂಧ್ರಕ್ಕೆ ಸೇರಿದ ಚೆಂಚು ಬುಡಕಟ್ಟು ಸಮುದಾಯದವರು ಇಲ್ಲಿಗೇಕೆ ಬಂದರು? ಎಂಬ ಸಮಸ್ಯೆ ಕಾಡಿತು. ಡಾ.ಕೆ. ಶಿವರಾಮಕಾರಂತರಿಗೆ ಕಾಡಿದ ಈ ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಾ ಡಾ.ಕೆ.ಶಿವರಾಮಕಾರಂತರು ಜನ್ಮ ತಾಳಿದ ದಕ್ಷಿಣ ಕನ್ನಡದ ಕೋಟಾದ ಸುತ್ತಲಿನ ಹದಿನಾಲ್ಕು ಗ್ರಾಮಗಳಿಗೆ ಸೇರಿದ ಬ್ರಾಹ್ಮಣ ವರ್ಗದವರ ಜೀವನ

ವಿಧಾನ, ಪರಂಪರೆ ಕುರಿತು ಚಿಂತನೆ ಮಾಡಿದರು. ಇಲ್ಲಿನ ಮೂಲವನ್ನು ಹುಡುಕುವ ಪ್ರಯತ್ನ ಮಾಡಿದರು. ಬ್ರಾಹ್ಮಣ ವರ್ಗದ 'ಕೂಟ ವಂಶಸ್ಥರು' ಎಂದು ಕರೆಸಿಕೊಳ್ಳುವ ಇವರ ಭಾಷೆ ಕನ್ನಡವಾಗಿದ್ದು, ಇವರೊಂದಿಗೆ ಇತರ ಬ್ರಾಹ್ಮಣ ಕುಲದವರೊಡನೆ ವಿವಾಹ ಸಂಬಂಧ ಇದ್ದಿರಲಿಲ್ಲ(ಪುಟ-೪೨ ಅವಲೋಕನ)[೨೩] ಎಂಬುದನ್ನು ಸ್ವತಹಃ ಶಿವರಾಮಕಾರಂತರು ಸ್ಪಷ್ಟಪಡಿಸಿದ್ದಾರೆ. ಇವರು ದಿನನಿತ್ಯ ಮಾತನಾಡುವ ಭಾಷೆ ಕನ್ನಡ, ಇವರು ನಿತ್ಯ ಪಠಿಸುವ ಸಂಕಲ್ಪದಲ್ಲಿ 'ಪರಶುರಾಮ ಕ್ಷೇತ್ರೇ ಗೋದಾವರಿ ತೀರೇ' ಎಂಬ ಶ್ಲೋಕ ಹೇಳುತ್ತಾರೆ. ಇಲ್ಲಿನ ಗೋದಾವರಿ ಆಂಧ್ರಪ್ರದೇಶದಲ್ಲಿ ಹರಿಯುವ ನದಿಯಾಗಿದೆ, ಆಂಧ್ರಪ್ರದೇಶದಲ್ಲಿ ಹರಿಯುವ ಈ ಗೋದಾವರಿ ನದಿಗೂ ಮತ್ತು ದಕ್ಷಿಣ ಕನ್ನಡದ ಜಿಲ್ಲೆಗೆ ಸಂಬಂಧವಿಲ್ಲ. ಪರಶುರಾಮ ಕ್ಷೇತ್ರವು ಭಾರತದ ಕೊಂಕಣ ತೀರವಾಗಿದೆ. ಗೋದಾವರಿ ನದಿಯು ಆಂಧ್ರದ್ದಾಗಿದೆ. ಆ ಗೋದಾವರಿ ನದಿಯ ಹೆಸರು ಆಂಧ್ರದಿಂದ ಬಂದ ಪರಶುರಾಮನ ಕ್ಷೇತ್ರಕ್ಕೆ ಬಂದ ಬ್ರಾಹ್ಮಣ ಬಳಗದ ಜತೆಯಲ್ಲಿ ಬಂದಿರಬೇಕು ಅನಿಸಿತು ಅವಲೋಕನ. ಎಂದು ಶಿವರಾಮ ಕಾರಂತರು ಅಭಿಪ್ರಾಯಪಟ್ಟಿದ್ದಾರೆ. ಇವರು ಮುಂದುವರೆದು ಹೇಳುತ್ತಾ ಅಲ್ಪಸಂಖ್ಯಾತರಾಗಿ ಬಂದ ಈ ಬ್ರಾಹ್ಮಣರು ತಮ್ಮ ಮೂಲ ತೆಲುಗು ಭಾಷೆಯನ್ನು ಬಿಟ್ಟು ದಕ್ಷಿಣ ಕನ್ನಡದ ಪ್ರದೇಶದ ಜನರಲ್ಲಿದ್ದು ಕನ್ನಡ ಭಾಷೆಯನ್ನು ರೂಢಿಸಿಕೊಂಡಿರುವ ಸಂಗತಿಯನ್ನು ಉಲ್ಲೇಖಿಸಿದ್ದಾರೆ.[೨೪] ಈ ಬ್ರಾಹ್ಮಣರು ಈ ಪ್ರದೇಶಕ್ಕೆ ಬಂದ ಕಾಲಾವಧಿ ಸುಮಾರು ೧೪ನೇಯ ಶತಮಾನ ಎಂದು ತಿಳಿಸಿದ್ದಾರೆ. ಇವರು ಈ ಅವಧಿಯಲ್ಲಿ ಇಲ್ಲಿಗೆ ಬರುವುದಕ್ಕೆ ಕಾರಣವಾದ ಪ್ರಸಂಗವನ್ನು ಸಹ ಇಲ್ಲಿ ತಿಳಿಸಿದ್ದಾರೆ.

೧೩೧೮ರ ಸುಮಾರಿಗೆ ಮಲ್ಲಿಕಾಫರನ ದಂಡು ದ್ವಾರಸಮುದ್ರದಿಂದ ವಾರಂಗಲ್ಲಿನವರೆಗೆ ದಂಡೆಯಾತ್ರೆ ನಡೆಸಿ, ಇಲ್ಲಿನ ದೇವಾಲಯಗಳನ್ನು ಸುಲಿಗೆ, ನಾಶ ಮಾಡಿದರು, ಇವರ ಮತಾಂತರ, ದುಷ್ಟತನದ ಹಾವಳಿಯಿಂದಾಗಿ ಶಿವರಾಮಕಾರಂತರ ಪೂರ್ವಜರು ಇವರಿಗೆ ಬೆದರಿ-ಹೆದರಿ ದಕ್ಷಿಣ ಕನ್ನಡದ ಪ್ರದೇಶಕ್ಕೆ ಬಂದು ನೆಲೆಸಿದ್ದಾರೆ. ಆಂಧ್ರ ಮೂಲದ ಚೆಂಚೂಗಳು, ಸಹ ಈ ಸಹ್ಯಾದ್ರಿಯ ಪ್ರದೇಶಗಳಿಗೆ ಬಂದು ನೆಲೆಸಿದರು ಎಂಬ ತರ್ಕವನ್ನೂ ಡಾ.ಕೆ. ಶಿವರಾಮಕಾರಂತರು ಹೇಳುವುದರ ಮೂಲಕ ಮಲೆಕುಡಿಯರು ಮೂಲತಃ ಆಂಧ್ರದ ಮೂಲದ ಚೆಂಚೂಗಳೆಂಬವಾದವನ್ನು ಪ್ರತಿಪಾದಿಸಿದ್ದಾರೆ. ಇದಕ್ಕೆ ಇವರು ಕೊಡುವ ನಿದರ್ಶನವೆಂದರೆ ಈ ಪ್ರದೇಶದಲ್ಲಿ ವಾಸವಾಗಿರುವ ಮಲೆಕುಡಿಯರಲ್ಲಿ ಕೆಲವು ಮಕ್ಕಳ ಮುಖ ಚಹರೆಯನ್ನು ಕಂಡು ಗುರುತಿಸುತ್ತಾರೆ. ಪ್ರತ್ಯೇಕ ಗುಂಪು ಗುಂಪುಗಳಾಗಿ ನೆಲೆಸಿರುವ ಮಲೆಕುಡಿಯರ ವಿಶಿಷ್ಟ ಅಂಗಲಕ್ಷಣವು ಕುಡಿಯರಿಗಿಂತ ಬೆಳ್ಳಗಿನ ಜನವರ್ಗ ಒಂದರ ಸಂತತಿಯಾಗಿ ಕಾಣಿಸಿದರು(ಪುಟ-೪೨ ಅವಲೋಕನ)[೧೯] ಎಂಬುದನ್ನು ವಿಶ್ಲೇಷಣೆ ಮಾಡಿದ್ದಾರೆ. ಆದರೆ ಇವರ ಒಂದು ಪಂಗಡ, ಘಟ್ಟದ ಕೆಳಗಿನ ಬಯಲು ಭೂಮಿಗೆ ಬಂದು, ಇಲ್ಲಿನ ಬಯಲು ಜಾಗದಲ್ಲಿ ಇತರರಂತೆ ಕೃಷಿಕರಾದರು. ಇವರು ಎಲ್ಲರೂ ತಮ್ಮ ಮೂಲ ಭಾಷೆಯನ್ನು ಮರೆತು 'ತುಳು' ಭಾಷೆಯನ್ನು ಆಡು ಭಾಷೆಯನ್ನಾಗಿ ಮಾಡಿಕೊಂಡರು ಎಂಬ ಮಾಹಿತಿಯನ್ನು ಡಾ.ಕೆ. ಶಿವರಾಮಕಾರಂತರು ನೀಡಿದ್ದಾರೆ. ಇದರಿಂದ ಮಲೆಕುಡಿಯರು ಬಯಲು ಜಾಗಕ್ಕೆ ಬಂದು ಕೃಷಿಕರಾದ ವಿಷಯ ತಿಳಿಯುತ್ತದೆ. ಆದರೆ ಇವರು ಈ ಬಯಲು ಜಾಗಕ್ಕೆ ಬರುವುದಕ್ಕೆ ಮೊದಲು ಇವರು ಯಾವ ಭಾಷೆ ಮಾತನಾಡುತ್ತಿದ್ದರು? ಎಂಬ ಪ್ರಶ್ನೆ ಉದ್ಭವವಾಗುತ್ತದೆ ನಂತರದಲ್ಲಿ 'ತುಳು' ಭಾಷೆಯನ್ನು ಇವರು ತನ್ನ ಆಡುಭಾಷೆಯನ್ನಾಗಿ ಮಾಡಿಕೊಂಡ ವಿಷಯ ಇಲ್ಲಿ ತಿಳಿದುಬರುತ್ತದೆ. ಎಡ್ಗರ್‌ಥರ್ಸ್ಟನ್‌ರವರು ಬರೆದ Caste and creads of south India ಎಂಬ ಕೋಶದಲ್ಲಿ ಮಲೆಕುಡಿಯರಲ್ಲಿ

ಗಂಡ ಸತ್ತ ಒಬ್ಬಳು ಹೆಂಗಸು ತನ್ನ ಮಗನನ್ನು ಮದುವೆಯಾದ ನಿದರ್ಶನ ಕೊಟ್ಟಿದ್ದಾರೆ ಎಂಬುದನ್ನು ಡಾ.ಕೆ. ಶಿವರಾಮಕಾರಂತರು ಉಲ್ಲೇಖಿಸಿದ್ದಾರೆ. ಇದರಿಂದ ಸಗೋತ್ರ ವಿವಾಹ ಪದ್ಧತಿ ಇವರಲ್ಲಿ ಆಚರಣೆ ಇತ್ತು ಎಂಬುದು ತಿಳಿಯುತ್ತದೆ.

"ಚಂಚೂ"ಗಳ ಮೂಲದ ಕುರಿತು ಬಾಲಗುರುಮೂರ್ತಿರವರು ತಮ್ಮ ಪಾರ್ದಿ, ಪ್ರಜಾವಾಣಿ ದಿನಪತ್ರಿಕೆ, ಪುಟ. ೧, ಸಾಪ್ತಾಹಿಕ ಪುರವಣಿ, ದಿ.೧.೬.೨೦೦೮ರ ಲೇಖನದಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಕೆಲವು ಬುಡಕಟ್ಟು ಆದಿವಾಸಿ ಸಮುದಾಯಗಳನ್ನು ಅಲೆಮಾರಿ ಅಪರಾಧಿ ಬುಡಕಟ್ಟುಗಳೆಂದು ಘೋಷಿಸಲಾಯಿತು. ಇವುಗಳಲ್ಲಿ "ಪಾರ್ದಿ" ಸಹ ಒಂದಾಗಿದೆ. ೧೯೫೦ರಲ್ಲಿ ಪರಿಶಿಷ್ಟಪಂಗಡಕ್ಕೆ ಸೇರಿಸಲಾದ ಪಾರ್ಥಿಗಳನ್ನು ಅಡವಿ ಚಂಚು, ಅಡವಿ ಚಂಚೇರ್, ಪಾದ್ರಿ ಪಾರ್ದಿ, ವಾಗ್ರಿ ಪಾರ್ದಿ, ಹರಣಿ ಶಿಕಾರಿ, ಚಿಗರೆ ಬೇಟೆಗಾರರು ಎಂದು ಪರ್ಯಾಯ ಪದಗಳಿಂದ ಗುರುತಿಸಲಾಗಿದೆ. ವಿಂಧ್ಯ ಪರ್ವತ ಪ್ರದೇಶದ ದಟ್ಟ ಅರಣ್ಯದಲ್ಲಿ ಈ ಪಾರ್ದಿಗಳು ಆಂಧ್ರಪ್ರದೇಶ, ಗುಜರಾತ್, ಮಹಾರಾಷ್ಟ್ರ ಮತ್ತು ಕರ್ನಾಟಕದ ಪ್ರದೇಶಗಳಿಗೆ ವಲಸೆ ಬಂದರು. ಪಾರ್ದಿ ಎಂಬ ಪದ "ಪಾರಾದ್" ಎಂಬ ಪದದ ನಿಷ್ಪತ್ತಿಯಾಗಿದೆ. ಪಾರಾದ್ ಎಂದರೆ ಬೇಟೆ ಮಾಡುವುದು, ನಂತರ ಬೇಟೆಯ ಮಿಕವನ್ನು ಗಲ್ಲಿಗೇರಿಸುವುದು. ಅಡವಿ ಸಂಚಾರಿಗಳಾದ ಪಾರ್ಥಿಗಳನ್ನು ಅಡವಿ ಚಿಂಚರ್ ಎಂತಲೂ ಕರೆಯುತ್ತಾರೆ. ಅಡವಿ ಚಿಂಚೇರ್ರ ದೇವತೆ "ಚೆಂಚು"ಗಳನ್ನು ಓಬಳೇಶ್ವರ ಸ್ವಾಮಿ ವಾಸಿಸುವ ಪವಿತ್ರವಾದ ಬೆಟ್ಟದಲ್ಲಿ ನಲ್ಲ-ಮಲೈ ಬೆಟ್ಟದಿಂದ ಯರಗೊಲ್ಲ ಕನ್ಯೆ **ಚಿಂಚಿತ**ಳನ್ನು ಎತ್ತಿಕೊಂಡು ಹೋಗಿದ್ದು ನಂತರ ಚಿಂಚಿತಾಳಿಗೆ ಆದ ಮಕ್ಕಳೇ "ಚೆಂಚ"ರು ಎಂದು ಪಾರ್ಥಿಕುಲದ ಹಿರಿಯರು ಹೇಳುತ್ತಾರೆ. ಚೆಂಚರಲ್ಲಿ ತೆಲುಗುಚೆಂಚರು, ಅಡವಿಚೆಂಚರು, ಕೃಷ್ಣಚೆಂಚರು, ಬೊಂಡಚೆಂಚರು ಎಂದು ಪರಿವರ್ತಿಸಲಾಗುತ್ತದೆ. ಚಂಚೂಗಳು ಲಂಗೋಟಿ ಮಾತ್ರ ಕಟ್ಟಿಕೊಂಡು ಹೆಂಗಸರು ಕೂದಲಿನ ಹಿಂಬದಿಯಲ್ಲಿ ಜುಟ್ಟು ಬಿಟ್ಟಂತೆ ಗಂಡಸರು ಸಹ ಜುಟ್ಟು ಬಿಡುವ ಪದ್ದತಿ ಇವರಲ್ಲಿ ಕಂಡುಬರುತದೆ. ಬೆಟ್ಟಗುಡ್ಡಗಳನ್ನು ಆಶ್ರಯಿಸಿ ಜೀವನ ಮಾಡುವ ಇವರಲ್ಲಿ ತುಂಬಾ ಸರಳವಾದ ವಿವಾಹ ಪದ್ದತಿ ಆಚರಣೆಯಲ್ಲಿದೆ. ಅರಳಿ ಮರದ ಎಲೆಗಳಿಂದ ಮಾಡಿದ ಸರದ ದಂಡೆಯನ್ನು ಕೊರಳಲ್ಲಿ ಹಾಕಿಕೊಂಡು, ಗಂಡು-ಹೆಣ್ಣು ಇಬ್ಬರ ಸೆರಗಿಗೆ ಏಳು ಗಂಟುಗಳನ್ನು ಹಾಕಿಕೊಂಡರೆ ಇವರ ವಿವಾಹ ಮುಗಿದಂತೆ. ಪುಟ್ಟಮಕ್ಕಳಿಗೆ ಹಲ್ಲು ಬರುವ ತನಕ ತಲೆ ಕೂದಲನ್ನು ತೆಗೆಯಲಾಗುತ್ತದೆ. ಈ ಮಕ್ಕಳಿಗೆ ಹಲ್ಲು ಬಂದ ನಂತರ ಹಾಗೆಯೇ ಬಿಡಲಾಗುತ್ತದೆ. ಸ್ವಲ್ಪಮಟ್ಟಿನ ಉಗ್ರ, ಮುಂಗೋಪಿ ಸ್ವರೂಪದವರಾದ ಈ ಬುಡಕಟ್ಟಿನ ಜನರು ತಾವು ಮಾಡಿದ ಕೆಲಸಕ್ಕೆ ಸರಿಯಾಗಿ ಕಾಳು ಕೊಡದೇ ಇರುವವರ ಕಣಕ್ಕೆ ಬೆಂಕಿ ಹಚ್ಚುವಂತಹ ಘಟನೆಗಳು ಇವರ ಮುಂಗೋಪಿತನದ ಸಂಕೇತಗಳಾಗಿವೆ. ಎಂಬುದನ್ನು ಬಾಲಗುರುಮೂರ್ತಿರವರು ವಿಶ್ಲೇಷಿಸಿದ್ದಾರೆ.[೨೫]

**ಸೃಷ್ಟಿ ಪುರಾಣಗಳು**

ಡಿ. ನಾಗಣ್ಣ ಅವರು ಕುಡಿಯ ಮಲೆಕುಡಿಯ, ಕರ್ನಾಟಕ ಬುಡಕಟ್ಟು ಸಂ.೧, ಪುಟ(೬೧೧)ರಲ್ಲಿ ಮಲೆಕುಡಿಯರ ಕುಲದ ಮೂಲ ಕಥೆಗಳನ್ನು ಗುರುತಿಸಿದ್ದಾರೆ.[೨೬] ಇವರ ಪ್ರಕಾರ ಪ್ರತಿಯೊಂದು ಬುಡಕಟ್ಟು ಸಮುದಾಯವನ್ನು ಭೂಮಿಯ ಮೇಲೆ ಹೇಗೆ ಹುಟ್ಟುಕೊಂಡಿತು. ತಮ್ಮ ಕುಲದಮೂಲ ಪುರುಷ ಯಾರು? ಎಂಬುದರ ಬಗ್ಗೆ ಕಥೆಗಳನ್ನು ಹೊಂದಿರುತ್ತಾನೆ. ಅಂದರೆ ಈ ಜಗತ್ತಿಗೆ ತಮ್ಮ ಬುಡಕಟ್ಟು ಸಮೂಹದವನೇ ಮೂಲಪುರುಷ ಎಂಬಂತೆ ಕಥೆ ಹೇಳುವುದುಂಟು. ಅಂತೆಯೇ ಮಲೆಕುಡಿಯರಲ್ಲೂ

ಈ ಬಗೆಯ ಕಥೆಗಳಿವೆ. ಈ ಕಥೆಗಳಲ್ಲಿ ಇವರು ಈಶ್ವರ ಪಾರ್ವತಿಯ ವರಪುತ್ರರಾಗಿದ್ದಾರೆ. ಆದ್ದರಿಂದ ಇವರ ಮೂಲ ಆರಾಧ್ಯ ದೈವ ಶಿವಪಾರ್ವತಿಯರಾಗಿದ್ದಾರೆ. ಇಲ್ಲಿ ನೆಲೆಸಿರುವ ಕಡೆಗಳಲ್ಲೆಲ್ಲಾ ಶಿವದೇವಾಲಯಗಳಿವೆ ಈ ದೇವಾಲಯಗಳಿಗೆ ಇವರು ತಮ್ಮ ಪಾರಂಪರಿಕ ಸೇವೆಯನ್ನು ಮಾಡುತ್ತಲೇ ಬಂದಿದ್ದಾರೆ.

ಒಂದು ಕಥೆಯ ಪ್ರಕಾರ ಈಶ್ವರನು ಯಾವಾಗಲೂ ಭೂ ಲೋಕವನ್ನು ಪರಿಪಾಲಿಸುವಂತಹ ದೈವ, ಭೂ ಲೋಕದ ಸಕಲ ಪ್ರಾಣಿಗಳಿಗೂ ಅನ್ನ ನೀರು ನೀಡುತ್ತಾ ಬಂದವನು, ಪಾರ್ವತಿಗೆ ಒಮ್ಮೆ ಈಶ್ವರನ ಜೊತೆ ಹೊರಟು, ಅವನು ಭೂ ಲೋಕದ ಸಕಲ ಪ್ರಾಣಿಗಳಿಗೂ ಆಹಾರ, ನೀರು, ಹೇಗೆ ಹಂಚುತ್ತಾನೆ ಎಂದು ಪಾರ್ವತಿಗೆ ನೋಡಬೇಕೆಂಬ ಆಸೆಯಾಯಿತು. ಈ ಆಸೆಯನ್ನು ಪಾರ್ವತಿ ಶಿವನ ಮುಂದೆ ವ್ಯಕ್ತಪಡಿಸಿದಳು. ಅದಕ್ಕೆ ಈಶ್ವರನು ಪಾರ್ವತಿಯನ್ನು ಬರುವುದು ಬೇಡ, ಬಂದರೆ ನನ್ನ ಜೊತೆ ಕಾಡು ಮೇಡು ಸುತ್ತ ಬೇಕಾಗುತ್ತದೆ ಎಂದು ಈಶ್ವರನು ಪಾರ್ವತಿಗೆ ಹೇಳಿದ. ಅದಲ್ಲದೆ ಪಾರ್ವತಿಗೆ ಆಗ ತಾನೆ ಮಗು ಆಗಿತ್ತು. ಅದಕ್ಕೆ ಪಾರ್ವತಿ ಮಗುವಿಗೆ ಆಗಾಗ ಹಾಲು ಕುಡಿಸಬೇಕಾಗಿತ್ತು. ಪಾರ್ವತಿ ಈಶ್ವರನೊಂದಿಗೆ ಭೂಲೋಕಕ್ಕೆ ಸುತ್ತಲು ಬಂದರೆ ಮಗುವಿಗೆ ಹಾಲು ಕುಡಿಸಲು, ಎದೆಯ ಹಾಲು ಕಟ್ಟಿಕೊಳ್ಳುತ್ತದೆ ಎಂದು ಈಶ್ವರ-ಪಾರ್ವತಿಗೆ ಹೇಳಿದ. ಆದರೆ ಪಾರ್ವತಿ ಈಶ್ವರನ ಮಾತನ್ನು ಕೇಳಲಿಲ್ಲ ಆದರೆ ಆ ದಿನ ಪಾರ್ವತಿಗೆ ತುಂಬಾ ಬೇಸರವಾಗಿದ್ದರಿಂದ ಈಶ್ವರನ ಜೊತೆಯಲ್ಲಿ ಬರುವನೆಂದು ಹಟ ಮಾಡಿದಳು. ಹೀಗಾಗಿ ಈಶ್ವರ-ಪಾರ್ವತಿ ಇಬ್ಬರೂ ಕಲಾ ಲೋಕದ ಕಡೆ ಒಂದು ಕಾಡಿನ ಎಡೆಯಲ್ಲಿ ಹೊರಟರು. ಹೀಗೆ ಕಾಡಿನ ಸಕಲ ಪ್ರಾಣಿಗಳನ್ನು ನೋಡಿಕೊಂಡು ಬಹಳ ಹೊತ್ತು ಹೋಗುವಲ್ಲಿ ಪಾರ್ವತಿಗೆ ಎದೆಯಲ್ಲಿ ಹಾಲು ತುಂಬಿಕೊಂಡಿತು. ಆಗ ಈಶ್ವರನು ಸಿಟ್ಟಾಗಿ ಪಾರ್ವತಿ ನಿನಗೆ ನಾನು ಕೈಲಾಸದಲ್ಲೇ ಹೇಳಿದೆ, ನೀನು ನನ್ನ ಜೊತೆ ಕಾಡಿಗೆ ಬರುವುದು ಬೇಡ ಎಂದು, ಈಗ ನೋಡು ಎಂಥಾ ತಾಪತ್ರಯವಾಯಿತು ಎಂದ. ಅದಕ್ಕೆ ಪಾರ್ವತಿ ತನ್ನ ಎದೆನೋವು ತಾಳಲಾರದೆ ಎದೆ ಹಾಲಿನ ಬಿಗಿತದಿಂದ ಎದೆನೋವು ಅನುಭವಿಸತೊಡಗಿದಳು. ಆಗ ಈಶ್ವರನ ಮಾತಿನಂತೆ ಪಾರ್ವತಿ ಒಂದು ಗಿಡದ ಬಳಿ ಬಂದು ಮಣ್ಣು ತೆಗೆದು ಬೊಂಬೆ ಮಾಡಿ ಅದಕ್ಕೆ ಜೀವ ಬರಸಿ ಅದಕ್ಕೆ ಪಾರ್ವತಿಯ ಎದೆ ಹಾಲು ಕುಡಿಸಿ, ಪಾರ್ವತಿಯ ಎದೆಯ ನೋವು ಕಡಿಮೆ ಮಾಡಿಕೊಂಡಳಂತೆ. ಈಶ್ವರ ಸೃಷ್ಟಿಸಿದ ಮಗುವನ್ನು ಕೈಲಾಸಕ್ಕೆ ಕೊಂಡು ಹೋದರೆ ಅನುಮಾನವಾಗಬಹುದೆಂದು ಆ ಮಗುವನ್ನು ಅಲ್ಲೆ ಬಿಟ್ಟು ಹೋಗಲು ಪಾರ್ವತಿ ಯೋಚಿಸಿದಳು. ಹಾಗೆ ಒಂಟಿ ಮಗುವನ್ನು ಬಿಟ್ಟು ಹೋಗುವುದು ಒಳ್ಳೆಯದಲ್ಲವೆಂದು ಪಾರ್ವತಿ ತಿಳಿದು ಒಂದು ಹೆಣ್ಣನ್ನು ಸೃಷ್ಟಿ ಮಾಡಿ ಶಿವನು ಸೃಷ್ಟಿಸಿದ ಗಂಡು ಮತ್ತು ಪಾರ್ವತಿ ಸೃಷ್ಟಿಸಿದ ಹೆಣ್ಣು ಇವರಿಬ್ಬರೂ ಒಟ್ಟಿಗೆ ಬದುಕುವಂತೆ ಮಾಡಿ ಶಿವ-ಪಾರ್ವತಿಯರು ಕೈಲಾಸಕ್ಕೆ ಹೋದರು. ಹೀಗೆ ಪಾರ್ವತಿಯ ನೋವು ಹತ್ತಿದ ಮೊಲೆಹಾಲು ಕುಡಿದು ಅರಣ್ಯದಲ್ಲಿ ಬೆಳೆದ ಶಿಶುವಿಗೆ "ಮೊಲೆ ಕುಡಿಯ" ಎಂದು ಹೆಸರಾಯಿತು. ಎಂದು ಕಥೆ ಹೇಳುತ್ತಾರೆ. ಈ ಕಥೆಯಲ್ಲಿ ಬರುವ ಮೊಲೆ ಕುಡಿಯನೇ ಬರುಬರುತ್ತಾ ಕಾಲಕ್ರಮೇಣ ಮಲೆಕುಡಿಯನಾದ ಎಂದು ಡಿ.ನಾಗಣ್ಣನವರು ತಿಳಿಸಿದ್ದಾರೆ(ಪುಟ ೭೨). ಮತ್ತೊಂದು ಕಥೆಯ ಪ್ರಕಾರ ಒಮ್ಮೆ ಶಿವ-ಪಾರ್ವತಿಯರು ಈ ಭೂಮಿಯ ಮೇಲೆ ಎಲ್ಲಾ ಕಸುಬುಗಳನ್ನು ಮಾಡಿ ಬದುಕುವ ಜನಾಂಗವನ್ನು ಸೃಷ್ಟಿಸಿದರು. ಆದರೆ ನಮ್ಮ ಮಕ್ಕಳು ಅಂತ ಯಾರನ್ನು ಸೃಷ್ಟಿಸಲಿಲ್ಲ ಎಂದು ತಿಳಿದು ಮಲೆಯಲ್ಲಿಯೇ ವಾಸಿಸುವಂತಹ ಒಂದು ಸಮೂಹವನ್ನು ಸೃಷ್ಟಿಸಿದರು. ಅವರು 'ಕುಡಿಯರು' ಆಗಿದ್ದಾರೆ. ಮಲೆಯಲ್ಲಿ ವಾಸಿಸುವ ಕುಡಿಯರು ಮಲೆಕುಡಿಯರಾಗಿ ಶಿವನ ಮಕ್ಕಳಾಗಿ

ಬದುಕುತ್ತಿದ್ದರೆಂತೆ. ಹೀಗಾಗಿ ಮಲೆಕುಡಿಯರು ನೇರವಾಗಿ ತಾವು ಶಿವನ ಮಕ್ಕಳು ಎಂದೇ ಹೇಳಿಕೊಳ್ಳುವರು. ಮತ್ತೆ ಶಿವನು ಈ ಮಲೆಕುಡಿಯರ ಬದುಕಿನ ಕಷ್ಟ ಸುಖಗಳನ್ನು ನೋಡಿಕೊಳ್ಳಲು ಅಣ್ಣಪ್ಪನೆಂಬ ಭೂತವನ್ನು ಸೃಷ್ಟಿಸಿದನಂತೆ ತಮ್ಮನ್ನು ಸೃಷ್ಟಿಸಿದ ಶಿವನೇ ತಮ್ಮನ್ನು ನೋಡಿಕೊಳ್ಳಲು ಅಣ್ಣಪ್ಪ ಭೂತವನ್ನು ಇಲ್ಲಿ ಇರಿಸಿರುವುದರಿಂದ ಮಲೆಕುಡಿಯರು ಈ ಭೂತಕ್ಕೆ ಭಯ ಭಕ್ತಿಯಿಂದ ನಡೆದುಕೊಳ್ಳುವರು. ಪಾರ್ವತಿಯ ಪ್ರತಿರೂಪವಾಗಿ ಚಾಮುಂಡೇಶ್ವರಿಯನ್ನು ಪೂಜಿಸುತ್ತಾರೆ. ಹೀಗೆ ತಮ್ಮ ಕುಲದ ಮೂಲದ ಕುರಿತಂತೆಮಲೆ ಕುಡಿಯರು ಈ ಕಥೆಯನ್ನು ಹೇಳಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಸಮೀಪದ ಕೊಯ್ಯೂರಿನಲ್ಲಿರುವ ಮಲೆಕುಡಿಯ ಸಂಘದ ವತಿಯಿಂದ ಪ್ರತಿವರ್ಷ ಶಿವರಾತ್ರಿಯಲ್ಲಿ ಶಿವನ ಆರಾಧನೆ ಮಾಡುವ ಪದ್ಧತಿ ಇವರಲ್ಲಿ ಈಗಲೂ ಕಂಡುಬರುತ್ತದೆ. ಅಲ್ಲದೆ ಇಲ್ಲಿನ ಇವರ ಸಂಘದ ಕಟ್ಟಡಕ್ಕೆ ಶಿವಪಾರ್ವತಿ ಮಂದಿರ ಎಂದು ಹೆಸರಿಟ್ಟಿದ್ದಾರೆ. ಶಿವಪಾರ್ವತಿ ಇವರ ಆರಾದ್ಯ ದೈವ ಎಂಬುದಕ್ಕೆ ಇಲ್ಲಿ ಸಾಮ್ಯತೆ ಕಂಡುಬರುತ್ತದೆ.

**ನಾಲುಮಲೆಕುಡಿಯರು**

ಅರಣ್ಯವಾಸಕ್ಕೆ ಬಂದ ಪಾಂಡವರು ಇಲ್ಲಿನ ಕಾಡುಗಳಲ್ಲಿ ಕೆಲವು ದಿನಗಳು ಉಳಿದುಕೊಂಡಿದ್ದರು. ಇವರು ಇಲ್ಲಿಂದ ಮುಂದಕ್ಕೆ ಪ್ರಯಾಣ ಬೆಳೆಸುವುದಕ್ಕೆ ಹೊರಟಾಗ ಇಲ್ಲಿನ ನಿವಾಸಿಗಳು ತಮ್ಮ ಕೈಲಾದ ಸಹಾಯವನ್ನು ಪಾಂಡವರಿಗೆ ಕೊಡುಗೆಯಾಗಿ ನೀಡಿದರು. ಆದರೆ ಇಲ್ಲಿರುವ ಮಲೆಕುಡಿಯರ ಗುಂಪು ಹಿಂಜರಿಕೆಯಿಂದ ದೂರವೇ ನಿಂತಿದ್ದರು. ಪಾಂಡವರು ಮುಂದೆ ಹೊರಡಲು ಹೆಜ್ಜೆ ಇಟ್ಟಾಗ ಇವರ ಮುಂದೆ ಮಲೆಕುಡಿಯರ ಹಿರಿಯ ಮುಂದೆ ಹೋಗಿ ನಿಂತು "ಸ್ವಾಮಿ ನಮಗೆ ಏನನ್ನೂ ಕೊಡಲಿಲ್ಲವಲ್ಲಾ" ಎಂದು ಧೈರ್ಯವಾಗಿ ಕೇಳಿದನಂತೆ ಅದಕ್ಕೆ ಧರ್ಮರಾಯ "ಹಾಗೇ ಆಯಿತು ತಗೋ" ತನ್ನ ಬಾಯಿಯಲ್ಲಿ ಅಗಿಯುತ್ತಿದ್ದ ತಾಂಬೂಲವನ್ನು ತನ್ನ ಬಲಭಾಗಕ್ಕೆ ಉಗಿದು, ಸಿಂಬಳವನ್ನು ಸೀದು ತನ್ನ ಎಡ ಭಾಗಕ್ಕೆ ಎಸೆದನಂತೆ ಆಗ ಧರ್ಮರಾಯನು ತಾಂಬೂಲವನ್ನು ಉಗಿದ ಭಾಗದ ಜಾಗದಲ್ಲಿ ಏಲಕ್ಕಿಯ ಕಿಡಿ ಎದ್ದಿತು. ಸಿಂಬಳವನ್ನು ಸೀದು ಬಿದ್ದ ಜಾಗದಲ್ಲಿ ಬೈನೆಮರ ಎದ್ದು ನಿಂತಿತು. ಧರ್ಮರಾಯ ಇದೋ ಇದೇ ನಿಮಗೆ ನಮ್ಮ ಕೊಡುಗೆ ಎಂದು ಹೇಳಿ ಮರಳಿ ನಾವು ಬರುತ್ತೇವೆ ಎಂದು ಹೇಳಿ ಹೋದ ಧರ್ಮರಾಯ ಮತ್ತೆ ಮರಳಿ ಬರಲೇ ಇಲ್ಲವಂತೆ. ಇದರಿಂದಾಗಿ ನಾಲುಮಲೆ ಜನರು ವಾಸವಾಗಿರುವ ಪ್ರದೇಶಗಳಲ್ಲಿ ಏಲಕ್ಕಿ ಬೆಳೆ ತನ್ನಷ್ಟಕ್ಕೆ ತಾನೇ ಬೆಳೆಯುತ್ತದೆ. ನಾಲುಮಲೆ ಜನರನ್ನು "ಏಲಕ್ಕಿ ಕುಡಿಯರು" ಎಂದು ಸಹ ಕರೆಯಲಾಗುತ್ತದೆ. ಇವರು ಆಗಿನಿಂದಲೂ ಏಲಕ್ಕಿಯನ್ನು ಸಂಗ್ರಹಿಸುತ್ತಾ ಇಲ್ಲಿ ಏಲಕ್ಕಿಯ ಕೃಷಿಯನ್ನು ಮಾಡುತ್ತಾ ಬಂದಿದ್ದಾರೆ. ಇದು ಇವರ ಇಲ್ಲಿನ ಮುಖ್ಯ ಕಸುಬು ಆಗಿದೆ. ಹೆಂಡ ತೆಗೆಯುವ ಬೈನೆಮರ, ಅತ್ಯುತ್ತಮ ಬಹು ಉಪಯೋಗಿಯಾಗಿದೆ. ಇವರು ಐತಿಹಾಸಿಕವಾಗಿ ಇಲ್ಲಿಂದ ತಮ್ಮ ಮೂಲ ನೆಲವನ್ನು ಬಿಟ್ಟು ಹೋಗಲು ಇರುವ ಹಲವಾರು ಕಾರಣಗಳನ್ನು ಎಸ್.ಪಿ.ಶಂಕರನಾರಾಯಣ ರವರು ವಿಶ್ಲೇಷಣೆ ಮಾಡಿದ್ದಾರೆ. ಇವರು ಇದಕ್ಕೆ ಕೊಡುವ ಕಾರಣಗಳೆಂದರೆ ಭೂಸುಧಾರಣೆ ಅರಣ್ಯ ಕಾಯಿದೆ. ಇವು ಇವರ ಜೀವನವನ್ನು ತಲುಪಿದವು. ಇಂದು ಇದು ಒಂದು ಶಿಥಿಲಗೊಂಡಿರುವ ಒಂದು ಸಮುದಾಯ(ಪುಟ-೨೨೪) ಇವರ ಮೂಲ ದೇವರು, ಸಂಪ್ರದಾಯಗಳು ಎಲ್ಲವೂ ಕಣ್ಮರೆಯಾಗಿ ಈಗ ಇವರು ನೆರೆಯ ಸಮುದಾಯಗಳ ದೇವರುಗಳನ್ನು ತನ್ನದಾಗಿಸಿಕೊಳ್ಳುವ ಪ್ರಕ್ರಿಯೆಯಲ್ಲಿದ್ದಾರೆ. ಇವರಲ್ಲಿ

ಗಣಪತಿ, ಚಾಮುಂಡಿ, ಕಾಲಭೈರವೇಶ್ವರ, ಚಾಡಿ ದೇವರುಗಳು ಮೂಡಿಗೆರೆಯ ಪ್ರದೇಶಗಳಲ್ಲಿ ಜನಪ್ರಿಯವಾಗಿದ್ದರೆ, ನಾಲುಮಲೆಯಲ್ಲಿ ಚೌಡಿ, ಜೋಗಿ ದೇವರುಗಳು ಪ್ರಧಾನವಾಗಿವೆ. ನೆರೆಹೊರೆಯವರು ತನ್ನ ಸಮಸ್ಯೆಗಳಿಗೆ ಪರಿಹಾರ ಕೋರಲು ಇವರಲ್ಲಿಗೆ ಬರುತ್ತಾರೆ ಎಂಬುದನ್ನು ತಿಳಿಸುತ್ತಾರೆ. ಉಳಿದಂತೆ ಈ ಬುಡಕಟ್ಟು ಸಮುದಾಯದಲ್ಲಿ ಕಂಡು ಬರುವ ಮಾಟ, ಮಂತ್ರ, ಮೋಡಿಗಳು ಇವರಲ್ಲಿ ಕಂಡು ಬರುತ್ತಿಲ್ಲ ಎಂದು ಎಸ್.ಪಿ. ಶಂಕರನಾರಾಯಣರಾವ್ ಅವರು ಆದಿವಾಸಿ ಆಖ್ಯಾನ ಪುಟ-೨೨೪ರಲ್ಲಿ ಅಭಿಪ್ರಾಯಪಟ್ಟಿದ್ದಾರೆ.

**ಊರುಮಲೆ**

ಎಸ್.ಪಿ. ಶಂಕರನಾರಾಯಣರಾವ್ ರವರು ಊರುಮಲೆಕುಡಿಯರ ಸಮುದಾಯದ ಜೀವನ ಪರಂಪರೆ, ಸಂಸ್ಕೃತಿ, ಆಚಾರಗಳ ಕುರಿತು ವಿಶ್ಲೇಷಣೆಯನ್ನು ಮಾಡಿದ್ದಾರೆ. ಇವರು ತುಳುವ ಸಂಸ್ಕೃತಿಯ ಪಾಲುದಾರರು, ಭೂತಾಳಪಾಂಡ್ಯನ ಕಟ್ಟಳೆಗಳಿಗೆ ಒಳಗಾಗಿರುವ ಇವರು ಮಾತನಾಡುವ ಭಾಷೆ ತುಳು ಭಾಷೆಯಾಗಿದೆ. ಅಳಿಯ ಸಂತಾನ ಪದ್ಧತಿ, ಭೂತಾರಾಧನೆಗಳಲ್ಲಿ ಇವರು ತುಳುವ ಸಂಸ್ಕೃತಿಯ ಪಾಲುದಾರರು ಎಂದು ಆದಿವಾಸಿ ಆಖ್ಯಾನದ ಪುಟ ೨೨೪ ರಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. ಭೂತಾಳ ಪಾಂಡ್ಯನ ಶಾಸನದಲ್ಲಿ ಪ್ರಸ್ತಾಪವಾಗಿರುವ ಇವರು ತಾಯಿ ಕಟ್ಟಿನವರಾಗಿದ್ದು, ಕಾಸರಗೋಡಿನಿಂದ ಕಾರ್ಕಳದವರೆಗೆ ಕಂಡು ಬರುತ್ತಾರೆ. ಚಾರ್ಮಾಡಿ ಘಾಟಿನ ಆಸುಪಾಸಿಗೆ ಸೀಮಿತ ಇವರು ತಂದೆ ಕಟ್ಟಿನವರಾಗಿದ್ದಾರೆ. ಭೂತಾರಾಧನೆಯಲ್ಲಿ ನಂಬಿಕೆಯನ್ನು ಇಟ್ಟಿರುವ ಈ ಸಮುದಾಯವು ಭೂತಾರಾಧನೆಯ ಮೂಲಕ ಮಾಟ, ಮಂತ್ರ, ಮೋಡಿಯಂತಹ ಸಂಕೀರ್ಣತೆಯನ್ನು ಗಳಿಸುವ ಪ್ರಯತ್ನ ಮಾಡುತ್ತಿರುವುದು ತೋರುತ್ತದೆ ಎನ್ನುತ್ತಾರೆ. ಈ ಸಮುದಾಯದವರು ಘಟ್ಟದ ಮೇಲಿನಿಂದ ಭೂತಗಳನ್ನು ಕೆಳಕ್ಕೆ ಇಳಿಸಿ ತಂದವರು ನಾವು ಎಂದು ನಂಬಿದ್ದಾರೆ, ಒಬ್ಬ ಮಲೆಕುಡಿಯ ತನ್ನ ಕುಮರಿ ಕೃಷಿಯಲ್ಲಿ ಒಳ್ಳೆಯ ಬೆಳೆಯನ್ನು ತೆಗೆದಾಗ ನೆರೆಯಲ್ಲಿರುವ ಮತ್ತೊಬ್ಬ ಇದನ್ನು ಸಹಿಸಲಾರದೆ ಹೊಟ್ಟೆ ಕಿಚ್ಚು ಪಡುತ್ತಿದ್ದ, ಇದರ ದ್ವೇಷ ಸಾಧನೆಗಾಗಿ ಘಟ್ಟದ ಮೇಲಿನ ಬ್ರಾಹ್ಮಣರಲ್ಲಿಗೆ ಹೋಗಿ, ತನ್ನ ರಕ್ಷಣೆಗೆ ಒಂದು ಭೂತ ಬೇಕು ಎಂದು ಕೇಳುತ್ತಿದ್ದನಂತೆ. ಬ್ರಾಹ್ಮಣರಲ್ಲಿ ಹಲವಾರು ಭೂತಗಳಿದ್ದರೂ ಸಹ ಬ್ರಾಹ್ಮಣರು ಕೊಡಲಿಲ್ಲ, ಮಲೆಕುಡಿಯ ಕಾಡಿಬೇಡಿದಾಗ ಅವನಿಗೆ ಹೊಗೆ ರೂಪದ ಒಂದು ಹೆಣ್ಣು ಭೂತವನ್ನು ಬ್ರಾಹ್ಮಣ ನೀಡುತ್ತಾನೆ. ಈ ಹೆಣ್ಣು ಭೂತವನ್ನು ತಂದು ಪೂಜಿಸಿದ ಇದೇ 'ವರ್ತೆಭೂತ' ಈ ವರ್ತೆಭೂತವನ್ನು ಪೂಜಿಸಿದ ನಂತರ ಕುಮೇರು ಬೆಳೆ ಹೆಚ್ಚು ಸಮೃದ್ಧವಾಗಿ ಬೆಳೆಯುತ್ತದೆ. ಆದರೆ ಕಾಡಿನಲ್ಲಿ ಹರಿಯುವ ಕೋಡಿನ ನೀರು ಬತ್ತಿದ್ದರಿಂದ ಕಾಡಿನಲ್ಲಿ ಗೆಡ್ಡೆ-ಗೆಣಸುಗಳು ಕಡಿಮೆಯಾದವು. ಆಗ 'ವರ್ತೆಭೂತ' ನಾನು ಹಿಂದಕ್ಕೆ ಹೋಗುವುದಾಗಿ ಹೇಳುತ್ತದೆ. ಮಲೆಕುಡಿಯ ಇದಕ್ಕೆ ಶಾಂತಿ ಮಾಡಲು ಪ್ರಯತ್ನ ಮಾಡುತ್ತಾನೆ. ಕಾಲಕಾಲಕ್ಕೆ ಈ ವರ್ತೆಭೂತಕ್ಕೆ ಕೋಲ, ನೇಮ, ಅಗೇಲು ಮಾಡುವುದಾಗಿ ಹೇಳುತ್ತಾನೆ. ಆಗ ಆ ವರ್ತೆಭೂತ ಇಲ್ಲಿಯೇ ನಿಲ್ಲುವುದಕ್ಕೆ ಒಪ್ಪುತ್ತದೆ. ಈಗಲೂ ಸಹ ಇಲ್ಲಿ ಈ ಭೂತ ಸ್ಥಾನಗಳು ಕಂಡುಬರುತ್ತವೆ. ನಾನು ಕ್ಷೇತ್ರಕಾರ್ಯಕ್ಕೆ ಹೋದಲ್ಲೆಲ್ಲಾ ಮಲೆಕುಡಿಯರ ಮನೆಯಲ್ಲಿ ಪ್ರತ್ಯೇಕವಾದ ಭೂತದ ಗುಡಿ, ದೈವಗಳಿಗಾಗಿಯೇ ಸ್ಥಾನವಿದೆ. ಈಗಲೂ ಸಹ ಇಲ್ಲಿ ನೇಮ, ಅಗೇಲು, ಕೋಲಗಳು ನಡೆಸುತ್ತಿರುವುದು ಕಂಡುಬರುತ್ತದೆ. ತಮಗೆ ಕೋಲ, ನೇಮ ನಡೆಸಲು ಸಾಧ್ಯವಾಗದಿದ್ದರೂ ಸಹ, ತಂಬಿಲ ಎಂಬ ಪೂಜೆಗಳು ನಡೆಯುತ್ತಿರುವುದು ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ತಿಳಿದುಬಂದಿರುತ್ತದೆ.

ಈ ಮೇಲ್ಕಂಡ ಅಧ್ಯಯನಗಳ ಉಲ್ಲೇಖಗಳ ಆಧಾರಗಳ ಹಿನ್ನೆಲೆಯಲ್ಲಿ ಇವರ ಮೂಲದ ಕುರಿತು ಅಧ್ಯಯನವನ್ನು ಕ್ಷೇತ್ರಕಾರ್ಯದಲ್ಲಿ ಮಾಡಲಾಗಿದೆ. ಇವರ ಮೂಲದ ಬಗ್ಗೆ ಇಲ್ಲಿ ಕಂಡು ಬಂದಂತಹ ಮುಖ್ಯವಾದ ಅಂಶಗಳೆಂದರೆ ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ, ಬಾರಿಮಲೆ ಈ ೪ ಮಲೆಗಳಲ್ಲಿ ನೆಲೆಸಿರುವ ಸಮುದಾಯದ ಜನರ ಮೂಲ ನೆಲೆ ಬಾರಿಮಲೆ ಯಾಗಿದ್ದು, ನಂತರ ಇವರು ಬಾಂಜಾರಮಲೆಗೆ ಸ್ಥಳಾಂತರಗೊಂಡಿದ್ದಾರೆ, ಇವರ ಮೂಲ ನೆಲೆ ಬಾರಿಮಲೆಯಲ್ಲಿ ಈಗ ಜನವಸತಿ ಇರುವುದಿಲ್ಲ. ಇವರು ಅಂಬಟಮಲೆ, ಇಳಿಮಲೆಗಳಿಗೆ ಹೋಗಿ ನೆಲೆಸಿದ್ದಾರೆ ಇವರ ಮೂಲ ಆರಾದ್ಯ ದೇವರು ಕಾಲಭೈರವೇಶ್ವರ ದೇವಸ್ಥಾನ ಬಾರಿಮಲೆಯಲ್ಲಿದೆ. ಈ ದೇವಸ್ಥಾನಕ್ಕೆ ಇವರು ಪ್ರತಿ ವರ್ಷ ಹೋಗಿ ತಪ್ಪದೆ ಪೂಜೆ ಸಲ್ಲಿಸಿ ಬರುತ್ತಾರೆ. ಇವರು ಮಕ್ಕಳಕಟ್ಟು ಪಂಗಡಕ್ಕೆ ಸೇರಿದ್ದಾರೆ. ಇವರು ಅಳಿಯಕಟ್ಟುಗಿಂತ ಭಿನ್ನವಾಗಿದ್ದಾರೆ. ಈ ನಾಲ್ಕು ಮಲೆ ಪ್ರದೇಶಗಳನ್ನು ಹೊರತುಪಡಿಸಿದಂತೆ ದಕ್ಷಿಣಕನ್ನಡ ಜಿಲ್ಲೆಯಾದ್ಯಂತ ನೆಲೆಸಿರುವ ಮಲೆಕುಡಿಯ ಸಮುದಾಯದವರು ಅಳಿಯ ಸಂತಾನ ಪರಂಪರೆಗೆ ಸೇರಿದ್ದು ತುಳುನಾಡಿನ ಸಂಸ್ಕೃತಿ ಪರಂಪರೆಯ ಒಂದು ಭಾಗವಾಗಿದ್ದಾರೆ. ಇವರು ಭೂತ, ಕೋಲ, ನೇಮಗಳ ಆಚರಣೆ ಮಾಡುತ್ತಾ ಬಂದಿದ್ದಾರೆ ಇವರ ಮೂಲ ಕಾಸರಗೋಡು ಆಗಿದ್ದು, ಇವರ ವಿವಾಹಸಂಬಂಧಗಳು ಕಾಸರಗೋಡು ಕಡೆಗೆ ಈಗಲೂ ನಡೆಯುತ್ತಾ ಬಂದಿರುವುದು ನಮ್ಮ ಕ್ಷೇತ್ರಕಾರ್ಯ ಅಧ್ಯಯನದಿಂದ ತಿಳಿದುಬಂದಿರುತ್ತದೆ.

ಪ್ರೊ. ಹಿ.ಚಿ. ಬೋರಲಿಂಗಯ್ಯ ಅವರು "ಗಿರಿಜನ ನಾಡಿಗೆ ಪಯಣ"ದ ಗ್ರಂಥದಲ್ಲಿ 'ಚಾರ್ಮಾಡಿಯ ಪಾತಾಳಲೋಕ'ದ ಕುರಿತ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ, ಸುಳ್ಯ, ಕಾರ್ಕಳ ತಾಲೂಕಿನ ಕಣಿವೆ, ಕಂದರಗಳಲ್ಲಿ ನೆಲೆಕಂಡಿರುವ ಮಲೆಕುಡಿಯ ಜನಾಂಗ ಆ ಭಾಗದ ಅತ್ಯಂತ ಮೂಲ ನಿವಾಸಿಗಳಲ್ಲಿ ಒಂದು ಎಂದಿದ್ದಾರೆ(ಪುಟ. ೪೯)[೨]. ಶಿರಾಡಿ, ಚಾರ್ಮಾಡಿ ಘಟ್ಟಗಳ ನಡುವಿನ ಹೆಗ್ಗಾಡಿನ ನಡುವೆ ಗುರುತಿಸಿಕೊಂಡಿರುವ 'ಇಳಿಮಲೆ-ಬಂಜಾರುಮಲೆ, ಅಂಬಾಟೆಮಲೆ ಪರ್ವತ ಪ್ರದೇಶಗಳು ಮಲೆಕುಡಿಯರ ತಾಣವಾಗಿವೆ ಎಂದು ತಿಳಿಸಿದ್ದಾರೆ. ಧರ್ಮಸ್ಥಳ, ಉಜಿರೆ, ನೆರೆಯ, ಶಿಶಿಲ, ಮುಂಡಾಜೆ, ಕಕ್ಕಿಂಜೆ, ಹಾಲಂಗಾಯ್ ಮತ್ತು ಚಾರ್ಮಾಡಿ ಇವು ಇವರ ಪ್ರಮುಖ ವ್ಯವಹಾರದ ಸ್ಥಳಗಳು ಎಂದು ತಿಳಿಸಿದ್ದಾರೆ. ಉಜಿರೆ ಮತ್ತು ಧರ್ಮಸ್ಥಳಗಳು ಕೆಲವು ಮಲೆಕುಡಿಯರ ಪಾಲಿಗೆ ಮಹಾನಗರಗಳಾಗಿವೆ. ಇಲ್ಲಿಂದೀಚೆಗೆ ಪ್ರಪಂಚ ನೋಡದವರೇ ಅಧಿಕವಾಗಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ.

## ೨೦೦೧ರ ದಕ್ಷಿಣಕನ್ನಡ ಜಿಲ್ಲೆಯ ಪರಿಶಿಷ್ಟ ಪಂಗಡ ಜನಸಂಖ್ಯೆ

೨೦೦೧ರ ಜನಗಣತಿ ಪ್ರಕಾರ ದಕ್ಷಿಣಕನ್ನಡ ಜಿಲ್ಲೆಯ ಪರಿಶಿಷ್ಟ ಪಂಗಡದವರ ಒಟ್ಟು ಜನಸಂಖ್ಯೆ ೬೨,೩೭ ಆಗಿದ್ದು, ರಾಜ್ಯದಲ್ಲಿ ಒಟ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆ ಪ್ರಮಾಣ ಶೇ.೬.೫೫ಕ್ಕೆ ಹೋಲಿಸುವಾಗ ಈ ಜಿಲ್ಲೆಯ ಪ್ರಮಾಣ ಶೇ. ೧.೮೧ ಆಗಿರುತ್ತದೆ. ಜಿಲ್ಲೆಯ ಒಟ್ಟು ಜನಸಂಖ್ಯೆ ಪ್ರಮಾಣಕ್ಕೆ ಹೋಲಿಸಿದಾಗ ಇದು ಶೇ.೩.೩ ಆಗಿರುತ್ತದೆ.

ತಾಲೂಕುವಾರು ಜನಸಂಖ್ಯೆಯಲ್ಲಿ ಬಂಟ್ವಾಳ ತಾಲೂಕಿಗೆ ೧೪,೮೪೯ ಪ್ರಥಮ, ಪುತ್ತೂರು ತಾಲೂಕು ಶೇ. ೧೩,೦೫೬ ದ್ವಿತೀಯ, ಬೆಳ್ತಂಗಡಿ ತಾಲೂಕು ೧೨,೭೧೬ ತೃತೀಯ ಸ್ಥಾನದಲ್ಲಿರುವುದು ಕಂಡು ಬರುತ್ತದೆ. ಇಲ್ಲಿಯ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯಲ್ಲಿ ಪುರುಷ ಸಂಖ್ಯೆ ೩೧,೫೭೯ ಸ್ತ್ರೀಯರ ಸಂಖ್ಯೆ ೩೧,೩೫೭ ಆಗಿದೆ. ವಿಶೇಷವೆಂದರೆ ಈ ಜಿಲ್ಲೆಯಲ್ಲಿ ಪುರುಷರಿಗಿಂತ ಸ್ತ್ರೀಯರ ಸಂಖ್ಯೆ ಹೆಚ್ಚಿದೆ. ಆದರೆ ಪರಿಶಿಷ್ಟ ಪಂಗಡದಲ್ಲಿ ಸ್ತ್ರೀಯರಿಗಿಂತ ಪುರುಷರ ಸಂಖ್ಯೆ ಹೆಚ್ಚಿದೆ. ಗ್ರಾಮೀಣ ಪ್ರದೇಶದಲ್ಲಿ ಪುರುಷರಿಗಿಂತ ಸ್ತ್ರೀಯರ ಸಂಖ್ಯೆಯಲ್ಲಿ ಹೆಚ್ಚಳ ಕಂಡುಬರುತ್ತದೆ.

**ಕೋಷ್ಟಕ ೧.೨(೫)**

**ದಕ್ಷಿಣ ಕನ್ನಡ ಜಿಲ್ಲೆಯ ಪರಿಶಿಷ್ಟ ಪಂಗಡದ ಜನಸಂಖ್ಯೆಯ ವಿವರ(೨೦೦೧ರ ಜನಗಣತಿಯ ಪ್ರಕಾರ).[೨೮]**

| ಕ್ರಸಂ. | ತಾಲೂಕು | ಒಟ್ಟು | ಪುರುಷರು | ಮಹಿಳೆಯರು |
|---|---|---|---|---|
| ೧ | ಮಂಗಳೂರು | - | - | - |
| | ಗ್ರಾಮ | ೯,೧೯೧ | ೨,೯೬೧ | ೩,೧೩೦ |
| | ನಗರ | ೫,೪೪೪ | ೨,೪೪೮ | ೨,೬೦೦ |
| | **ಒಟ್ಟು** | **೧೧,೫೩೯** | **೫,೮೦೯** | **೫,೬೩೦** |
| ೨ | ಬಂಟ್ವಾಳ | - | - | - |
| | ಗ್ರಾಮ | ೧೪,೪೦೮ | ೭,೨೩೨ | ೭,೧೬೮ |
| | ನಗರ | ೪೪೯ | ೨೨೮ | ೨೨೧ |
| | **ಒಟ್ಟು** | **೧೪,೮೪೯** | **೭,೪೬೦** | **೭,೩೮೯** |
| ೩ | ಬೆಳ್ತಂಗಡಿ | - | - | - |
| | ಗ್ರಾಮ | ೧೨,೪೭೮ | ೬,೨೧೯ | ೬,೨೬೨ |
| | ನಗರ | ೨೩೮ | ೧೧೮ | ೧೨೦ |
| | **ಒಟ್ಟು** | **೧೨,೭೧೩** | **೬,೩೩೪** | **೬,೩೮೨** |
| ೪ | ಪುತ್ತೂರು | - | - | - |
| | ಗ್ರಾಮ | ೧೧,೬೦೧ | ೫,೮೦೬ | ೫,೭೯೫ |
| | ನಗರ | ೧,೪೫೫ | ೭೫೭ | ೬೯೮ |
| | **ಒಟ್ಟು** | **೧೩,೧೫೩** | **೬,೫೬೩** | **೬,೪೯೩** |
| ೫ | ಸುಳ್ಯ | - | - | - |
| | ಗ್ರಾಮ | ೯,೮೩೦ | ೪,೯೫೬ | ೪,೯೧೪ |
| | ನಗರ | ೯೦೬ | ೪೫೭ | ೪೪೯ |
| | **ಒಟ್ಟು** | **೧೦,೭೭೬** | **೫,೪೧೩** | **೫,೩೬೩** |
| ೬ | ದಕ್ಷಿಣ ಕನ್ನಡ ಜಿಲ್ಲೆ | - | - | - |
| | ಗ್ರಾಮ | ೫೪,೪೪೦ | ೨೭,೧೭೧ | ೨೭,೨೬೯ |
| | ನಗರ | ೮,೪೯೬ | ೪,೪೦೮ | ೪,೧೮೮ |
| | ಒಟ್ಟು | ೬೨,೯೩೬ | ೩೧,೫೭೯ | ೩೧,೩೫೭ |

## ಕೋಷ್ಟಕ ೧.೨(೬)

## ಮಲೆಕುಡಿಯರ ಜನಸಂಖ್ಯೆ ವಿವರ(೧೯೯೧ರ ಜನಗಣತಿಯ ಪ್ರಕಾರ).[೨೮]

| ಕ್ರ ಸಂ | ಸಮುದಾಯ | ನೆಲೆಗಳು/ಜಿಲ್ಲೆಗಳು | ಒಟ್ಟು ಜನಸಂಖ್ಯೆ |
|---|---|---|---|
| ೧ | ಮಲೇರು | ಶಿವಮೊಗ್ಗ ದಕ್ಷಿಣ ಕನ್ನಡ, ಚಿಕ್ಕಮಗಳೂರು | ೧೮೪೩ |
| ೨ | ಮಲಯೇ ಕುಡಿ | ದಕ್ಷಿಣ ಕನ್ನಡ ಕೊಳ್ಳೆಗಾಲ | ೫೧೫ |
| ೩ | ಮಲ್ಲತರ್ | ದಕ್ಷಿಣ ಕನ್ನಡ | ೪೮೭ |
| ೪ | ಮಲೈಕುಡಿ | ದಕ್ಷಿಣ ಕನ್ನಡ ಚಿಕ್ಕಮಗಳೂರು | ೭,೬೦೪ |
| ೫ | ಕುಡಿಯ ಮಲೆ ಕುಡಿಯ | ದಕ್ಷಿಣ ಕನ್ನಡ / ಉಡುಪಿ/ ಚಿಕ್ಕಮಗಳೂರು/ ಕೊಡಗು | ೨೨೪೬ |

## ಕೋಷ್ಟಕ ೧.೨(೭)

## ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟುಗಳ ಜನಸಂಖ್ಯೆ ವಿವರ* (೨೦೦೧)

| ಒಟ್ಟು ಜನಸಂಖ್ಯೆ | ಪುರುಷರು | ಮಹಿಳೆಯರು | ಶೇಕಡಾ | ಜಿಲ್ಲೆಯ ಒಟ್ಟು ಜನಸಂಖ್ಯೆ |
|---|---|---|---|---|
| ೬೩,೯೩೬ | ೩೧,೫೭೯ | ೩೧,೩೫೭ | ೩.೩% | ೧೮,೯೭,೭೩೦ |

*Census of India ೨೦೦೧

ಡಾ. ಎ.ಎಸ್. ಪ್ರಭಾಕರ್ ಅವರ ಸಂಪಾದಕತ್ವದ ಆದಿವಾಸಿ ಆಖ್ಯಾನ ಪುಟ.೧೫೪ರಲ್ಲಿ ಆರ್.ವಿಜಯಲಕ್ಷ್ಮಿ ಅವರ ಕರ್ನಾಟಕದ ಬುಡಕಟ್ಟು ನೆಲೆಗಳು ಪುಟ.೧೬೦ರ ಕ್ರಮಸಂಖ್ಯೆ ೨೭ರಲ್ಲಿ ಇವರು ೧೯೯೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ಮಲೆಕುಡಿಯರ ಜನಸಂಖ್ಯೆ ೨,೨೪೬ ಎಂದು ತಿಳಿಸಿದ್ದಾರೆ.[೨೯] ಕಾಡಿನ ಉಪ ಉತ್ಪನ್ನಗಳನ್ನು ನಂಬಿಕೊಂಡು ಬದುಕಿದವರು ಇವರಾಗಿದ್ದಾರೆ. ಇವರು ಹೆಜ್ಜೇನು ಸಂಗ್ರಹಿಸುವುದು, ಮರದ ಹೊಟ್ಟನ್ನು ಸಂಗ್ರಹಿಸುವುದು ಮುಖ್ಯವಾಗಿ ಬಯನಿ ಮರದಿಂದ ಹೆಂಡವನ್ನು ಇಳಿಸುವುದು ಇವರ ಮುಖ್ಯವಾದ ಕಸುಬು ಆಗಿತ್ತು. ಏಲಕ್ಕಿ ಸಂಗ್ರಹಿಸುವುದು ಸೇರಿದಂತೆ ಕೃಷಿ ಕೂಲಿಗಳಾಗಿರುವ ಇವರು ಇಂದಿಗೂ ಕಾಡಿನ ಉಪ ಉತ್ಪನ್ನಗಳನ್ನು ಸಂಗ್ರಹಿಸಿ ಜೀವನ ನಡೆಸುವ ಅನಿವಾರ್ಯತೆಯಲ್ಲಿ ಬದುಕುತ್ತಿದ್ದಾರೆಂದು ಆರ್. ವಿಜಯಲಕ್ಷ್ಮಿ ಅವರು ಅಭಿಪ್ರಾಯಪಟ್ಟಿದ್ದಾರೆ.[೩೦] ಪುಟ ೧೬೧ರಲ್ಲಿ ಕ್ರಸಂ. ೩೧ರಲ್ಲಿ ಮಲೈಕುಡಿಯರ ಕುರಿತು ಮಾಹಿತಿ ಇದೆ. ಮಲೈಕುಡಿಯರು

ಚಿಕ್ಕಮಗಳೂರು, ದಕ್ಷಿಣಕನ್ನಡ ಜಿಲ್ಲೆಯ ಸಹ್ಯಾದ್ರಿ ಪರ್ವತ ಶ್ರೇಣಿಯಲ್ಲಿ ಹೆಚ್ಚಾಗಿ ಕಂಡುಬರುತ್ತಾರೆಂದು ತಿಳಿಸಿರುವ ಇವರು ಮಲೆಕುಡಿಯ, ಮಲೈಕುಡಿ, ಮೇಲಕುಡಿಇವರು ಮೂಲತಹ ಒಂದೇ ಬುಡಕಟ್ಟುಗಳಾಗಿವೆ. ಇವು ಸಮನಾರ್ಥಕ ಹೆಸರುಗಳಾಗಿವೆ. ಈ ಹೆಸರುಗಳು ಬೇರೆ ಬೇರೆ ಸಮುದಾಯಗಳನ್ನು ಪ್ರತಿನಿಧಿಸುವುದಿಲ್ಲ ಎಂಬುದನ್ನು ತಿಳಿಸುತ್ತಾರೆ. ೧೯೯೧ರ ಜನಗಣತಿಯ ಪ್ರಕಾರ ಮಲೈಕುಡಿಗಳ ಜನಸಂಖ್ಯೆ ೭,೭೦೪ ಎಂಬುದನ್ನು ಆರ್. ವಿಜಯಲಕ್ಷ್ಮಿರವರು ತಿಳಿಸಿದ್ದಾರೆ.

### ೧.೮. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ನೆಲೆಗಳು

ಡಾ. ಕೆ.ಶಿವರಾಮಕಾರಂತರು ತಮ್ಮ "ಕುಡಿಯರ ಕೂಸು" ಕಾದಂಬರಿಯಲ್ಲಿ ಮಲೆಕುಡಿಯರು ವಾಸಿಸುವ ನೆಲೆ, ಪ್ರದೇಶಗಳನ್ನು ಕಿರಿಮಲೆ ಮತ್ತು ಹಿರಿಮಲೆ ಎಂದು ಗುರುತಿಸಿದ್ದಾರೆ. ೧೦-೩೦ ಕುಟುಂಬಗಳನ್ನು ಹೊಂದಿದ 'ಕಿರಿಮಲೆ' ಕುಡಿಯರಿಗೆ ಕೆಂಚನೋ ಗುರಿಕಾರನಾಗಿರುತ್ತಾನೆ. ಈ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯರನ್ನು ಇವರು ವಾಸಿಸುವ ಭೂಪ್ರದೇಶದ ಆಧಾರದ ಮೇಲೆ ನಾಲುಮಲೆ ಮತ್ತು ಊರುಮಲೆ ಎಂದು ಗುರುತಿಸಲಾಗಿದೆ. ಬಾರಿಮಲೆ, ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ ಇವರನ್ನು ನಾಲುಮಲೆಯವರೆಂತಲೂ ಈ ಪ್ರದೇಶಗಳನ್ನು ಹೊರತುಪಡಿಸಿರುವ ಗ್ರಾಮ ಜೀವನದೊಂದಿಗೆ ಹೊಂದಿಕೊಂಡು, ತುಳುನಾಡಿನ ಸಂಸ್ಕೃತಿಯ ಅಳಿಯಕಟ್ಟು ಸಂತಾನಕ್ಕೆ ಸೇರಿರುವ ಇವರನ್ನು ಊರುಮಲೆಯವರೆಂತಲೂ ಕರೆಯಲಾಗುತ್ತದೆ. ಮಡಿಕೇರಿಯ ಪ್ರದೇಶದಲ್ಲಿ ವಾಸಿಸುವವರನ್ನು ಕುಡಿಯರೆಂತಲೂ, ಚಿಕ್ಕಮಗಳೂರು ಭಾಗದಲ್ಲಿ ವಾಸಿಸುವವರನ್ನು ಮಲೆಯರು, ಮಲೇರು ಎಂತಲೂ, ಶೃಂಗೇರಿ, ಹೆಬ್ರಿ, ಕಳಸ ಮತ್ತು ಬೆಳ್ತಂಗಡಿ ತಾಲೂಕಿನ ಕುತ್ಲೂರು ಪರಿಸರದಲ್ಲಿ ನೆಲೆಸಿರುವವರನ್ನು ಗೌಡ, ಗೌಡ್ಲು ಎಂತಲೂ ಕರೆಯುತ್ತಾರೆ. ಧರ್ಮಸ್ಥಳದ ನೆಲೆಯಲ್ಲಿರುವವರನ್ನು ಬರ್ಕೆ ಎಂತಲೂ, ಕನ್ಯಾನದ ಅಕ್ಕರೆಕೋಡಿ ಮತ್ತು ಪಾಣಾಜೆಯಲ್ಲಿ ನೆಲೆಸಿರುವವರನ್ನು ಮಲೆತ್ತಾಯ ಎಂತಲೂ ಕರೆಯಲಾಗುವುದು. ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯಲ್ಲಿ ಮಂಗಳೂರು, ಬೆಳ್ತಂಗಡಿ, ಸುಳ್ಯ, ಪುತ್ತೂರು, ಬಂಟ್ವಾಳ ತಾಲೂಕಿನ ವ್ಯಾಪ್ತಿಯ ಪ್ರದೇಶಗಳಲ್ಲಿ ಮಲೆಕುಡಿಯರು ನೆಲೆಸಿದ್ದಾರೆ. ಇದರಲ್ಲಿ ಬೆಳ್ತಂಗಡಿ ತಾಲೂಕಿನಲ್ಲಿ ಅತೀ ಹೆಚ್ಚು ಮಲೆಕುಡಿಯ ಜನಸಂಖ್ಯೆ ಇರುತ್ತದೆ. ನಂತರ ಸುಳ್ಯ ತಾಲೂಕು ಎರಡನೇ ಸ್ಥಾನದಲ್ಲಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಜಿಲ್ಲೆಯ ೫ ತಾಲೂಕುಗಳಲ್ಲಿ ೨೪೨ ಪ್ರದೇಶಗಳಲ್ಲಿ ಒಟ್ಟು ೨,೨೫೮ ಕುಟುಂಬಗಳನ್ನು ಗುರುತಿಸಲಾಗಿದೆ. ಇದರಲ್ಲಿ ೫೦ ಪ್ರದೇಶಗಳು ಮತ್ತು ೫೨೩ ಕುಟುಂಬಗಳನ್ನು ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಫೋಷ್ಟಾರೆ ೧.೨(ಅ)ರಲ್ಲಿ ಅಂಕಿ-ಅಂಶಗಳ ನೀಡಲಾಗಿದೆ.

### ೧. ಬೆಳ್ತಂಗಡಿ ತಾಲ್ಲೂಕಿನ ಮಲೆಕುಡಿಯರ ನೆಲೆಗಳು

ಬಂಜಾರುಮಲೆ, ಚಾರ್ಮಾಡಿ, ಅಂಬಟಮಲೆ, ಇಳಿಮಲೆ, ಹಾಲಂಗಾಯ್-ನೆರಿಯ, ಪರ್ಪಳ, ಕಾಟಾಜಿ, ಬಂರಾಗಯ್, ಮುನ್ನಡ್ಕ, ಸುಲ್ಕೇರಿ, ನಾಯಿದಗುರಿ, ಕೊರೊಕೋಡಿ, ಮಚ್ಚಿನ, ಮಲ್ಲ, ನಾರಾವಿ ಅಣ್ಣಾರು, ನಡ್ತಿಲೆ, ತೋಟತ್ತಡಿ, ಕಾಯರ್‌ದಡ್ಕ, ದಿಡುಪೆ, ನಡ, ಅರಳಕೆ, ಕಾಡಾಜೆ, ಅಣಿಯೂರು, ಅಳಂಬ, ಪೆರ್ನಾಲೆ, ಪರ್ಪಳ, ಬಾಂದಡ್ಕ, ಹೊಸಂಗಡಿ, ಪಂಜಾಲು, ಬಾರ್ತಾಜೆ, ಸವಣಾಲು, ಮಾಪಾಲು ನಾರಾವಿ, ಬಂಗಾಡಿ ನಾವೂರು, ಬಲ್ಲಮಂಜ, ನಿಡ್ಲೆ, ಪರ್ಪಳ, ಬಾಂದಾಡ್ಕ, ಕಾಟಾಜೆ, ಪೆರ್ನಾಳಮಲೆ, ಸಾಂಗಾಯ್ಯಮಲೆ, ಅಣ್ಣಲಿಕೆ, ಕಲ್ಲಂಜ ಉಜಿರೆ, ಬೆಲಾಳು, ನಡ್ತಿಲ, ಬೆಳ್ತಂಗಡಿ, ಕುತ್ಲೂರು, ಶಿರ್ಲಾಲು,

ನಾವೂರು, ಮಲವಂತಿಕೆ, ಕೋಲೊಡಿ-ನೆರಿಯ, ಪುದುವೆಟ್ಟು, ಕಡ್ಡಿ ಬಾಗಿಲು, ಗಂಡಿಬಾಗಿಲು, ಬಂಗಾಡಿ, ಮಾಪಾಲುನಾರಾವಿ, ಸವಣಾಲು, ವಾಲ್ತಾಜೆ-ನಾರಾವಿ,ಅಳಂಬ, ಪದ್ಯಂದಡ್ಕ-ಹೊಸಅಂಗಡಿ, ಅಣಾರು, ಕಾಟಾಜೆ, ಅಣಿಯೂರು, ಮೀಯ್ಯಾರು, ಮಲ್ಲ-ಪೆರ್ನಾಲೆ, ಬಾಂದಡ್ಕ, ಶಿವಗಿರಿ-ಕೊಯ್ಯೂರು, ಕಲ್ಲಂಜಉಜರೆ, ಮಲವಂತಿಕೆ, ಚಾರ್ಮಾಡಿ, ನೆಡ್ತಿಲ, ಗೋಟತ್ತಾಡಿ, ಕಾಯರ್‌ದಡ್ಕ, ಮುದ್ದಿಗೆ, ಧರ್ಮಸ್ಥಳ, ನಿಡ್ಲೆ, ಕೊಕ್ಕಡ, ಅರಶಿನಮಗ್ಗಿ, ಶಿಬಾಜೆ, ಶಿಶಿಲ, ಪಟ್ರಮೆ, ಉಜರೆ, ಮುಳಿಕ್ಕಾರು ಬೈಲು, ಕನ್ಯಾಡಿ, ಇರ್ನಾಡ್ ಬೈಲು, ಕಟ್ಟದ ಬೈಲು, ಕುಮೇರಡ್ಕ, ಮುಂಟ್ರಪ್ಪಾಡಿ, ಕಂಜಿವಾರು, ಅಂಟೆಮಜಲು, ನಡುಗುಡ್ಡೆ, ಅಲ್ಲಾಜಿ- ನೇತ್ರಾವತಿ, ಪುಲಿಮಾರು, ಜೋಡು ದೇವಸ್ಥಾನ, ಮಲ್ಲರಮಾಡಿ, ಕಂಚಿಮಾರು, ಸೋಮತ್ತಡ್ಕ(ಉಜಿರೆ), ಬಲ್ಲಮಂಜ, ಕಾಯರ್‌ಪ್ಪಾಡಿ(ಉಜಿರೆ), ಬಲ್ಮಠ ಕಾತ್ರ, ಅಂಟೆಮಜಲು(ಆಲೂರು), ಕುಳಂಜರೋಡಿ, ಆಲೂರು ಬೈಲು, ಕುರ್ಲೆ, ಕೊಕ್ಕಡ, ನಿಡ್ಲೆ, ಮುಂಟ್ರುಪಳಿಕೆ, ಪೊನ್ನತ್ತಿಮಾರು ಪಟ್ರಮೆ, ಕಕ್ಕುದೋಳಿ, ಪಿತ್ತಲಕೋಡಿ, ಮೆದಿನ-ಹತ್ಯಡ್ಕ, ಕಾಂತ್ರೇಲ್(ಹತ್ಯಡ್ಕ), ಪಾತ್ರಿಮಜಲು, ಕಲ್ಲಡ್ಕ, ಮುದ್ದಿಗೆ, ಮುಂಡೂರಪಲ್ಕೆ, ಪಟ್ರಮೆ, ಪತ್ತಿಮಾರು ಶಿಬಾಜೆ, ಪಾರ್ಪಿಕಲ್ಲು, ದರ್ಬೆತ್ತಡ್ಕ, ಪಲಸತ್ತಡ್ಕ, ಮುಂಟ್ರುಪ್ಪಾಡಿ(ಧರ್ಮಸ್ಥಳ), ಅಂಟೆಮಜಲು, ಅಂಜೆತ್ತಡ್ಕ, ಇಲಂತಿಲ, ಅಣ್ಣಾರು(ಕಕ್ಕಿಂಜ),ಶಿವಗಿರಿ ಕೊಯ್ಯೂರು,

**೨. ಸುಳ್ಯ ತಾಲ್ಲೂಕಿನ ಮಲೆಕುಡಿಯರ ನೆಲೆಗಳು**

ಸುಬ್ರಮಣ್ಯ, ನುಚ್ಚಿಲ, ಅರಿಗುಡಿ, ಆದಿಸುಬ್ರಮಣ್ಯ, ಕಲ್ಲಜಡ್ಕ, ದೇವರಗದ್ದೆ, ಅಜ್ಜಿಹಿತ್ತಲು, ಕಲ್ಲುಗುಡ್ಡೆ, ಪರ್ವತಮಕ್ಕಿ, ಹರಿಹರ ಬಾಳುಗೋಡು,ಕುಲಕುಂದಕಾಲೊನಿ, ಹಾಡಿಕಲ್ಲು, ಕಲ್ಲುಗುಡ್ಡೆ, ಮಡಪ್ಪಾಡಿ, ದೊಡ್ಡತೋಟ, ಸಂಕೇಶ, ಪೂಮಲೆ, ಕೊಯಿನಾಡು, ಸಂಪಾಜೆ, ಅರೆಕಲ್ಲು, ಕೈಕಂಬ, ಬಿಳಿನೆಲೆ, ನರ್ಸರಿ ಬಳಿನೆಲೆ, ಮಾನಡ್ಕ, ಮರ್ಕಂಜ, ಜೋಡುಪಾಲು, ಮಾಡಾವುಬೆಳ್ಳಾರೆ, ಕೆಂಬ್ರಾಜೆಮಿತ್ತೂರು, ಗುತ್ತಿಗಾರು, ಪಂಜ, ದೆವಚ್ಚಿಲ, ಕೊಲ್ಲಮೊಗ್ರು, ಕೊಡಿಕಜೆ, ಮರ್ಕಜೆ, ಅರಂತೋಡು, ಉಬ್ಬಡ್ಕ, ಅಮರಮಡ್ನೂರು, ಅಂಚಿನಡ್ಕ, ಹರಿಯಡ್ಕ, ಕಕ್ಕದೊಳಿ, ಅಡತಲೆ, ನೆಕ್ಕರೆ, ಅರಮನೆಕಾಯ.

**೩. ಪುತ್ತೂರು ತಾಲ್ಲೂಕಿನ ಮಲೆಕುಡಿಯರ ನೆಲೆಗಳು**

ಗುಂಡ್ಯ ತೋಟ, ಶಿರಾಡಿ, ಸಿರಿಬಾಗಿಲು, ಕೊಂಬಾರು, ಬೊಟ್ಟಡ್ಕ ಸಿರಿ ಬಾಗಿಲು, ಕೊಂಬಾರು, ಕಾಪಾರು, ಎನಿಕ್ಕಲ, ಕೊಂಬಾರು, ಕೆಂಜಾಳ, ಪಿಲಿಕಜೆ, ಪೈಂತಿ ಮೊಗೇರು ಇರ್ದೆ ಬೆಟ್ಟಂಪ್ಪಾಡಿ, ಕೈಕಂಬ, ಕಲ್ಲಡ್ಕ, ಕುಂಬ್ರ ಒಳಮೊಗರು, ಕಾಪಿನ ಬಾಗಿಲು, ಕೌಕ್ರಾಡಿ, ಕಾರ್ಪಿ ಕಲ್ಲು, ಹೊಸಮಜಲು, ಬಲ್ಯ, ಬನಾರಿ, ಕುಟ್ರುಪ್ಪಾಡಿ, ಸುಭಾಷ್ ನಗರ ಕುಟ್ರುಪ್ಪಾಡಿ, ಪೆರಾಬೆ ಕುಂತೂರು ಗ್ರಾಮ, ಆಲಂತಾಯ ಗೊಳಿ ತೊಟ್ಟು, ಕೋಟೆ ಬಾಗಿಲು ಬಿಳಿನೆಲೆ, ಹೊಸತೋಟ ಹರಸಿನ ಮಗ್ಗಿ, ಚಂಬರ ಕಟ್ಟೆ ಪಾಣಾಜೆ, ಕೀಲಂಪ್ಪಾಡಿ ಪಾಣಾಜೆ, ಪದ್ಯಂಬೆಟ್ಟು ಪಾಣಾಜೆ, ಮನ್ನಂಗಳ ಪಾಣಾಜೆ, ಕಾಂತಾರು ಕೆಂಜರ ಪಾಣಾಜೆ, ಪಾಣಾಜೆ, ಆರ್ಲಪದವು(ಪಾಣಾಜೆ ಹತ್ತಿರ), ಪೆರ್ಮನಡ(ಕುರ್ಲೆ), ಒಟೆಕಜೆ(ಕುರ್ಲೆ), ಕಾಯರ್‌ಪ್ಪಾಡಿ, ಕಾಂತಾರು-ಕೆಂಜರ, ಮೊಟ್ಟೆಡ್ಕ, ಸಿರಿಬಾಗಿಲು, ಉಪ್ಪಿನಂಗಡಿ.

**೪. ಬಂಟ್ವಾಳ ತಾಲ್ಲೂಕು ಮಲೆಕುಡಿಯರ ನೆಲೆಗಳು**

ಅಕ್ಕರಕೋಡಿ ಕನ್ಯಾನ, ಶಿರಂಕಲ್ಲು ಕನ್ಯಾನ, ಪಾದೆಕಲ್ಲು ಕನ್ಯಾನ, ನಿರ್ಪಾಜೆ ಕನ್ಯಾನ, ಎರ್ಮಾಳ, ಎರ್ಮಾಳ ಪದವು, ಅರಳ, ಬಟ್ಯಡ್ಕ, ಕರಿಂಗಾನ,ಕಲ್ಲಡ್ಕ, ಅರಂತೋಡು ಕಲ್ಲಡ್ಕ, ಸಾಲೇತ್ತೂರು ಕಲ್ಲಡ್ಕ,

ಸೋರ್ನಾಡು, ಪಂಜಿಕಲ್ಲು ಪದವು, ವಾಮದ ಪದವು, ಕುದ್ರೆಬೆಟ್ಟು ಕಲ್ಲಡ್ಕ, ಅಜ್ಜನಡ್ಕ, ಬೆದ್ರ, ರಾಯ್‌ವಿಟ್ಲ, ಬೋಳಂತೂರು, ಸಂಗಬೆಟ್ಟು, ತಡ್ಕಲ್, ಚೈನ್ಯೈಕೊಡಿ, ಮೂಲ್ಯಾರು, ಅಣ್ಣಳಿಕೆ ಪಂಜಿಕಲ್ಲು ಪದವು, ಸಿದ್ದಕಟ್ಟೆ, ಅರಳ, ಪಡ್ಜಲ್, ಬಲ್ಲಮಂಜ, ಪಂಜಲ ಪದವು.

ನಾನು ಅಧ್ಯಯನ ಮಾಡಿದ ದಕ್ಷಿಣ ಕನ್ನಡ ಜಿಲ್ಲೆಯ, ಮಲೆಕುಡಿಯ ಸಮುದಾಯದ ಕುಟುಂಬಗಳನ್ನು ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡಿದ್ದು, ಬೆಳ್ತಂಗಡಿ ತಾಲ್ಲೂಕಿನಲ್ಲಿ ೩೮೯, ಸುಳ್ಯ ತಾಲ್ಲೂಕಿನಲ್ಲಿ ೫೧, ಪುತ್ತೂರು ತಾಲ್ಲೂಕಿನಲ್ಲಿ ೪೬, ಬಂಟ್ವಾಳ ತಾಲ್ಲೂಕಿನಲ್ಲಿ ೩೫, ಮಂಗಳೂರು ಮಹಾನಗರ ಪಾಲಿಕೆಯಲ್ಲಿ ೨ ಕುಟುಂಬಗಳು, ಜಿಲ್ಲೆಯಲ್ಲಿ ಒಟ್ಟು ೫೨೩ ಕುಟುಂಬಗಳನ್ನು ಮಾದರಿ ಸಮೀಕ್ಷೆಗೆ ಪರಿಗಣಿಸಲಾಗಿದೆ. ಕೆಳಗಿನ ಘೋಷ್ವಾರೆ ೧.೨(ಅ)ನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ಕುಟುಂಬಗಳ ಸಮೀಕ್ಷೆಯ ವಿವರವನ್ನು ನೀಡಲಾಗಿದೆ.

**ಘೋಷ್ವಾರೆ ೧.೨(ಅ)**

**ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ಕುಟುಂಬಗಳ ಸಮೀಕ್ಷೆಯ ವಿವರ.**

| ಕ್ರ.ಸಂ. | ತಾಲ್ಲೂಕು | ಒಟ್ಟು ಸ್ಥಳಗಳು | ಒಟ್ಟು ಕುಟುಂಬಗಳು | ಮಾದರಿ ಸಮೀಕ್ಷೆಗೆ ಪರಿಗಣಿಸಲಾದ | |
|---|---|---|---|---|---|
| | | | | ಸ್ಥಳಗಳು | ಕುಟುಂಬಗಳು |
| ೧. | ಬೆಳ್ತಂಗಡಿ | ೧೩೩ | ೧,೭೫೩ | ೨೫ | ೩೮೯ |
| ೨. | ಸುಳ್ಯ | ೪೦ | ೨೨೬ | ೯ | ೫೧ |
| ೩. | ಪುತ್ತೂರು | ೩೫ | ೧೫೯ | ೬ | ೪೬ |
| ೪. | ಬಂಟ್ವಾಳ | ೩೧ | ೧೧೪ | ೧೧ | ೩೫ |
| ೫. | ಮಂಗಳೂರು ಮಹಾನಗರ ಪಾಲಿಕೆ | ೪ | ೬ | ೨ | ೨ |
| ಒಟ್ಟು | | ೨೪೩ | ೨,೨೫೮ | ೫೦ | ೫೨೩ |

ಮೇಲಿನ ಕೋಷ್ಟಕದಲ್ಲಿ ತೋರಿಸಿರುವಂತೆ ಬೆಳ್ತಂಗಡಿ ತಾಲ್ಲೂಕಿನಲ್ಲಿ ಅತಿ ಹೆಚ್ಚು ಸಂಖ್ಯೆಯ ಮಲೆಕುಡಿಯ ಸಮುದಾಯದವರು ವಾಸವಾಗಿದ್ದಾರೆ. ಸುಳ್ಯ ತಾಲ್ಲೂಕು ಮಲೆಕುಡಿ ಸಮುದಾಯದ ಜನಸಂಖ್ಯೆಯಲ್ಲಿ ಎರಡನೇ ಸ್ಥಾನವನ್ನು ಹೊಂದಿದ್ದು, ಪುತ್ತೂರು ಮತ್ತು ಭಂಟ್ವಾಳ ತಾಲ್ಲೂಕುಗಳು ಮೂರು ಮತ್ತು ನಾಲ್ಕನೇ ಸ್ಥಾನದಲ್ಲಿವೆ. ಈ ಕುಟುಂಬಗಳ ಮಾದರಿ ಸಮೀಕ್ಷೆಯಲ್ಲಿ ದೊರೆತ ಮಾಹಿತಿ ಆಧಾರದ ಮೇಲೆ ಪ್ರಸ್ತುತ ಅಧ್ಯಯನವನ್ನು ನಡೆಸಲಾಗಿದೆ. ಈ ಜಿಲ್ಲೆಯಲ್ಲಿ ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ಪ್ರದೇಶಗಳನ್ನು ಕೋಷ್ಟಕ ೧.೨(ಉ)ರಲ್ಲಿ ನಾವು ಕಾಣಬಹುದು.

**ಕೋಷ್ಟಕ ೧.೨(೯)**

**ಪ್ರಸ್ತುತ ಅಧ್ಯಯನದಲ್ಲಿ ಕುಟುಂಬವಾರು ಮಾದರಿ ಸಮೀಕ್ಷೆಗೆ ಆಯ್ಕೆ ಮಾಡಿಕೊಂಡ ಪ್ರದೇಶಗಳು**

| ಕ್ರ.ಸಂ. | ತಾಲೂಕು | ನೆಲೆಗಳು |
|---|---|---|
| ೧ | ಬೆಳ್ತಂಗಡಿ | ಬೆಳ್ತಂಗಡಿ, ಬಾಂಜಾರುಮಲೆ, ಅಂಬಟಮಲೆ, ಹಾಲಂಗಾಯ್, ಗಂಡಿಬಾಗಿಲು, ನೆರಿಯಾ, ಇಳಿಮಲೆ, ಕೊಕ್ಕಡ, ಹತ್ಯಡ್ಕ, ನಾರಾವಿ, ಶಿಶಿಲ, ಶಿಬಾಜೆ, ನಾಯಿದಗುರಿ, ಸುಲ್ಕೇರಿ, ಉಜಿರೆ, ಧರ್ಮಸ್ಥಳ, ಸವನಾಳು, ಕುತ್ಲೂರು, ಚಾರ್ಮಾಡಿ, ಕಡುರುದ್ದ್ಯಾವರ, ಅಲಂಗಾರು, ಬಲ್ಲಮಂಜ, ಪಡೆಜಲ್, ಕುವೆಟ್ಟು |
| ೨ | ಸುಳ್ಯ | ಸುಬ್ರಮಣ್ಯ, ನುಚ್ಚಿಲ, ಅರಿಗುಡಿ, ಕಲ್ಲುಗುಡ್ಡೆ, ಅಮರಮಗ್ನೂರು, ಮಡಪ್ಪಾಡಿ, ಆದಿಸುಬ್ರಮಣ್ಯ, ದೇವರಗದ್ದೆ, ಹರಿಹರ ಬಾಳೆಗೋಡು, ಮುಂಡೋಕಜೆ. |
| ೩ | ಪುತ್ತೂರು | ಕಲ್ಲಡ್ಕ, ಪೈಂತಿಮೊಗೇರು, ಬೆಟ್ಟಂಪಾಡಿ, ಪಾಣಾಜೆ, ಗುಂಡ್ಯ ತೋಟ, ಅರಿಶಿನಮಗ್ಗಿ, ಗೋಳಿತಟ್ಟು, ಉಪ್ಪಿನಂಗಡಿ. |
| ೪ | ಬಂಟ್ವಾಳ | ಅಕ್ಕರೆ ಕೋಡಿ, ಕನ್ಯಾನ, ಪಾದೇಕಲ್ಲು, ಶಿರಂಕಲ್ಲು, ನೀರ್ಪಾಜೆ, ಕರಿಂಗಾನ, ತೋಟ-ಬುಳಂತೂರು, ಕುದುರೆ ಬಟ್ಟು, ಸೊರ್ನಾಡು, ಪಂಜಿಕಲ್ಲು, ಎರ್ಮಳ, ಬೋಳಂತೂರು. |

**ಟಿಪ್ಪಣಿಗಳು**

೧. ಕಪಿಲ್ ಮೋಹನ್(ಸಂ)., **ಪೊಲಿ ಕೆನರಾ ೨೦೦,** ಕೆಯ್ಯೂರು ಕಿಞ್ಞಣ್ಣ ರೈ, **'ನನ್ನ ಬಾಲ್ಯದ ದಕ್ಷಿಣ ಕನ್ನಡ'**, ದಕ್ಷಿಣ ಕನ್ನಡ ಜಿಲ್ಲಾಡಳಿತ, ಮಂಗಳೂರು, ಪು. ೮೮, ೨೦೦೦.

೨. ಕಪಿಲ್ ಮೋಹನ್(ಸಂ)., **ಪೊಲಿ ಕೆನರಾ ೨೦೦,** ಕೇಶವ ಉಚ್ಚಿಲ, 'ಶತಮಾನದ ಬೀಸುನೋಟ', ದಕ್ಷಿಣ ಕನ್ನಡ ಜಿಲ್ಲಾಡಳಿತ, ಮಂಗಳೂರು, ೨೦೦೦.

೩. ಮೀನಾಕ್ಷಿ ಕೆ. **ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ ದೇವಾಂಗ ಸಮುದಾಯದ ಅಧ್ಯಯನ(ಪಿಎಚ್.ಡಿ ಮಹಾಪ್ರಬಂಧ)**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೯-೨೩, ೨೦೦೨.

೪. ಅದೇ ಪು.೧೯, ೨೦೦೨.

೫. ಅದೇ ಪು.೨೨, ೨೦೦೨.

೬. ಕಪಿಲ್ ಮೋಹನ್(ಸಂ)., **ಪೊಲಿ ಕೆನರಾ ೨೦೦,** ಗಣಪತಿಲಾಲ್ ಐಗಳ್, 'ಶತಮಾನದ ಬೀಸುನೋಟ', ದಕ್ಷಿಣ ಕನ್ನಡ ಜಿಲ್ಲಾಡಳಿತ, ಮಂಗಳೂರು, ೨೦೦೦.

೭. ವಿವೇಕ ರೈ. ಬಿ.ಎ(ಪ್ರಸಂ)., **ತುಳುಸಾಹಿತ್ಯ ಚರಿತ್ರೆ,** ಸಂಪುಟ ೧, ಕೆಯ್ಯೂರು ರಘುಪತಿಭಟ್, 'ತುಳುನಾಡಿನ ಸ್ಥಳನಾಮ ಸ್ವರೂಪ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦೭, ೨೦೦೭.

೮. ದಕ್ಷಿಣ ಕನ್ನಡ ಜಿಲ್ಲಾ ಜನಗಣತಿ, ೨೦೧೧ರ ಅಂತರ್ಜಾಲ ಮಾಹಿತಿ, ೨೦೧೨.

೯. ವಿವೇಕ ರೈ. ಬಿ.ಎ(ಪ್ರಸಂ)., **ತುಳುಸಾಹಿತ್ಯ ಚರಿತ್ರೆ,** ಸಂಪುಟ ೧, ಕೆಯ್ಯೂರು ರಘುಪತಿಭಟ್, 'ತುಳುನಾಡಿನ ಸ್ಥಳನಾಮ ಸ್ವರೂಪ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦೭, ೨೦೦೭.

೧೦. ಅದೇ ಪು.೧೦೭, ೨೦೦೭.

೧೧. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು. ೪೭, ೧೯೯೧.

೧೨. ಪ್ರಭಾಕರ .ಎ.ಎಸ್(ಸಂ)., **ಆದಿವಾಸಿ ಆಖ್ಯಾನ,** ವಿಜಯಲಕ್ಷ್ಮಿ ಆರ್, 'ಕರ್ನಾಟಕದ ಬುಡಕಟ್ಟು ನೆಲೆಗಳು', ಸಿದ್ದಾರ್ಥ ಪ್ರಕಾಶನ, ಹೊಸಪೇಟೆ, ಪುಟ. ೧೬೦-೧೭೦, ೨೦೧೦.

೧೩. ಪ್ರಶಾಂತ ಹೆಚ್.ಡಿ, ಜನಸಮುದಾಯ ಸಂಪುಟ, **ಕರ್ನಾಟಕ ರಾಜ್ಯ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ.೨೦, ೨೦೦೦.

೧೪. **ಲಾರೆನ್ಸ್ ಡಿಸೋಜ** ಅವರ 'Malekudiyas a Primitive Tribe of South India' ಮತ್ತು MALEKUDIYAS, UNESCO, CO-ACTION LEARNING CENTRE, MANGALORE, ೧೯೯೪.

೧೫. ವಿವೇಕ ರೈ. ಬಿ.ಎ ಮತ್ತು ಯದುಪತಿಗೌಡ., **ಮಲೆಕುಡಿಯರು,** ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೬.

೧೬. ಬರಗೂರು ರಾಮಚಂದ್ರಪ್ಪ(ಸಂ)., ಉಪಸಂಸ್ಕೃತಿ ಮಾಲೆ, ರಾಮಚಂದ್ರ ಆಚಾರ್ ಡಿ.ವಿ, **ಕುಡಿಯರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೦೩, ೧೯೯೩.

೧೭. ಪ್ರಶಾಂತ ಹೆಚ್.ಡಿ, ಜನಸಮುದಾಯ ಸಂಪುಟ, **ಕರ್ನಾಟಕ ರಾಜ್ಯ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ.೨೦, ೨೦೦೦.

೧೮. ಹಿ.ಚಿ. ಬೋರಲಿಂಗಯ್ಯ, ಎ.ಎಸ್. ಪ್ರಭಾಕರ(ಸಂ)., **ಬುಡಕಟ್ಟು ಅಧ್ಯಯನ-೪,** ಮೈತ್ರಿ ಕೆ.ಎಂ., 'ಮಲೇರು ಮಾಲೇರು, ಕೆಲವು ಸಂದೇಹಗಳು ಮತ್ತು ಉತ್ತರಗಳು', ಪ್ರಸಾರಾಂಗ, ಪು. ೧೯೫, ೨೦೦೫.

೧೯. ಅದೇ ಪು. ೨೦೨, ೨೦೦೫.

೨೦. ಅದೇ ಪು. ೨೦೨, ೨೦೦೫.

೨೧. Central Acts and ordinances Law and Parlimentary affairs secretariate Notification No. Law 58 LCR 1977.

೨೨. ಎಚ್ಚೆಸ್ಕೆ (ಸಂ)., **ಅವಲೋಕನ,** ವಿಶ್ವಕನ್ನಡ ಸಮ್ಮೇಳನ, ಶಿವರಾಮ ಕಾರಾಂತ ಕೆ, 'ಜನಾಂಗ ವೈವಿದ್ಯ', ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ.೪೧, ೧೯೮೬.

೨೩. ಅದೇ ಪುಟ.೪೧, ೧೯೮೬.

೨೪. ಅದೇ ಪುಟ.೪೨, ೧೯೮೬.

೨೫. ಬಾಲಗುರುಮೂರ್ತಿ, 'ಪಾರ್ದಿ', *ಪ್ರಜಾವಾಣಿ* ದಿನಪತ್ರಿಕೆ, ಪು. ೧, ಸಾಪ್ತಾಹಿಕ ಪುರವಣಿ, ದಿ.೧.೬.೨೦೦೮.

೨೬. ಹೆಚ್.ಜೆ. ಲಕ್ಕಪ್ಪಗೌಡ(ಪ್ರ.ಸಂ)., **ಕರ್ನಾಟಕ ಬುಡಕಟ್ಟುಗಳು ಸಂಪುಟ.೧,** ನಾಗಣ್ಣ ಡಿ, 'ಕುಡಿಯರು ಮಲೆಕುಡಿಯ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೯೮, ಪು. ೬೧೧, ೬೧೨, ೧೯೯೮.

೨೭. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು. ೪೯, ೧೯೯೧.

೨೮. ಪ್ರಭಾಕರ .ಎ.ಎಸ್(ಸಂ)., **ಆದಿವಾಸಿ ಆಖ್ಯಾನ,** ವಿಜಯಲಕ್ಷ್ಮಿ ಆರ್, 'ಕರ್ನಾಟಕದ ಬುಡಕಟ್ಟು ನೆಲೆಗಳು', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪುಟ. ೧೬೦, ೨೦೦೬.

೨೯. ಅದೇ ಪುಟ. ೧೬೧, ೨೦೦೬.

೩೦. ಅದೇ ಪುಟ. ೧೬೨, ೨೦೦೬.

# ಅಧ್ಯಾಯ ಎರಡು

# ಮಲೆಕುಡಿಯರ ಸಾಮಾಜಿಕ ಸ್ಥಿತಿಗತಿ

# ಮಲೆಕುಡಿಯರ ಸಾಮಾಜಿಕ ಸ್ಥಿತಿಗತಿ

## ೨.೧. ಮಲೆಕುಡಿಯರು ಎಂದರೆ ಯಾರು?

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ, ಸುಳ್ಯ, ಉಡುಪಿ ಜಿಲ್ಲೆಯ ಕಾರ್ಕಳ, ಕುಂದಾಪುರ, ಮಡಿಕೇರಿಯ ವಿರಾಜಪೇಟೆ ತಾಲೂಕುಗಳು ಹಾಗೂ ಈಗಿನ ಕೇರಳದ ಕಾಸರಗೋಡು ಗಡಿ ಭಾಗದ ಪ್ರದೇಶಗಳಲ್ಲಿ ಮಲೆಕುಡಿಯರು ವಾಸವಾಗಿರುತ್ತಾರೆ. ಈ ಸಮುದಾಯವನ್ನು ಕುರಿತು ಹಲವಾರು ವಿದ್ವಾಂಸರು ಅಧ್ಯಯನಗಳನ್ನು ನಡೆಸಿದ್ದಾರೆ. ದಕ್ಷಿಣ ಭಾರತದ ಬುಡಕಟ್ಟು ಮತ್ತು ಜಾತಿಗಳನ್ನು ಕುರಿತು ಒಂದು ಶತಮಾನದ ಹಿಂದೆಯೇ ಪ್ರಕಟಿಸಿದ ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಾಚಾರಿಯವರು ಗುರುತಿಸಿರುವಂತೆ ಕುಡಿಯ ಮತ್ತು ಮಲೆಕುಡಿಯ ಗುಂಪುಗಳು ಎರಡು ಒಂದೇ ಎಂದು ಹೇಳಿದ್ದಾರೆ. ಧರ್ಮಸ್ಥಳದಿಂದ ೨೮ ಕಿ.ಮೀ. ದೂರದ ನೆರಿಯಾ ಎಂಬಲ್ಲಿ ಕುಡಿಯ ಬುಡಕಟ್ಟಿನ ಹಿರಿಯರ ಪ್ರಕಾರ ಈ ಎರಡೂ ಬುಡಕಟ್ಟು ಒಂದೇ(ಪುಟ. ೬೧೯)[೧] ಎಂದು ಡಿ. ನಾಗಣ್ಣರವರು ತಿಳಿಸಿದ್ದಾರೆ. ಇತರ ಮಲೆಕುಡಿಯ ಪೈಕಿಗಳಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ. ಇವರಲ್ಲಿ ವ್ಯವಹಾರ ಸಂಬಂಧವಿದೆ ಕೆಲವರ ಪ್ರಕಾರ ಕುಡಿಯ ಬುಡಕಟ್ಟುನಿಂದ ಮಲೆಕುಡಿಯರು ಕುಡಿಯರಿಗೆ ಹೆಣ್ಣನ್ನು ಕೊಡುವುದಿಲ್ಲ ಎಂಬ ಅಭಿಪ್ರಾಯವಿದೆ. ಇದಕ್ಕೆ ಬೇರೆಯದಾದ ಭೌಗೋಳಿಕ ಆರ್ಥಿಕ ಕಾರಣಗಳಿದ್ದಿರಬಹುದು. ಮಡಿಕೇರಿ ಕಡೆಯ ಕುಡಿಯ ಬುಡಕಟ್ಟು ಜನರು ಧರ್ಮಸ್ಥಳದ ಸುತ್ತ ಮುತ್ತಲಿನ ಮಲೆಕುಡಿಯ ಹೆಣ್ಣುಮಕ್ಕಳನ್ನು ಮದುವೆ ಯಾಗಿರುವುದೆಂದು ಹೇಳಿದ್ದಾರೆ. ಆಧುನಿಕತೆಯ ಬದಲಾವಣೆಗಳಿಗೆ ಹೊಂದಿಕೊಂಡಿರುವ ಕುಡಿಯ-ಮಲೆಕುಡಿಯರು ತಮ್ಮ ಹಳೆಯ ರೀತಿ, ರಿವಾಜುಗಳನ್ನು ಸಂಪ್ರದಾಯ ಆಚರಣೆಗಳನ್ನು ಬಿಟ್ಟು ಒಂದಾಗುವುದನ್ನು ರೂಢಿ ಮಾಡಿಕೊಳುತ್ತಿದ್ದಾರೆ ಎಂಬ ಅಂಶವನ್ನು ಡಿ.ನಾಗಣ್ಣರವರು ಗುರ್ತಿಸಿದ್ದಾರೆ. ದ.ಕ.ಜಿಲ್ಲೆಯ ಮಲೆಕುಡಿಯರನ್ನು ಮಲೆಕುಡಿಯ, ಕುಡಿಯ, ಬಾರಿಕೆ ಗೌಡ, ಗೌಡ ಇತ್ಯಾದಿ ಹೆಸರುಗಳಿಂದ ಕರೆಯುವರು.

ಡಾ. ಶಿವರಾಮಕಾರಂತರು ತಮ್ಮ "ಕುಡಿಯರ ಕೂಸು" ಕಾದಂಬರಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸಹ್ಯಾದ್ರಿ ಸೆರಗಿನಲ್ಲಿ ಮಲೆಕುಡಿಯರೆಂಬ ಒಂದು ಪ್ರತ್ಯೇಕವಾದ ಗುಂಪು ಕೆಲವು ಶತಮಾನಗಳಿಂದಲೂ

ವಾಸಿಸುತ್ತಾ ಬಂದಿದೆ ಎಂದಿದ್ದಾರೆ. ಇವರಿಂದ ಇವರು ಈ ಪ್ರದೇಶದ ಪ್ರಾಚೀನವಾದ, ಮೂಲ ನಿವಾಸಿಗಳು ಎಂಬುದು ತಿಳಿಯುತ್ತದೆ. ತೀರ ಮೊದಲು ಇವರು ಇಲ್ಲಿಗೆ ಎಲ್ಲಿಂದ ಬಂದರೋ ಏನೋ?[೨] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ಇವರ ಮೂಲದ ಬಗ್ಗೆ ಡಾ. ಶಿವರಾಮ ಕಾರಂತರಿಗೆ ಇದ್ದ ಅನುಮಾನ, ಪ್ರಶ್ನೆಯನ್ನು ಸೂಚಿಸುತ್ತದೆ.

ಸಾಮಾನ್ಯವಾಗಿ ಮಲೆಕುಡಿಯರೆಂದರೆ ಬೆಟ್ಟ, ಗುಡ್ಡಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಜನಾಂಗ ಎಂಬ ಅಭಿಪ್ರಾಯ ನಮ್ಮಲ್ಲಿ ಬರುತ್ತದೆ. ಹೌದು, ಆದರೆ ಈ ಹೆಸರೇ ಈ ಜನಾಂಗಕ್ಕೆ ಏಕೆ ಬಂತು ಎಂಬುದೇ ನಮಗೆಲ್ಲರಿಗೂ ಕುತೂಹಲದ ವಿಷಯವಾಗಿದೆ. ಪ್ರತಿಯೊಂದು ಜನಾಂಗಕ್ಕೂ ತಮ್ಮದೇ ಆದ ಹಿನ್ನಲೆ ಕುರುಹುಗಳು ಐತಿಹ್ಯವಾಗಿ ಬಂದಿರುತ್ತದೆ. ಐತಿಹ್ಯಗಳಿಗೂ ಮತ್ತು ವಾಸ್ತವ ಅರ್ಥಗಳಿಗೆ ಬೇರೆಯದೇ ರೂಪವಿರುತ್ತದೆ. ಹೀಗೆ 'ಮಲೆಕುಡಿಯರು' ಯಾರು ಎಂಬ ಪ್ರಶ್ನೆಗೆ ನಾವು ಐತಿಹ್ಯಗಳು ಮತ್ತು ವಾಸ್ತವ್ಯತೆಗಳ ಆಧಾರದ ಮೇಲೆ ಅಧ್ಯಯನದ ಮಾಡಿದಾಗ ಲಭ್ಯವಾದ ಮಾಹಿತಿಗಳು ಮುಖ್ಯವಾಗಿವೆ. ವಾಸ್ತವಿಕ ಕಲ್ಪನೆಯನ್ನು ಇಟ್ಟುಕೊಂಡು ಮಲೆಕುಡಿಯರು ಯಾರು ಎಂದು ವಿಶ್ಲೇಷಿಸಲು ಹೊರಟರೆ ಸತ್ಯಕ್ಕೆ ಹತ್ತಿರವಾಗಬಹುದಂತಹ ಉತ್ತರ ದೊರಕಬಹುದು. ಮಲೆಕುಡಿಯರು ಸುಮಾರು ೨೦೦೦ ವರ್ಷಗಳ ಹಿಂದಿನಿಂದಲೂ ವಾಸಿಸುತ್ತಿರುವ ಜನಾಂಗವಾಗಿದ್ದು, ಆ ಕಾಲದಲ್ಲಿ ಹೆಚ್ಚಿನ ಪ್ರದೇಶ ಕಾಡಿನಿಂದ ಆವೃತವಾಗಿದ್ದು ಹಳ್ಳಿ, ಗ್ರಾಮ ಜೀವನದ ಕುರುಹು ಇರಲಿಲ್ಲ. ಆಗ ವಾಸಿಸುತ್ತಿರುವ ಇಲ್ಲಿಯ ಜನಾಂಗ ಕಾಡುಗಳಲ್ಲಿಯೇ ತಾತ್ಕಾಲಿಕ ಬಿಡಾರಗಳನ್ನು ಹೂಡಿಕೊಂಡು ಜೀವನ ನಡೆಸುತ್ತಿದ್ದರು. ಆಗ ಎಲ್ಲರೂ ಕಾಡುವಾಸಿಗಳೇ ಆದ್ದರಿಂದ ಪ್ರಾಚೀನರು ಯಾರೂ ಅವರ ಕುರಿತು ಅವರ ಮೂಲ ಹುಟ್ಟುಗಳ ಬಗ್ಗೆ ನಿಖರಪಡಿಸಿದ್ದು ಇಲ್ಲ. ಏನಿದ್ದರೂ ಐತಿಹ್ಯಗಳೇ ಸಾಕ್ಷಿಯಾಗಿದ್ದು, ಯಾವುದೇ ರೀತಿಯ ತರ್ಕಕ್ಕೆ ಸಿಲುಕುವ ಆಧಾರಗಳಿಲ್ಲ, ಮಲೆಕುಡಿಯರ ಮೂಲ ಹಾಗೂ ಹುಟ್ಟಿನ ಕುರಿತು ಸ್ಪಷ್ಟವಾದ ಆಧಾರಗಳು ಲಭ್ಯವಾಗುತ್ತಿಲ್ಲ.

ನಾವು ಮಲೆಕುಡಿಯರ ಮೂಲದ ಕುರಿತು, ಮಲೆಕುಡಿಯರ ಪದದ ಹಿಂದೆ ಹೋದರೆ ಜನಪದ ಕತೆಗೂ ಮತ್ತು ವಾಸ್ತವಿಕ ಪದದ ಅರ್ಥಕ್ಕೆ ಹೆಚ್ಚಿನದೇನೂ ಅಂತರವಿಲ್ಲ. 'ಮಲೆಕುಡಿಯ' ಎಂಬ ಪದವು ಮಲೆ ಮತ್ತು ಕುಡಿಯ ಎಂಬ ಎರಡು ಪದಗಳ ಸಂಯೋಜನೆಯಾಗಿದೆ. ತುಳು ಮತ್ತು ಕನ್ನಡದಲ್ಲಿ 'ಮಲೆ' ಎಂದರೆ ಬೆಟ್ಟ ಅಡವಿ, ಬೆಂಗಾಡು, ಹೆಚ್ಚು ಮಳೆ ಬೀಳುವ ಪರ್ವತ ಪ್ರದೇಶ ಎಂಬ ಅರ್ಥವಿದೆ. 'ಕುಡಿ' ಎಂದರೆ ತುದಿ, ಕೊನೆ, ತಪ್ಪಲು ಎಂದು ಎರಡು ಸಹೋದರ ಭಾಷೆಯಲ್ಲೂ ಆಗುತ್ತದೆ. ಹೀಗೆ ಪದದ ಉತ್ಪತ್ತಿ ಹಿಂದೆ ಹೋದಾಗ ಮಲೆಕುಡಿಯರು ಎಂದರೆ ಪರ್ವತಗಳ ತುದಿಯಲ್ಲಿ ವಾಸಿಸುವ ಜನಾಂಗ ಎಂಬ ಅರ್ಥವನ್ನು ಕೊಡುತ್ತದೆ. ಹಾಗಾಗಿ ಮಲೆಗಳ ತುದಿಯಲ್ಲಿ ವಾಸವಾಗಿರುವವರನ್ನು ಮಲೆಕುಡಿಯರೆಂದು ಕರೆಯಲಾಗುತ್ತದೆ. ಇದುವರೆಗೆ ನಡೆದ ಎಲ್ಲಾ ಅಧ್ಯಯನಗಳಲ್ಲಿ ಸಂಶೋಧಕರು ವಿದ್ವಾಂಸಕರು ಇದೇ ಅರ್ಥವನ್ನು ನೀಡಿದ್ದಾರೆ.

ಅಲ್ಲದೆ ಇನ್ನೊಂದರ್ಥದಲ್ಲಿ 'ಕುಡಿ' ಎಂದರೆ ಸಂತಾನವೆಂದೂ ಅರ್ಥವಾಗುತ್ತದೆ. 'ಕುಡಿ' ಎಂಬ ಪದ ದ್ರಾವಿಡ ಪದ. ಇದಕ್ಕೆ ಮಲೆಯಾಳಿ ಭಾಷೆಯಲ್ಲಿ ಗುಡಿಸಲು ಎಂಬ ಅರ್ಥವೂ ಇದೆ. ಕುಡಿಯೊಕ್ಕಲಿಗ ಎಂಬ ಪದವೂ ಇದೆ. ಕುಡಿಯೊಕ್ಕಲಿಗ ಎಂದರೆ ಬೆಟ್ಟದಲ್ಲಿ ಕೃಷಿ ಮಾಡುವವನು ಎಂಬರ್ಥವಿದೆ.

ಇವನು ಕುಮರಿ ಬೆಳೆಯನ್ನು ಬೆಳೆಯುವುದರಿಂದ ಕುಮರಿಗೌಡ, ಕುಡಿಯೊಕ್ಕಲಿಗ ಮುಂತಾದ ವಿಶ್ಲೇಷಣೆಗಳು ಇವೆ.

ಮಲೆಕುಡಿಯರ ಕುಲ ಮೂಲ ಕಥೆ, ಐತಿಹ್ಯಗಳ ಪ್ರಕಾರ ಅವರ ಸಮೂಹವು ಭೂಮಿಯ ಮೇಲೆ ಹೇಗೆ ಹುಟ್ಟಿಕೊಂಡಿತು? ತಮ್ಮ ಕುಲ ಮೂಲ ಪುರುಷ ಯಾರು ಎಂಬುದರ ಕುರಿತು ಹಲವಾರು ಕಥೆಗಳನ್ನು ಕೇಳುತ್ತೇವೆ. ಈ ಸಮುದಾಯದವರ ಮೂಲಪುರುಷ ಕುರಿತ ಹಲವಾರು ಐತಿಹ್ಯಗಳಿರುವುದನ್ನು ಎನ್.ಪಿ.ಶಂಕರನಾರಾಯಣರಾವ್‌ರವರು ತಮ್ಮ ಮೂರು ಗಿರಿಜನ ಸಮುದಾಯಗಳಲ್ಲಿ ಕೇಳಿದ ಐತಿಹ್ಯಗಳು ಪುಟ ೬೯ ಬುಡಕಟ್ಟು ಅಧ್ಯಯನ ೨, ೨೦೦೪ರಲ್ಲಿ ವಿವರಿಸಿದ್ದಾರೆ.[೩]

ಕುಡಿಯ, ಮಲೆಕುಡಿಯ ಎಂದು ಹೆಸರಾಗಿರುವ ಜನ ಪಶ್ಚಿಮಘಟ್ಟಗಳ ದಟ್ಟ ಅರಣ್ಯಗಳಲ್ಲಿ ವಾಸ ಮಾಡುವ ಜನ. ಈಗ ಕಾಡು ಕಣ್ಮರೆಯಾಗಿ ಜನ ಮಾತ್ರ ಇದ್ದಾರೆ. ಮಲೆಕುಡಿಯರು ದಕ್ಷಿಣ ಕನ್ನಡ ಪ್ರದೇಶದ ಕಾರ್ಕಳ, ಬೆಳ್ತಂಗಡಿ, ಪುತ್ತೂರು ಮತ್ತು ಈಗ ಕೇರಳದಲ್ಲಿ ಸೇರಿ ಹೋಗಿರದ ಕಾಸರಗೋಡು ತಾಲ್ಲೂಕುಗಳಲ್ಲಿ ವಾಸಮಾಡುತ್ತಾರೆ. ಕುಡಿಯರು ಕೊಡಗಿನ ಮಡಿಕೇರಿ ತಾಲೂಕಿಗೆ ಸೀಮಿತರು ಭಾಷೆಯ ದೃಷ್ಟಿಯಿಂದ ಕುಡಿಯರು ಮೊದಲಿಗೆ ತಮ್ಮದೇ ಭಾಷೆಯಾದ ಕುಡಿಯ ತಕ್ ಎಂಬುದನ್ನು ಆಡುತ್ತಿದ್ದು, ಈಗ ಬಹುಮಟ್ಟಿಗೆ ಕೊಡವ ಭಾಷೆ ಸಮುದಾಯದವರಾಗಿದ್ದಾರೆ. ಮಲೆಕುಡಿಯರು ತುಳು ಭಾಷಿಗಳು. ಆದರೆ ಆ ಹೆಸರಿನ ಅಡಿಯಲ್ಲಿ ಎರಡು ಪ್ರತ್ಯೇಕ ಗಿರಿಜನ ಸಮುದಾಯಗಳಿವೆ. ಎಂದು ಅಭಿಪ್ರಾಯಪಟ್ಟಿದ್ದಾರೆ. ಪುಟ. ೬೯.[೪]

ತುಳುನಾಡಿನಲ್ಲಿ ಅಳಿಯ ಸಂತಾನ ಪದ್ಧತಿಯನ್ನು ಜಾರಿ ಮಾಡಿದ ಭೂತಾಳಪಾಂಡ್ಯನ ಕಟ್ಟುಕಟ್ಟಳೆಯಲ್ಲಿ ಪ್ರಸ್ತಾಪವಾಗಿರುವ ೧೮ ಸಮುದಾಯಗಳಲ್ಲಿ ಈ ಮಲೆಕುಡಿಯರು ಸೇರಿದ್ದಾರೆ. ಕಾರ್ಕಳದಿಂದ ಕಾಸರಗೋಡಿನವರೆಗೆ ಬೆಟ್ಟಗಳ ತುದಿಗಳಲ್ಲಿ ಮೇಲಿನ ಭಾಗದ ಇಳಿಜಾರುಗಳಲ್ಲಿ ದೊಡ್ಡ ದೊಡ್ಡ ತಾಯಿಕಟ್ಟು ಕುಟುಂಬಗಳಲ್ಲಿ ಈ ಜನರು ವಾಸ ಮಾಡುತ್ತಿದ್ದರು. ಈಗ ಆ ತಾಲೂಕುಗಳ ಇತರೆ ಪ್ರದೇಶಗಳಲ್ಲಿ ಹರಡಿಕೊಂಡಿದ್ದಾರೆ. ಧರ್ಮಸ್ಥಳ, ಕುಕ್ಕೆ ಸುಬ್ರಮಣ್ಯ, ಮಚ್ಚಿನದ ಪಂಚಲಿಂಗೇಶ್ವರ, ಹೀಗೆ ಹಲವಾರು ಪ್ರಸಿದ್ಧ ಕ್ಷೇತ್ರಗಳಲ್ಲಿ ಈ ಜನರು ದೇವಾಲಯಗಳ ಹಲವಾರು ಊಳಿಗಗಳನ್ನು ಮಾಡುತ್ತಾರೆ. ಎಂದಿದ್ದಾರೆ. ಆ ಕಾಲದಿಂದ ಈ ಕಾಲದವರೆಗೆ ಈ ಪರಂಪರೆ ಇವರಲ್ಲಿ ಈಗಲೂ ಕಂಡುಬರುತ್ತದೆ.

ನಾಲುಮಲೆ ಕುಡಿಯರು ತುಳು ಭಾಷೆಯನ್ನು ಮಾತನಾಡುತ್ತಿದ್ದಾರೆ. ಇವರ ಈ ಭಾಷೆ ತುಂಬಾ ಹಳೆಯದಾದ ಬುಡಕಟ್ಟು ಭಾಷೆಯಾಗಿದೆ. ಇವರು ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುವುದಿಲ್ಲ. ಇವರು ಮಕ್ಕಳ ಕಟ್ಟಿಗೆ ಸೇರಿದ್ದಾರೆ. ಇವರ ಸಂತತಿ ಕುಲ ತಂದೆಯಿಂದ ಮಗನಿಗೆ ಬರುತ್ತದೆ. ಬೆಳ್ತಂಗಡಿ ತಾಲೂಕಿನ ನೆರಿಯಾ ವ್ಯಾಪ್ತಿಯಲ್ಲಿ ಬರುವ ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ ಮತ್ತು ಮೂಡಿಗೆರೆ ತಾಲೂಕಿಗೆ ಸೇರಿರುವ ಬಾರಿಮಲೆ ಈ ನಾಲ್ಕು ಮಲೆಗಳ ವ್ಯಾಪ್ತಿಯಲ್ಲಿ ಬರುವವರನ್ನು ನಾಲುಮಲೆಗಳೆಂದು ಕರೆಯುವರು.

ಮಲೆಕುಡಿಯರು ಯಾರೆಂಬುದರ ಬಗ್ಗೆ ಹಲವಾರು ಕಥೆಗಳು, ಐತಿಹ್ಯಗಳು ಕೇಳಿಬರುತ್ತವೆ. ಇವರು ತಮ್ಮನ್ನು ಶಿವಗೌರಿಯ ಸಂತಾನವೆಂತಲೂ ಧರ್ಮರಾಯ ಕೊಟ್ಟ ವರಗಳಂತಲೂ ವರ್ತೆಭೂತವನ್ನು

ಘಟ್ಟದಿಂದ ಕೆಳಕ್ಕೆ ಕರೆತಂದವರಂತಲೂ ಶೇಷನನ್ನು ಉರಿಯಿಂದ ಕಾಪಾಡಿದ ಮೂಲ ಪುರುಷರಾದ ಕುಕ್ಕೆ ಲಿಂಗ ಇವರ ಮೂಲ ಮಲೆಕುಡಿಯರಾಗಿದ್ದಾರೆಂಬ ಉಲ್ಲೇಖಗಳು ಮತ್ತು ಐತಿಹ್ಯಗಳು ಇವರು ಹೇಳುವ ಕಥೆಗಳಲ್ಲಿವೆ. ಆದರೆ ಈ ಕಥೆಗಳು ಕೇವಲ ಮೌಖಿಕ ಕಥನಗಳಾಗಿವೆ.ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಕೊಪ್ಪ, ಮೂಡಿಗೆರೆ ತಾಲೂಕುಗಳಲ್ಲಿ ಇವರಿಗೆ ಗೌಡ್ಲು, ಕೊಡುಗೆ ಗೌಡರು ಎಂದಲೂ ಕರೆಯುತ್ತಾರೆ. ಇವರು ಕಾರ್ಕಳ ತಾಲ್ಲೂಕಿನ ಕಬ್ಬಿನಾತಿಯೆಂಬಲ್ಲಿದ್ದಾರೆ. ಇವರಿಗೂ ಈ ನಾಲುಮಲೆಯವರಿಗೆ ವಿವಾಹ ಸಂಬಂಧಗಳು ಏರ್ಪಟ್ಟಿವೆ.

ಸರ್ಕಾರ ಹೊರಡಿಸಿರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಪಟ್ಟಿ(ತಿದ್ದುಪಡಿ) ಅಧಿನಿಯಮ ೧೯೫೬, ಷಡ್ಯೂಲ್ III, ಮೈಸೂರು (೧)೭ರ ಪ್ರಕಾರ ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ 'Malai Kudies' ಮಲೈಕುಡೀಸ್ ಎಂದು ಇದೆ.[8]

Part VIII (4) 11, ಪ್ರಕಾರ kudiyas or Malekudies ಎಂಬ ಉಲ್ಲೇಖವಿದೆ. ದಕ್ಷಿಣಕನ್ನಡ ಜಿಲ್ಲೆ, ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕುಗಳಲ್ಲಿ ಇವರನ್ನು ಪರಿಶಿಷ್ಟ ಪಂಗಡ ಎಂದು ಪರಿಗಣಿಸಲಾಗಿದೆ. Part VIII (7)2, ಪ್ರಕಾರ ಕೊಡಗು ಜಿಲ್ಲೆಯಲ್ಲಿ kudiyas(ಕುಡಿಯಾಸ್)ರನ್ನು ಪರಿಶಿಷ್ಟ ಪಂಗಡ ಎಂದು ಪರಿಗಣಿಸಲಾಗಿದೆ.

**ಕರ್ನಾಟಕ ಸರ್ಕಾರದ ಪಂಗಡಗಳ ಪಟ್ಟಿಯಲ್ಲಿ ಕ್ರಸಂ.೩೧ರಲ್ಲಿ Malaikudi ಎಂದಿವೆ.**

Central Acts and ordinances Law and Parlimentary affairs secretriate Notification No. Law 58 LCR 1977. Order:Notification No.03 C 12016/34, 76-SC T-V.Dated 27-July-1942. Gary India ministory of Home affairs(under power 5 1899) in sub section(2) of sanction 1 of the S.C & S.T orders(Amendment) Act 1976. (108 of 1976) list of S.T serial No.31. Malaikudi ಎಂದಿದೆ. ಈ ಆದೇಶದಲ್ಲಿ ಮಲೆಕುಡಿಯ, ಮಲೆತ್ತಾಯ ಹೆಸರುಗಳಿಲ್ಲದೇ ಇರುವುದು ಗೋಚರವಾಗುತ್ತದೆ.

ಕೇರಳ ಮತ್ತು ಮದ್ರಾಸ್ ಸರ್ಕಾರದ ಅಧಿನಿಯಮದ ಪ್ರಕಾರ ಇವರನ್ನು(kudiyas) ಪರಿಶಿಷ್ಟ ಪಂಗಡ ಎಂದು ಪರಿಗಣಿಸಲಾಗಿದೆ. ಎಂಬುದನ್ನು ಎ.ಎ.ಡಿ. ಲೂಯಿಸ್‌ರವರು 'Tribes of Mysore'ನಲ್ಲಿ ತಿಳಿಸಿದ್ದಾರೆ.

ಕನ್ನಡ ವಿಶ್ವವಿದ್ಯಾಲಯ, ಪ್ರಸಾರಾಂಗ ವತಿಯಿಂದ ಹಿ.ಚಿ. ಬೋರಲಿಂಗಯ್ಯ ಮತ್ತು ಎ.ಎಸ್.ಪ್ರಭಾಕರ ಅವರ ಸಂಪಾದಕತ್ವದಲ್ಲಿ ೨೦೦೫ರಲ್ಲಿ ಪ್ರಕಟವಾದ ಬುಡಕಟ್ಟು ಅಧ್ಯಯನ-೪ರ ಸಂಪುಟದಲ್ಲಿ ಪುಟ. ೧೯೫ರಲ್ಲಿ ಕೆ.ಎಂ. ಮೈತ್ರಿರವರ **'ಮಲೇರು ಮತ್ತು ಮಾಲೇರು ಕೆಲವು ಸಂದೇಹಗಳು ಮತು ಉತ್ತರಗಳು'** ಎಂಬ ಲೇಖನದಲ್ಲಿ ಮಲೇರು, ಕುಡಿಯ, ಮೆಲಕುಡಿ, ಮಲೈಕುಡಿ, ಮಲಯೆಕಂಡಿ, ಮಾಲೇರು ಕುರಿತಂತೆ ಇರುವ ಸಂದೇಹಗಳು ಮತ್ತು ಇವರಿಗೆ ಇರುವ ಸಂಮಿದಾನಾತ್ಮಕ ಸೌಲಭ್ಯಗಳನ್ನು ಪಡೆಯುವಲ್ಲಿನ ಸಂದರ್ಭದಲ್ಲಿ ಗೊಂದಲಗಳ ಕುರಿತು ವಿಶ್ಲೇಷಣೆ ಮಾಡಿದ್ದಾರೆ.

**ಮಲೈಕುಡಿ(Malaikudi):** ಕರ್ನಾಟಕದ ಸಹ್ಯಾದ್ರಿ ಪರ್ವತಶ್ರೇಣಿಯ ದಕ್ಷಿಣಕನ್ನಡ, ಚಿಕ್ಕಮಗಳ ಕೇರಳದ ಕಣ್ಣನೂರು ಕಾಸರಗೋಡು ಜಿಲ್ಲೆಗಳಲ್ಲಿ ನೆಲೆಸಿರುವ ಮಲೈಕುಡಿಗಳು ಮಲೆಯೂರು, ಮಕ್ಕಳಾಗಿದ್ದು, ಎಂದು ಎಂ. ಮೈತ್ರಿಯವರು ಹೇಳಿದ್ದಾರೆ. ಮಲೆ ಎಂದರೆ ಬೆಟ್ಟ, ಕುಡಿ ಎಂದರೆ ಎತ್ತರ ಅಥವಾ ಮಗು ಎಂದರ್ಥ ಎಂದು ಪುಟ. ೨೦೧ರಲ್ಲಿ ಹೇಳುತ್ತಾರೆ. ಮಲೈಕುಡಿಗಳ ಹಿನ್ನೆಲೆಯನ್ನು ಕುಡಿಯ ಬುಡಕಟ್ಟಿನಲ್ಲಿ ಪ್ರಸ್ತಾಪಿಸಲಾಗಿದೆ.

**ಮಲೈಕುಡಿ:** ೧೯೫೦ರಲ್ಲಿ ಇವರನ್ನು ಮಲೇರು ಎಂದು ೧೯೭೬ರಲ್ಲಿ ಮಲೆಕುಡಿ ಎಂದು ಕರೆಯಲಾಗಿದೆ. ೧೯೭೭ರ ಪರಿಷ್ಕೃತಪಟ್ಟಿಯಲ್ಲಿ ಕರ್ನಾಟಕದಲ್ಲಿ ಮಲಕುಡಿ, ಮಲೈಕುಡಿ, ಮಲಯೇಕಂಡಿ ಎಂದು ಕರೆಯಲಾಗುವುದು.[೬]

## ೨.೨. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ವರ್ಗೀಕರಣ

ಭಾರತದ ಬುಡಕಟ್ಟು ಸಮುದಾಯದ ಅಧ್ಯಯನದಲ್ಲಿ ಬುಡಕಟ್ಟು ಸಮುದಾಯದ ವರ್ಗೀಕರಣವನ್ನು ಆ ಸಮುದಾಯದ ಭೌಗೋಳಿಕ ಪರಿಸರದ ಹಿನ್ನೆಲೆ, ವಾಸದ ಸ್ವರೂಪವನ್ನಾಧರಿಸಿ ಈ ಸಮುದಾಯಗಳನ್ನು ತೀ.ನಂ. ಶಂಕರನಾರಾಯಣರವರು ತಮ್ಮ ಭಾರತದ ಬುಡಕಟ್ಟು ಅಧ್ಯಯನದಲ್ಲಿ ಭೌಗೋಳಿಕ ಹಾಗೂ ಸಾಂಸ್ಕೃತಿಕ ಆಧಾರದ ಮೇಲೆ ದಕ್ಷಿಣ ವಲಯ, ಮಧ್ಯ ವಲಯ ಮತ್ತು ಈಶಾನ್ಯವಲಯ ಎಂದು ಮೂರು ವಲಯಗಳನ್ನಾಗಿ ವರ್ಗೀಕರಿಸಿದ್ದಾರೆ(ಆದಿವಾಸಿ ಆಖ್ಯಾನ, ಪು.೪೨). ಇವರು ಇದೇ ಪುಟ ೪೩ರಲ್ಲಿ ವೃತ್ತಿಗೆ ಅನುಗುಣವಾಗಿ ೧. ಬೇಟೆಗಾರರು, ಮೀನುಗಾರರು ಮತ್ತು ಆಹಾರ ಸಂಗ್ರಹಕಾರರು, ೨. ಸ್ಥಳಾಂತರ ಬೇಸಾಯಗಾರರು, ೩. ರೈತರು ವಿವಿಧ ಕಸುಬಿನವರು ಜಾತಿಗಳು, ೪. ಅಲೆಮಾರಿ ಬುಡಕಟ್ಟುಗಳು ಎಂದು ನಾಲ್ಕು ವಿಭಾಗಗಳಾಗಿ ವರ್ಗೀಕರಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯವನ್ನು ಇವರು ವಾಸದ ಪ್ರದೇಶ, ಭೌಗೋಳಿಕ ಹಿನ್ನೆಲೆ, ವೃತ್ತಿ, ವಲಸೆ ಸ್ವರೂಪದ ಆಧಾರದ ಮೇಲೆ ೧. ಮೂಲ ಪಾರಂಪರಿಕ ಚದುರಿದ ಪ್ರದೇಶಗಳು. ೨. ಅರಣ್ಯವಾಸಿಗಳು. ೩. ಗ್ರಾಮವಾಸಿಗಳು. ೪. ನಗರವಾಸಿಗಳು. ೫. ನಿರಾಶ್ರಿತರು ಎಂದು ವರ್ಗೀಕರಿಸಬಹುದು.

### ಊರುಮಲೆ ಕುಡಿಯರು ಮತ್ತು ನಾಲುಮಲೆ ಕುಡಿಯರು

ಎನ್.ಪಿ. ಶಂಕರ ನಾರಾಯಣರಾವ್‌ರವರು ಊರುಮಲೆಕುಡಿಯರ ಸಮುದಾಯದ ಜೀವನ ಪರಂಪರೆ, ಸಂಸ್ಕೃತಿ, ಆಚಾರಗಳ ಕುರಿತು ವಿಶ್ಲೇಷಣೆಯನ್ನು ಮಾಡಿದ್ದಾರೆ. ಇವರು ತುಳುವ ಸಂಸ್ಕೃತಿಯ ಪಾಲುದಾರರು, ಭೂತಾಳಪಾಂಡ್ಯನ ಕಟ್ಟಳೆಗಳಿಗೆ ಒಳಗಾಗಿರುವ ಇವರು ಮಾತನಾಡುವ ಭಾಷೆ ತುಳು ಭಾಷೆಯಾಗಿದೆ.[೭] ಅಳಿಯ ಸಂತಾನ ಪದ್ಧತಿ, ಭೂತಾರಾಧನೆಗಳಲ್ಲಿ ಇವರು ತುಳುವ ಸಂಸ್ಕೃತಿಯ ಪಾಲುದಾರು ಎಂದು ಆದಿವಾಸಿ ಆಖ್ಯಾನದ ಪುಟ. ೨೨೪ರಲ್ಲಿ ಅಭಿಪ್ರಾಯಪಟ್ಟಿದ್ದಾರೆ. ಭೂತಾಳ ಪಾಂಡ್ಯನ ಶಾಸನದಲ್ಲಿ ಪ್ರಸ್ತಾಪವಾಗಿರುವ ಇವರು ತಾಯಿ ಕಟ್ಟಿನವರಾಗಿದ್ದು, ಕಾಸರಗೋಡಿನಿಂದ ಕಾರ್ಕಳದವರೆಗೆ ಕಂಡುಬರುತ್ತಾರೆ. ಚಾರ್ಮಾಡಿ ಘಾಟಿನ ಆಸುಪಾಸಿಗೆ ಸೀಮಿತ ಇವರು ತಂದೆ ಕಟ್ಟಿನವರಾಗಿದ್ದಾರೆ. ಭೂತಾರಾಧನೆಯಲ್ಲಿ ನಂಬಿಕೆಯನ್ನು ಇಟ್ಟಿರುವ ಈ ಸಮುದಾಯವು ಭೂತಾರಾಧನೆಯ

ಮೂಲಕ ಮಾಟ, ಮಂತ್ರ, ಮೋಡಿಯಂತಹ ಸಂಕೀರ್ಣತೆಯನ್ನು ಗಳಿಸುವ ಪ್ರಯತ್ನ ಮಾಡುತ್ತಿರುವುದು ತೋರುತ್ತದೆ ಎನ್ನುತ್ತಾರೆ. ಈ ಸಮುದಾಯದವರು ಘಟ್ಟದ ಮೇಲಿನಿಂದ ಭೂತಗಳನ್ನು ಕೆಳಕ್ಕೆ ಇಳಿಸಿ ತಂದವರು ನಾವು ಎಂದು ನಂಬಿದ್ದಾರೆ. ಒಬ್ಬ ಮಲೆಕುಡಿಯ ತನ್ನ ಕುಮರಿ ಕೃಷಿಯಲ್ಲಿ ಒಳ್ಳೆಯ ಬೆಳೆಯನ್ನು ತೆಗೆದಾಗ ನೆರೆಯಲ್ಲಿರುವ ಮತ್ತೊಬ್ಬ ಇದನ್ನು ಸಹಿಸಲಾರದೆ ಹೊಟ್ಟೆಕಿಚ್ಚು ಪಡುತ್ತಿದ್ದ. ಇದರ ದ್ವೇಷ ಸಾಧನೆಗಾಗಿ ಘಟ್ಟದ ಮೇಲಿನ ಬ್ರಾಹ್ಮಣರಲ್ಲಿಗೆ ಹೋಗಿ, ತನ್ನ ರಕ್ಷಣೆಗೆ ಒಂದು ಭೂತ ಬೇಕು ಎಂದು ಕೇಳುತ್ತಿದ್ದನಂತೆ. ಬ್ರಾಹ್ಮಣರಲ್ಲಿ ಹಲವಾರು ಭೂತಗಳಿದ್ದರೂ ಸಹ ಬ್ರಾಹ್ಮಣ ಕೊಡಲಿಲ್ಲ, ಮಲೆಕುಡಿಯ ಕಾಡಿಬೇಡಿದಾಗ ಅವನಿಗೆ ಹೊಗೆ ರೂಪದ ಒಂದು ಹೆಣ್ಣು ಭೂತವನ್ನು ಬ್ರಾಹ್ಮಣ ನೀಡುತ್ತಾನೆ. ಈ ಹೆಣ್ಣು ಭೂತವನ್ನು ತಂದು ಪೂಜಿಸಿದ ಇದೇ 'ವರ್ತೆಭೂತ'.

ಈ ವರ್ತೆಭೂತವನ್ನು ಪೂಜಿಸಿದ ನಂತರ ಕುಮೇರು ಬೆಳೆ ಹೆಚ್ಚು ಸಮೃದ್ಧವಾಗಿ ಬೆಳೆಯುತ್ತದೆ. ಆದರೆ ಕಾಡಿನಲ್ಲಿ ಹರಿಯುವ ಕೋಡಿನ ನೀರು ಬತ್ತಿದ್ದರಿಂದ ಕಾಡಿನಲ್ಲಿ ಗೆಡ್ಡೆ ಗೆಣಸುಗಳು ಕಡಿಮೆಯಾದವು. ಆಗ 'ವರ್ತೆಭೂತ' ನಾನು ಹಿಂದಕ್ಕೆ ಹೋಗುವುದಾಗಿ ಹೇಳುತ್ತದೆ. ಮಲೆಕುಡಿಯ ಇದಕ್ಕೆ ಶಾಂತಿ ಮಾಡಲು ಪ್ರಯತ್ನ ಮಾಡುತ್ತಾನೆ. ಕಾಲಕಾಲಕ್ಕೆ ಈ ವರ್ತೆಭೂತಕ್ಕೆ ಕೋಲ, ನೇಮ, ಅಗೇಲು ಮಾಡುವುದಾಗಿ ಹೇಳುತ್ತಾನೆ. ಆಗ ಆ ವರ್ತೆಭೂತ ಇಲ್ಲಿಯೇ ನಿಲ್ಲುವುದಕ್ಕೆ ಒಪ್ಪುತ್ತದೆ. ಈಗಲೂ ಸಹ ಇಲ್ಲಿ ಈ ಭೂತ ಸ್ಥಾನಗಳು ಕಂಡುಬರುತ್ತವೆ. ನಾನು ಕ್ಷೇತ್ರಕಾರ್ಯಕ್ಕೆ ಹೋದಲೆಲ್ಲಾ ಮಲೆಕುಡಿಯರ ಮನೆಯಲ್ಲಿ ಪ್ರತ್ಯೇಕವಾದ ಭೂತದ ಗುಡಿ, ದೈವಗಳಿಗಾಗಿಯೇ ಸ್ಥಾನವಿದೆ. ಈಗಲೂ ಸಹ ಇಲ್ಲಿ ನೇಮ, ಅಗೇಲು, ಕೋಲಗಳು ನಡೆಸುತ್ತಿರುವುದು ಕಂಡುಬರುತ್ತದೆ. ತಮಗೆ ಕೋಲ, ನೇಮ ನಡೆಸಲು ಸಧ್ಯವಾಗದಿದ್ದರೂ ಸಹ, ತಂಬಿಲ ಎಂಬ ಪೂಜೆಗಳು ನಡೆಯುತ್ತಿರುವುದು ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ತಿಳಿದುಬರುತ್ತದೆ.



**ನಾಲುಮಲೆ**

ಬಾರಿಮತ್ತಿ, ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ,ಬಾರಿಮಲೆ ಈ ೪ ಮಲೆಗಳಲ್ಲಿ ನೆಲೆಸಿರುವ ಸಮುದಾಯದ ಜನರ ಮೂಲ ನೆಲೆ ಬಾರಿಮಲೆಯಾಗಿದ್ದು, ನಂತರ ಇವರು ಬಾಂಜಾರಮಲೆಗೆ ಸ್ಥಳಾಂತರಗೊಂಡಿದ್ದಾರೆ, ಇವರ ಮೂಲ ನೆಲೆ ಬಾರಿಮಲೆಯಲ್ಲಿ ಈಗ ಜನವಸತಿ ಇರುವುದಿಲ್ಲ ಇವರು ಅಂಬಟಮಲೆ,ಇಳಿಮಲೆಗಳಿಗೆ ಹೋಗಿ ನೆಲೆಸಿದ್ದಾರೆ ಇವರ ಮೂಲ ಆರಾದ್ಯ ದೇವರು ಕಾಲಬೈರವೇಶ್ವರ ದೇವಸ್ಥಾನ ಬಾರಿಮಲೆ ಯಲ್ಲಿದೆ. ಈ ದೇವಸ್ಥಾನಕ್ಕೆ ಇವರು ಪ್ರತಿ ವರ್ಷ ಹೋಗಿ ತಪ್ಪದೆ ಪೂಜೆ ಸಲ್ಲಿಸಿ ಬರುತ್ತಾರೆ. ಇವರು ಮಕ್ಕಳಕಟ್ಟು ಪಂಗಡಕ್ಕೆ ಸೇರಿದ್ದಾರೆ. ಇವರು ಅಳಿಯಕಟ್ಟುಗಿಂತ ಭಿನ್ನವಾಗಿದ್ದಾರೆ. ಇವರು ಭೂತ,ಕೋಲ, ನೇಮಗಳ ಆಚರಣೆ ಮಾಡುವುದಿಲ್ಲ.ಈ ನಾಲ್ಕು ಮಲೆ ಪ್ರದೇಶಗಳನ್ನು ಹೊರತುಪಡಿಸಿದಂತೆ ದಕ್ಷಿಣಕನ್ನಡ ಜಿಲ್ಲೆಯಾದ್ಯಂತ ನೆಲೆಸಿರುವ ಮಲೆಕುಡಿಯ ಸಮುದಾಯದವರು ಅಳಿಯ ಸಂತಾನ ಪರಂಪರೆಗೆ ಸೇರಿದ್ದು ತುಳುನಾಡಿನ ಸಂಸ್ಕೃತಿ ಪರಂಪರೆಯ ಒಂದು ಭಾಗವಾಗಿದ್ದಾರೆ. ಇವರು ಭೂತ,ಕೋಲ,ನೇಮಗಳ ಆಚರಣೆಮಾಡುತ್ತಾ ಬಂದಿದ್ದಾರೆ ಇವರ ಮೂಲ ಕಾಸರಗೋಡು ಆಗಿದ್ದು,ಇವರ ವಿವಾಹಸಂಬಂಧಗಳು ಕಾಸರಗೋಡು ಕಡೆಗೆ ಈಗಲೂ ನಡೆಯುತ್ತಾ ಬಂದಿರುವುದು ನಮ್ಮ ಕ್ಷೇತ್ರಕಾರ್ಯ ಅಧ್ಯಯನದಿಂದ ತಿಳಿದುಬರುತ್ತದೆ.

ಕುಟುಂಬ ಪದ್ಧತಿ, ಸಂತತಿ ಆಧಾರದ ಮೇಲೆ ಮಲೆಕುಡಿಯ ಸಮುದಾಯದಲ್ಲಿ ಪ್ರಮುಖವಾಗಿ ಎರಡು ಪಂಗಡಗಳಾಗಿ ವರ್ಗೀಕರಿಸಲಾಗಿದೆ.

೧. ಮಕ್ಕಳಕಟ್ಟು

೨. ಅಳಿಯಕಟ್ಟು

**೧. ಮಕ್ಕಳಕಟ್ಟು:** ಮಲೆಕುಡಿಯ ಸಮುದಾಯದ ಮೂಲನೆಲೆಗಳಾದ ಬಾರಿಮಲೆ, ಬಾಂಜಾರುಮಲೆ, ಅಂಬಟೆಮಲೆ ಮತ್ತು ಇಳಿಮಲೆ ಈ ನಾಲ್ಕು ಮಲೆಗಳಲ್ಲಿ ವಾಸವಾಗಿರುವ ಕುಟುಂಬಗಳಲ್ಲಿ ಮಕ್ಕಳಕಟ್ಟು ಸಂತಾನ ಕಂಡುಬರುತ್ತದೆ. ಪಿತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಮಕ್ಕಳಕಟ್ಟು ಪುರುಷಪ್ರಧಾನ್ಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕುಟುಂಬದ ಯಜಮಾನ ತಂದೆಯಾಗಿದ್ದು, ಕುಟುಂಬದ ಆಸ್ತಿಗೆ ವಾರಸುದಾರ, ವಂಶಾವಳಿ ಗುರುತಿಸುವುದು ತಂದೆಯ ಮೂಲಕವಾಗಿರುತ್ತದೆ. ವಿವಾಹದ ನಂತರ ಸೊಸೆಯಾಗಿ ಬಂದವಳು ಗಂಡನ ಮನೆಯಲ್ಲಿ ವಾಸಮಾಡಬೇಕು. ಇವರು ಭೂತ, ನೇಮ, ಕೋಲಗಳನ್ನು ಆಚರಣೆ ಮಾಡುವುದಿಲ್ಲ ಮತ್ತು ಇವರಿಗೆ ಇದರಲ್ಲಿ ನಂಬಿಕೆಯಿಲ್ಲ.

**೨. ಅಳಿಯಕಟ್ಟು:** ತುಳುನಾಡಿನ ಕಟುಂಬ ಪದ್ದತಿಯಲ್ಲಿ ಅಳಿಯ ಸಂತಾನ ಪ್ರಧಾನವಾದ ಕುಟುಂಬ ಪದ್ದತಿಯಾಗಿದೆ ಈ ಹಿನ್ನೆಲೆಯಲ್ಲಿ ಕಾಸರುಗೋಡು ಗಡಿಭಾಗದ ಪ್ರದೇಶಗಳು ಸೇರಿದಂತೆ ಬಂಟ್ವಾಳ, ಬೆಳ್ತಂಗಡಿ, ಸೂಳ್ಯ ಸುಬ್ರಹ್ಮಣ್ಯ, ಧರ್ಮಸ್ಥಳ, ಗುಂಡ್ಯ ವ್ಯಾಪ್ತಿಯ ಪ್ರದೇಶಗಳಲ್ಲಿ ವಾಸವಾಗಿರುವ ಕುಟುಂಬಗಳು ಅಳಿಯ ಸಂತಾನಕ್ಕೆ ಸೇರಿವೆ. ಇದು ಮಾತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಅಳಿಯ ಕಟ್ಟು ಮಹಿಳಾಪ್ರಧಾನ್ಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕುಟುಂಬದ ಹೊಣೆಗಾರಿಕೆ ತಾಯಿ ಯಾಗಿದ್ದರೂ ಸಹ ಪರುಷರು ಹಕ್ಕು ಬಾದ್ಯತೆಗಳಲ್ಲಿ ಮೇಲುಸ್ತುವಾರಿಯನ್ನು ಹೊಂದಿರುತ್ತಾರೆ. ಕುಟುಂಬದ ಆಸ್ತಿಗೆ ತಾಯಿ ಹಕ್ಕುದಾರಳಾಗಿರುತ್ತಾಳೆ ಇವರ ವಂಶಾವಳಿಯನ್ನು ತಾಯಿಯ ಮೂಲಕ ಗುರುತಿಸಲಾಗುತ್ತದೆ. ವಿವಾಹದ ನಂತರ ಅಳಿಯ ತನ್ನ ಹೆಂಡತಿ ಮನೆಯಲ್ಲಿ ವಾಸಮಾಡಬೇಕು. ಹಬ್ಬ ಜಾತ್ರೆ, ಉತ್ಸವ, ನೇಮ, ಎಲ್ಲವೂ ಆ ಕಟುಂಬದ ಹೆಣ್ಣು ಮಕ್ಕಳದ್ದಾಗಿರುತ್ತದೆ. ಇಲ್ಲಿ ಗಂಡು ಮಕ್ಕಳಿಗೆ ಹೊಣೆಗಾರಿಕೆ ಇರುತ್ತದೆ. ಇವರು ಭೂತ, ನೇಮ, ನಾಗಾರಾಧನೆ,ಕೋಲಗಳನ್ನು ಆಚರಣೆಮಾಡುತ್ತಾರೆ ಮತ್ತು ಇವರಿಗೆ ಇವುಗಳಲ್ಲಿ ನಂಬಿಕೆಯಿದೆ. ಈ ಎರಡೂ ಪಂಗಡಗಳ ವಿಶಿಷ್ಟತೆ, ಆಚರಣೆ, ಭಿನ್ನತೆಯನ್ನು ಕುರಿತು ಸಂಶೋದನೆಯ ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

**ಕುಡಿಯ ಮತ್ತು ಮಲೆಕುಡಿಯ**

ಕೊಡಗಿನ ಬುಡಕಟ್ಟು ಸಮುದಾಯವನ್ನು ಕುಡಿಯರೆಂತಲೂ ದಕ್ಷಿಣ ಕನ್ನಡದ ಮಲೆಕುಡಿಯರನ್ನು ಮಲೆಕುಡಿಯರೆಂತಲೂ ಕರೆಯಲಾಗುವುದು. ಕುಡಿಯರು ಕೊಡವ ಭಾಷೆಯನ್ನು ಮಾತನಾಡುತ್ತಿದ್ದು, ಮಲೆಕುಡಿಯರು ತುಳು ಭಾಷೆಯನ್ನು ಮಾತನಾಡುತ್ತಾರೆ.

ಹೆಚ್.ಡಿ. ಪ್ರಶಾಂತ್ ಸಂ., ಜನಸಮುದಾಯ ಸಂಪುಟ, ಪ್ರಥಮ ಮುದ್ರಣ-೨೦೦೦, ಹಂಪಿ ವಿಶ್ವವಿದ್ಯಾಲಯದ ಪ್ರಸಾರಾಂಗದ ವತಿಯಿಂದ ಪ್ರಕಟಿತವಾದ ಕರ್ನಾಟಕ ರಾಜ್ಯಕೋಶ-೪(ಪುಟ-೨೦)ರಲ್ಲಿ 'ಕುಡಿಯ'ರ ಕುರಿತು ಮಾಹಿತಿ ದೊರೆಯುತ್ತದೆ. ತುಳು ಮಾತನಾಡುವ ಈ ಜನರನ್ನು ಇದೇ

ಅರ್ಥದಲ್ಲಿ ಬರುವ ರೀತಿಯಲ್ಲಿ 'ಮಲೆತ್ತಾಯ' ಎಂದು ಕರೆಯುತ್ತಾರೆ ಎಂಬ ಉಲ್ಲೇಖವಿದೆ.[೮] ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ, ಬೆಳ್ತಂಗಡಿ, ಸುಳ್ಯ ಭಾಗಗಳಲ್ಲಿ ಮಲೆಕುಡಿಯರು ವಾಸವಾಗಿದ್ದಾರೆ. ಕುಡಿಯ, ಮಲೆಕುಡಿಯರು ಬೇರೆಬೇರೆ ಬುಡಕಟ್ಟು ಪಂಗಡದವರೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಥರ್ಸ್ಟನ್ ಮತ್ತು ರಂಗಾಚಾರಿಯವರು ಕುಡಿಯ, ಮಲೆಕುಡಿಯ ಗುಂಪುಗಳು ಒಂದೇ ಎಂದು ಹೇಳಿದ್ದಾರೆ. ಮಲೆಕುಡಿಯರ ಪ್ರಾಚೀನ ಭಾಷೆ ತುಳು ಆಗಿರಬೇಕು. ಇವರ ತುಳು ನಮಗೆ ಅರ್ಥವಾಗುವುದಿಲ್ಲ, ಎಂದು ಇತರ ತುಳು ಭಾಷೆಯನ್ನು ಮಾತನಾಡುವವರೇ ಹೇಳುತ್ತಾರೆ. ತುಳು ಭಾಷೆಗೆ ಲಿಪಿ ಇಲ್ಲ. ಇವರು ಕನ್ನಡ ಭಾಷೆಯ ಲಿಪಿಯನ್ನು ಸಹಜವಾಗಿ ಇಲ್ಲಿ ಬಳಸುತ್ತಿದ್ದಾರೆ. ಮಲೆಕುಡಿಯರಲ್ಲಿ ಊರುಮಲೆ, ನಾಲುಮಲೆ ಎಂಬ ಎರಡು ಉಪಪಂಗಡಗಳಿವೆ. ಊರುಮಲೆ ಪಂಗಡಗಳಲ್ಲಿ ಹೊರ ಬಾಂಧವ್ಯ ವಿವಾಹದ ಹದಿನೆಂಟು ಬೆಡಗುಗಳಿವೆ. ನಾಲುಮಲೆ ಪಂಗಡದವರು ಪುರುಷ ವಂಶೀಯ ರೀತಿಯಲ್ಲಿ ಮೂರು ಮನೆತನಗಳ ಹೆಸರಿನಿಂದ ಗುರುತಿಸಲ್ಪಟ್ಟಿದ್ದಾರೆ ಎಂಬ ಮಾಹಿತಿ ಇಲ್ಲಿ ದೊರೆಯುತ್ತದೆ. ಈ ಎರಡು ಪಂಗಡಗಳಲ್ಲಿ ಸಾಮಾನ್ಯವಾಗಿ ಅಂತರ್‌ಜಾತಿ ವಿವಾಹ ಪದ್ಧತಿ ಇಲ್ಲ. ಇಲ್ಲಿ ಸೋದರಮಾವ ಮತ್ತು ಸೋದರತ್ತೆಯ ಮಗಳೊಂದಿಗೆ ವಿವಾಹ ನಡೆಯುತ್ತದೆ. 'ಗುರಿಕಾರ'ನ ಸಮ್ಮುಖದಲ್ಲಿ ವಿವಾಹ ಸಂಬಂಧಗಳು ವಿಧಿ ಸಂಪ್ರದಾಯ ಬದ್ಧವಾಗಿ ನೆರವೇರುವ ಸಂಗತಿ ಇಲ್ಲಿ ಕಂಡುಬರುತ್ತದೆ.

ಮಲೆಕುಡಿಯರ ವೃತ್ತಿ, ಹಿಂದೆ ಬೇಟೆಯಾಡುವುದು, ಆಹಾರ ಸಂಗ್ರಹಿಸುವ ಕೆಲಸವಾಗಿತ್ತು. ಕೆಲವು ಊರುಮಲೆಯವರಿಗೆ ಸ್ವಂತ ಜಮೀನು ಹೊಂದಿದ್ದು, ಕೃಷಿ ಮಾಡುತ್ತಿದ್ದಾರೆ. ಉಳಿದವರು ಕೂಲಿ ಕಾರ್ಮಿಕರಾಗಿದ್ದರು ಎಂಬ ವಿವರಣೆ ಇದೆ. ನಾಲುಮಲೆ ಗುಂಪಿನಲ್ಲಿ ಕೆಲವು ಕುಟುಂಬಗಳು ಮಾತ್ರ ಸರ್ಕಾರದಿಂದ ಭೂಮಿಯನ್ನು ಪಡೆದು ಬಿದುರಿನ ಬುಟ್ಟಿ ಮತ್ತು ಚಾಪೆಯನ್ನು ತಯಾರಿಸಿ ತಮ್ಮ ಆದಾಯದ ಮೂಲದಿಂದ ಜೀವನ ನಡೆಸುವುದು ತಿಳಿದುಬಂದಿದೆ. ಊರುಮಲೆಯವರ ಆಡಳಿತಕ್ಕೆ ಗುರಿಕಾರನಿರುತ್ತಾನೆ. ನಾಡು ಮಲೆಯವರ ಆಡಳಿತಕ್ಕೆ ಇದ್ದ ಮುಖ್ಯಸ್ಥನ ವ್ಯವಸ್ಥೆ ನಿಷ್ಕ್ರಿಯವಾಗಿರುವ ಸಂಗತಿ ಇಲ್ಲಿದೆ. ಆಧುನಿಕ ಸಾಮಾಜಿಕ ವ್ಯವಸ್ಥೆಗಳನ್ನು ಉಪಯೋಗಿಸಿಕೊಳ್ಳುವಲ್ಲಿ ಇವರು ಹಿಂದುಳಿದಿದ್ದಾರೆಂಬ ಉಲ್ಲೇಖವಿದೆ.

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ(೧೯೯೬)ದ ವತಿಯಿಂದ ಪ್ರೊ. ಹಿ.ಚಿ. ಬೋರಲಿಂಗಯ್ಯನವರ ಸಂಪಾದಕತ್ವದಲ್ಲಿ ಪ್ರಕಟವಾಗಿರುವ ಕರ್ನಾಟಕ ಜನಪದ ಕಲೆಗಳ ಕೋಶದಲ್ಲಿ ಕುಡಿಯರ ಕುಣಿತ(ಪುಟ-೧೯೯)ದಲ್ಲಿ ಗುರುತಿಸಿರುವ ಪ್ರಕಾರ ದಕ್ಷಿಣ ಕನ್ನಡ, ಕೊಡಗು, ಚಿಕ್ಕಮಗಳೂರು ಜಿಲ್ಲೆಗಳ ಪರ್ವತ ಶ್ರೇಣಿಗಳಲ್ಲಿ ಆಗುಂಬೆಯಿಂದ ಬ್ರಹ್ಮಗಿರಿಯವರೆಗೆ ಹರಡಿಕೊಂಡಿರುವ ಪ್ರಾಚೀನ ಜನಾಂಗವಿದು. ಮಲೆಯನ್, ಕುಡಿಯನ್, ಗೌಡರ್, ಈಡಿಗ, ಮಲೆಕುಡಿಯ ಇತ್ಯಾದಿ ಹೆಸರುಗಳಿಂದ ಕರೆಯಲಾಗುವ ಇವರು ಆಯಾಯ ಪ್ರಾದೇಶಿಕ ಭಾಷೆಗಳನ್ನು ತನ್ನದೇ ಆದ ರೀತಿಯಲ್ಲಿ ಮಾತನಾಡುತ್ತಾರೆ ಇವರ ಪ್ರಕಾರ, ಕನ್ನಡದ ಕುಡಿಯರು ನಾಲ್ಕು ಮಲೆಯವರಾದರೆ, ಕೊಡಗಿನವರು ಮೂರು ಮಲೆಯವರು ಎಂದು ಕರೆಯಲಾಗಿದೆ. ಘಟ್ಟದ ಮೇಲಿನ ಅಂದರೆ ಮಡಿಕೇರಿಯವರನ್ನು ಕುಡಿಯರು ಎಂದು, ಘಟ್ಟದ ಕೆಳಗಿನವರನ್ನು ಅಂದರೆ ದ.ಕ.ಜಿಲ್ಲೆಯವರನ್ನು ಮಲೆಕುಡಿಯರೆಂದು ಕರೆಯಲಾಗುತ್ತದೆ(ಪುಟ ೨೦೦).[೯]

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು ೧೯೯೮ರಲ್ಲಿ ಪ್ರೊ. ಎಚ್.ಜೆ. ಲಕ್ಕಪ್ಪ ಗೌಡರವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾದ ಕರ್ನಾಟಕ ಬುಡಕಟ್ಟುಗಳು ಸಂಪುಟ-೧ (ಪುಟ. ೬೮೯)ರಲ್ಲಿ ಡಿ. ನಾಗಣ್ಣರವರು "ಕುಡಿಯ-ಮಲೆಕುಡಿಯ"ರ ಬಗ್ಗೆ ಲೇಖನವನ್ನು ಬರೆದಿದ್ದಾರೆ. ಇವರ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ, ಸುಳ್ಯ, ಬೆಳ್ತಂಗಡಿ ಭಾಗಗಳಲ್ಲಿ ಮಲೆ ಕುಡಿಯರು ವಾಸವಾಗಿದ್ದಾರೆ. ವಿರಾಜಪೇಟೆ ಮತ್ತು ಮಡಿಕೇರಿಯ ಕಡೆ 'ಕಡೆ ಕುಡಿಯರು' ವಾಸವಾಗಿರುತ್ತಾರೆ. ಈ ಕುಡಿಯ ಮತ್ತು ಮಲೆ ಕುಡಿಯರು ಬೇರೆಬೇರೆ ಬುಡಕಟ್ಟು ಪಂಗದವರೆಂದೂ, ಒಂದೇ ಎಂದು ವಿದ್ವಾಂಸರು ಹೇಳುವ ಸಂದರ್ಭಗಳಿವೆ ಎಂದು ಡಿ. ನಾಗಣ್ಣರವರು ಅಭಿಪ್ರಾಯಪಟ್ಟಿದ್ದಾರೆ.

### ೨.೩. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ವೈಶಿಷ್ಟ್ಯತೆಗಳು

ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕೊರಗ, ಮರಾಠಿ ನಾಯ್ಕ ಮತ್ತು ಮಲೆಕುಡಿಯ ಸಮುದಾಯದವರನ್ನು ಬುಡಕಟ್ಟು ಸಮುದಾಯಗಳೆಂದು ಪರಿಗಣಿಸಲಾಗಿದೆ. ಈ ಮೂರು ಸಮುದಾಯಗಳು ಸಹ ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿರುವ ಜನಾಂಗಳೆಂದು ಗುರುತಿಸಿ ಕೊಂಡಿರುತ್ತವೆ. ಪ್ರತಿ ಸಮುದಾಯಕ್ಕೆ ತನ್ನದೇ ಆದ ಜೀವನ, ಸಾಂಸ್ಕೃತಿಕ ಪರಂಪರೆಇರುತ್ತದೆ.ಕೊರಗ ಸಮುದಾಯವು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗಳಾದ ಇಂದಿನ ದಕ್ಷಿಣ ಕನ್ನಡ, ಉಡುಪಿ ಹಾಗೂ ಕೇರಳದ ಕಾಸರಗೋಡಿನ ಪ್ರದೇಶಗಳ ವ್ಯಾಪ್ತಿಯಲ್ಲಿನ ಮೂಲ ನಿವಾಸಿಗಳಾಗಿ ಪರಿಗಣಿಸಲ್ಪಟ್ಟಿದೆ. ತಲೆತಲಾಂತರಗಳಿಂದಲೂ ಒಂದು ಘೋಷಿತ ಸಮುದಾಯವಾಗಿ ಅಜಲು ಪದ್ಧತಿಯಂತಹ ಪಾರಂಪರಿಕ ವೃತ್ತಿಯ ಆಚರಣೆಯಿಂದಾಗಿ, ಅಸ್ಪೃಶ್ಯತೆಯ ಸೋಂಕಿನಲ್ಲಿ ಹಲವಾರು ಅನರ್ಹತೆಗಳಿಗೆ ಒಳಗಾದ ಸಮುದಾಯವಾಗಿದ್ದು, ಇಂದು ಒಂದು ಸಂಘಟಿತ ಸಮುದಾಯವಾಗಿ ತನ್ನ ಅಸ್ತಿತ್ವ ಮತ್ತು ಅನನ್ಯತೆಗಾಗಿ ತನ್ನದೇ ಆದ ಹೋರಾಟವನ್ನು ಹಂತ ಹಂತವಾಗಿ ನಡೆಸುತ್ತಾ ಬಂದಿದ್ದು ಇದರ ಫಲವಾಗಿ ಕರ್ನಾಟಕ ರಾಜ್ಯ ಸರಕಾರ ಇವರ ಅಭಿವೃದ್ಧಿಗಾಗಿ ವಿಶೇಷ ಪ್ಯಾಕೇಜನ್ನು ಈಗಾಗಲೆ ನೀಡಿದೆ. ಮರಾಠಿ ನಾಯ್ಕ ಜನಾಂಗವು ಸಹ ಈ ಜಿಲ್ಲೆಯಲ್ಲಿನ ಒಂದು ಪರಿಶಿಷ್ಟ ಪಂಗಡವಾಗಿದೆ. ಕೊರಗ ಮತ್ತು ಮಲೆಕುಡಿಯ ಮೂಲ ನಿವಾಸಿಗಳಿಗಿಂತ ಭಿನ್ನವಾದ ಹಾಗೂ ಅಭಿವೃದ್ಧಿ ಹೊಂದಿದ ಜನಾಂಗ ಇದಾಗಿದೆ. ಸರಕಾರದ ಉದ್ಯೋಗ ಪ್ರಾತಿನಿಧ್ಯತೆಯು ಸೇರಿದಂತೆ ವಿವಿಧ ಕ್ಷೇತ್ರಗಳಲ್ಲಿ ಅಭಿವೃದ್ಧಿಯಾಗಿರುವ ಸಮುದಾಯ ವಾಗಿದೆ.ಕೊರಗ ಮತ್ತು ಮರಾಠಿ ನಾಯ್ಕರನ್ನು ಹೊರತುಪಡಿಸಿದಂತೆ ಈ ಪ್ರದೇಶದ ಮೂಲ ನಿವಾಸಿ ಗಳಾಗಿರುವ ಗುಡ್ಡಗಾಡು, ಅರಣ್ಯವಾಸಿಗಳಾಗಿ ಬದುಕುತ್ತಿರುವ ಮತ್ತೊಂದು ಸಮುದಾಯ ವೆಂದರೆ ಅದು ಮಲೆಕುಡಿಯ ಬುಡಕಟ್ಟು ಸಮುದಾಯವಾಗಿದೆ.ಕೃಷಿಯನ್ನು ತನ್ನ ಪ್ರಧಾನ ವೃತ್ತಿಯನ್ನಾಗಸಿಕೊಂಡು, ಅರಣ್ಯವನ್ನು ನಂಬಿ ಬದುಕುತ್ತಾ ಬಂದ ಇವರು ಅರಣ್ಯಉತ್ಪತ್ತಿ ಮೂಲಗಳಿಂದ ದೂರ ಉಳಿದುಕೊಂಡು, ಕಾಡಿನಿಂದ ನಾಡಿಗೆ ಬಂದು ಗ್ರಾಮ, ನಗರ ಪ್ರದೇಶಗಳಲ್ಲಿ ಆಧುನಿಕ ಬದುಕಿನೊಂದಿಗೆ ಲೀನವಾಗಿ ಜೀವನ ಸಾಗಿಸುತ್ತಾ ಬಂದಿರುವ ಇವರು ತನ್ನ ಮೂಲ ಸಂಸ್ಕೃತಿ ಪರಂಪರೆಯನ್ನು ಉಳಿಸಿಕೊಂಡು ಬರಲು ನಿರಂತರವಾದ ಪ್ರಯತ್ನ ಮಾಡುತ್ತಿರುವುದು ಒಂದು ಕಡೆ ಕಂಡು ಬಂದರೆ, ಇಂದಿನ ನಾಗರಿಕತೆಯ ಬದುಕಿನ ಯಾವುದೇ ಸೌಲಭ್ಯಗಳನ್ನು ಪಡೆಯದೆ, ಅನುಭವಿಸದೆ, ನಾಗರಿಕ ಬದುಕಿನಿಂದ ದೂರವೇ ಉಳಿದು ಇಂದಿಗೂ ಕಾಡಿನ ಬದುಕನ್ನು ನಂಬಿ ಜೀವನ ಮಾಡುತ್ತಿರುವ ನೆರಿಯಾ, ನಾರಾವಿ, ಬಂಜಾರುಮಲೆ,

ಕೋಲೋಡಿ, ಅಂಬಟಮಲೆ ಪ್ರದೇಶಗಳಲ್ಲಿ ನೆಲೆಸಿರುವ ಕಾಡಿನ ಜನರ ಬದುಕಿನ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನವು, ಈ ಸಮುದಾಯದ ವೈಶಿಷ್ಟ್ಯತೆಯನ್ನು ಸೂಚಿಸುತ್ತದೆ. ಅನಾದಿಕಾಲದಿಂದಲೂ ಕಾಡಿನಲ್ಲಿದ್ದು, ಇಂದು ನಾಡಿನ ಬದುಕು ಸಾಗಿಸುತ್ತಿರುವುದು ಸೇರಿದಂತೆ ಇವರು ಇಂದು ಅರಣ್ಯ ಗಿರಿ ಶಿಖರದ ಪ್ರದೇಶಗಳಿಗೆ ಹೊಂದಿಕೊಂಡು ಬದುಕುತ್ತಿದ್ದಾರೆ. ಅನಾದಿ ಕಾಲದಿಂದಲೂ ಇವರು ಬದುಕಿ ಬಾಳಿದ ಇವರದೇ ಆದ ನೆಲಕ್ಕೆ ಇಂದಿಗೂ ಹಕ್ಕು ದಾಖಲೆಗಳಿಲ್ಲದೇ ಇರುವ ದುರಂತ ಹಾಗೂ ಆಘಾತ ಕಾರಿಯ ದೃಶ್ಯ ನಾನು ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆಂದು ಹೋಗಿ ಇವರ ಕುಟುಂಬವಾರು ಸಮೀಕ್ಷೆಯ ಸಮಯದಲ್ಲಿ ಮಾಹಿತಿ ಪಡೆಯುವಾಗಲೇ ಅರ್ಥವಾಯಿತು. ಇವರ ವಾಸದ ನೆಲೆ, ಕೃಷಿ ಮಾಡಿಕೊಂಡು ಬರುತ್ತಿರುವ ಭೂಮಿಗೆ ದಾಖಲೆಗಳಿಗಾಗಿ ಅಲೆದಾಡಿ ಇದು ಸಾಧ್ಯಾವಾಗದೇ ಅಸಹಾಯಕ ಬದುಕು ಸಾಗಿಸುತ್ತಿರುವುದು. ಬದುಕಿನ ಸ್ಥಿತಿಗತಿಗೆ ಹಿಡಿದ ಕೈಗನ್ನಡಿಯಾಗಿದೆ. ಇದು ಇವರ ಮೂಲಭೂತವಾದ ಸಮಸ್ಯೆಯಾಗಿದೆ.

ಒಂದು ಕಡೆ ನೆರಿಯಾ, ಬಂಜಾರುಮಲೆ, ಕೋಲೋಡಿ, ಅಂಬಟಮಲೆಯಂತಹ ಪ್ರದೇಶಗಳಲ್ಲಿ ಪ್ಲಾಂಟರ್ಸ್ ಕಾಯಿದೆ ಇವರ ಬದುಕಿಗೆ ಗಂಡಾಂತರವಾದರೆ, ಶಿಶಿಲ, ಹತ್ಯಡ್ಕ,ನಾರಾವಿ,ಕುತ್ಲೂರು, ಸುಬ್ರಹ್ಮಣ್ಯ, ಧರ್ಮಸ್ಥಳ, ಕೊಕ್ಕಡ ಮುಂತಾದ ಕಡೆಗಳಲ್ಲಿ ಅರಣ್ಯ ಕಾಯಿದೆ ಇವರ ಬದುಕನ್ನು ಈಗಲೂ ಕತ್ತಲಾಗಿಸಿದೆ. ಈ ಕಾಯಿದೆಗಳ ಪರಿಣಾಮವಾಗಿ ಇವರು ಈಗಲೂ ಸಹ ಕಾಡಿನಲ್ಲಿದ್ದರೂ, ನಾಡಿಗೆ ಬಂದರೂ ಏನೂ ವ್ಯತ್ಯಾಸವೇ ಇಲ್ಲದಂತಹ ಸ್ಥಿತಿ ನಿರ್ಮಾಣವಾಗಿದೆ.ಆದಿವಾಸಿ ಸಮುದಾಯಕ್ಕೆ ತನ್ನದೇ ಆದ ವಿಶಿಷ್ಟತೆಗಳು ಇರುತ್ತವೆ. ಈ ಸಮುದಾಯಗಳು ಇತರ ಸಮುದಾಯಗಳಿಗಿಂತ ಭಿನ್ನವಾದ ಲಕ್ಷಣಗಳನ್ನು ಒಳಗೊಂಡಿದೆ. ಎಸ್.ಸಿ. ದುಬೆರವರು ತಮ್ಮ 'The Study of Indian Society' ಗ್ರಂಥದಲ್ಲಿ ಬುಡಕಟ್ಟು ಸಮುದಾಯದ ವಿಶಿಷ್ಟ ಲಕ್ಷಣಗಳನ್ನು ವಿವರಿಸಿದ್ದಾರೆ. ಈ ಲಕ್ಷಣಗಳು ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಕಂಡುಬರುತ್ತವೆ.

**೧. ಸಾಮಾನ್ಯ ಭೂಪ್ರದೇಶ:** ಪ್ರತಿಯೊಂದು ಬುಡಕಟ್ಟು ಸಮುದಾಯವು ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ವಾಸವಾಗಿರುತ್ತವೆ. ಈ ಪ್ರದೇಶಗಳು ಸಾಮಾನ್ಯವಾಗಿ ಅರಣ್ಯ, ಗುಡ್ಡಗಾಡು, ಗಿರಿ, ಪರ್ವತ, ಶಿಖರಗಳು, ಕಣಿವೆಗಳು ಆಗಿರುತ್ತವೆ.: ಮಲೆಕುಡಿಯ ಬುಡಕಟ್ಟು ಸಮುದಾಯದ ಸಾಮನ್ಯ ಭೂಪ್ರದೇಶದ ನೆಲೆಗಳು ಪಶ್ಚಿಮಘಟ್ಟದ ಚಾರ್ಮಾಡಿ ಬಂಜಾರುಮಲೆ. ಅಂಬಟೆಮಲೆ, ಶಿಶಿಲ, ಶಿರಾಡಿ, ಗುಂಡ್ಯ, ಧರ್ಮಸ್ಥಳ, ಸುಬ್ರಹ್ಮಣ್ಯ ಅಲ್ಲದೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ನೆಲೆಗಳಲ್ಲಿನ ಇವರ ವಾಸ ನಿರ್ದಿಷ್ಟ ಭೂಪ್ರದೇಶವನ್ನು ಅವಲಂಬಿಸಿದೆ. ತಮ್ಮ ಜೀವನೋಪಾಯ ಮತ್ತು ಕುಮರಿಬೇಸಾಯ ಪದ್ಧತಿಯಿಂದ ಇವರು ಒಂದು ಭೂಪ್ರದೇಶದಿಂದ ಮತ್ತೊಂದು ಭೂಪ್ರದೇಶಕ್ಕೆ ಸ್ಥಳಾಂತರವಾಗಿರುವ ಸಮುದಾಯವಾಗಿದೆ. ಕುಡಿಯವರನ್ನು ನಾಲ್ಮಲೆ ಕುಡಿಯರು, ಮತ್ತು ಊರು ಮಲೆ ಕುಡಿಯರೆಂದು ಗುರುತಿಸಲಾಗಿದೆ. ಇವರ ವಾಸದ ಪ್ರದೇಶಗಳು ಚದುರಿದ ಪ್ರದೇಶಗಳಾಗಿವೆ.

**೨. ವಿಶಿಷ್ಟ ಹೆಸರು:** ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೆ ತನ್ನದೇ ಆದ ನಿರ್ದಿಷ್ಟವಾದ ಹೆಸರು ಇರುತ್ತದೆ. ಅಂತೆಯೇ ಮಲೆಕುಡಿಯ ಸಮುದಾಯವು ಸಹ ತನ್ನದೇ ಆದ ಹೆಸರನ್ನು ಹೊಂದಿದೆ

ಆದರೆ ಪ್ರಾದೇಶಿಕ ಭಿನ್ನತೆಗಳಿಂದಾಗಿ ಇವರನ್ನು ಬೇರೆಬೇರೆ ಹೆಸರಿನಿಂದ ಕರೆಯಲಾಗುತ್ತದೆ. ಮಲೈಕೊಂಡಿಗರು, "Meleru", Kudiya, Kudiyas, Malekudiyas, Malai Kudiyas, Melakudies 'ಕುಡಿಯರು-ಮಲೆಕುಡಿಯರು' ಮಲೆಯನ್, ಕುಡಿಯನ್, ಗೌಡರ್, ಈಡಿಗ, ಮಲೆಕುಡಿಯ, ಬರ್ಕೆ, ಗೌಡ, ಮಲೆತ್ತಾಯ, ಮುಗುಲ್ಯ, ಎಂಬ ಇತರೆ ಹೆಸರುಗಳಿಂದ ಇವರನ್ನು ಕರೆಯಲಾಗುತ್ತದೆ.

**೩. ಸಾಮಾನ್ಯ ಬಾಷೆ:** ಬುಡಕಟ್ಟು ಸಮುದಾಯದವರು ಮಾತನಾಡುವ ಭಾಷೆಯು ಅವರದ್ದೇ ಆದ ಆಡು ಬಾಷೆಯಾಗಿರುತ್ತದೆ. ಈ ಭಾಷೆಗೆ ಲಿಪಿ ಇರುವುದಿಲ್ಲ. ಇದು ಈ ಸಮುದಾಯದವರ ಪಾರಂಪರಿಕವಾದ ಭಾಷೆಯಾಗಿದೆ. ತುಂಬಾ ವಿಶಿಷ್ಟವಾದ ಈ ಭಾಷೆ ಇತರ ಭಾಷೆಗಳಿಗಿಂತ ಭಿನ್ನವಾಗಿದೆ. ಅಂತೆಯೇ ಮೆಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ಮತ್ತು ಪಾರಂಪರಿಕ ಭಾಷೆ ತುಳು ಆಗಿರುತ್ತದೆ. ಬಂಜಾರುಮಲೆ, ಅಂಬಟಮಲೆ, ಇಳಿಮಲೆಗಳಲ್ಲಿನ ಇವರ ಭಾಷೆ ಹಳೆಯದಾದ, ಭಿನ್ನವಾದ ತುಳು ಭಾಷೆಯಾಗಿದೆ. ಈ ಭಾಷೆ ತುಳು ಮಾತನಾಡುವ ಇತರರಿಗೆ ಭಿನ್ನವಾಗಿದೆ. ಈ ಪ್ರದೇಶಗಳನ್ನು ಹೊರತುಪಡಿಸಿದಂತೆ ಇತರ ಎಲ್ಲಾ ಮಲೆಕುಡಿಯ ಸಮುದಾಯದ ಭಾಷೆ ತುಳು ಆಗಿರುತ್ತದೆ. ಇದು ತುಳುನಾಡಿನ ಭಾಷಾಪರಂಪರೆಯೊಂದಿಗೆ ಸಾಮ್ಯತೆಯನ್ನು ಹೊಂದಿದೆ. ಮಡಿಕೇರಿ ಗಡಿಭಾಗದ ಅರೆಕಲ್ಲು,ಸಂಪಾಜೆಯಲ್ಲಿ ಕೊಡವ ಭಾಷಯ ಸಂಪರ್ಕ ಕಂಡು ಬಂದರೆ ಕಾಸರುಗೋಡಿನ ಗಡಿಭಾಗದ ಪ್ರದೇಶಗಳಲ್ಲಿ ಮಲೆಯಾಳಿ ಭಾಷೆಯ ಪ್ರಭಾವವಿದೆ.ಆದರೂ ಇವರಲ್ಲಿನ ಕೆಲವರು ಕನ್ನಡ,ಕೊಂಕಣಿ ಮತ್ತು ಬ್ಯಾರಿ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದಾರೆ. ಕಾಡಿನಲ್ಲಿರುವವರಿಗೆ ತುಳು ಭಾಷೆಯನ್ನು ಹೊರತುಪಡಿಸಿದರೆ ಬೇರೆ ಭಾಷೆ ಬರದೇ ಇರುವ ಅಂಶ ಅಧ್ಯಯನದಿಂದ ತಿಳಿದು ಬರುತ್ತದೆ. ಸಾಮಾನ್ಯವಾಗಿ ತುಳುನಾಡಿನಲ್ಲಿ ತುಳುಭಾಷೆಗೆ ಕನ್ನಡದ ಲಿಪಿಯನ್ನು ಬಳಸಲಾಗುತ್ತದೆ. ಮಲೆಕುಡಿಯರಲ್ಲಿಯೂ ಕನ್ನಡ ಲಿಪಿ ಬಳಕೆಯಲ್ಲಿದೆ.

**೪. ರಕ್ತಸಂಬಂಧ:** ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ರಕ್ತಸಂಬಂಧ, ಕುಲ, ಬಂದುತ್ವ, ಕಳ್ಳುಬಳ್ಳಿಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಇವರಲ್ಲಿನ ವಿವಾಹ, ಕುಟುಂಬ ಪದ್ಧತಿಗಳು, ಬರಿಗಳು, ಪಂಗಡಗಳು ರಕ್ತಸಂಬಧದ ಆಧಾರದ ಮೇಲೆ ಗುರಿತಿಸಲಾಗುತ್ತದೆ. ಮಕ್ಕಳಕಟ್ಟು ಮತ್ತು ಅಳಿಯಕಟ್ಟು ಪಂಗಡಗಳು ರಕ್ತಸಂಬಂದವನ್ನು ಆಧರಿಸಿವೆ.

**೫. ಧಾರ್ಮಿಕ ವ್ಯವಸ್ಥೆ:** ಬುಡಕಟ್ಟು ಸಮುದಾಯದಲ್ಲಿ ತನ್ನದೇ ಆದ ಪ್ರತ್ಯೇಕವಾದ ಆದಿವಾಸಿ ಧರ್ಮದ ವ್ಯವಸ್ಥೆ ಇರುತ್ತದೆ. ಅಂತೆಯೇ ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಇವರದೇ ಆದ ಧಾರ್ಮಿಕ ವ್ಯವಸ್ಥೆ ಕಂಡುಬರುತ್ತದೆ. ಮಕ್ಕಳಕಟ್ಟು ಪಂಗಡದವರಲ್ಲಿ ಮಾರಿ ಪೂಜೆ, ಗಣೇಶನ ಆರಾಧನೆ ಕಂಡುಬಂದರೆ ಅಳಿಯಕಟ್ಟು ಪಂಗಡದಲ್ಲಿ ಶಿವ, ಪಾರ್ವತಿ, ಗಣೇಶ, ಸುಬ್ರಹ್ಮಣ್ಯ, ಮಂಜುನಾಥ, ವಿಷ್ಣು, ನಾಗಾರಾಧನೆ, ಬಲೀಂದ್ರಪೂಜೆ, ನೇಮ, ಕೋಲ, ಕುಲದೈವಗಳಾದ ಗುಳಿಗ, ಪಂಜುರ್ಲಿ, ಕಲ್ಲುರ್ಟಿ, ಕಲ್ಕುಡ, ಪಿಲಿಚಾಮುಂಡಿಗಳ ಆರಾಧನೆ ಕಂಡುಬರುತ್ತದೆ. ಆರಾದನೆಗಳು ಕಂಡುಬರುತ್ತವೆ. ಇವರದೇ ಆದ ಕುಲದೈವ ಇರುತ್ತದೆ. ಇವರಲ್ಲಿ ಪೂರ್ವಜರಲ್ಲಿ ನಂಬಿಕೆ, ಪಿತೃಪೂಜೆ, ಪ್ರಕೃತಿ ಪೂಜೆ, ವಸ್ತು ಪೂಜವಾದ ಮುಂತಾದ ಧಾರ್ಮಿಕ ನಂಬಿಕೆಗಳು ಕಂಡುಬರುತ್ತವೆ.

**೬. ಸಂಸ್ಕೃತಿ:** ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ, ಪರಂಪರೆ ಇದೆ. ಇವರ ಜೀವನಶೈಲಿ, ಭಾಷೆ, ಆಹಾರ ಪದ್ಧತಿ, ಉಡುಪು, ನಂಬಿಕೆಗಳು, ಆಚರಣೆಗಳು, ಆರಾಧನೆಗಳು, ವಿಶಿಷ್ಟವಾಗಿವೆ ಮತ್ತು ಅಳಿಯಕಟ್ಟು ಪಂಗಡದವರು ತುಳುನಾಡಿನ ಸಂಸ್ಕೃತಿಯೊಂದಿಗೆ ಸಾಮ್ಯತೆಯನ್ನು ಹೊಂದಿದ್ದಾರೆ ಮಾತ್ರವಲ್ಲದೆ ತುಳುಸಂಸ್ಕೃತಿಯ ಒಂದು ಭಾಗವಾಗಿದ್ದಾರೆ. ಮಕ್ಕಳಕಟ್ಟು ಪಂಗಡದವರು ಹಳೆ ತುಳುಭಾಷೆಯನ್ನು ಮಾತನಾಡಿದರೂ ಸಹ ತುಳುನಾಡಿನ ಸಂಸ್ಕೃತಿಗಿಂತ ಭಿನ್ನವಾಗಿದ್ದಾರೆ. ಧರ್ಮಸ್ಥಳದ ಸುತ್ತಮುತ್ತ ಮತ್ತು ಕೊಕ್ಕಡದ ಮಲೆಕುಡಿಯರಲ್ಲಿ ಪುರುಷ ಪೂಜೆ(ಪುರುಷ ಕಟ್ಟುದು) ಆಚರಣೆ ಕಂಡುಬರುತ್ತದೆ.

**೭. ನಂಬಿಕೆ– ಆಚರಣೆಗಳು:** ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿನ ನಂಬಿಕೆ, ಆಚರಣೆಗಳು ವಿಶಿಷ್ಟವಾಗಿವೆ.

**ಪ್ರಕೃತಿ ಪೂಜಾ ಪದ್ಧತಿ:** ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಪ್ರಕೃತಿಯ ಆರಾಧನೆಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಬಂಜಾರುಮಲೆಯ ಮಾರಿ ಪೂಜೆ, ಇಳಿಮಲೆಯ ಸುಗ್ಗಿ ಹಬ್ಬ, ಮನೆ ತುಂಬಿಸುವುದು ಇವರು ವಾಸವಾಗಿರುವ ಅರಣ್ಯ ಪ್ರದೇಶದ ಗಿಡ, ಮರ, ಭೂಮಿ, ಗಾಳಿ, ನೀರು, ಬೆಂಕಿ, ಸೂರ್ಯ, ಚಂದ್ರ ಪೂಜಿಸುವ ಪದ್ಧತಿಇದೆ ಈ ಪದ್ಧತಿಯನ್ನು ಪ್ರಕೃತಿ ಪೂಜೆ ಎಂದು ಕರೆಯಲಾಗುವುದು.

**ಪಿತೃಪೂಜಾ ಪದ್ಧತಿ:** ಮಲೆಕುಡಿಯರು ತಮ್ಮ ಪೂರ್ವಿಕರನ್ನು ಪೂಜಿಸುತ್ತಾರೆ. ಇದನ್ನು ಪಿತೃಪೂಜಾ ಪದ್ಧತಿ ಎಂದು ಕರೆಯಲಾಗುವುದು. ಇವರಲ್ಲಿ ಕಂಡುಬರುವ ಅಗೇಲು ಆಚರಣೆಯು ಹಿರಿಯರನ್ನು ಪೂಜಿಸುವ, ಸಂತುಷ್ಟಗೊಳಿಸುವ ಪದ್ಧತಿಯಾಗಿದೆ. ತನ್ನ ಹಿರಿಯರು ದೈವ ಸಂಭೂತರು, ಇವರ ಮರಣದ ನಂತರ ನಮ್ಮನ್ನು ಕಾಪಾಡುತ್ತಾರೆ ಎಂಬ ನಂಬಿಕೆಯಿಂದ ಪೂಜಿಸುತ್ತಾರೆ. ಪುನರ್ಜನ್ಮದಲ್ಲಿ ಇವರಿಗೆ ಅಪಾರವಾದ ನಂಬಿಕೆ ಇದೆ.

**ವಸ್ತು ಪೂಜಾವಾದ:** ಪ್ರಕೃತಿದತ್ತವಾದ ಎಲ್ಲಾ ವಸ್ತುಗಳಲ್ಲಿ ದೈವಶಕ್ತಿಯಿದೆ ಎಂದು ನಂಬಿ ಪೂಜಿಸುವ ಪದ್ಧತಿಯನ್ನು ವಸ್ತು ಪೂಜಾವಾದ(Fetishism) ಎಂದು ಕರೆಯಲಾಗುತ್ತದೆ. ಮಲೆಕುಡಿಯ ಸಮುದಾಯದಲ್ಲಿನ ಪ್ರಕೃತಿಪೂಜೆಯು ಸೇರಿದಂತೆ ಕಾಡಿನ ಪ್ರಾಣಿಗಳನ್ನು ಪೂಜಿಸುವ, ಆರಾಧಿಸುವ ಪದ್ಧತಿ ಇವರಲ್ಲಿ ಇದೆ. ಕಾಡಾನೆಯನ್ನು ಗಣೇಶನ ಸ್ವರೂಪವೆಂದು ನಂಬಿ ಪೂಜಿಸುವುದು, ನಾಗಬನಗಳ ಆರಾಧನೆ, ನಾಗಪೂಜೆ ಮರ, ಪ್ರಾಣಿ, ಪಕ್ಷಿ ಮತ್ತು ಇದರ ಅಂಗಗಳಲ್ಲಿ ದೈವತ್ವ ಇದೆ ಎಂದು ನಂಬಿಕೊಂಡು ಪೂಜಿಸುವುದು ವಸ್ತು ಪೂಜಾವಾದದ ವೈಶಿಷ್ಟ್ಯತೆಯಾಗಿದೆ.

**ಸರ್ವಚೇತನವಾದ ಅಥವಾ ಆತ್ಮವಾದ:** ಪ್ರಸಿದ್ಧ ಮಾನವಶಾಸ್ತ್ರಜ್ಞ ಇ.ಬಿ. ಟೈಲರ್‌ರವರು ಈ ವಾದವನ್ನು ಪ್ರತಿಪಾದಿಸಿದ್ದಾರೆ. ಪ್ರಕೃತಿದತ್ತವಾದ ಎಲ್ಲಾ ವಸ್ತು ಮತ್ತು ಜೀವರಾಶಿಗಳಲ್ಲಿ ಒಂದು ಚೇತನಾಶಕ್ತಿ ಇದೆ, ಆತ್ಮವಿದೆ ಎಂಬ ನಂಬಿಕೆಯನ್ನು ಹೊಂದಿರುವುದನ್ನು ಸರ್ವಚೇತನವಾದ ಎಂದು ಕರೆಯುತ್ತಾರೆ. ಮಲೆಕುಡಿಯರಲ್ಲಿನ ನಾಗಪೂಜೆ,ನಾಗ ಬೆತ್ತದಲ್ಲಿನ ನಂಬಿಕೆ ಸರ್ವಚೇತನವಾದದ ಪ್ರತಿರೂಪವಾಗಿದೆ. ಸುಬ್ರಹ್ಮಣ್ಯದ ಷಷ್ಠಿಯಲ್ಲಿ ಬ್ರಹ್ಮರಥವನ್ನು ಎಳೆಯಲು ಬಳಸಲಾದ ಬೆತ್ತವನ್ನು ಪ್ರಸಾದ ರೂಪದಲ್ಲಿ

ಭಕ್ತರಿಗೆ ನೀಡಲಾಗುವುದು ಇದನ್ನು ಮನೆಯಲ್ಲಿ ಪೂಜಿಸಿದರೆ ಸರ್ಪದೋಷ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.

**ಕುಲದೇವತಾವಾದ ಅಥವಾ ಲಾಂಛನವಾದ(Totemism):** ಈ.ಬಿ.ಟೈಲರ್‌ರವರ ವಸ್ತು ಪೂಜಾವಾದದ ಕಲ್ಪನೆಯ ಮುಂದುವರೆದ ಭಾಗವೇ ಕುಲದೇವತಾವಾದ ಅಥವಾ ಲಾಂಛನವಾದ ಆಗಿದೆ. ಒಂದು ಸಮುದಾಯವು ನಿಧಿಷ್ಟವಾದ ವಸ್ತು, ಪ್ರಾಣಿ, ಪಕ್ಷಿ, ಸಸ್ಯಗಳ ಭಾಗವನ್ನು ತಮ್ಮ ಆರಾಧನೆಯ ಚಿನ್ಹೆ, ಲಾಂಛನವನ್ನಾಗಿ ಮಾಡಿಕೊಂಡು ಪೂಜಿಸುವ ಪದ್ಧತಿಯಾಗಿದೆ. ಇವುಗಳನ್ನು ತಮ್ಮ ಕುಲದೇವತೆ ಎಂದು ನಂಬಿ ಪೂಜಿಸುವ ಪದ್ಧತಿಯನ್ನು 'ಕುಲದೇವತಾವಾದ' ಎಂದು ಈ.ಬಿ. ಟೈಲರ್‌ರವರು ಕರೆಯುತ್ತಾರೆ. ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಈ ಕಲ್ಪನೆ ಪ್ರಧಾನವಾಗಿ ಕಂಡುಬರುತ್ತದೆ. ಸುಬ್ರಹ್ಮಣ್ಯದ ಮಲೆಕುಡಿಯ ಸಮುದಾಯದಲ್ಲಿ ನಾಗಬನ, ನಾಗರಹಾವನ್ನು, ಗೌರವಿಸುತ್ತಾರೆ. ಇದು ಇವರ ಲಾಂಛನ ಆರಾಧ್ಯ ದೈವವಾಗಿದೆ.

**ಪ್ರೇತಗಳ ಮದುವೆ(ಕುಲೆಮದುವೆ):** ತುಳುನಾಡಿನ ಆಚರಣೆಗಳಲ್ಲಿ ಕುಲೆಮದುವೆ ಒಂದು ವಿಶಿಷ್ಟಪದ್ಧತಿಯಾಗಿದೆ. ಈ ಪದ್ಧತಿ ಮಲೆಕುಡಿಯರ ಅಳಿಯ ಸಂತಾನ ಪರಂಪರೆಯಲ್ಲಿ ಆಚರಣೆಯಲ್ಲಿದೆ. ವಿವಾಹವಾಗದೆ ಮರಣಹೊಂದಿದ ಹುಡುಗ ಅಥವಾ ಹುಡುಗಿಯ ಪ್ರೇತಗಳಿಗೆ ಅಮವಾಸ್ಯೆಯ ಕತ್ತಲ ರಾತ್ರಿಯಲ್ಲಿ ಹೊಳೆಬದಿಯಲ್ಲಿ ವಿವಾಹ ಮಾಡಿ, ಸತ್ತ ಪ್ರೇತಗಳ ಆತ್ಮವನ್ನು ಸಂತುಷ್ಟಗೊಳಿಸುವ ಪದ್ಧತಿಯನ್ನು ಪ್ರೇತಗಳ ಮದುವೆ ಅಥವಾ ಕುಲೆಮದುವೆ ಎಂದು ಕರೆಯಲಾಗುವುದು.

**೮. ರಾಜಕೀಯ ವ್ಯವಸ್ಥೆ:** ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೆ ತಮ್ಮದೇ ಆದ ಆಡಳಿತ ವ್ಯವಸ್ಥೆ ಇರುತ್ತದೆ. ಇದು ಇವರ ಸಂಪ್ರದಾಯ, ವಂಶ ಪರಂಪರೆಯ ಪ್ರತೀಕವಾಗಿರುತ್ತದೆ. ಇವರು ತಮ್ಮ ಕುಲ ಪದ್ಧತಿಯ ಪ್ರಕಾರವೇ ತಮ್ಮ ನಾಯಕರನ್ನು ಆಯ್ಕೆ ಮಾಡುತ್ತಾ ಬರುತ್ತಾರೆ. ತಮ್ಮ ಜನಾಂಗದ ಈ ನಾಯಕನಿಗೆ ಇಲ್ಲಿ ಸರ್ವೋತ್ತಮವಾದ ಅಧಿಕಾರವಿದೆ. ಇವರ ತೀರ್ಮಾನ, ಆದೇಶಕ್ಕೆ ಬದ್ಧರಾಗಿರುತ್ತಾರೆ. ಮಲೆಕುಡಿಯರಲ್ಲಿ ನಾಯಕನನ್ನು ಗುರಿಕಾರ ಎಂದು ಕರೆಯಲಾಗುತ್ತದೆ. ಬದಲಾದ ಕಾಲಘಟ್ಟದಲ್ಲಿ ಚುನಾವಣೆ ಮತದಾನ ರಾಜಕೀಯ ನಾಯಕತ್ವದ ಬೆಳವಣಿಗೆಗಳಿಂದಾಗಿ ಗುರಿಕಾರನ ಅಧಿಕಾರ ಈಗ ಕಾನೂನು ಮತ್ತು ರಾಜಕೀಯ ಅಧಿಕಾರಕ್ಕೆ ಸ್ಥಳಾಂತರಗೊಂಡು ತನ್ನ ಪ್ರಾಧಾನ್ಯತೆಯನ್ನು ಕಳೆದುಕೊಂಡಿದೆ.

**೯. ಸರಳ, ಸ್ವಯಂಪರಿಪೂರ್ಣತೆ:** ಮಲೆಕುಡಿಯ ಬುಡಕಟ್ಟು ಸಮುದಾಯದ ಜೀವನಶೈಲಿ ವಿಶಿಷ್ಟವಾಗಿದ್ದರೂ ಸಹ ಸರಳತೆಯ ಪ್ರತೀಕವಾಗಿರುತ್ತದೆ. ಈ ಸಮುದಾಯವು ಪ್ರಕೃತಿಯ ಬದುಕಿನೊಂದಿಗೆ ಲೀನವಾಗಿ ಸರಳ, ಸಜ್ಜನಿಕೆಯ ಸಾಕಾರ ಮೂರ್ತಿಗಳಾಗಿದ್ದಾರೆ. ಇನ್ನು ಇವರ ವೃತ್ತಿಯಲ್ಲಿನ ಪರಿಪೂರ್ಣತೆಯಂತೂ ಇಂದಿನ ಆಧುನಿಕ ಜಗತ್ತಿನ ತಾಂತ್ರಿಕತೆಯನ್ನು ನಾಚಿಸುತ್ತದೆ.

**೧೦. ರಕ್ಷಣೆಯ ವಿಧಾನ:** ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ತಮ್ಮದೇ ಆದ ರಕ್ಷಣಾ ವ್ಯವಸ್ಥೆ ಇದೆ. ಗುಡ್ಡಗಾಡು,ದಟ್ಟವಾದ ಅರಣ್ಯದಲ್ಲಿ ಬದುಕುವ ಇವರು ತಮ್ಮನ್ನು ತಾವೇ ರಕ್ಷಿಸಿಕೊಳ್ಳುವ ನೈಪುಣ್ಯತೆಯನ್ನು ಅನಾಧಿಕಾಲದಿಂದಲೂ ಮುಂದುವರಿಸಿಕೊಂಡು ಬಂದಿದ್ದಾರೆ. ಕಾಡಿನಲ್ಲಿ ನಿರ್ಭಯ ಬದುಕನ್ನು ಸಾಗಿಸುವ ಇವರಿಗೆ ಕಾಡೇ ಇವರ ಪಾಲಿನ ರಕ್ಷಣೆಯಾಗಿದೆ.

**೧೧.ಕುಟುಂಬ- ವಿವಾಹ ಪದ್ಧತಿ:** ಬುಡಕಟ್ಟು ಸಮುದಾಯದವರಲ್ಲಿ ಮಕ್ಕಳಕಟ್ಟು ಮತ್ತು ಅಳಿಯಕಟ್ಟು ಪಂಗಡಗಳನ್ನು ಆದರಿಸಿದ ಕುಟುಂಬ ಮತ್ತು ವಿವಾಹ ಪದ್ಧತಿ ಕಂಡುಬರುತ್ತದೆ. ಸಮುದಾಯಗಳಲ್ಲಿ ಹೊರ ಪಂಗಡ ವಿವಾಹ ಪದ್ಧತಿ ಕಂಡುಬರುತ್ತದೆ.

**೨.೪. ಕುಟುಂಬ ಪದ್ಧತಿ**

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯದ ಸಾಮಾಜಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಕುಟುಂಬ ಪದ್ಧತಿ, ಮಕ್ಕಳಕಟ್ಟು, ಅಳಿಯಕಟ್ಟು, ಬರಿಗಳು ವೈವಾಹಿಕ ಸ್ಥಿತಿ, ಸಂಸ್ಕಾರ ವಿಧಿಗಳು ಮತ್ತು ಮಹಿಳಾ ಸ್ಥಾನಮಾನ, ಪ್ರಧಾನವಾಗಿ ಪರಿಗಣಿಸಲ್ಪಟ್ಟಿದೆ. ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಕುಟುಂಬ ಪದ್ಧತಿಯಲ್ಲಿ ಕಂಡುಬರುವ ಬಗೆಗಳು ಮತ್ತು ಸಂತತಿಯು ತನ್ನದೇ ಆದ ವೈಶಿಷ್ಟ್ಯತೆಯನ್ನು ಸೂಚಿಸುತ್ತದೆ. ಬಹಳ ಹಿಂದಿನ ಕಾಲದ ದಿನಗಳಲ್ಲಿ ಅವಿಭಕ್ತ ಕುಟುಂಬ ಪದ್ದತಿ ಜಾರಿಯಿಲ್ಲಿ ಇದ್ದು ಈಗ ಅದು ಅವನತಿಯ ಹಾದಿಯಲಿದೆ. ಇವರಲ್ಲಿ ಬಹುತೇಕವಾಗಿ ಕೇಂದ್ರಕುಟುಂಬಗಳಾಗಿ ಮತ್ತು ವಿಭಕ್ತಕುಟುಂಬಗಳಾಗಿವೆ.

ಸುಬ್ರಮಣ್ಯ ಪರಿಸರದ ಮಲೆಕುಡಿಯರಲ್ಲಿ ಗಂಡ-ಹೆಂಡತಿ ಮಕ್ಕಳನ್ನು ಒಳಗೊಂಡ ವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಇವು ಇಂದಿನ ಆಧುನಿಕ ಸರಳ ಕುಟುಂಬಗಳೇ ಆಗಿವೆ. ಅಲ್ಲಲ್ಲಿ ಚದುರಿದ ಕುಟುಂಬಗಳಾಗಿವೆ. ತಮ್ಮ ಕೃಷಿ ತೋಟಗಳಲ್ಲಿ ನೆಲೆಸಿರುವ ಕುಟುಂಬಗಳಾಗಿವೆ. ಇವು ಅಳಿಯಕಟ್ಟು ಕುಟುಂಬಗಳಾಗಿವೆ. ಇವರ ಕುಟುಂಬದ ಸದಸ್ಯರು ಅಲ್ಲಲ್ಲಿ ಚದುರಿ ನೆಲೆಸಿದ್ದರೂ ಸಹ ಇವರು ತಮ್ಮ ಮೂಲ ಕುಟುಂಬದೊಂದಿಗೆ ಸಂಬಂಧವನ್ನು ಹೊಂದಿದ್ದಾರೆ. ತಂದೆ-ತಾಯಿ ಅವಿವಾಹಿತ ಮಕ್ಕಳು ಬೇರೆ ಬೇರೆ ಸ್ಥಳಗಳಲ್ಲಿ ವಾಸವಾಗಿರುತ್ತಾರೆ. ಇವರು ತನ್ನ ಮೂಲ ಕುಟುಂಬದಿಂದ ಬೇರೆಬೇರೆ ಏಕೆ ಆದರು ಎಂಬುದನ್ನು ಪರಿಶೀಲಿಸಿದಾಗ, ಒಬ್ಬರು ಎಂಟು ಎಕರೆ ಭೂಮಿಯಲ್ಲಿ ನೆಲೆಸಿದರೆ ಒಬ್ಬರಿಗೆ ಇಷ್ಟು ಭೂಮಿ ಸಿಗುವುದಿಲ್ಲ. ಹೀಗಾಗಿ ಕುಟುಂಬದ ಸದಸ್ಯರು ಅಲ್ಲಲ್ಲಿ ನೆಲೆಸಿದರೆ ಇರುವ ಭೂಮಿ ಅವರದ್ದೇ ಆಗುತ್ತದೆ ಎಂಬ ಭರವಸೆಯಿಂದಾಗಿ ಇವರು ಅಲ್ಲಲ್ಲಿ ಚದುರಿದ ಜೀವನ ನಡೆಸುತ್ತಿರುವುದು ಅಧ್ಯಯನದಿಂದ ತಿಳಿಯುತ್ತದೆ. ಇರುವ ಭೂಮಿಗೆ ದಾಖಲೆಗಳು ಸಿಗದೆ ೩೦ ವರ್ಷಗಳಿಂದಲೂ ಹಾಗೆಯೇ ಜೀವನ ಸಾಗಿಸುತ್ತಿದ್ದಾರೆ.

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಮರಾಠಿ ಮಲೆಕುಡಿಯ, ಕೊರಗ, ಬುಡಕಟ್ಟು ಸಮುದಾಯಗಳ ಕುಟುಂಬಗಳಲ್ಲಿ ಕುಟುಂಬ ಯೋಜನೆ ಜಾರಿಗೆ ತರುವುದಕ್ಕೆ ಸಂಬಂಧಿಸಿದಂತೆ ನಡೆಸಲಾದ ಸಮೀಕ್ಷೆಯಲ್ಲಿ ಒಟ್ಟು ೩೯ ವಿವಾಹಿತ ಮಹಿಳೆಯರ ಸಮೀಕ್ಷೆ ನಡೆಸಲಾಗಿದೆ. ಈ ಸಮುದಾಯಗಳಲ್ಲಿನ ವಿವಾಹಿತ ಮಹಿಳೆಯರ ಸ್ಥಿತಿಗತಿಯಲ್ಲಿ ಸಾಮ್ಯತೆಗಿಂತ ಭನ್ನತೆ ಕಂಡುಬರುತ್ತದೆ. ಆಧುನಿಕವಾದ ಕುಟುಂಬ ಯೋಜನಾ ಪದ್ಧತಿಯ ಬಳಕೆಯ ಬಗ್ಗೆ ನಡೆದ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದ ಬುಡಕಟ್ಟು ಸಮುದಾಯದ ಒಟ್ಟು ಶೇ ೪೬.೪% ರಷ್ಟು ಮಹಿಳೆಯರು ೧೫-೪೯ ವಯೋಮಾನದವರಾಗಿದ್ದಾರೆ. ಇವರು ಕುಟುಂಬ ಯೋಜನೆಯನ್ನು ಒಪ್ಪಿಕೊಂಡಿದ್ದಾರೆ. ಇವರು ೩ರಿಂದ ೭ ಮಕ್ಕಳನ್ನು ಹೊಂದಿದವರಾಗಿದ್ದಾರೆ. ಇವರಲ್ಲಿ Tubectomy ಮತ್ತು vasectomyಯ ವಿಧಾನವನ್ನು ಅಳವಡಿಸಿದ್ದಾರೆ. ಅಂತರವಿಧಾನವನ್ನು

ಅಳವಡಿಸಿಕೊಂಡವರ ಸಂಖ್ಯೆ ಇವರಲ್ಲಿ ಕಡಿಮೆ ಇರುವುದು ಸಮೀಕ್ಷೆಯಿಂದ ತಿಳಿದುಬರುತ್ತದೆ. ಈ ಸಮುದಾಯದ ಮಹಿಳೆಯರ ಮನವೊಲಿಸುವಲ್ಲಿ ಇಲ್ಲಿನ ಆರೋಗ್ಯ ಕಾರ್ಯಕರ್ತರು ಯಶಸ್ವಿಯಾಗಿದ್ದಾರೆ. ಈ ಯೋಜನೆಯಲ್ಲಿ ದೊರೆಯುವ ಸಹಾಯಧನ, ಪ್ರೋತ್ಸಾಹ ಧನವು ಸಹ ಇದಕ್ಕೆ ಕಾರಣವಾಗಿರುವುದು ತಿಳಿದುಬರುತ್ತದೆ. ಈ ಸಮುದಾಯಗಳಲ್ಲಿನ ಕೆಲವು ಮಹಿಳೆಯರು ಕುಟುಂಬ ಯೋಜನೆಯನ್ನು ಒಪ್ಪಿಕೊಳ್ಳಲು ಹಿಂಜರಿಯುವುದು ಕಂಡುಬರುತ್ತದೆ. ಇವರು ಇನ್ನೂ ಹೆಚ್ಚು ಮಕ್ಕಳನ್ನು ಪಡೆಯಬೇಕೆಂದು ಅಕಾಂಕ್ಷೆ ಇದಕ್ಕೆ ಕಾರಣವಾಗಿದೆ. ಇವರು ಅವಿಭಕ್ತ ಕುಟುಂಬಗಳಂದ ಬೇರ್ಪಟ್ಟು ವಿಭಕ್ತ ಕುಟುಂಬಗಳನ್ನು ಹೊಂದಿದವರಾಗಿದ್ದಾರೆ.

**ಬರಿ(ಬಳಿ)ಗಳು**

ಮಲೆಕುಡಿಯ ಸಮುದಾಯಲ್ಲಿನ ಗೋತ್ರಗಳನ್ನು ಬರಿ ಎಂದು ಕರೆಯಲಾಗುತ್ತದೆ. ಈ ಬರಿಯ ಆಧಾರದ ಮೇಲೆ ಇವರ ವೈವಾಹಿಕ ಸಂಬಂಧಗಳು ನಿರ್ಧಾರವಾಗುತ್ತವೆ. ಮಲೆಕುಡಿಯರಲ್ಲಿ ಊರದ ಮಲೆ ಮತ್ತು ನಾಲುಮಲೆ ಎಂಬ ಎರಡು ಉಪ ಪಂಗಡಗಳಿವೆ. ಊರುಮಲೆ ಪಂಗಡಗಳಲ್ಲಿ ಹೊರ ಬಾಂಧವ್ಯ ವಿವಾಹದ ಹದಿನೆಂಟು ಬೆಡಗುಗಳಿವೆ.ನಾಲುಮಲೆ ಪಂಗಡದವರು ಪುರುಷ ವಂಶೀಯ ರೀತಿಯಲ್ಲಿ ಮೂರು ಮನೆತನಗಳ ಹೆಸರಿನಿಂದ ಗುರುತಿಸಲ್ಪಟ್ಟಿದ್ದಾರೆ. ಈ ಎರಡು ಪಂಗಡಗಳಲ್ಲಿ ಸಾಮಾನ್ಯವಾಗಿ ಅಂತರ್ ಜಾತಿ ವಿವಾಹ ಪದ್ಧತಿ ಇಲ್ಲ, ಇಲ್ಲಿ ಸೋದರಮಾವ ಮತ್ತು ಸೋದರತ್ತೆಯ ಮಗಳೊಂದಿಗೆ ವಿವಾಹ ನಡೆಯುತ್ತದೆ.' ಗುರಿಕಾರ'ನ ಸಮ್ಮುಖದಲ್ಲಿ ವಿವಾಹ ಸಂಬಂಧಗಳು ವಿಧಿ ಸಂಪ್ರದಾಯ ಬದ್ಧವಾಗಿ ನೆರವೇರುವ ಸಂಗತಿ ಇಲ್ಲಿ ಕಂಡುಬರುತ್ತದೆ.

ಮಲೆ ಕುಡಿಯರ ವೃತ್ತಿ ಹಿಂದೆ ಬೇಟೆಯಾಡುವುದು, ಆಹಾರ ಸಂಗ್ರಹಿಸುವ ಕೆಲಸವಾಗಿತ್ತು. ಕೆಲವು ಊರು ಮಲೆಯವರಿಗೆ ಸ್ವಂತ ಜಮೀನು ಹೊಂದಿದ್ದು, ಕೃಷಿ ಮಾಡುತ್ತಿದ್ದಾರೆ ಉಳಿದವರು ಕೂಲಿ ಕಾರ್ಮಿಕರಾಗಿದ್ದಾರೆ. ಹಿಂದೆ ನಾಲುಮಲೆ ಗುಂಪಿನಲ್ಲಿ ಕೆಲವು ಕುಟುಂಬಗಳು ಮಾತ್ರ ಸರ್ಕಾರದಿಂದ ಭೂಮಿಯನ್ನು ಪಡೆದು ಬಿದುರಿನ ಬುಟ್ಟಿ ಮತ್ತು ಚಾಪೆಯನ್ನು ತಯಾರಿಸಿ ತಮ್ಮ ಆದಾಯದ ಮೂಲದಿಂದ ಜೀವನ ನಡೆಸುತ್ತಿರುವುದು ತಿಳಿಯುತ್ತದೆ. ಊರುಮಲೆಯವರ ಆಡಳಿತಕ್ಕೆ ಗುರಿಕಾರನಿರುತ್ತಾನೆ. ನಾಡು ಮಲೆಯವರ ಆಡಳಿತಕ್ಕೆ ಇದ್ದ ಮುಖ್ಯಸ್ಥನ ವ್ಯವಸ್ಥೆ ನಿಷ್ಕ್ರೀಯವಾಗಿರುವ ಸಂಗಾತಿ ಇಲ್ಲಿದೆ.ಮಲೆಕುಡಿಯ ಸಮುದಾಯವು ಸಮಗ್ರ ಅಬಿವೃದ್ಧಿ ಕಾರ್ಯಕ್ರಮದಲ್ಲಿ ಈ ಸಮುದಾಯವು ಸೇರಲ್ಪಟ್ಟಿದೆ. ಸರಕಾರದ ಯೋಜನೆಗಳ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವಲ್ಲಿ, ಮರಾಠಿ ಮತ್ತು ಕೊರಗ ಸಮುದಾಯಕ್ಕಿಂತ ಹಿಂದುಳಿದಿದ್ದಾರೆ.

**ಪಂಗಡಗಳು:** ಮಲೈಕುಡಿಗಳಲ್ಲಿ ಊರುಮಲೆ ಹಾಗೂ ನಾಲುಮಲೆ ಎಂಬ ಎರಡು ಪ್ರಭೇದಗಳಿವೆ. ಊರುಮಲೆಕುಡಿಯರು ಇವರಲ್ಲಿ ೧೮ ಹೊರ ಬಾಂಧವ್ಯದ ಬಳಿಗಳಿವೆ.

೧. ಬಂಗಾರದನ್ನೆ, ೨. ಗುಜ್ಜರದನ್ನೆ, ೩. ಸಾಲಿಯನ್ನ, ೪. ಕರಂಬರನ್ನೆ ಇತ್ಯಾದಿ. ಈ ಬಳಿಗಳು ಮಲೇರು ಬುಡಕಟ್ಟಿನ ಊರುಮಲೆಯರಲ್ಲಿ ಕಾಣುತ್ತೇವೆ.

Lawrence A.D.Souza S.T.ರವರು ೧೯೬೪ರಲ್ಲಿ ಪ್ರಕಟಿಸಿದ Malekudiyas of Premotive Tribe of South India. ಎಂಬ ಗ್ರಂಥದಲ್ಲಿ ಮಲೆಕುಡಿಯರಲ್ಲಿರುವ ೧೮ ಬರಿಗಳು ಇರುವುದನ್ನು ತಿಳಿಸಿದ್ದಾರೆ.[೫೦] ಅವುಗಳಲ್ಲಿ ಬಂಗೇರ ೨. ಸಾಲಿಯಾನ ೩. ಪೆರಗಾಡೆ ೪. ಮೂಲ್ಯ ೫. ಚಾಲ್ಬರ್ನಿ ೬. ಬುನ್ನಾಲು ೭. ಬಲಸೆರ್ನಾ ೮. ಕುರುಂಬೆರಿನಾಕ್ಲು ೯. ಗೊಂಡಾರು ೧೦. ಬರ್ತೆರು ೧೧. ಬಗೆಟೆನ್ನ. ಬರಿಗಳ ಉಲ್ಲೇಖವಿದೆ.ಮಕ್ಕಳ ಸಂತಾನದಲ್ಲಿ ಬರಿಗಳು ಕತ್ಸಲ ೨. ಕುಂಟ್ಯಾನ ೩. ಕಲ್ಕರ ೪. ಕುಕ್ಮಟೆ ೫. ಸುನಾಲು ೬. ಬೀಸಿಲು,ಬಿಸಿಲ್ ಬರಿಗಳು ಪ್ರಮುಖವಾಗಿವೆ. ಇವರಲ್ಲಿ ಈಗ ಪ್ರಮುಖವಾಗಿ ೨೧ ಬರಿಗಳು ಇರುವುದು ತಿಳಿದುಬರುತ್ತದೆ.

ನನ್ನ ಅಧ್ಯಯನದಲ್ಲಿ ಕಂಡುಬಂದ ಪ್ರಮುಖ ಬರಿಗಳೆಂದರೆ: ಬಂಗೇರ, ಸಾಲಿಯಾನ, ಪೆರಗಾಡೆ, ಮೂಲ್ಯ, ಚಾಲ್ಬರ್ನಿ, ಬುನ್ನಾಲು, ಬಲಸೆರ್ನಾ. ಕುರುಂಬೆರಿನಾಕ್ಲು, ಗೊಂಡಾರು, ಬರ್ತೆರು, ಬಗೆಟೆನ್ನ ಬಾಗೇಟ, ಕತ್ಸಲ, ಕುಂಟ್ಯಾನ, ಕಲ್ಕರ, ಕುಕ್ಮಟೆ, ಸುನಾಲು, ಬೀಸಿಲು ಬಿಸಿಲ್, ಕರಂಬೇರ, ಬಳಸಣ್ಣ, ಗೌಡರ ಗೌಡರ್ನ,ಗುಂಡರ್ನ ಗುಂಡೇರ. ಗುಂಡನ್ನ ಬರಿಗಳು ಕಂಡುಬರುತ್ತವೆ. ಈ ಬರಿಗಳಲ್ಲಿ ಕೆಲವು ಗೌಡ ಮತ್ತು ಬಂಟ ಸಮುದಾಯದಲ್ಲಿ ಸಹ ಕಂಡುಬರುತ್ತವೆ. ಬರಿಗಳಲ್ಲಿ ಇಲ್ಲಿ ಪರಸ್ಪರ ಸಾಮ್ಯತೆ ಇರುವುದು ತಿಳಿದುಬರುತ್ತದೆ.

**ಕುಟುಂಬದ ವಿಧಗಳು:** ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿನ ಕುಟುಂಬ ಪದ್ಧತಿಯಲ್ಲಿ ಪ್ರಮುಖವಾಗಿ ಎರಡು ವಿಧಗಳು ಕಂಡುಬರುತ್ತವೆ.

೧. ಮಕ್ಕಳಕಟ್ಟು

೨. ಅಳಿಯಕಟ್ಟು

**೧. ಮಕ್ಕಳಕಟ್ಟು:** ಮಲೆಕುಡಿಯ ಸಮುದಾಯದ ಮೂಲನೆಲೆಗಳಾದ ಬಾರಿಮಲೆ, ಬಾಂಜಾರುಮಲೆ, ಅಂಬಟೆಮಲೆ ಮತ್ತು ಇಳಿಮಲೆ ಈ ನಾಲ್ಕು ಮಲೆಗಳಲ್ಲಿ ವಾಸವಾಗಿರುವ ಕುಟುಂಬಗಳಲ್ಲಿ ಮಕ್ಕಳಕಟ್ಟು ಸಂತಾನ ಕಂಡುಬರುತ್ತದೆ. ಪಿತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಮಕ್ಕಳಕಟ್ಟು ಪುರುಷಪ್ರಧಾನ್ಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕುಟುಂಬದ ಯಜಮಾನ ತಂದೆಯಾಗಿದ್ದು, ಕುಟುಂಬದ ಆಸ್ತಿಗೆ ವಾರಸುದಾರ, ವಂಶಾವಳಿ ಗುರುತಿಸುವುದು ತಂದೆಯ ಮೂಲಕವಾಗಿರುತ್ತದೆ. ವಿವಾಹದ ನಂತರ ಸೊಸೆಯಾಗಿ ಬಂದವಳು ಗಂಡನ ಮನೆಯಲ್ಲಿ ವಾಸಮಾಡಬೇಕು. ಇವರು ಭೂತ, ನೇಮ, ಕೋಲಗಳನ್ನು ಆಚರಣೆ ಮಾಡುವುದಿಲ್ಲ ಮತ್ತು ಇವರಿಗೆ ಇದರಲ್ಲಿ ನಂಬಿಕೆಯಿಲ್ಲ.

**೨. ಅಳಿಯಕಟ್ಟು:** ತುಳುನಾಡಿನ ಕಟುಂಬ ಪದ್ದತಿಯಲ್ಲಿ ಅಳಿಯ ಸಂತಾನ ಪ್ರಧಾನವಾದ ಕುಟುಂಬ ಪದ್ದತಿಯಾಗಿದೆ ಈ ಹಿನ್ನೆಲೆಯಲ್ಲಿ ಕಾಸರುಗೋಡು ಗಡಿಭಾಗದ ಪ್ರದೇಶಗಳು ಸೇರಿದಂತೆ ಬಂಟ್ವಾಳ, ಬೆಳ್ತಂಗಡಿ, ಸೂಳ್ಯ, ಸುಬ್ರಹ್ಮಣ್ಯ, ಧರ್ಮಸ್ಥಳ, ಗುಂಡ್ಯ ವ್ಯಾಪ್ತಿಯ ಪ್ರದೇಶಗಳಲ್ಲಿ ವಾಸವಾಗಿರುವ ಕುಟುಂಬಗಳು ಅಳಿಯ ಸಂತಾನಕ್ಕೆ ಸೇರಿವೆ. ಇದು ಮಾತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಅಳಿಯ ಕಟ್ಟು ಮಹಿಳಾಪ್ರಧಾನ್ಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕುಟುಂಬದ ಹೊಣೆಗಾರಿಕೆ ತಾಯಿ ಯಾಗಿದ್ದರೂ ಸಹ ಪರುಷರು ಹಕ್ಕು ಬಾದ್ಯತೆಗಳಲ್ಲಿ ಮೇಲುಸ್ತುವಾರಿಯನ್ನು ಹೊಂದಿರುತ್ತಾರೆ. ಕುಟುಂಬದ ಆಸ್ತಿಗೆ ತಾಯಿ ಹಕ್ಕುದಾರಳಾಗಿರುತ್ತಾಳೆ ಇವರ ವಂಶಾವಳಿಯನ್ನು ತಾಯಿಯ ಮೂಲಕ ಗುರುತಿಸಲಾಗುತ್ತದೆ.

ವಿವಾಹದ ನಂತರ ಅಳಿಯ ತನ್ನ ಹೆಂಡತಿ ಮನೆಯಲ್ಲಿ ವಾಸಮಾಡಬೇಕು. ಹಬ್ಬ ಜಾತ್ರೆ, ಉತ್ಸವ, ನೇಮ, ಎಲ್ಲವೂ ಆ ಕಟುಂಬದ ಹೆಣ್ಣು ಮಕ್ಕಳದ್ದಾಗಿರುತ್ತದೆ. ಇಲ್ಲಿ ಗಂಡು ಮಕ್ಕಳಿಗೆ ಹೊಣೆಗಾರಿಕೆ ಇರುತ್ತದೆ. ಇವರು ಭೂತ, ನೇಮ, ನಾಗಾರಾಧನೆ,ಕೋಲಗಳನ್ನು ಆಚರಣೆಮಾಡುತ್ತಾರೆ ಮತ್ತು ಇವರಿಗೆ ಇವುಗಳಲ್ಲಿ ನಂಬಿಕೆಯಿದೆ. ಈ ಎರಡೂ ಪಂಗಡಗಳ ವಿಶಿಷ್ಟತೆ, ಆಚರಣೆ, ಭಿನ್ನತೆಯನ್ನು ಕುರಿತು ಸಂಶೋದನೆಯ ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

ಹಿ.ಚಿ. ಬೋರಲಿಂಗಯ್ಯ ಅವರ ಗಿರಿಜನ ನಾಡಿಗೆ ಪಯಣದ ಚಾರ್ಮಾಡಿಯ ಪಾತಾಳಲೋಕ ಪು. ೫೪ರಲ್ಲಿ ಈ ಎರಡು ಬುಡಕಟ್ಟುಗಳಲ್ಲಿನ ಪಂಗಡಗಳನ್ನು ಕುರಿತು ವಿವರಿಸಿದ್ದಾರೆ. 'ಈ ಬುಡಕಟ್ಟುಗಳಲ್ಲಿ ಎರಡು ಪಂಗಡಗಳುಂಟು ಇದನ್ನು 'ಬಳಿ' ಎನ್ನುತ್ತಾರೆ. ಒಂದು ಅಳಿಯಕಟ್ಟು, ಮತ್ತೊಂದು ಮಕ್ಕಳಕಟ್ಟು, ಅಳಿಯಕಟ್ಟಿನವರು ಮದುವೆಗಳಲ್ಲಿ ಬ್ರಾಹ್ಮಣರನ್ನು ಪೌರೋಹಿತ್ಯಕ್ಕೆ ಕರೆಸುವುದಿಲ್ಲಿ. ಮಕ್ಕಳಕಟ್ಟಿನವರು ಕರೆಸುತ್ತಾರೆ. ಆದರೂ ಇವರ ಮದುವೆ ಸಂಪ್ರದಾಯಗಳು ಹಿಂದಿನಂತಿಲ್ಲ, ಸಾಕಷ್ಟು ಬದಲಾವಣೆಯಾಗಿದೆ. ಸಂತೋಷದ ಸಂಗತಿಯೆಂದರೆ ಇಲ್ಲಿ ಇನ್ನು ಹೆಣ್ಣಿಗೆ ತೆರಕಟ್ಟಿ ಮದುವೆ ಮಾಡಿಕೊಳ್ಳುವ ಪರಿಪಾಠವಿದೆ. ನಿಶ್ಚಯ ಆದ ದಿನವೇ ಹುಡುಗ ಹೋಗಿ ಹುಡುಗಿಗೆ ಕರಿಮಣಿ ಕಟ್ಟಿ ಬರಬೇಕು. ಮದುವೆ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಚಪ್ಪರದಲ್ಲಿ ಕಂಬವಿರುತ್ತದೆ. ಹೆಣ್ಣು ಅದರೊಳಗೆ ಬರುವಾಗ ಗಂಡಿನ ಕಡೆಯವರು ಹೆಣ್ಣಿಗೆ ಕೊಡಬೇಕಾದ ಬಟ್ಟೆ, ಒಡವೆ, ತೆರ ಇತ್ಯಾದಿ ಒಪ್ಪಿಸಬೇಕು. ಹಿಂಗಾರ(ಹೊಂಬಾಳೆ) ಮತ್ತು ಮಾವಿನ ಎಲೆಯಿಂದ ಕಂಕಣ ಕಟ್ಟುತ್ತಾರೆ. ಆದರೆ ಇಲ್ಲಿನ ವಿಶೇಷವೆಂದರೆ ಸೋದರಮಾವ ಕಂಕಣ ಕಟ್ಟುವುದಿಲ್ಲ. ಹುಡುಗ, ಹುಡುಗಿಗೆ ಪರಸ್ಪರ ಕಟ್ಟಿಕೊಳ್ಳಬೇಕು. ಹೆಣ್ಣು ಒಪ್ಪಿಸಿಕೊಡುವಾಗ ಹಿರಿಯ ಇಂತಿಂತ ಕಡೆಯಿಂದ ಬಂದ ಹಿರಿಯರು ಗುರುಗಳು ಬುದ್ಧಿವಂತರ ಸಮಕ್ಷಮದಲ್ಲಿ ಇಂಥ ಹುಡುಯನ್ನು ಇಂಥ ಹುಡುಗನಿಗೆ ಒಪ್ಪಿಸಿಕೊಡುತ್ತಿದ್ದೇವೆ ಎನ್ನುವ ಅರ್ಥದಲ್ಲಿ ತುಳುವಿನಲ್ಲಿ ಘೋಷಿಸುತ್ತಾನೆ. ಮದುವೆಗೆ ಸಸ್ಯಹಾರದ ಊಟ ಆದರೆ ಬಹುಹಿಂದೆ ಮಾಂಸದ ಊಟದ ಪದ್ಧತಿ ಇತ್ತಂತೆ' ಎಂಬ ಉಲ್ಲೇಖವಿದೆ(ಪುಟ. ೫೪).[೧೧]

ಪ್ರಜಾವಾಣಿ ದಿನಪತ್ರಿಕೆ ದಿನಾಂಕ ೧೦-ಡಿಸೆಂಬರ್-೨೦೦೯ರ ಗುರುವಾರದ ಕರಾವಳಿ ಪ್ರಜಾವಾಣಿಯ ಮುಖಪುಟದಲ್ಲಿ ಹಿರಿಯ ಸಾಹಿತಿ ಹಾಗೂ ಚಿಂತಕರು ಆದ ಏರ್ಯ ಲಕ್ಷ್ಮೀನಾರಾಯಣ ಆಳ್ವರವರು ತಮ್ಮ ಆಳಿದರೂ ಆಳಿಯದ ಸಂಬಂಧ ಸೂತ್ರ 'ಅಳಿಯಕಟ್ಟು' ಲೇಖನದಲ್ಲಿ ತುಳುನಾಡಿನ ಕುಟುಂಬ ಪದ್ದತಿಯಲ್ಲಿನ ಅಳಿಯಕಟ್ಟು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಕುಟುಂಬದ ಆಧಿಕಾರ, ಆಸ್ತಿಯ ಹೊಣೆಗಾರಿಕೆ, ಉತ್ತರಾಧಿಕಾರಗಳನ್ನು ನಿರ್ಧರಿಸುವ ರೀತಿಯನ್ನು ಅಧ್ಯಯನ ಮಾಡಿದಾಗ ಈ ಎರಡು ಪಂಗಡಗಳಲ್ಲಿನ ಭಿನ್ನತೆಯ ಸ್ವರೂಪ ತಿಳಿಯುತ್ತದೆ ಎಂದಿದ್ದಾರೆ. ಏರ್ಯ ಲಕ್ಷ್ಮೀನಾರಾಯಣ ಆಳ್ವರವರು ಮನುಷ್ಯರಿಗೆ ಮಾತ್ರವಲ್ಲ ಪ್ರಾಣಿಗಳಿಗೂ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳ ಮೇಲೆ ಪ್ರೀತಿಸುವುದು ಸಹಜ ಮತ್ತು ಸತ್ಯ, ತಾನು ಗಳಿಸುವುದು, ಉಳಿಸಿರುವುದು ತನಗೂ ತನ್ನ ಮಕ್ಕಳಿಗೂ ಸೇರಬೇಕೆಂಬ ಬಯಕೆ ಸಹಜವಾಗಿದೆ. ಈ ಮೂಲರೂಪವಾದ ಗುಣಧರ್ಮವನ್ನು ಅನುರಿಸಿ ಮಕ್ಕಳಕಟ್ಟು ರೂಪಗೊಂಡಿತು. ಈ ನಿಟ್ಟಿನಲ್ಲಿ ಈ ಕುಟುಂಬ ಪದ್ಧತಿ ರೂಪಗೊಂಡು, ಬೆಳೆದುಬಂದ ಒಂದು ಮಾತೃಮೂಲ ಪದ್ಧತಿ ಅಳಿಯಕಟ್ಟು ಎನ್ನುತ್ತಾರೆ.[೨]

ಪಿತೃಪ್ರಧಾನ ಕುಟುಂಬದಲ್ಲಿ ಕುಟುಂಬದ ಯಜಮಾನನಾದ ತಂದೆಯನ್ನು ಪಿತೃವಂಶದ ಮೂಲಕ ಇವರ ಪೀಳಿಗೆಯನ್ನು ಗುರುತಿಸಲಾಗುತ್ತದೆ. ಆಸ್ತಿಯ ಹೊಣೆಗಾರಿಕೆ ತಂದೆ(ಪಿತೃ) ನಿರ್ವಹಿಸುತ್ತಾರೆ.

ತಂದೆಯ ನಂತರ ಇವರ ಆಸ್ತಿ ಗಂಡುಮಕ್ಕಳಿಗೆ ವರ್ಗಾವಣೆ ಯಾಗುತ್ತದೆ ಇಲ್ಲಿ ಮದುವೆಯಾದ ಹೆಣ್ಣು ತನ್ನ ಗಂಡನ ಮನೆಗೆ ಬಂದು ವಾಸ ಮಾಡುತ್ತಾಳೆ. ಇದು ಪಿತೃಪ್ರಧಾನ, ಪುರುಷಪ್ರಧಾನವಾದ ಕುಟುಂಬವಾಗಿದೆ. ಆದರೆ ಅಳಿಯಕಟ್ಟು ಕುಟುಂಬಪದ್ದತಿಯು ಮಕ್ಕಳಕಟ್ಟು ಕುಟುಂಬ ಪದ್ಧತಿಗೆ ವಿರುದ್ದವಾದ, ಮಾತೃಮೂಲದ ಮಾತೃವಂಶೀ ನೆಲೆಯ, ಮಾತೃ ಪ್ರಧಾನವಾದ ಪದ್ಧತಿಯನ್ನು ತುಳುನಾಡಿನ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಅಳಿಯಕಟ್ಟು' ಎಂದು ಕರೆಯಲಾಗುತ್ತದೆ. ಮಲೆಕುಡಿಯರ ಸಮುದಾಯದಲ್ಲಿ ಸಹ ಅಳಿಯಕಟ್ಟು ಕಂಡುಬರುತ್ತದೆ. ಮಲೆಕುಡಿಯ ಸಮುದಾಯದಲ್ಲಿ ಮಾತ್ರವಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ತುಳುನಾಡಿನ ಶೇಕಡ ೭೫ರಷ್ಟು ಜನರು ಈ ಅಳಿಯಕಟ್ಟಿಗೆ ಸೇರಿದವರಾಗಿದ್ದಾರೆ. ಮಹಿಳೆಯರಿಗೆ ಹೆಚ್ಚಿನ ಗೌರವ, ಅಧಿಕಾರ, ಹಕ್ಕು ಬಾಧ್ಯತೆಗಳನ್ನು ನೀಡಲಾದ ಮಹಿಳಾ ಪ್ರಧಾನವಾದ, ಮಾತೃಮೂಲವಂಶದ ಮೂಲಕ ಗುರುತಿಸಲಾದ, ಕುಟುಂಬ ಪದ್ಧತಿ 'ಅಳಿಯಕಟ್ಟು' ಆಗಿದೆ. ಅಳಿಯಕಟ್ಟಿನ ನಿಯಮದ ಪ್ರಕಾರ ಕುಟುಂಬದ ಪರಂಪರಾಗತವಾಗಿಬಂದ ಭೂಮಿ, ಧನಕನಕ, ಸ್ಥಿರಾಸ್ತಿಯ ಅಧಿಕಾರವು ಕುಟುಂಬದ ಹೆಣ್ಣುಮಕ್ಕಳಿಗೆ ಸಲ್ಲುತ್ತದೆ. ಇದರ ಉತ್ತರಾಧಿಕಾರ ಹೆಣ್ಣುಮಕ್ಕಳಿಗೆ, ನಂತರ ಹೆಣ್ಣಿನ ಹೆಣ್ಣುಮಕ್ಕಳ ಮಕ್ಕಳಿಗೆ ಹೀಗೆ ಇದು ಮುಂದುವರಿಯುತ್ತಾ ಹೋಗುತ್ತದೆ. ಇಲ್ಲಿ ಗಂಡುಮಕ್ಕಳಿಗೆ ಅವರ ಜೀವನಾಂಶದವರೆಗೆ ಮಾತ್ರ ಅನುಭವಿಸುವ ಹಕ್ಕು ಇದೆ. ಆದರೆ ಉತ್ತರಾಧಿಕಾರಕ್ಕೆ ಇಲ್ಲಿ ಇವರಿಗೆ ಅವಕಾಶವಿಲ್ಲ. ಗಂಡಿನ ಮರಣದ ನಂತರ ಆತನ ಸ್ವಾಧೀನದಲ್ಲಿರುವ ಕುಟುಂಬದ ಪರಂಪರಾಗತ ಸ್ಥಿರಾಸ್ತಿಯಾದ ಭೂಮಿ, ಮನೆ, ಆತನ ಮಕ್ಕಳಿಗೆ ಸಲ್ಲುವುದಿಲ್ಲ. ಇದಕ್ಕೆ ಬದಲಾಗಿ ಇದು ಆತನ ಸಹೋದರಿ ಅಥವಾ ಸಹೋದರಿಯ ಹೆಣ್ಣುಮಕ್ಕಳಿಗೆ ಮಾತ್ರ ಸಲ್ಲುತ್ತದೆ. ಗಂಡನ ಮರಣದ ನಂತರ ಹೆಣ್ಣಿಗೆ ತನ್ನ ಗಂಡನ ಭೂಮಿ ಮನೆಯಲ್ಲಿ ಯಾವುದೇ ರೀತಿಯ ಹಕ್ಕು ಇಲ್ಲ. ತನ್ನ ಮಕ್ಕಳೊಂದಿಗೆ ತನ್ನ ತಾಯಿ ಮನೆಯಲ್ಲಿನ ತನ್ನ ಆಸ್ತಿಗೆ ಮಹಿಳೆ ಹಕ್ಕುದಾರಳಾಗಿರುತ್ತಾಳೆ.

ಪುರುಷಪ್ರಧಾನ ಕುಟುಂಬ ಪದ್ಧತಿಯ ಪ್ರಕಾರ ತನ್ನ ಗಂಡನ ಮರಣದ ನಂತರ ವಿಧವೆಯಾದ ಮಹಿಳೆ ತನ್ನ ಮಕ್ಕಳೊಂದಿಗೆ ತನ್ನ ಗಂಡನ ಮನೆಯಲ್ಲಿಯೇ ನೆಲೆಸುವ ತನ್ನ ಗಂಡನಿಗೆ ಬರಬೇಕಾದ ಆಸ್ತಿಯ ಪಾಲು ಪಡೆಯುವ, ಅನುಭವಿಸುವ ಅಧಿಕಾರವನ್ನು ಹೊಂದಿರುವುದು ಕಂಡುಬರುತ್ತದೆ. ಆದರೆ ಮಕ್ಕಳಕಟ್ಟು ಕುಟುಂಬ ಪದ್ಧತಿಯಲ್ಲಿ ಇದಕ್ಕೆ ವಿರುದ್ಧವಾದ ಸ್ಥಿತಿಯನ್ನು ಕಾಣುತ್ತೇವೆ. ಗಂಡನ ಮರಣದ ನಂತರ ಮಹಿಳೆ ತನ್ನ ಗಂಡನ ಮನೆಯಲ್ಲಿರುವುದಿಲ್ಲ, ಗಂಡನ ಆಸ್ತಿಗೆ ಜವಾಬ್ದಾರಳಲ್ಲ. ಪಿತೃಮೂಲ ಪದ್ಧತಿಯನ್ನು ಅನುಸರಿಸುವವರಿಗೆ ಅಳಿಯಕಟ್ಟು ಪದ್ಧತಿ ವಿಶೇಷವೆನಿಸುತ್ತದೆ. ಇಲ್ಲಿ ತಂದೆ ಬೇರೆ ಕುಟುಂಬ, ಆತನ ಹೆಂಡತಿ ಮತ್ತು ಮಕ್ಕಳು ಬೇರೆ ಕುಟುಂಬ, ತನ್ನ ತಾಯಿ, ತಾಯಿಯ ಗಂಡು ಮಕ್ಕಳು, ತಾಯಿಯ ಹೆಣ್ಣುಮಕ್ಕಳ ಮಕ್ಕಳು ಇವರೆಲ್ಲ ಒಂದು ಕುಟುಂಬವಾಗುತ್ತಾರೆ. ಕುಟುಂಬದ ಶುಭ ಇಲ್ಲವೇ ಅಶುಭ ಸಮಯದಲ್ಲಿ ಇದೇ ರೀತಿಯ ಆಚರಣೆ ಕಂಡುಬರುತ್ತದೆ. ತಂದೆಯ ಮನೆಯಲ್ಲಿ ಯಾರಾದರು ಸತ್ತರೆ ಅಥವಾ ಹೆತ್ತಾಗ ತಾಯಿಯ ಮಕ್ಕಳಿಗೆ ಸೂತಕವಾಗುವುದಿಲ್ಲ. ತನ್ನ ತಾಯಿಯ ಮನೆಯಲ್ಲಿ ಯಾರಾದರು ಹೆತ್ತರೆ ಅಥವಾ ಸತ್ತರೆ ಸೂತಕವಾಗುತ್ತದೆ. ಅಂತೆಯೇ ಇಲ್ಲಿ ಆಚರಿಸುವ ದೈವ, ನೇಮಕೋಲದ ಆಚರಣೆಯ ಖರ್ಚು ವೆಚ್ಚಗಳನ್ನು ಸಹ ಇದೇ ರೀತಿ ಹಂಚಿಕೊಳ್ಳುತ್ತಾರೆ. ಈ ಪದ್ಧತಿಯ ಆಚರಣೆಯನ್ನು ಬಂಟ್ವಾಳ ತಾಲೂಕಿನ ಕನ್ಯಾನದ ಅಕ್ಕರೆಕೋಡೆಗೆ ಕ್ಷೇತ್ರ ಕಾರ್ಯಕ್ಕೆ ಹೋದಾಗ ಅಲ್ಲಿ ಕೃಷ್ಣ ಮಲತ್ತಾಯ ಕುಟುಂಬದ ನೇಮ ನಡೆಯಿತು. ಇದರ ಖರ್ಚು ವೆಚ್ಚವು ಸಹ ತಾಯಿ-ಮಕ್ಕಳ ಲೆಕ್ಕ ತಂದೆಯ ಲೆಕ್ಕ ಎಂದೇ ಹಂಚಿಕೊಂಡು ವೆಚ್ಚವನ್ನು ಭರಿಸುವುದು ಕಂಡುಬರುತ್ತದೆ.

## ಅಳಿಯಕಟ್ಟಿನ ಮೂಲ: ಸೃಷ್ಠಿ ಪುರಾಣದ ಹಿನ್ನೆಲೆ

ಶತ ಶತಮಾನಗಳಿಂದ ದಕ್ಷಿಣ ಕನ್ನಡದ ಮಲೆಕುಡಿಯ ಸಮುದಾಯದವರಲ್ಲಿ ಈ ಅಳಿಯಕಟ್ಟು ಕುಟುಂಬ ಪದ್ಧತಿ ಆಚರಣೆಯಲ್ಲಿದೆ. ತುಂಬಾ ವಿಶಿಷ್ಟವಾದ ಈ ಅಳಿಯಕಟ್ಟು ಪದ್ಧತಿ ಮೂಲ ಹೇಗೆ? ಎಲ್ಲಿ ಎಂಬ ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಾ ಹೋದಾಗ ಇದಕ್ಕೆ ಪೌರಾಣಿಕ ಹಿನ್ನೆಲೆ ಇರುವುದು ಗೋಚರವಾಗುತ್ತದೆ. ಪುರಾಣದಲ್ಲಿನ ದಂತ ಕತೆಯ ಮೇಲೆ ಇದು ಬೆಳಕು ಚೆಲ್ಲುತ್ತದೆ. ಪುರಾಣದಲ್ಲಿನ ಶೇಷನ ತಂಗಿಯಾದ ಜರತ್ಕಾರುವಿನಿಂದ ಈ ಅಳಿಯಕಟ್ಟು ಪದ್ಧತಿ ಆರಂಭ ವಾಯಿತು. ಇದು ನಾಗಮಂಡಲದ ಆಚರಣೆಯಾಗಿದೆ. ಆದ್ದರಿಂದಲೇ ಈ ಪ್ರದೇಶಕ್ಕೆ ನಾಗರಖಂಡ ಎಂದು ಹೆಸರು ಬಂದಿತು ಎಂಬ ಅಭಿಪ್ರಾಯವನ್ನು ಏರ್ಯ ಲಕ್ಷ್ಮಿನಾರಾಯಣ ಆಳ್ವರವರು ಅಭಿಪ್ರಾಯಪಟ್ಟಿದ್ದಾರೆ. ಐತಿಹಾಸಿಕವಾಗಿ ಭೂತಾಳ ಪಾಂಡ್ಯನಿಂದ ಈ ಅಳಿಯಕಟ್ಟು ಪದ್ಧತಿ ಆರಂಭವಾಯಿತು. ಆದ್ದರಿಂದ ಈ ಪದ್ಧತಿಗೆ 'ಭೂತಾಳ ಪಾಂಡ್ಯನ ಕಟ್ಟು' ಎಂಬ ಹೆಸರು ಬಂದಿತು ಎನ್ನುತ್ತಾರೆ. ಹಳೆಯ ಸಾಂಪ್ರದಾಯಿಕ ಪದ್ಧತಿಯ ಕೆಲವು ಜನರು ಹೇಳುವ ಪ್ರಕಾರ ಬಹಳ ಹಿಂದಿನ ಕಾಲದಲ್ಲಿ ಪುರುಷ ಆಹಾರಕ್ಕಾಗಿಯೇ ನಿರಂತರವಾದ ಹೋರಾಟವನ್ನೇ ಮಾಡಬೇಕಾಯಿತು. ಆಹಾರಕ್ಕಾಗಿ ಗಂಡು ಮನೆ ಬಿಟ್ಟು ಬಹಳಕಾಲ ಇರಬೇಕಾದ ಸ್ಥಿತಿ ಬರುತ್ತದೆ. ಆಗ ಮನೆಯ ಸುಧಾರಣೆ, ನಿರ್ವಹಣೆಯನ್ನು ಹೆಂಗಸರೇ ನೋಡಿಕೊಳ್ಳುತ್ತಾರೆ. ಆಕಾಲದ ದಿನಗಳಿಂದಲೇ ಈ ಪದ್ಧತಿ ಬಂದಿರಬೇಕು ಎಂಬ ಅಭಿಪ್ರಾಯವಿದೆ ಎನ್ನುತ್ತಾರೆ. ದಿ॥ ಗೋವಿಂದ ಪೈರವರ ಅಭಿಪ್ರಾಯದಂತೆ ದಕ್ಷಿಣ ಕನ್ನಡದ ಅಳಿಯಕಟ್ಟು ಪದ್ಧತಿಯ ಮೂಲ ಕ್ರಿ.ಪೂ. ಹಿಂದಿನದಾಗಿದೆ. ಇವರ ಪ್ರಕಾರ ಭೂತಾಳ ಪಾಂಡ್ಯ ಈ ಅಳಿಯಕಟ್ಟು ಪದ್ಧತಿಯ ಮೂಲ ಅಲ್ಲ. ಡೆಕ್ಕನ್ ಕಾಲೇಜಿನ ಇತಿಹಾಸ ವಿಭಾಗದ ಮುಖ್ಯಸ್ಥರಾದ ದಿವಂಗತ ಡಾ॥ ಭಾಸ್ಕರ ಆನಂದ ಸಾಲೆತ್ತೂರು ರವರು ೧೨ನೇ ಶತಮಾನಕ್ಕಿಂತ ಮೊದಲೇ ಈ ಅಳಿಯಕಟ್ಟು ಪದ್ಧತಿ ದಕ್ಷಿಣ ಕನ್ನಡದಲ್ಲಿ ಇರುವುದನ್ನು ಗುರುತಿಸುತ್ತಾರೆಂಬ ಉಲ್ಲೇಖವಿದೆ.[೫]

**ಮದ್ರಾಸು ಅಳಿಯ ಸಂತಾನ ಕಾಯಿದೆ ೧, ೧೯೪೯, Madras Aliyasanthana Act ೧೯೪೯.**

ಸ್ವಾತಂತ್ರ್ಯ ನಂತರದಲ್ಲಿ ೧೯೪೯ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸು ಸಂಸ್ಥಾನದಲ್ಲಿದ್ದಾಗ ಅಳಿಯ ಸಂತಾನಕ್ಕೆ ಸಂಬಂಧಿಸಿದಂತೆ **ಮದ್ರಾಸು ಅಳಿಯ ಸಂತಾನ ಕಾಯಿದೆ. ೧, ೧೯೪೯. Madras Aliyasanthana Act IX of ೧೯೪೯** ಜಾರಿಗೆ ಬರುತ್ತದೆ. ಈ ಕಾಯಿದೆ ಪ್ರಕಾರ ಅವಿಭಕ್ತ ಕುಟುಂಬದ ಆಸ್ತಿಯಲ್ಲಿ ಕೂಡುಕುಟುಂಬದಲ್ಲಿನ ವ್ಯಕ್ತಿಗೆ ಪ್ರತ್ಯೇಕವಾದ ಪಾಲು ಕೇಳುವ ಹಕ್ಕು ದೊರೆಯಿತು. ಆದರೆ ಇದಕ್ಕೆ ಈ ಕಾಯಿದೆಯಲ್ಲಿ ಹಲವಾರು ಷರತ್ತುಗಳಿವೆ. ಆ ಷರತ್ತುಗಳೆಂದರೆ:

೧. ಅವಿಭಕ್ತ ಕುಟುಂಬದ ಅರ್ಧಕ್ಕೆ ಹೆಚ್ಚು ಸದಸ್ಯರು ಒಟ್ಟಿಗೆ ಸೇರಿ ಪಾಲು ಕೇಳಬೇಕು. ಒಬ್ಬರೇ ಪಾಲು ಕೇಳುವಂತಿಲ್ಲ. ೨. ಪಾಲು ಕೇಳುವ ಕುಟುಂಬವು ಮೂರು ತಲೆಮಾರಿಗಿಂತ ಮೀರಿದ್ದರೆ, ಕಾಲು ಅಂಶ .ಅವರು ಪ್ರಕಾರ ಮುಕ್ಕಾಲು ಅಂಶ ಜನಸಂಖ್ಯೆಯ ಪಾಲು ಸಿಗುತ್ತದೆ. ೩. ಪಾಲು ಕೇಳುವ ಕುಟುಂಬವು ಮೂರು ತಲೆಮಾರುಗಳಿಗಿಂತ ಕೆಳಗಿನದ್ದಾಗಿದ್ದರೆ ಅರ್ಧ ಅಂಶ ಭೂಮಿ, ಸದಸ್ಯೆಯ ಪ್ರಕಾರ ಅರ್ಧ ಅಂಶದಷ್ಟು ಶಾಖೆಯ ಪ್ರಕಾರ ಪಾಲು ಸಿಗುತ್ತದೆ. ೪. ಪಾಲು ಕೇಳುವ ಶಾಖೆಯ ಕುಟುಂಬದ ಮೊದಲನೇ ಪಾಲು ಕೇಳಬಹುದು ಅಥವಾ ಇತರರು ಪಾಲು ಕೇಳಲು ಇವಳ ಒಪ್ಪಿಗೆ ಇರಬೇಕು. ೫. ಕುಟುಂಬದ ಸದಸ್ಯ ತಾನು ಸ್ವಂತಕ್ಕೆ ಗಳಿಸಿದ ಆಸ್ತಿಗೆ ತಾನು ಹಕ್ಕುದಾರನಾಗಿರುತ್ತಾನೆ.

ತಾನು ಲಿಖಿತವಾಗಿ ತನ್ನ ಇಷ್ಟವನ್ನು ತಿಳಿಸಿದರೆ ಅದು ತನ್ನ ಹೆಂಡತಿ ಮಕ್ಕಳಿಗೆ ಹೋಗತಕ್ಕದ್ದು. ಒಂದು ವೇಳೆ ಈ ವ್ಯಕ್ತಿ ಯಾವುದೇ ರೀತಿಯ ಲಿಖಿತ ವೀಲುನಾಮೆ ಮಾಡದೆ ಸತ್ತರೆ ಈತ ಗಳಿಸಿದ ಆಸ್ತಿ ತನ್ನ ಹೆಂಡತಿ ಮಕ್ಕಳಿಗೆ ಸೇರದೆ ಇದು ತನ್ನ ಸಹೋದರಿಯರಿಗೆ ಅಥವಾ ಸಹೋದರಿಯ ಹೆಣ್ಣು ಮಕ್ಕಳಿಗೆ ಸಲ್ಲುತ್ತದೆ. ೬. ಈ ಕುಟುಂಬದಲ್ಲಿ ಹೆಣ್ಣು ಇಲ್ಲದೇ ಇದ್ದರೆ ಈ ಆಸ್ತಿ ಅಳಿಯನ ಇಲ್ಲವೆ. ೭. ಈ ಕುಟುಂಬದಲ್ಲಿ ಹೆಣ್ಣು ಇಲ್ಲದೇ ಇದ್ದರೆ ಈ ಆಸ್ತಿ ಅಳಿಯನ ಸಂತಾನದ ಕುಟುಂಬದ ಹತ್ತಿರದ ಸಂತತಿಗೆ ಸಲ್ಲಬೇಕು.

ಈ ಕಾನೂನು ಬಂದು ೭ ವರ್ಷದ ನಂತರ ಅಳಿಯ ಸಂತಾನ ಕಟ್ಟಿನಲ್ಲಿ ಬದಲಾವಣೆಯನ್ನು ತರುವ ಕಾನೂನನ್ನು ೧೯೫೬ರಲ್ಲಿ ಮದ್ರಾಸು ಸರ್ಕಾರ ಜಾರಿಗೆ ತಂದಿತು. Hindu secession Act-No ೩೦, of ೧೯೫೬, Dated ೧೭-೦೬-೧೯೫೬. ಈ ಹಿಂದೂ ಉತ್ತರಾಧಿಕಾರಿ ಕಾಯಿದೆ ೧೯೫೬ರ ಪ್ರಕಾರ ಅಳಿಯಕಟ್ಟಿನ ಒಬ್ಬ ಗಂಡು ಅವಿಭಕ್ತ ಕುಟುಂಬದ ವ್ಯಕ್ತಿಗೆ ಆಸ್ತಿಯಲ್ಲಿ ಹಕ್ಕು ಇದೆ. ಈತ ತನ್ನ ಜೀವಿತದ ಅವಧಿಯಲ್ಲಿ ವೀಲು ಮಾಡದೇ ಇದ್ದರೂ ಈತ ಸತ್ತ ನಂತರ ತನ್ನ ಹೆಂಡತಿ ಮಕ್ಕಳಿಗೆ ಆಸ್ತಿಯಲ್ಲಿ ಪಾಲು ಇದೆ. ಕುಟುಂಬದ ಒಟ್ಟು ಜನಸಂಖ್ಯೆಯಲ್ಲಿ ಒಂದು ಪಾಲನ್ನು ತಲೆಮಾರು ಪಾಲು ಎಂದು ಆತನ ಹೆಂಡತಿ ಮಕ್ಕಳಿಗೆ ಹೋಗತಕ್ಕದ್ದು. ಒಂದು ವೇಳೆ ಅವಿಭಕ್ತ ಕುಟುಂಬದ ಆಸ್ತಿ ಪಾಲು ಆಗದೇ ಅದ್ದರೆ ಗಂಡುಮಗ ತಾನು ವೀಲ್ ಮಾಡಿದ್ದಲ್ಲಿ ಈತ ಮರಣದ ನಂತರ ಈತನ ಆಸ್ತಿ ಹೆಂಡತಿ ಮಕ್ಕಳಿಗೆ ಸಿಗಬೇಕು.

೧೯೫೬ ನಂತರದ ದಿನಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಮೈಸೂರು ಪ್ರಾಂತ್ಯದೊಡನೆ ಸೇರಿಕೊಂಡ ನಂತರ Mysore Amendment Act ೧೯೬೧, ದಿನಾಂಕ ೧೧-೦೧-೧೯೬೧ ಜಾರಿಗೆ ಬಂದಿತು. ಈ ಕಾಯಿದೆಯಿಂದಾಗಿ, ೧೯೪೯ರ ಮದ್ರಾಸು ಅಳಿಯ ಸಂತಾನ ಕಾನೂನು ಮುಕ್ತಾಯವಾಯಿತು.

೧೯೬೨ರಲ್ಲಿ ಜಾರಿಗೆ ಬಂದ ಕಾನೂನು ಸಹ ಅಳಿಯಕಟ್ಟು ಸಂತಾನಕ್ಕೆ ಧಕ್ಕೆಯಾಯಿತು. ಏನೇ ಕಾನೂನುಗಳು ಜಾರಿಗೆ ಬಂದರೂ ಸಹ ದ.ಕ.ಜಿಲ್ಲೆಯ ಸಾಮಾಜಿಕ ಆಚರಣೆಗಳು ಅಳಿಯಕಟ್ಟು ಸಂಬಂಧಗಳಾಗಿವೆ.

1. The madras Aliya Santhana Karnatakas Ammendment Act 1961.

2. The medras Aliya Santhana Karnataka Ammendment Act 1978 ಈ ಕಾಯ್ದೆಗಳಲ್ಲಿ ಅಳಿಯ ಸಂತಾನಕ್ಕೆ ಸಂಬಂಧಿಸಿದ ಕಾಯ್ದೆಗಳಾಗಿವೆ.

### ೨.೫. ವೈವಾಹಿಕ ಸ್ಥಿತಿ

ಎಡ್ಗರ್ ಥರ್ಸ್ಟನ್‌ರವರು ಬರೆದ Caste and creads of south India' ಎಂಬ ಕೋಶದಲ್ಲಿ ಮಲೆ ಕುಡಿಯರಲ್ಲಿ ಗಂಡ ಸತ್ತ ಒಬ್ಬಳು ಹೆಂಗಸು ತನ್ನ ಮಗನನ್ನು ಮದುವೆಯಾದ ನಿದರ್ಶನ ಕೊಟ್ಟಿದ್ದಾರೆ(ಪುಟ-೪೧ ಅವಲೋಕನ)[೧೯] ಎಂಬುದನ್ನು ಡಾ. ಶಿವರಾಮಕಾರಂತರು ಉಲ್ಲೇಖಿಸಿದ್ದಾರೆ. ಇದರಿಂದ ಸಗೋತ್ರ ವಿವಾಹ ಪದ್ಧತಿ ಇವರಲ್ಲಿ ಆಚರಣೆ ಇತ್ತು ಎಂಬುದು ತಿಳಿಯುತ್ತದೆ ಇವರ ಪುರುಷರ ಮೂರು ಮನೆತನದ ಹೆಸರುಗಳಿಂದ ನಾಲುಮಲೆಯವರನ್ನು ಗುರುತಿಸಲ್ಪಡುವರು. ಈ ಎರಡು ಪಂಗಡಗಳಲ್ಲಿ ವಿವಾಹ ನಿಷೇಧವಿದೆ. ಇಲ್ಲಿ ಸೋದರಮಾವ, ಸೋದರತ್ತೆಯಂದಿರ ಮಕ್ಕಳೊಂದಿಗೆ ವಿವಾಹ ನಡೆಯುತ್ತದೆ.

ಇಲ್ಲಿ ತೆರಪದ್ಧತಿ ಇದೆ. ಊರುಮಲೆಗಳಲ್ಲಿ ಅಳಿಯಸಂತಾನ ಪದ್ಧತಿ ಇದೆ. ಇಲ್ಲಿ ಆಸ್ತಿಯು ಹೆಣ್ಣುಮಕ್ಕಳಿಗೆ ಇವರ ಹೆಣ್ಣುಮಕ್ಕಳಿಗೆ ಹಂಚುತ್ತದೆ. ನ್ಯಾಯ ಪಂಚಾಯತಿಯ ಮುಖ್ಯಸ್ಥನನ್ನು ಗುರಿಕಾರ ಎಂದು ಕರೆಯಲಾಗುವುದು. ಸತ್ತವರನ್ನು ಸುಡುತ್ತಾರೆ. ಸೂತಕ ಆಚರಣೆ ಇದೆ. ಹಿಂದೂ ಸಂಪ್ರದಾಯ ಆಚರಣೆ, ಭೂತದಲ್ಲಿ ನಂಬಿಕೆ, ಶ್ರೀ ಕುಕ್ಕೆ ಸುಬ್ರಮಣ್ಯ, ಧರ್ಮಸ್ಥಳದ ಮಂಜುನಾಥ, ಆರಾಧ್ಯ ದೈವಗಳಾಗಿವೆ. ವಿಶುಸಂಕ್ರಮಣ, ನಾಗರ ಪಂಚಮಿ, ಕದಿರು ಹಬ್ಬ, ದೀಪಾವಳಿಗಳನ್ನು ಆಚರಿಸುತ್ತಾರೆ. ಸುಬ್ರಮಣ್ಯದ ಮಲೆಕುಡಿಯರಲ್ಲಿ ಏಕ ಪತ್ನಿತ್ವ, ವಿವಾಹ ಪದ್ಧತಿ, ಅಳಿಯಕಟ್ಟು ಪದ್ಧತಿ ಆವರಣೆಯಲ್ಲಿದೆ. ಇವರು ತಮ್ಮ ವಿವಾಹ ಸಮಾರಂಭಗಳನ್ನು ತಮ್ಮ ಹತ್ತಿರದ ಸುಬ್ರಮಣ್ಯ ದೇವಸ್ಥಾನದಲ್ಲಿ ಏರ್ಪಡಿಸುತ್ತಿದ್ದಾರೆ ಇದು ಇವರಿಗೆ ತುಂಬ ಸರಳ ಹಾಗು ಆರ್ಥಿಕವಾಗಿ ಉಳಿತಾಯವು ಆಗುವುದರಿಂದ ಇಲ್ಲಿ ಬಹುತೇಕ ದೇವಸ್ಥಾದಲ್ಲಿ ವಿವಾಹ ಮಾಡಿತ್ತಿದ್ದಾರೆ. ದಿನಾಂಕ ೧೩.೫.೨೦೦೯ರಂದು ದೇವಸ್ಥಾನದಲ್ಲಿ ಆದ ಎಂ.ಕೃಷ್ಣರವರ ವಿವಾಹ ಪದ್ಧತಿಯಲ್ಲಿ ಈಗಿನ ಆಧುನಿಕ ಪಧ್ಧತಿಯು ವಿಧಿ-ವಿಧಾನಗಳನ್ನು ಇಲ್ಲಿ ಆಚರಿಸಿರುವುದು ಕಂಡುಬರುತ್ತದೆ. ಇವರ ಹಳೆಯ ಸಾಂಪ್ರಾದಾಯಿಕ ಆಚರಣೆಗಳು ಬದಲಾಗಿ ಆಧುನಿಕ ಆಚರಣೆಗಳು ಬಳಕೆಯಲ್ಲಿವೆ ವಧು, ವರರ, ಅಲಂಕಾರ, ಮಾಂಗಲ್ಯ ಧಾರಣೆ, ಸಪ್ತಪದಿ, ಆರತಕ್ಷತೆ ಬ್ರಹ್ಮಣ-ಭಟ್ಟರನ್ನು ಕರೆಸಿ ಶಾಸ್ತ್ರಗಳಲ್ಲಿ ಮಾಡುವುದು ಎಲ್ಲರೂ ಆಧುನಿಕತೆಯ ಪರಂಪರೆಯನ್ನು ಸೂಚಿಸುತ್ತದೆ.

ಮಲೆಕುಡಿಯ ಸಮುದಾಯದಲ್ಲಿನ ವಿವಾಹ ಪದ್ಧತಿಯು ಏಕ ಪತ್ನಿತ್ವ ವಿವಾಹವು ಪ್ರಧಾನವಾಗಿ ಕಂಡುಬರುತ್ತದೆ. ಅಳಿಯಕಟ್ಟು ಮತ್ತು ಮಕ್ಕಳಕಟ್ಟು ಸಂತಾನಕ್ಕೆ ಅನುಗುಣವಾಗಿ ಮತ್ತು ಬರಿಗಳ ಆಧಾರದ ಮೇಲೆ ವಿವಾಹ ಸಂಬಂಧಗಳು ಏರ್ಪಡುತ್ತವೆ. ಬದಲಾದ ಕಾಲಗತಿಗೆ ಅನುಗುಣವಾಗಿ ವಿವಾಹದ ಆಯ್ಕೆ, ನಿಶ್ಚಿತಾರ್ಥ, ಮಾಂಗಲ್ಯಧಾರಣೆ, ವಿವಾಹ ಸಂಸ್ಕಾರಗಳಲ್ಲಿ ಆಧುನಿಕತೆಯ ಪ್ರಭಾವ ಬೀರಿದ್ದರೂ ಸಹ ಸಂಪ್ರದಾಯಿಕ ಆಚರಣೆಗಳು ಇವರಲ್ಲಿ ಈಗಲೂ ಜೀವಂತವಾಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ವಯಸ್ಸು ಮೀರಿದ ಗಂಡು-ಹೆಣ್ಣುಗಳಿಗೆ ವಿವಾಹ ಸಂಬಂದಗಳು ಕೂಡಿ ಬರದೆ ಹಾಗೆಯೇ ಉಳಿದಿರುವ ಸ್ಥಿತಿ ಇವರಲ್ಲಿ ಇದೆ. ಅಂತರ್ಜಾತಿ ವಿವಾಹ, ಸರಳ ವಿವಾಹ, ಸಾಮೂಹಿಕ ವಿವಾಹಗಳೂ ಸೇರಿದಂತೆ, ದೇವಸ್ಥಾನ ಛತ್ರಗಳಲ್ಲಿ ಇವರ ವಿವಾಹ ಸಮಾರಂಭಗಳನ್ನು ಏರ್ಪಾಡಾಗು ತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ವಿವಾಹ ಪರಿತ್ಯಜನ, ಬಿಡುಗಡೆ, ಮರುವಿವಾಹಗಳ ಪ್ರಕರಣಗಳು ಗೋಚರವಾಗುತ್ತದೆ. ಮಕ್ಕಳಕಟ್ಟು ಮತ್ತು ಅಳಿಯ ಕಟ್ಟು ಪಂಗಡಗಳ ನಡುವೆ ವೈವಾಹಿಕ ಸಂಬಂಧಗಳಿಗೆ ಈ ಸಮುದಾಯದಲ್ಲಿ ಅವಕಾಶವಿರುವುದಿಲ್ಲ. ಆದರೆ ಬದಲಾವಣೆಯ ಪ್ರಭಾವದಿಂದಾಗಿ ಒಂದು ಪ್ರಕರಣ ಮಾತ್ರ ಕಂಡುಬಂದಿದೆ.

ಅರಿಸಿನ ಮಗ್ಗಿಯ ಹತ್ಯಡ್ಕದ ಮೆದಿನದ ಮಾಯಿಲ ಮಲೆಕುಡಿಯ ಇವರಿಗೆ ಧರಣಮ್ಮ ೩೮ ವರ್ಷ, ಪೂವಪ್ಪ ೩೬ ವರ್ಷ, ಎಲ್ಯಣ್ಣ ೩೨ ವರ್ಷ, ಚೆನ್ನಮ್ಮ ೩೧ ವರ್ಷ, ಚೆನ್ನಪ್ಪ ೩೦ ವರ್ಷ, ಒಟ್ಟು ೫ ಮಕ್ಕಳಿದ್ದಾರೆ. ಇವರು ವಿವಾಹದ ವಯಸ್ಸಿಗೆ ಬಂದರೂ ಸಹ ಇವರಿಗೆ ಇದುವರೆಗೂ ಕಂಕಣ ಭಾಗ್ಯ ಕೂಡಿ ಬರದೇ ಇರುವುದು ಕಂಡುಬರುತ್ತದೆ. ಎಲ್ಲರೂ ೩೦ ವರ್ಷವನ್ನು ದಾಟಿದ್ದಾರೆ. ಇವರು ಈಗಲೂ ಅವಿವಾಹಿತರಾಗಿದ್ದಾರೆ. ಈ ಸಮುದಾಯದ ವೈವಾಹಿಕ ಸ್ಥಿತಿಯ ಅಧ್ಯಯನವು ಪು. ೭೫ರಲ್ಲಿನ ಮಲೆಕುಡಿಯ ಸಮುದಾಯದ ಲಿಂಗವಾರು ವೈವಾಹಿಕ ಸ್ಥಾನಮಾನ(ಮಾದರಿ ಸಮೀಕ್ಷೆ)ಗಳಲ್ಲಿ ದೊರೆತ ಮಾಹಿತಿಯು ಈ ಕೋಷ್ಟಕದಲ್ಲಿ ಪರಿಗಣಿಸಲಾಗಿದೆ.

## ಅಂಕಿ-ಅಂಶಗಳು ೨.೫(೧)

## ಮಲೆಕುಡಿಯ ಸಮುದಾಯದ ಲಿಂಗವಾರು ವೈವಾಹಿಕ ಸ್ಥಾನಮಾನಗಳು : (ಮಾದರಿ ಸಮೀಕ್ಷೆ)

| ಕ್ರ.ಸಂ. | ತಾಲ್ಲೂಕು | ಕುಟುಂಬಗಳ ಸಂಖ್ಯೆ | ವೈವಾಹಿಕ ಸ್ಥಾನಮಾನ | | | | | | | | | | | |
|---|---|---|---|---|---|---|---|---|---|---|---|---|---|---|
| | | | ಅವಿವಾಹಿತ | | | ವಿವಾಹಿತ | | | ವಿಧವಾ/ವಿಧುರ | | | ಬೇರ್ಪಟ್ಟವರು | | |
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಬೆಳ್ತಂಗಡಿ | ೩೮೯ | ೪೬೨ | ೪೦೮ | ೮೫೯ | ೩೦೩ | ೩೧೬ | ೬೦೬ | ೨೧ | ೮೭ | ೧೦೬ | ೧ | ೧ | ೨ |
| ೨ | ಸುಳ್ಯ | ೫೧ | ೬೧ | ೬೬ | ೧೨೭ | ೫೧ | ೫೫ | ೧೦೬ | – | ೧೪ | ೧೪ | – | – | – |
| ೩ | ಬಂಟ್ವಾಳ | ೩೫ | ೭೦ | ೪೫ | ೧೧೫ | ೪೭ | ೪೭ | ೯೪ | ೨ | ೭ | ೯ | – | – | – |
| ೪ | ಪುತ್ತೂರು | ೪೬ | ೭೧ | ೫೨ | ೧೨೩ | ೪೮ | ೬೧ | ೧೦೯ | ೧ | ೯ | ೧೦ | – | – | – |
| | ಒಟ್ಟು | ೫೨೧ | ೬೬೪ | ೫೭೧ | ೧೨೨೪ | ೪೪೯ | ೪೭೯ | ೯೧೫ | ೨೪ | ೧೧೭ | ೧೩೯ | ೧ | ೧ | ೨ |

### ೨.೬. ಸಂಸ್ಕಾರ ವಿಧಿಗಳು

ಮಲೆಕುಡಿಯ ಸಮುದಾಯದಲ್ಲಿನ ಸಾಮಾಜಿಕ ಸ್ಥಿತಿಗತಿಯು ಇವರ ಆಚರಿಸುವ ಸಂಪ್ರದಾಯ ಕ್ರಿಯಾವಿದಿಗಳು ಇವರ ಸಂಸ್ಕಾರಗಳಲ್ಲಿ ಕಂಡುಬರುತ್ತವೆ. ಜನನ, ನಾಮಕರಣ, ವಿವಾಹ, ಸಾವು, ಶಿಶುಮರಣ, ಕುಲೆಮದುವೆಗಳು, ಪುಣ್ಯತಿಥಿ, ಅಗೇಲು, ಅಲ್ಲದೆ ನೇಮ, ಕೋಲ, ಭೂತಾರಾದನೆ, ನಾಗಾರಾಧನೆ, ಬಲೀಂದ್ರಪೂಜೆ,ಪತ್ತನಾಜೆ ಪುರುಷಪೂಜೆ ಮುಂತಾದವುಗಳ ಆಚರಣೆಗಳ ಸಂಸ್ಕಾರಗಳಲ್ಲಿನ ವಿಶೇಷತೆಗಳು ಈ ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ನೆಲೆಗಟ್ಟಿನ ಬದುಕನ್ನು ವಿವರಿಸುತ್ತವೆ.

**೧. ಕುಟುಂಬ ಪದ್ಧತಿ:** ಸುಬ್ರಮಣ್ಯ ಪರಿಸರದ ಮಲೆಕುಡಿಯರಲ್ಲಿ ಗಂಡ-ಹೆಂಡತಿ ಮಕ್ಕಳನ್ನು ಒಳಗೊಂಡ ವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಇವು ಇಂದಿನ ಆಧುನಿಕ ಸರಳ ಕುಟುಂಬಗಳೇ ಆಗಿವೆ. ಇದು ಅಲ್ಲಲ್ಲಿ ಚದುರಿದ ಕುಟುಂಬಗಳಾಗಿವೆ. ತಮ್ಮ ಕೃಷಿ ತೋಟಗಳಲ್ಲಿ ನೆಲೆಸಿರುವ ಕುಟುಂಬಗಳಾಗಿವೆ. ಇವು ಅಳಿಯಕಟ್ಟು ಕುಟುಂಬಗಳಾಗಿವೆ. ಇವರ ಕುಟುಂಬದ ಸದಸ್ಯರು ಅಲ್ಲಲ್ಲಿ ಚದುರಿ ನೆಲೆಸಿದ್ದರೂ ಸಹ ಇವರು ತಮ್ಮ ಮೂಲ ಕುಟುಂಬದೊಂದಿಗೆ ಸಂಬಂಧವನ್ನು ಹೊಂದಿದ್ದಾರೆ. ತಂದೆ-ತಾಯಿ ಅವಿವಹಿತ ಮಕ್ಕಳು ಬೇರೆ ಬೇರೆ ಸ್ಥಳಗಳಲ್ಲಿ ವಾಸವಾಗಿರುತ್ತಾರೆ. ಇವರು ತನ್ನ ಮೂಲ ಕುಟುಂಬದಿಂದ ಬೇರೆಬೇರೆ ಏಕೆ ಆದರು ಎಂಬುದನ್ನು ಪರಿಶೀಲಿಸಿದಾಗ, ಒಬ್ಬರು ಎಂಟು ಎಕರೆ ಭೂಮಿಯಲ್ಲಿ ನೆಲೆಸಿದರೆ ಒಬ್ಬರಿಗೆ ಇಷ್ಟು ಭೂಮಿ ಸಿಗುವುದಿಲ್ಲ. ಹೀಗಾಗಿ ಕುಟುಂಬದ ಸದಸ್ಯರು ಅಲ್ಲಲ್ಲಿ ನೆಲೆಸಿದರೆ ಇರುವ ಭೂಮಿ ಅವರದ್ದೇ ಆಗುತ್ತದೆ ಎಂಬ ಭರವಸೆಯಿಂದಾಗಿ ಇವರು ಅಲ್ಲಲ್ಲಿ ಚದುರಿದ ಜೀವನ ನಡೆಸುತ್ತಿರುವುದು ಅಧ್ಯಯನದಿಂದ ತಿಳಿಯುತ್ತದೆ. ಇರುವ ಭೂಮಿಗೆ ದಾಖಲೆಗಳು ಸಿಗದೆ ೩೦ ವರ್ಷಗಳಿಂದಲೂ ಹಾಗೆಯೇ ಜೀವನ ಸಾಗಿಸುತ್ತಿದ್ದಾರೆ.

**೨. ವಿವಾಹ ಪದ್ದತಿ:** ಇವರಲ್ಲಿ ಅಳಿಯಕಟ್ಟು ಮತ್ತು ಮಕ್ಕಳಕಟ್ಟು ಎಂಬ ಎರಡು ಪಂಗಡಗಳಿವೆ. ಈ ಎರಡು ಪಂಗಡಗಳಲ್ಲಿ ವಿವಾಹ ನಿಷೇಧವಿದೆ. ಇಲ್ಲಿ ಸೋದರಮಾವ, ಸೋದರತ್ತೆಯಂದಿರ ಮಕ್ಕಳೊಂದಿಗೆ ವಿವಾಹ ನಡೆಯುತ್ತದೆ. ಇಲ್ಲಿ ತೆರಪದ್ಧತಿ ಇದೆ. ಊರುಮಲೆಗಳಲ್ಲಿ ಅಳಿಯಸಂತಾನ ಪದ್ಧತಿ ಇದೆ. ಇಲ್ಲಿ ಆಸ್ತಿಯು ಹೆಣ್ಣು ಮಕ್ಕಳಿಗೆ ಇವರ ಹೆಣ್ಣುಮಕ್ಕಳಿಗೆ ಹಂಚುತ್ತದೆ. ನ್ಯಾಯ ಪಂಚಾಯತಿಯ ಮುಖ್ಯಸ್ಥನನ್ನು ಗುರಿಕಾರ ಎಂದು ಕರೆಯಲಾಗುವುದು. ಸತ್ತವರನ್ನು ಸುಡುತ್ತಾರೆ. ಸೂತಕ ಆಚರಣೆ ಇದೆ. ಹಿಂದೂ ಸಂಪ್ರದಾಯ ಆಚರಣೆ, ಭೂತದಲ್ಲಿ ನಂಬಿಕೆ, ಶ್ರೀ ಕುಕ್ಕೆಸುಬ್ರಮಣ್ಯ, ಧರ್ಮಸ್ಥಳದ ಮಂಜುನಾಥ, ಆರಾಧ್ಯ ದೈವಗಳಾಗಿವೆ. ವಿಶುಸಂಕ್ರಮಣ, ನಾಗರ ಪಂಚಮಿ, ಕದಿರು ಹಬ್ಬ, ದೀಪಾವಳಿಗಳನ್ನು ಆಚರಿಸುತ್ತಾರೆ. ಸುಬ್ರಮಣ್ಯದ ಮಲೆಕುಡಿಯರಲ್ಲಲಿ ಏಕ ಪತ್ನಿತ್ವ ವಿವಾಹಪದ್ಧತಿ, ಅಳಿಯಕಟ್ಟು ಪದ್ಧತಿ ಆಚರಣೆಯಲ್ಲಿ ಇವರು ತಮ್ಮ ವಿವಾಹಗಳನ್ನು ತಮ್ಮ ಹತ್ತಿರದ ಸುಬ್ರಮಣ್ಯ ದೇವಸ್ಥಾನದಲ್ಲಿ ಏರ್ಪಡಿಸುತ್ತಿದ್ದಾರೆ ಇದು ಇವರಿಗೆ ತುಂಬ ಸರಳ ಹಾಗು ಆರ್ಥಿಕವಾಗಿ ಉಳಿತಾಯವು ಆಗುವುದರಿಂದ ಇಲ್ಲಿ ಬಹುತೇಕ ದೇವಸ್ಥಾದಲ್ಲಿ ವಿವಾಹ ಮಾಡಿತ್ತಿದ್ದಾರೆ. ದಿನಾಂಕ ೧೩.೫.೨೦೦೯ರಂದು ದೇವಸ್ಥಾನದಲ್ಲಿ ಆದ ಎಂ.ಕೃಷ್ಣರವರ ವಿವಾಹ ಆಚರಣೆ ಪದ್ಧತಿಯಲ್ಲಿ ಈಗಿನ ಆಧುನಿಕ ಪಧ್ಧತಿಯು ವಿಧಿ-ವಿಧಾನಗಳನ್ನು ಆಚರಿಸಿರುತ್ತಾರೆ. ಇವರ ಹಳೆಯ ಸಾಂಪ್ರಾದಾಯಿಕ ಆಚರಣೆಗಳು ಬದಲಾಗಿ ಆಧುನಿಕ ಆಚರಣೆಗಳು ಬಳಕೆಯಲ್ಲಿವೆ

ವಧು, ವರರ, ಅಲಂಕಾರ, ಮಾಂಗಲ್ಯ ಧಾರಣೆ, ಸಪ್ತಪದಿ, ಆರತಕ್ಷತೆ ಬ್ರಾಹ್ಮಣ-ಭಟ್ಟರನ್ನು ಕರೆಸಿ ಶಾಸ್ತ್ರಗಳಲ್ಲಿ ಮಾಡುವುದು ಎಲ್ಲವೂ ಆಧುನಿಕತೆಯ ಪರಂಪರೆಯನ್ನು ಸೂಚಿಸುತ್ತದೆ. ಹಿಂದಿನ ವಿವಾಹ ಪದ್ಧತಿಯಲ್ಲಿ ಬ್ರಾಹ್ಮಣರಿಗೆ ಕರೆಸುವ ಪದ್ಧತಿ ಇರಲಿಲ್ಲ. ಈಗ ಬ್ರಾಹ್ಮಣರನ್ನು ಕರೆಸಲಾಗುತ್ತದೆ. ಗಣಹೋಮ ಮಾಡಲಾಗುತ್ತದೆ. ಹಿಂದೆ ವಿವಾಹದಲ್ಲಿ ಕೋಳಿ ಮೀನು ಊಟ ಇರುತ್ತಿತ್ತು. ಈಗ ಅದು ಇಲ್ಲದಾಗಿದೆ. ವರನ ಕಡೆಯವರು ಮದುವೆಯ ಸಮಯದಲ್ಲಿ ಹೂ ಸೀರೆ ಕೊಡುವ ಪದ್ಧತಿ ಈಗಲೂ ಇದೆ. ಒಂದುವೇಳೆ ೨ನೇ ವಿವಾಹವಾಗುವುದಾದಲ್ಲಿ ಒಂದು ತೆಂಗಿನ ಮರಕ್ಕೆ ತಾಳಿ ಕಟ್ಟಿದ ಸಂಪ್ರದಾಯದ ನಂತರ ೨ನೇ ಹೆಂಡತಿಯಾಗುವರೊಂದಿಗೆ ವಿವಾಹ ಆಗುವ ಪದ್ಧತಿ ನಮ್ಮಲ್ಲಿದೆ ಎಂಬುದನ್ನು ಗೌರಿ ತಿಳಿಸಿದರು. ಇವರು ವಿವಾಹ ಸಮಾರಂಭಗಳನ್ನು ಬೇಸಿಗೆಯ ದಿನಗಳಲ್ಲಿ ಆದರೆ ಮನೆಯ ಹತ್ತಿರವೇ ಮಾಡುತ್ತಾರೆ. ಮಳೆಗಾಲದಲ್ಲಿ ಸೌತ್ತಡ್ಕದ ಗಣಪತಿ ದೇವಸ್ಥಾನ ಇಲ್ಲವೇ ಸುಬ್ರಮಣ್ಯದ ದೇವಸ್ಥಾನದಲ್ಲಿ ನಡೆಸುತ್ತಾರೆ. ಇತ್ತೀಚೆಗೆ ಮದುವೆಗಳನ್ನು ಹಾಲ್‌ಗಳಲ್ಲಿ ಮಾಡುವುದು ಸಹ ಅವರವರ ಅನುಕೂಲವಾಗಿದೆಂದು ಗೌರಿ ಹೇಳಿದ್ದಾರೆ.

**೩. ಸಂಪ್ರಾದಾಯಗಳು:** ತುಳುನಾಡಿನ ನಂಬಿಕೆಗಳು, ಆಚರಣೆಗಳು ವಿಶಿಷ್ಟವಾಗಿದ್ದು ಇವು ಹಿಂದಿನಿಂದಲೂ ಆಚರಣೆಯಲ್ಲಿ ಬಂದಿವೆ. ಪ್ರತಿಯೊಂದು ಹಬ್ಬಗಳ ಆಚರಣೆಯ ತಳಹದಿ ಈ ನಂಬಿಕೆಗಳಾಗಿವೆ. ಆಟಿ ಅಮವಾಸ್ಯೆ ದಿನ ಮರದ ಕೆತ್ತೆಯ ಕಷಾಯ, ದಾನಬಿಡುವುದು, ಇತ್ಯಾದಿಗಳ ಆಚರಣೆ ಕಂಡುಬರುತ್ತದೆ. ಅರೆಗುದ್ದಲಿ, ದೈವರಾಧನೆ, ನೇಮ, ಕೋಲ, ಬಲಿ ಆಯನ, ಮಡೆಸ್ನಾನ ಇಲ್ಲಿ ಹಲವಾರು ಸಂಪ್ರದಾಯಗಳನ್ನು ಆಚರಿಸುವುದು ಗೋಚರವಾಗುತ್ತದೆ.

ಮಹಿಳೆಯರು ಮಾಸಿಕ ಋತುಸ್ರಾವದ ದಿನಗಳಲ್ಲಿ ಮನೆಯ ಹೊರಗೆ ಇರುವ ಪದ್ಧತಿ ಈಗಲೂ ಇವರಲ್ಲಿ ಆಚರಣೆಯಲ್ಲಿದೆ. ದಿನಾಂಕ. ೧೩/೮/೦೯ರಂದು ಗುರುವಾರ ನಮ್ಮ ಸುಬ್ರಮಣ್ಯದ ಹರಿಗುಡಿಯ ಕ್ಷೇತ್ರ ಕಾರ್ಯಕ್ಕೆ ಹೋದಾಗ ಐತಪ್ಪ ತಂದೆ ರಾಮಣ್ಣ ಇವರ ಮನೆಯ ಹತ್ತಿರ ಹೋದಾಗ ಐತಪ್ಪನ ಹೆಂಡತಿ ಲಲಿತ ಮನೆಯ ಹಿಂದೆ ಇರುವ ಕೊಟ್ಟಿಗೆಯಲ್ಲಿದ್ದಳು. ನಾವು ಅವರ ಮನೆಗೆ ಹೋಗಿ ಮನೆಯಲ್ಲಿ ಕುಳಿತು ಐತಪ್ಪನವರಿಂದ ಕುಟುಂದವರ ಮಾಹಿತಿ ಪಡೆದಾಗ ಐತಪ್ಪ “ಅವಳಿಗೆ ಈಗ ಮುಟ್ಟು ಹೀಗಾಗಿ ಅವಳು ಹೊರಗೆ ಇದ್ದಾಳೆ “ಎಂದು ತಿಳಿಸಿದ ಮುಟ್ಟಿನ ಆಚರಣೆಯು ಇವರಲ್ಲಿ ಕಟ್ಟು ನಿಟ್ಟಾಗಿದ್ದು ಇದರ ಜೊತೆಗೆ ಸೂತಕಗಳ ಆಚರಣೆ ಇದೆ.

**ಋತುಮತಿ**

ಮಲೆಕುಡಿಯರಲ್ಲಿ ಋತುಮತಿಯಾದ ಹುಡುಗಿಯನ್ನು ಸಿಪ್ಪೆ ಸುಲಿಯದ ಮೂರು ತೆಂಗಿನಕಾಯಿಗಳ ಮೇಲೆ ಕೂರಿಸಿ ಎಣ್ಣೆ ಮತ್ತು ಕುದಿಸಿಧ ನೀರಿನಿಂದ ಶುದ್ದಿ ಮಾಡುವ ಆಚರಣೆ ಯನ್ನು ನಡೆಸುತ್ತಾರೆ. ಈ ಮೂರು ತೆಂಗಿನಕಾಯಿಗಳಲ್ಲಿ ಒಂದನ್ನು ಒಂದು ಕಡೆ ನೆಟ್ಟು ಬೆಳೆಸುತ್ತಾರೆ. ಇದು ಸಸಿಯಾಗಿ ಚೆನ್ನಾಗಿ ಬೆಳೆದರೆ ಇದು ಶುಭ ಸೂಚಕದ ಸಂಕೇತ ಎಂದು ಭಾವಿಸುತ್ತಾರೆ. ನಂತರ ಮೂರು ದಿನಗಳ ಕಾಲ ಪ್ರತ್ಯೇಕವಾದ ಕೊಟ್ಟಿಗೆಯಲ್ಲಿ ಕೂರಿಸುತ್ತಾರೆ. ೧೨ನೇ ದಿನದಲ್ಲಿ ಈಕೆಗೆ ದೇಸೆ ಸೇಸೆ ಹಾಕುವ ಕಾರ್ಯ ನಡೆಯುತ್ತದೆ. ಮೈನೆರೆದ ಹುಡುಗಿಗೆ ಅರಿಶಿನ ಹಾಕಿ, ತಲೆಮೇಲೆ ಅಕ್ಕಿಕಾಳು ಹಾಕಿ ಶಾಸ್ತ್ರ

ಮಾಡುವ ಪದ್ಧತಿಗೆ ದೇಸೆ, ಸೇಸೆ ಎಂದು ಕರೆಯುತ್ತಾರೆ. ಈ ದಿನ ಬಂಧು-ಬಳಗದವರಿಗೆ ಊಟದ ವ್ಯವಸ್ಥೆ ಮಾಡುತ್ತಾರೆ. ಇತರ ಜಾತಿ ಸಮುದಾಯ ಗಳಲ್ಲಿರುವಂತೆ ಇಲ್ಲಿ ಸಹ ಮಡಿ, ಮೈಲಿಗೆ ಸೂತಕದ ಪದ್ಧತಿಗಳು ಕಂಡು ಬರುತ್ತವೆ. ಮಹಿಳೆಯರ ಮಾಸಿಕ ಋತುಸ್ರಾವದ ಸಮಯದಲ್ಲಿ ಸಹ ಮಹಿಳೆ ಮೂರು ದಿನಗಳ ಕಾಲ ಹೊರಗಡೆ ಕೊಟ್ಟಿಗೆಯಲ್ಲಿರುವ ಪದ್ಧತಿ ಇದೆ.

ಧರ್ಮಸ್ಥಳದ ಶ್ರೀಮತಿ ಗೌರಿ ಮೊಡಂಕಿಲರವರು ಹೇಳುವ ಪ್ರಕಾರ ಮಲೆಕುಡಿಯ ಸಮುದಾಯದ ಯುವತಿಯರು ತಾರುಣ್ಯವನ್ನು ತಲುಪುವ ಹಂತದ ಬೆಳವಣಿಗೆಯಲ್ಲಿ ಆಗುವ ಋತುಮತಿ ಆದಾಗ ಅದನ್ನು ಮಡಿ, ಮೈಲಿಗೆ ಎಂದು ಪರಿಗಣಿಸುವುದು. ಇವರಿಗೆ ಪ್ರತ್ಯೇಕವಾಗಿ ಒಂದು ನೆರಿಕೆ ಹಾಕಿ ಆ ನೆರಿಕೆದಲ್ಲಿ ಆ ಯುವತಿಯನ್ನು ಅಲ್ಲಿ ಇರಿಸಲಾಗುತ್ತದೆ. ಆಗ ಇವಳನ್ನೂ ಯಾರೂ ನೋಡುವಂತಿಲ್ಲ. ೧೨ ದಿವಸದ ಆಚರಣೆ ನಡೆಯುತ್ತದೆ. ಇದಕ್ಕೆ 'ದಲ್ಯ' ಎಂದು ಕರೆಯಲಾಗುತ್ತದೆ. 'ದಲ್ಯ' ಎಂದರೆ ಋತುಮತಿಯಾದ ಹುಡುಗಿಗೆ ಮಡಿವಾಳರಿಂದ ಹೊಸ ಬಟ್ಟೆಯನ್ನು ಕೊಡಿಸುವುದರ ಮೂಲಕ ಶುದ್ಧ ಮಾಡುವ ಪದ್ಧತಿಯನ್ನು ಒಂದು ಶುದ್ದ ಕೊಡುವುದನ್ನು 'ದಲ್ಯ' ಎಂದು ಕರೆಯಲಾಗುತ್ತದೆ. ಇದಕ್ಕಾಗಿ ನಿಗದಿಪಡಿಸಿದ ಸಮಯಕ್ಕಿಂತ ಮೊದಲು ಅಗಸರಿಗೆ ಮೊದಲೇ ಹೊಸ ಬಟ್ಟೆಯನ್ನು ತಲುಪಿಸಲಾಗಿರುತ್ತದೆ. ಅದನ್ನು ಅವರಿಂದ ಕೊಡಿಸುವ ಪದ್ಧತಿ ನಡೆಯುತ್ತದೆ. ನಂತರ ಪ್ರಸಾದ ಕೊಡುವುದು ತಲೆ ನೀರು ಹಾಕುತ್ತಾರೆ. ಆ ದಿನದಲ್ಲಿ ನೆಂಟರಿಷ್ಟರು, ರಕ್ತ ಸಂಬಂಧಿಗಳು ಬಂಧುಬಳಗದವರು ಬಂದಿರುತ್ತಾರೆ. ಮನೆ ಬಳಿದು, ಚಪ್ಪರ ಹಾಕಿ ಹುಡುಗಿಯನ್ನು ಕೋರಿಸುವ ಒಳಗೆ ಕರೆಸಿಕೊಳ್ಳು ಸಮಾರಂಭ ನಡೆಯುತ್ತದೆ. ಆದಿನ ಅಡಿಗೆ, ಬೋಜನದ ವ್ಯವಸ್ಥೆ ಇರುತ್ತದೆ. ಹಿಂದೆ ಕೋಳಿ, ಮೀನು ಸಾರು ಅನ್ನದ ಊಟ ಇರುತ್ತಿತ್ತು. ಈಗ ಇದು ಬದಲಾಗಿದೆ. ವಾದ್ಯ ಅಲಂಕಾರ ಇರುತ್ತದೆ. ಆದರೆ ಈಗ ಇದೆಲ್ಲಾ ಬದಲಾಗಿದೆ. ಈಗ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿ ಪ್ರಸಾದ ತೆಗೆದುಕೊಂಡು ಬರುತ್ತಾರೆ. ಈಗ ಕೋಳಿ, ಮೀನು ಊಟ ಮಾಡುವುದಿಲ್ಲ ಎಂದು ಗೌರಿ ಹೇಳುತ್ತಾರೆ.

ಡಾ. ಶಿವರಾಮಕಾರಂತರು ಮಲೆಕುಡಿಯರು ವಾಸಿಸುವ ನೆಲೆ, ಪ್ರದೇಶಗಳನ್ನು ಕಿರಿಮಲೆ ಮತ್ತು ಹಿರಿಮಲೆ ಎಂದು ಗುರುತಿಸಿದ್ದಾರೆ. ೧೦-೩೦ ಕುಟುಂಬಗಳನ್ನು ಹೊಂದಿದ 'ಕಿರಿಮಲೆ' ಕುಡಿಯರಿಗೆ ಕೆಂಚನೋ ಗುರಿಕಾರನಾಗಿರುತ್ತಾನೆ. ಇವರ ಆರಾಧ್ಯ ದೈವ ಕಲ್ಕುಡವಾಗಿದೆ. ಕಾಡಿನ ಕೆಳಗಿನ ಈ ದೈವ ಕಲ್ಕುಡವಾಗಿದೆ. ಕೆಳಗಿನ ಈ ದೈವ ಬಲು ಸಿಡುಕಿನ ಪ್ರತಾಪಶಾಲಿ ದೈವವಾಗಿದ್ದು, ಶಾಂತ ಸ್ವಭಾವದ ದೈವ ಅಲ್ಲವೇ ಅಲ್ಲ- ಇದರ ೪ ಕೋಲ, ನೇಮ ೪ ದಿನಗಳವರೆಗೆ ನಡೆಯುತ್ತದೆ. ಸರಕಾರ ಬರುವ ಮೊದಲು ಕೋಳಿಗಳನ್ನು ಕಾಣಿಕೆ(ಬಲಿ) ಪಡೆದು ತೃಪ್ತಿ ಪಡುವ ದೈವ ಇದಲ್ಲ. ಐದು ವರ್ಷಗಳಿಗೆ ಒಮ್ಮೆಯಾದರೂ ನರ ಮನುಷ್ಯನ ತಲೆಯನ್ನೇ ಕೊಂಡ ದೈವ ಅದು(ಪುಟ-೨)[೧೫] ಎಂಬ ವಿಚಾರವು- ಇಲ್ಲಿ ಕಂಡುಬರುತ್ತದೆ. ಇಲ್ಲಿ ಈ ದೈವಕ್ಕೆ ಸಲ್ಲಿಸುವ ಬಲಿಯಲ್ಲಿ ಕೋಳಿಯಲ್ಲದೆ ನರಬಲಿಗೆ ಸಹ ಪ್ರಾಧ್ಯಾನ್ಯತೆ ನೀಡಿರುವುದು ಕಂಡು ಬರುತ್ತದೆ. ಮಲೆಕುಡಿಯರು ಆರಾಧ್ಯ ದೈವ 'ಕಲ್ಕುಡ'ದ ಮೇಲೆ ಮಲೆಕುಡಿಯರು ತೋರಿಸುವ ಭಕ್ತಿ, ಉತ್ಸವ, ಸೇವೆ, ಆಚಾರ-ವಿಚಾರ ನಂಬಿಕೆಗಳ ವಿವರಣೆಯಲ್ಲಿ ಇವರು ನಂಬಿದ ದೇವರ ಆರಾಧನೆಯ, ಬಾದ್ಯೆ, ಮತ್ತು ಆಚರಣೆಯಲ್ಲಿನ ಭಕ್ತಿ ಪ್ರಧಾನವಾಗಿದೆ.

ಶಿವರಾಮ ಕಾರಂತರ ಪ್ರಕಾರ ಕಿರಿಮಲೆ, ಹಿರಿಮಲೆ, ಹತ್ತಿಯಡ್ಕ, ಬಿಸಿಲೆ, ಸುಬ್ರಮಣ್ಯಗಳಲ್ಲಿ ನಾಲ್ಕಾರು ಕುಡಿಯರ ಕಟ್ಟುಗಳಿವೆ(ಪುಟ-೩ ೯ನೇ ಸಾಲು). ಈಗ ಇವು ಬೇರೆಬೇರೆ ಬಣಗಳಾಗಿವೆ. ಈ ಎಲ್ಲಾ ಬಣಗಳಿಗೆ ಒಬ್ಬನೇ ಗುರಿಕಾರನಿರುವ ಪ್ರಸ್ತಾಪ ಬರುತ್ತದೆ. ಇವರೆಲ್ಲರಿಗೂ ಕಿರಿಮಲೆಯ ಕಲ್ಕುಡನೇ ಆರಾಧ್ಯ ದೈವವಾಗಿದೆ. ಕಿರಿಮಲೆ ಇದರ ಎದುರು ಬೆಟ್ಟದಲ್ಲಿ ವಾಸಿಸುವರೇ ಹಿರಿಮಲೆ ಇಲ್ಲಿನ ಕಲ್ಕುಡ ದೈವದ ಮಾತಿನ ಪ್ರಕಾರವೇ ಎಲ್ಲೆಲ್ಲೋ ನಡೆಯುತ್ತದೆ ಎಂಬುದು ಒಂದು ಆಧಾರವಾಗಿದೆ. ಹಿರಿಮಲೆ ಕುಡಿಯರನ್ನು ಹೊರತುಪಡಿಸಿ ಉಳಿದವರು ತಮ್ಮ ತಮ್ಮ ಗುಡಿಗಳನ್ನು ಬೇರೆಬೇರೆಯಾಗಿ ಮಾಡಿಕೊಂಡು ಪೂಜಿಸುತ್ತಾ ಬಂದಿರುವುದು ಇಲ್ಲಿ ಕಂಡುಬರುತ್ತದೆ. ಗುರಿಕಾರ ಕೆಂಚನು ಈ ದೈವದ ಮೇಲೆ ಹೊಂದಿರುವ ಭಕ್ತಿ ನಂಬಿಕೆ, ಸಂಪ್ರದಾಯ ಮತ್ತು ದೈವದ ಬದ್ಧತೆ ಕುರಿತು ವಿವರಿಸಿದ್ದಾರೆ. ಈಗಿನ ಕುಡಿಯರ ಜನರಲ್ಲಿ ಬೆಟ್ಟದ ಮೇಲೆ ಭಕ್ತಿ ಕಡಿಮೆಯಾಗಿದೆ. ಕಟ್ಟು ನಿಟ್ಟು, ಆಚಾರ ವಿಚಾರಗಳಲ್ಲಿ ನಂಬಿಕೆಗಳಲ್ಲಿ ಸಡಿಲತೆ ಕಂಡುಬಂದಿದೆ. ಉದಾಸೀನತೆ, ಒಗ್ಗಟ್ಟು ಸಡಿಲವಾಗಿದೆ. ಈ ಸಮುದಾಯದ ಜನರಲ್ಲಿ ಸಾಮಾನ್ಯತೆ ಒಗ್ಗಟ್ಟು ಕೊರತೆಯಿಂದಾಗಿ ಇಡೀ ಸಮುದಾಯಕ್ಕೆ ಒಬ್ಬನಾಯಕ ನಿಲ್ಲದೆ, ಕೆಂಚ ಮಾತ್ರ ಕಿರಿಮಲೆಗೆ ಗುರಿಕಾರ ನಾಗಿರುವ ಸ್ಪಷ್ಟತೆಯನ್ನು ನಾವು ಈ ಕಾದಂಬರಿಯಲ್ಲಿ ಕಾಣುತ್ತೇವೆ. ಏನೇ ಆದರೂ ಕಲ್ಕುಡ, ದೆವ್ವ-ದೈವವೇ ಹಿರಿಮಲೆ- ಮತ್ತು ಕಿರಿಮಲೆ ಸಮುದಾಯಗಳ ಆರಾಧ್ಯ ದೈವವಾಗಿರುವ ಅಂಶ ಕಂಡುಬರುತ್ತದೆ. ಕಿರಿಮಲೆ ಗುರಿಕಾರ ಕೆಂಚನ ಕನಸಿನಲ್ಲಿ ಕಲ್ಕುಡ ದೆವ್ವ ಬಂದು ಹೇಳುವ ಪ್ರಸ್ತಾಪ ಇಲ್ಲಿ ಇದೆ ನೀನೆಂಥ ಯಜಮಾನ! ನೀನೆಂಥ ಗುರಿಕಾರ! ನನಗೆ ಸಲ್ಲಿಸುವ ಪೂಜೆಯಲ್ಲಿ? ಹತ್ತಿಯಡ್ಕದಿಂದ ಕೋಳಿ ಬಂತೋ? ಬಿಸಿಲೆ ಬೆಟ್ಟದಿಂದ ಹಂದಿ ತಂದರೇ? ನರ ಬಲಿ ಕೊಡುವುದಿರಲಿ, ಇಷ್ಟಾದರೂ ಮಾಡಿಸದ ಮೇಲೆ ನನ್ನ ಹಸಿವು ಹೇಗೆ ಹಿಂಗಬೇಕು? ವರ್ಷದ ಪೂಜೆಯನ್ನು ಎರಡು ಮಾಸಗಳಾದರೂ ¸À° ¸ÀÄq ÀÄ? ಎಂದು ಎಚ್ಚರಿಕೆ ಕೊಡುತ್ತಲೇ ಇದೆ(ಪುಟ-೩)[೧೬] ಇದು ಕಲ್ಕುಡ ದೈವದ ಮೇಲೆ ಕುಡಿಯರು ಹೊಂದಿರುವ ಬಲಿ ನಂಬಿಕೆಯ ಸಂಕೇತವಾಗಿದೆ. ತಾನು ನಂಬಿರುವ ದೈವ ಕಲ್ಕುಡ ದೈವದ ಕೋಪ, ತಾಪ, ಮುನಿಸುಗಳ ವಿವರಣೆಯು ಕೆಂಚನ ಮಗ ತಿಪ್ಪನ ಸಾವಿನ ಹಿನ್ನಲೆಯಲ್ಲಿ ಕಂಡುಬರುತ್ತದೆ. ಕೆಂಚನ ಮಗ ತಿಪ್ಪ ಇವರು ಗೊಸರು ಹಿಡಿದು ಬಯನಿ ಮರ ಹತ್ತಿ ನಿಮಿಷದಲ್ಲಿ ಹೆಂಡದ ಅಂಡೆ ತುಂಬಿಸಿಕೊಂಡು ಕೆಳಗೆ ಇಳಿಯಬಲ್ಲ ಹುಡುಗ, ಇಲ್ಲಿ ಸಾಯುತ್ತಾನೆ. ಇದು ಕಲ್ಕುಡ ದೆವ್ವದ ಬಲಿ ಈ ದೈವ ಮುನಿಸಿಕೊಂಡಿದೆ ಎಂದು ಗುರಿಕಾರ ಕೆಂಚ ಭಾವಿಸುತ್ತಾನೆ. ಇದರಿಂದ ಕೆಂಚಿನ ದೈವನಿಷ್ಠೆ ಮತ್ತು ಬದ್ಧತೆ ವ್ಯಕ್ತವಾಗುತ್ತದೆ. ಮಲೆಕುಡಿಯರಲ್ಲಿ ಸತ್ತ ಹೆಣವನ್ನು ಸುಡುವ ಪದ್ಧತಿ ಇರುವುದು ಇಲ್ಲಿ ತಿಳಿದುಬರುತ್ತದೆ. ಕೆಂಚನು ಸತ್ತ ತಿಪ್ಪನನ್ನು ಸುಡುವುದು ಇಲ್ಲಿ ತಿಳಿದುಬರುತ್ತದೆ. ಈ ಕಾದಂಬರಿಯಲ್ಲಿ ಸಂಕ್ರಾಂತಿ ಹಬ್ಬ ಮತ್ತು ದೈವದ ಆರಾಧನೆ ಜಾತ್ರೆಗಳ ವಿವರಣೆ ಇದೆ ಇದರಿಂದ ಈ ಸಮುದಾಯದವರು ಸಂಕ್ರಾಂತಿ ಮತ್ತು ದೈವದ ಆರಾಧಕರು ಎಂಬುದು ತಿಳಿದುಬರುತ್ತದೆ. ತನ್ನ ಎಲ್ಲಾ ಕಷ್ಟಕಾರ್ಪಣ್ಯಗಳನ್ನು ತನ್ನ ಆರಾಧ್ಯ ದೈವ ಸುಬ್ರಮಣ್ಯದ ದೇವರಿಗೆ ಅರ್ಪಿಸುತ್ತಾನೆ. ಇದರಿಂದ ಇವರು ಶ್ರೀ ಕ್ಷೇತ್ರ ಸುಬ್ರಮಣ್ಯ ದೇವರ ಆರಾಧಕರು ಎಂಬುದು ಆಧಾರದಲ್ಲಿ ತಿಳಿಯುತ್ತದೆ. ಈ ಜನಾಂಗದವರಿಗೆ(ಕೆಂಚ, ಕರಿಯ, ತಿಪ್ಪ, ಚೆನ್ನಿ) ಮತ್ತು ಮಗುವಿಗೆ ಕರಿಯ, ಸುಬ್ಬು ಎಂದು ನಾಮಕರಣ ಮಾಡುವ ವಿಷಯ ತಿಳಿದುಬರುತ್ತದೆ.

ಆ ಕಾಲದ ಅವಧಿಯಲ್ಲಿನ ಸ್ಥಿತಿಗತಿಗಳಿಗೂ, ಈಗಿನ ಪರಿಸರಕ್ಕೂ ಹೆಸರುಗಳಲ್ಲಿ ಇದೇ ಸಾಮ್ಯತೆ ಇರುವುದನ್ನು ನಾವು ಈಗಲೂ ಕಾಣುತ್ತೇವೆ.

೧೯೯೬ರಲ್ಲಿ ವಿದ್ವಾಂಸರಾದ ಪ್ರೊ. ಬಿ.ಎ. ವಿವೇಕ ರೈ ಮತ್ತು ಡಿ. ಯದುಪತಿ ಗೌಡ ರವರ ಗ್ರಂಥವು ಮಲೆಕುಡಿಯರ ಕುರಿತು ಒಂದು ಜನಪದ ಹಿನ್ನಲೆಯನ್ನು ಒಳಗೊಂಡ ಅಧ್ಯಯನವಾಗಿದೆ. ಮಲೆಕುಡಿಯರ ಹುಟ್ಟಿನ ಬಗ್ಗೆ ಇರುವ ಐತಿಹ್ಯ, ಇವರು ವಾಸಿಸುವ ನೆಲೆಗಳು, ಆಹಾರ ಪದ್ಧತಿ, ಉಡುಗೆ ತೊಡುಗೆ, ಕೃಷಿ ಸಂಪ್ರದಾಯ ಆಚರಣೆಗಳಲ್ಲಿ ಕಂಡುಬರುವ ಜನನ, ಕಿವಿ ಚುಚ್ಚುವುದು, ಕೂದಲು ತೆಗೆಯುವುದು, ಹೆಣ್ಣು ಋತುಮತಿಯಾಗುವುದು, ಮದುವೆ, ಪ್ರೇತ ಮದುವೆ, ಸೀಮಂತ, ಉತ್ತರ ಕ್ರಿಯೆ, ವಾರ್ಷಿಕ ಆಚರಣೆಗಳು, ಹಬ್ಬಗಳು, ಇದರಲ್ಲಿರುವ ಕಥೆಗಳು, ತುಳು ಪಾಡ್ದನಗಳು ಜನಪದ ವೈದ್ಯ, ಇವರು ಬಳಸುವ ಕಾಡಿನ ಸಂಪನ್ಮೂಲಗಳು ಸಸ್ಯಗಳ ಬಗ್ಗೆ ಉಲ್ಲೇಖವಿದೆ.[೯]

**ಶವಸಂಸ್ಕಾರ ಪದ್ದತಿ**

ದಕ್ಷಿಣ ಕನ್ನಡ ಜಿಲ್ಲೆಯ ಮೂಲ ನಿವಾಸಿಗಳಾದ ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಸಂಸ್ಕಾರ ಪದ್ದತಿಗಳಲ್ಲಿ ಶವಸಂಸ್ಕಾರದ ಆಚರಣೆಗಳು ಈ ಸಮುದಾಯದ ಪರಮಪರೆಯನ್ನು ಸಂಕೇತಿಸುತ್ತದೆ. ಈ ಸಮುದಾಯದ ಅಧ್ಯಯನಕ್ಕೆ ಕ್ಷೇತ್ರ ಕಾರ್ಯಕ್ಕೆ ಹೋದಾಗ ಬಂಟ್ವಾಳ ತಾಲೂಕಿನ ಕನ್ಯಾನದ ಅಕ್ಕರೆ ಕೋಡಿಯ ಸಂಜೀವ ಮಲತ್ತಾಯ, ಪುತ್ತೂರು ತಾಲೂಕಿನ ಗುಂಡ್ಯ ತೋಟದ ಹೊನ್ನಪ್ಪ ಮಲೆಕುಡಿಯ ಮತ್ತು ರವಿ ಮಲೆಕುಡಿಯ ಧರ್ಮಸ್ಥಳದ ವಯೋವೃದ್ದೆ ಗೌರಿ ಮತ್ತು ಮುಳಕ್ಕಾರುನ ಕೃಷ್ಣಪ್ಪ ಮಲೆಕುಡಿಯರಿಂದ ಇವರಲ್ಲಿನ ಶವಸಂಸ್ಕಾರ ಪದ್ಧತಿ ಕುರಿತು ವಿವರವಾಗಿ ಮಾಹಿತಿ ಲಭ್ಯವಾಗಿರುತ್ತದೆ. ಈ ಸಮುದಾಯದಲ್ಲಿ ಸಂಭವಿಸುವ ಸಾವು-ಮರಣವನ್ನು ೨ ಪ್ರಕಾರಗಳನ್ನಾಗಿ ವರ್ಗಿಕರಿಸುತ್ತೇವೆ.

**೧. ಸಹಜ ಸಾವು ಮತ್ತು ೨. ಅಸಹಜ ಸಾವು**

**೧. ಸಹಜ ಸಾವು:** ಸಹಜ ಸಾವಿನಲ್ಲಿ ವಯೋವೃದ್ಧರು, ಖಾಯಿಲೆ, ಆಕಸ್ಮಿಕ ಸಾವು ಇದರಲ್ಲಿ ಸಣ್ಣ ಮಕ್ಕಳ ಸಾವು, ನವಜಾತ ಶಿಶುಗಳ ಸಾವು, ಗಂಡು-ಹೆಣ್ಣು ಸಾವು ವಯೋವೃದ್ದರ ಸಾವು ಎಂದು ಗುರುತಿಸುತ್ತೇವೆ.

**೨. ಅಸಹಜ ಸಾವು:** ಅಸಹಜ ಸಾವಿನಲ್ಲಿ ಕಾಡು ಪ್ರಾಣಿಗಳಾದ ಆನೆ ತುಳಿತ, ಹಾವು ಕಚ್ಚಿ ಸಾಯುವುದು, ಅಪಘಾತ, ವಿಷ ಸೇವನೆ, ಬೆಂಕಿ ಆಕಸ್ಮಿಕ, ಪ್ರವಾಹ ನೆರೆಯಿಂದಾಗುವ ಸಾವು ಆತ್ಮಹತ್ಯೆಗಳು ಸೇರಿವೆ.

**ಸಹಜ ಸಾವು:** ಮಲೆಕುಡಿಯ ಸಮುದಾಯ ಆಕಸ್ಮಿಕವಾಗಿ ಆಗುವ ಸಾವನ್ನು ಸಹಜ ಸಾವು ಎಂದು ಪರಿಗಣಿಲಾಗುತ್ತದೆ. ಸತ್ತ ಕೂಡಲೇ ಅಲ್ಲಿಯವರು ಅಂದರೆ ಆ ವ್ಯಕ್ತಿಯ ಹತ್ತಿರ ಆ ಸಮಯದಲ್ಲಿ ಇರುವವರು ತುಳಸಿ ಎಲೆಯಿಂದ ಅವರ ಬಾಯಿಗೆ ನೀರು ಬಿಡುವ ಸಮಯದಲ್ಲಿ ಅಲ್ಲಿ ಹತ್ತಿರ ಇರುವವರು ಈ ಕೆಲಸವನ್ನು ಮಾಡುತ್ತಾರೆಂಬ ವಿಷಯವನ್ನು ಕನ್ಯಾನದ ಅಕ್ಕರೆಕೋಡಿಯ ಸಂಜೀವ ಮಲೆತ್ತಾಯ ತಿಳಿಸಿದ್ದಾರೆ.

ಸತ್ತ ವ್ಯಕ್ತಿಯನ್ನು ಆ ಸ್ಥಳದಿಂದ ತಂದು ಮನೆಯ ಜಗಲಿಯಲ್ಲಿ ಚಾಪೆಯ ಮೇಲೆ ಉದ್ದಕ್ಕೆ ಮಲಗಿಸಿ, ಬಿಳಿ ಬಟ್ಟೆಯನ್ನು ಹೊದಿಸಿ ತೆಂಗಿನಕಾಯಿಯನ್ನು ಹೊಡೆದು ಇದರಿಂದ ಬಂದ ಎರಡು

ತೆಂಗಿನ ಹೋಳುಗಳಲ್ಲಿ ಒಂದನ್ನು ತಲೆ ಹತ್ತಿರ ಇನ್ನೊಂದನ್ನು ಕಾಲಿನ ಹತ್ತಿರ ಇಟ್ಟು ಅದಕ್ಕೆ ಎಣ್ಣೆ ಬತ್ತಿ ಹಾಕಿ ದೀಪವನ್ನು ಉರಿಸಲಾಗುತ್ತದೆ. ಒಡೆದ ತೆಂಗಿನ ಕಾಯಿಗೆ ಎಣ್ಣೆ ದೀಪ ಮಾಡಿ ಉರಿಸುವ ಪದ್ಧತಿ ಇವರಲ್ಲಿದೆ. ಅಂತೆಯೇ ತಲೆ ಮತ್ತು ಕಾಲು ಹತ್ತಿರ ಊದುಬತ್ತಿ ಹಚ್ಚಿ ನಂತರ ಕೆಲಸವೆಂದರೆ ಸಾವಿನ ಸುದ್ದಿಯನ್ನು ನೆಂಟರಿಷ್ಟರಿಗೆ ತಲುಪಿಸುವುದು.

**ಸಾವಿನ ಸುದ್ದಿ:** ಈಗ ಮರಣ ಸುದ್ದಿಯನ್ನು ಈ ಸಮುದಾಯದವರೇ ಫೋನ್ ಮೂಲಕ ತಿಳಿಸುತ್ತಾರೆ. ಆದರೆ ಹಿಂದಿನಿಂದ ಬಂದ ಪದ್ಧತಿಯೆಂದರೆ ಸಾವಿನ ಸುದ್ಧಿಯನ್ನು ಇವರ ಹತ್ತಿರದ ಸಂಭಂಧಿಕರಿಗೆ ತಿಳಿಸಲು ಮೇರರನ್ನು(ಮೊಗೇರರು) ಕಳುಹಿಸುತ್ತದ್ದರು. ಇವರಿಗೆ ಹೋಗಿ ಬರಲು ೫೦೦ ರೂ. ಖರ್ಚು ಮತ್ತು ಭತ್ತವನ್ನು ನೀಡಿ ಕಳಿಸುತ್ತಿದ್ದರು. ಸುದ್ಧಿ ಮುಟ್ಟಿಸಲು ಹೋದ ಮೇರರು ಹಿಂತಿರುಗಿ ಬರುವವರೆಗೆ ಮತ್ತು ಬರಬೇಕಾದ ಹತ್ತಿರದ ಸಂಭಂಧಿಕರು ಬರುವವರೆಗೆ ಕಾಯುವ ಪದ್ಧತಿ ಇವರಲ್ಲಿದೆ. ಬರಬೇಕಾದವರು ಎಲ್ಲರೂ ಬಂದ ನಂತರ ಚಟ್ಟ, ಕಾಟ ಸಿದ್ದಪಡಿಸಲಾಗುವುದು.

**ಚಟ್ಟ:** ಶವವನ್ನು ಸಾವಿನ ಮನೆಯ ಅಂಗಳದಿಂದ ಸುಡುವ ಸ್ಥಳ ಕಾಟದವರೆಗೆ ಕೊಂಡು ಹೋಗಲು ೪ ಜನ ಹೊರಲು ಅನುಕೂಲವಾಗುವಂತೆ ೨ ಬಿದುರು ಬೊಂಬಿನಿಂದ ತಯಾರಿಸಲಾದ ಚಟ್ಟಕ್ಕೆ ಅಡ್ಡಲಾಗಿ ಬಿದಿರಿನ ಸಣ್ಣ ಕೋಲನ್ನು ಮದ್ಯದಲ್ಲಿ ಅಲ್ಲಲ್ಲಿ ಹಾಕಿ ಬಿಗಿಗೊಳಿಸುತ್ತಾರೆ. ಈ ಚಟ್ಟವನ್ನು ಅವರ ಮನೆಯವರು ಮತ್ತು ಆ ಸಮುದಾಯದವರು ಸೇರಿ ಮಾಡುತ್ತಾರೆ. ಇದಕ್ಕೆ ಹಸಿ ತೆಂಗಿನಗರಿಯನ್ನು ಕಡಿದು ತಂದು, ಉದ್ದಕ್ಕೆ ಹಾಕಿ ಗರಿಯನ್ನು ಈ ಚಟ್ಟಕ್ಕೆ ಕಟ್ಟಿ ಭದ್ರಪಡಿಸುತ್ತಾರೆ. ಈ ತೆಂಗಿನ ಗರಿಯ ಕೊನೆಯನ್ನು ಕಾಲಿನ ಕಡೆಗೆ, ಇದರ ಬುಡದ ಭಾಗವನ್ನು ತಲೆಯ ಕಡೆಗೆ ಹಾಕಲಾಗುತ್ತದೆ. ಶವದ ಆಕಾರ, ಗಾತ್ರಕ್ಕೆ ಅನುಗುಣವಾಗಿ ಈ ಚಟ್ಟವನ್ನು ಈ ಸಮುದಾಯದಲ್ಲಿನ ಅನುಭವಸ್ಥರು ಸಿದ್ಧಪಡಿಸುತ್ತಾರೆ. ಈ ಹಸಿ ತೆಂಗಿನ ಗರಿ ಕೆಳಗೆ ಒಣಗಿದ ಗರಿಯ ಮಳಲನ್ನು ಹಾಕಿ ಸಿದ್ಧಪಡಿಸುತ್ತಾರೆ.

**ಕಾಟ:** ಮಲೆಕುಡಿಯ ಸಮುದಾಯದಲ್ಲಿ ಸತ್ತವರನ್ನು ಸುಡುವ ಪದ್ಧತಿ ಇದೆ. ಹಿಂದೆ ಹೂಳುವ ಪದ್ಧತಿ ಇತ್ತು ಎಂಬುದು ಗೊತ್ತಾಗುತ್ತದೆ. ಆದರೆ ಈಗ ಹೂಳುವುದಿಲ್ಲ. ಸುಡುವ ಪದ್ದತಿ ಇದೆ.

ಆಗ ಸುಡುವುದಕ್ಕೆ ಸಿದ್ಧಪಡಿಸಲಾದ ಸ್ಥಳವನ್ನು "ಕಾಟ" ಎಂದು ಕರೆಯಲಗುತ್ತದೆ. ಇದಕ್ಕೆ ಬೇಕಾದ ಹೊಂಡ, ಗುಂಡಿಯನ್ನು ಆ ಸಮುದಾಯದವರ ಕೃಷಿ ತೋಟದ ಜಾಗದಲ್ಲಿ ಸಿದ್ಧಪಡಿಸಲಾಗುತ್ತದೆ. ಈ ಹೊಂಡ,ಗುಂಡಿ ತೋಡುವ ಮತ್ತು ಸುಡಲು ಬೇಕಾದ ಹಸಿ ಮಾವಿನ ಕಟ್ಟಿಗೆಯನ್ನು ಕಡಿಯುವುದಕ್ಕೆ ಮೇರರು(ಮೊಗೇರರು) ಬಳಸಿಕೊಳ್ಳಲಾಗುತ್ತದೆ. ಇವರು ಪ್ರಾರಂಭಿಸಿದ ನಂತರ ಇವರ ಜೊತೆಗೆ ಕುಟುಂಬಸ್ಥರು, ಸಮುದಾಯದ ಇತರರು ಸೇರಿಕೊಳ್ಳುತ್ತಾರೆ. ಎರಡು ಅಡಿಯಲ್ಲಿ ಗುಂಡಿಯನ್ನು ತೋಡಿ, ಅದರ ಮೇಲೆ ಉದ್ದಕ್ಕೆ ಮವಿನ ಮರದ ಹಸಿ ದಪ್ಪದ ಕಟ್ಟಗೆಯನ್ನು ಮೇರರು ಕಡಿದು ತುಂಡು ಮಾಡಿ ಜೋಡಿಸುತ್ತಾರೆ. ಆರು ಅಡಿ ಉದ್ದದ ದಪ್ಪವಾಧ ಕಟ್ಟಿಗೆಯನ್ನು ಜೋಡಿಸಿ ಇವರು ನಿಂತ ಹೆಗಲಿನ ಎತ್ತರದವರೆಗೆ ಹಂತ ಹಂತವಾಗಿ ಜೋಡಿಸಿ ಇಡಲಾಗುತ್ತದೆ. ಹೀಗೆ ಜೋಡಿಸಿದ ಕಟ್ಟಿಗೆ ಬೀಳದಂತೆ ಇದರ ನಾಲ್ಕು ಕಡೆಗಳಲ್ಲಿ ಎತ್ತರದ ಮರಧ ಕಂಬವನ್ನು ನೆಟ್ಟು ಭದ್ರಪಡಿಸಲಾಗುತ್ತದೆ. ಹಸಿ ಕಟ್ಟಿಗೆ ಕಡಿದು ತುಂಡು ಮಾಡುವುದಕ್ಕೆ ಮತ್ತು ಜೋಡಿಸಲು ಮೇರರ ಜೊತೆಗೆ ಮನೆಯವರು ಸಹ ಸೇರಿಕೊಳ್ಳುತ್ತಾರೆ. ಈ ಸೌದೆಯನ್ನು ಉದ್ದಕ್ಕೆ ಮಾತ್ರ ಇಡಲಾಗುತ್ತದೆ.ಅಡ್ಡಕ್ಕೆ ಮೂರು ಅಡಿಗೆ, ಅದಕ್ಕೆ ಎರಡು ಹೆಗಲುವರೆಗೆ ಇಟ್ಟ ನಾಲ್ಕು ಕಡಯಲ್ಲಿನ ನಾಲ್ಕು ಗೂಟಗಳು ಶವ ಮತ್ತು ಕಟ್ಟಿಗೆ ಬೀಳದಂತೆ ತಡೆಯುತ್ತದೆ.

೧. **ಶವಸ್ನಾನ:** ಮನೆಯ ಜಗಲಿಯಲ್ಲಿ ಮಲಗಿಸಿದ ಶವವನ್ನು ಅವರ ಮನೆಯ ಅಂಗಳದಲ್ಲಿ ಸ್ನಾನ ಮಾಡಿಸುತ್ತಾರೆ. ಗಂಡು ಶವಕ್ಕೆ ಗಂಡು ಮಕ್ಕಳು, ಹೆಣ್ಣು ಆದರೆ ಹೆಣ್ಣು ಮಕ್ಕಳು, ಹರಿಷಣದ ಎಣ್ಣೆಯ ಸ್ನಾನವನ್ನು ಮಾಡಿಸುತ್ತಾರೆ. ಈ ಸ್ನಾನದ ಸ್ಥಳವು ಮನೆಯ ಮೂಡಲ ಬದಿಯ ಅಂಗಳವಾಗಿರುತ್ತದೆ. ಇಲ್ಲಿ ನೆಲದ ಮೇಲೆ ಬಾಳೆ ಎಲೆಯನ್ನು ಹಾಕಿ ಅದರ ಮೇಲೆ ಶವವನ್ನು ಮಲಗಿಸಿ ಹರಿಷಿಣದ ಸ್ನಾನ ಮಾಡಿಸುತ್ತಾರೆ. ಸ್ನಾನದ ನಂತರ ಶವವನ್ನು ಕೂರಿಸಿ, ಹೊಸ ಬಟ್ಟೆ ಹಾಕಲಾಗುತ್ತದೆ. ಗಂಡಿಗೆ ಬಿಳಿ ಬಟ್ಟೆ, ಹೆಣ್ಣಿಗೆ ಹೊಸ ಸೀರೆ ಉಡಿಸಲಾಗುತ್ತದೆ. ಇದು ಹೊಸದೇ ಆಗಬೇಕು. ಇದನ್ನು ಮನೆಯವರೆ ತರುತ್ತಾರೆ. ನಂತರ ಮನೆಯವರು ಪೂಜೆ ಮಾಡಿ, ಹೂ, ಹಾರ ದೂಪ ಹಾಕುತ್ತಾರೆ.

೨. **ಕೊತ್ತಲಗಿ:** ಚಟ್ಟ ಸಿದ್ಧವಾದ ನಂತರ ಚಟ್ಟದ ತಲೆ ಭಾಗಕ್ಕೆ ತೆಂಗಿನ ಮಳಲಿನ ನಾರು ಇಡುತ್ತಾರೆ. ಗರಿ ಅಂಗಳದಲ್ಲಿ ಸೌದೆಯಿಂದ ಬೆಂಕಿ ಹಾಕಿ ಕೆಂಡ ಮಾಡಿಟ್ಟು ಕೊಂಡು ಒಂದು ಹಳೆ ಮಡಿಕೆಯಲ್ಲಿ ಈ ಕೆಂಡವನ್ನು ಹಾಕಿ, ಇದನ್ನು ೩ ಬಿದಿರಿನ ಕಡ್ಡಿಗಳಿಂದ ತ್ರಿಭುಜಾಕಾರದವಾಗಿ ಕಟ್ಟು ತಯಾರಿಸಲಾದ ಕಟ್ಟಿಗೆಗಳ ಮದ್ಯೆ, ಈ ಕೆಂಡದ ಹಳೆ ಮಡಿಕೆಯನ್ನು ಇಡುವುದಕ್ಕೆ "ಕೊತ್ತಲಗಿ" ಎಂದು ಕರೆಯಲಾಗುತ್ತದೆ.ಒಂದು ಹೊಸ ಮಡಿಕೆಯಲ್ಲಿ ನೀರು ತುಂಬಿಸಿಕೊಂಡು ಸಿದ್ಧಪಡಿಸಲಾಗಿರುತ್ತದೆ.

೧. ಹೊಸ ಮಡಿಕೆಯಲ್ಲಿನ ನೀರು

೨. ಕೊತ್ತಲಿಗೆಯಲ್ಲಿನ ಕೆಂಡ

ಮೊದಲು ಹೊಸ ಮಡಿಕೆಯಲ್ಲಿನ ನೀರು ಹೊತ್ತವರು ಮುಂದೆ ಹೋಗುತ್ತಾರೆ. ಅವರ ಹಿಂದೆ ಕೊತ್ತಲಿಗೆಯ ಕೆಂಡ ಹಿಡಿದವರು ಹೋಗುತ್ತಾರೆ. ಅವರ ನಂತರ ಶವ ಹೊತ್ತವರು ಸಾಗುತ್ತ ಈ ಶವದ ಹಿಂದೆ ಸಂಬಂಧಿಕರು ಜನರು ಸುಡುವ ಸ್ಥಳ ಕಾಟದ ಹತ್ತಿರ ಸಾಗುತ್ತಾರೆ. ಹೀಗೆ ಹೊರಟ ಇವರು ಈಗಾಗಲೇ ಸಿದ್ದವಾದ ಕಾಟವನ್ನು ಮೂರು ಸುತ್ತು ಸುತ್ತಬೇಕು, ನಂತರ ಶವವನ್ನು ಕಾಟದ ಮೇಲೆ ಇಡಲಾಗುವುದು ನಂತರ ಹೆಣದ ಮೇಲೆ ಹಾಕಲಾದ ಬಟ್ಟೆಯನ್ನು ಬಾಯಿಯ ಹತ್ತಿರ ಚೂರಿಯಿಂದ ಹರಿದು ಬಾಯಿಹತ್ತಿರ ಬಿಡಿಸಲಾಗುವುದು.

**ಶವ ಸಂಸ್ಕಾರ ಸಮಯದಲ್ಲಿ ಮಾಡುವ ಕ್ರಿಯಾವಿಧಿ**

ಶವವನ್ನು ಕಾಟದ ಮೇಲೆ ಇಟ್ಟ ನಂತರ ಮಾಡುವ ಕಿಯಾವಿಧಿಗಳೆಂದರೆ;

೧. ಹೊಸಮಡಿಕೆಯಲ್ಲಿ ತಂದ ನೀರನ್ನು ಮಾವಿನ ಎಲೆಯಲಿ ಸತ್ತ ವ್ಯಕಿಯ ಹಿರಿಯ ಮಗ ಹೆಣದ ಬಾಯಿಗೆ ಮೊದಲು ಬಿಡುತ್ತಾನೆ. ನಂತರ ಉಳಿದ ಸಂಬಂಧಿಕರು ಬಿಡುತ್ತಾರೆ. ಇಲ್ಲಿ 'ಸ್ವರ್ಗಕ್ಕೆ ಪೋಲಾ'(ಸ್ವರ್ಗಕ್ಕೆ ಹೋಗು) ಎಂದು ಹೇಳಿ ನೀರು ಬಿಡುತ್ತಾರೆ. ಕೆಲವು ಸಂಬಂಧಿಕರು, ನೆಂಟರು ಹೊಸ ಬಟ್ಟೆಯನ್ನು ತಂದಿರುತ್ತಾರೆ. ಇದನ್ನು ಹೆಣಕ್ಕೆ ಮುಚ್ಚುತ್ತಾರೆ. ನಂತರ ಒಣಗಿದ ತೆಂಗಿನ ಗರಿಯನ್ನು ಶವದ ಅಡಿಗೆ ಇಟ್ಟು ಅದರ ಮೇಲೆ ಮಾವಿನ ಎಲೆ, ಕಡಿದ ಸೌದೆಯನ್ನು ಇಟ್ಟು ಹೆಣವನ್ನು ಮುಚ್ಚಲಾಗುತ್ತದೆ.

೨. ಚಟ್ಟದ ತಯಾರಿಕೆ ಸಮಯದಲ್ಲಿ ಇದರ ಮೇಲೆ ಹಾಕಲಾದ ತೆಂಗಿನಗರಿಯನ್ನು ಕೊನೆ ಭಾಗದ ತುದಿಯಿಂದ ಉದ್ದಕ್ಕೆ ಸೀಳಿ ಎರಡು ಜನ ಎರಡು ಕಡೆ ಹಿಡಿದು ಭಾಗ ಮಾಡುತ್ತಾರೆ. ಕೆಳಭಾಗದಿಂದ ಮೇಲಿನವರೆಗೆ ಎರಡು ಭಾಗ ಮಾಡಿ ಸೀಳುವಾಗ ಚಟ್ಟದ ಮೇಲಿಟ್ಟು ಹೆಣ ಬೀಳಬಾರದು.

ಹಾಗೆಯೇ ಸೀಳಬೇಕು, ತಲೆಯ ವರೆಗೆ ತೆಂಗಿನ ಗರಿಯನ್ನು ಸೀಳಿದ ನಂತರ ಬಲಗಡೆ ನಿಂತು ತೆಂಗಿನಗರಿ ಸೀಳಿದ ವ್ಯಕ್ತಿಯ ಕೈಯಲ್ಲಿನ ಗರಿಯ ಭಾಗವನ್ನು ಎಡಕ್ಕೆ ಬಿಸಾಡಬೇಕು, ಹಾಗೆಯೇ ಎಡಗಡೆ ಸೀಳಿದ ವ್ಯಕ್ತಿಯ ಕೈಯಲ್ಲಿನ ತೆಂಗಿನ ಗರಿಯ ಅರ್ಧಭಾಗವನ್ನು ಬಲಕ್ಕೆ ಬಿಸಾಡಬೇಕು. ಈ ಕ್ರಮ ಆದ ನಂತರ ಬೆಂಕಿ ಇಡುವ ಕ್ರಮ ನಡೆಯುತ್ತದೆ.

ಸತ್ತ ವ್ಯಕ್ತಿಯ ಹಿರಿಯ ಮಗ ಇಲ್ಲವೆ ಕಿರಿಯ ಮಗ , ಒಂದು ವೇಳೆ ಇಬ್ಬರು ಇದ್ದರೆ ಇಬ್ಬರು ಸಹ ಚಿತೆಗೆ ಬೆಂಕಿ ಕೊಡಬಹುದು, ಹಿರಿಯ ಮಗ ತಲೆಯ ಕಡೆಗೆ ಬೆಂಕಿ ಕೊಡಬೇಕು, ಕಿರಿಯ ಮಗ ಕಾಲಿನ ಕಡೆಗೆ ಬೆಂಕಿ ಕೊಡಬೇಕು. ನಂತರ ಬೆಂಕಿ ಹತ್ತಲು ಬೇಕಾದ ವ್ಯವಸ್ಥೆಯನ್ನು ಮಾಡಲಗುತ್ತದೆ. ಒಂದು ವೇಳೆ ಮಳೆಗಾಲದಲ್ಲಿ ಆದರೆ ಮೇಲೆ ಚಪ್ಪರ ಇಲ್ಲವೆ ಪ್ಲಾಸ್ಟಿಕ್‌ನ ಶೀಟ್‌ನ್ನು ಹಾಕಿ ಮಳೆಯಿಂದ ರಕ್ಷಿಸುವ ವ್ಯವಸ್ಥೆ ಮಾಡಲಾಗುತ್ತದೆ. ಬೆಂಕಿ ಕೊಟ್ಟ ನಂತರ ಹೊಸ ಮಡಿಕೆಯನ್ನು ದೊಡ್ಡ ಮಗ ತನ್ನ ಬಲಗಡೆ ಭುಜದ ಮೇಲೆ ಹೊತ್ತು ಕಾಟದ ಸುತ್ತ ಮೂರು ಸುತ್ತು ಸುತ್ತಬೇಕು. ಪ್ರತಿ ಸುತ್ತಿಗೆ ಒಂದರಂತೆ ಕತ್ತಿಯಿಂದ ಮಡಕೆಯನ್ನು ಹೊಡೆದು ತೂತು ಮಾಡಿ ಅದರಿಂದ ನೀರು ಸೋರುವಂತೆ ಮಾಡುತ್ತಾರೆ. ಹೀಗೆ ಮೂರು ಸುತ್ತು ಬಂದ ನಂತರ ಕಾಲಿನ ಬಳಿ ಬಂದು ಆ ಮಡಿಕೆಯನ್ನು ಹಿಂದಕ್ಕೆ ಬಿಸಾಡಬೇಕು. ಇದರ ನಂತರದಲ್ಲಿ ಕಾಟದ ಹೊಂಡ(ಗುಂಡಿ) ತೆಗೆಯಲು ಬಳಸಿದ ಹಾಲೆ, ಪಿಕಾಸೆ, ಕೊಟ್ಟು, ಸೌದೆ ಕಡಿಯಲು ಬಳಸಿದ ಕೊಡಲಿ, ಕತ್ತಿ ಇದೆಲ್ಲವನ್ನು ಅಲ್ಲಿಡುತ್ತಾರೆ. ಅದನ್ನು ತೆಂಕು ದಿಕ್ಕಿಗೆ ತಲೆ ಹಾಕಿ ಮಲಗಿಸಿ ಇಡಲಾಗುವುದು. ಬೆಂಕಿ ಹೊತ್ತು ಉರಿಯುತ್ತಿರುವಾಗ ಅದನ್ನೆಲ್ಲಾ ಹೆಣದ ಎಡಭಾಗದಿಂದ ಬಲಗಡೆಗೆ ಮೇರರು ಮತ್ತು ಇತರರು ಸೇರಿ ಬಿಸಾಡುತ್ತಾರೆ. ಉರಿಯುವ ಚಿತೆ  ನಡುವೆ ಜಗ್ಗಬೇಕು. ಹೆಣ ಸುಟ್ಟು ಬೂದಿಯಾಗುವವರೆಗೆ ಜನರು ಇಲ್ಲಿಯೇ ಇರುತ್ತಾರೆ.

**ಹೆಣ ಸುಟ್ಟ ನಂತರದಲ್ಲಿ ಮಾಡುವ ಹಲವು ಕ್ರಮಗಳೆಂದರೆ:**

೧. ಹೆಣ ಸುಡಲು ಸಂಸ್ಕಾರಕ್ಕೆ ಬಂದವರು ಎಲ್ಲರು ಕೆರೆಯಲ್ಲಿ ಸ್ನಾನಮಾಡಿ ನಂತರ ಮನೆಗೆ ಬರಬೇಕು.

೨. ಆದಿನ ರಾತ್ರಿ ಮನೆಯಲ್ಲಿ ಯಾವ ಸ್ಥಳದಲ್ಲಿ ಪ್ರಾಣ ಬಿಡಲಾಗಿದೆಯೋ ಆ ಜಾಗದಲ್ಲಿ ಒಂದು ಮಣೆಯನ್ನು ಇಟ್ಟು, ಅದರ ಮೇಲೆ ತಾಮ್ರದ ಚೆಂಬಿಗೆ ನೀರು ತುಂಬಿಸಿ ಇಡಲಾಗುವುದು.

೩. ಈ ತುಂಬಿದ ನೀರನ್ನು ಮರುದಿನ ಬೆಳಿಗ್ಗೆ ತೆಗೆದು ತೆಂಗಿನ ಗಿಡಕ್ಕೆ ಹಾಕುತ್ತಾರೆ. ನಂತರ ಮತ್ತೆ ರಾತ್ರಿ ಅದೇ ರೀತಿ ಇಡುವ ಕ್ರಮವಿದೆ. ಈ ರೀತಿಯಾಗಿ ಮೂರು ದಿನಗಳ ಕಾಲ ಇಡುವ ಪದ್ದತಿ ಇದೆ.

**ಶುದ್ಧ ಮಾಡುವುದು**

ಸತ್ತ ಐದನೇ ದಿನದಲ್ಲಿ ಮಾಡುವ ಕ್ರಿಯಾವಿಧಿ ಆಚರಣೆಯನ್ನು ಶುದ್ದ ಮಾಡುವುದು ಎಂದು ಕರೆಯಲಾಗುತ್ತದೆ. ಆ ದಿನ ಹೆಣ ಸುಟ್ಟ ಸ್ಥಳ ಕಾಟದ ಹತ್ತಿರ ಹೋಗಬೇಕು ಅಲ್ಲಿಗೆ ಕ್ಷೌರಿಕ ಇವ ಊರಿನವ, ಇಲ್ಲಿಯವನೇ ಆಗಿರಬೇಕು, ತಮಿಳುನಾಡು ಇಲ್ಲವೇ ಮಲೆಯಾಳಿ ಕ್ಷೌರಿಕನಾಗಿರಬಾರದು. ಆ ದಿನ ಒಂದು ಎಳೆನೀರು ಬೊಂಡಕ್ಕೆ ತೂತು ಮಾಡಿ ಅದರಲ್ಲಿನ ನೀರನ್ನು ಕ್ಷೌರಿಕ ಸುಟ್ಟ ಬೂದಿಗೆ ಸಿಂಪಡಿಸುತ್ತಾನೆ. ಆಗ ಒಂದು ಅಡಿಕೆ, ಐದು ವೀಳ್ಯದ ಎಲೆ ಈ ತೆಂಗಿನ ಬೊಂಡದ ನೀರು ಹಾಕಬೇಕು.

ನಂತರ ಅಲ್ಲಿ ಹೆಣ ಸುಟ್ಟು ಸ್ಥಳದಲ್ಲಿ ಕಾಟದಿಂದ ಉಳಿದ ಎಲುಬನ್ನು ತೆಗೆಯುತ್ತಾರೆ. ಹೀಗೆ ಹೆಕ್ಕಿ ತೆಗೆಯಬೇಕಾದರೂ ಸಹ ಒಂದು ಕ್ರಮವಿದೆ. ಒಂದು ಎಲುಬನ್ನು ತಲೆಯಿಂದ ಮತ್ತೊಂದನ್ನು ಸೊಂಟದ ಭಾಗ ಮಗದೊಂದನ್ನು ಕಾಲಿನ ಭಾಗದಿಂದ ಹೆಕ್ಕಬೇಕು. ಈ ಮೂರು ಕಡೆಯಿಂದ ತೆಗೆದುಕೊಂಡು ಬಾಕಿ ಉಳಿದ ಎಲುಬನ್ನು ಪುಣ್ಯ ತೀರ್ಥ ಕ್ಷೇತ್ರದ ಸಮೀಪದ ನದಿ ಇಲ್ಲವೇ ಸಮುದ್ರಕ್ಕೆ ಬೊಜ್ಜದ(ತಿಥಿ) ದಿನ ಬಿಡಲಾಗುವುದು. ಪುಣ್ಯ ಕ್ಷೇತ್ರದಲ್ಲಿ ಪೂಜೆ ಮಾಡಿ ಈ ಮೂಳೆಗಳನ್ನು ಹೊಳೆಗೆ ಬಿಡಲಾಗುವುದು. ಇದಕ್ಕೆ 'ಹತ್ತಿ' ಎಂದು ಕರೆಯುತ್ತಾರೆ.

**ದೂಪೆ**

ಧರ್ಮಸ್ಥಳದ ಮುಳಿಕ್ಕಾರು ಬಯಲಿನ ಬನತ್ತಾರಿಯಲ್ಲಿ ಕ್ಷೇತ್ರ ಕಾರ್ಯಕ್ಕೆ ಹೋದಾಗ ಬಾಬು ಮಲೆಕುಡಿಯರ ಮನೆಯ ಹಿಂದೆ ಇರುವ ತೋಟದ ಜಾಗದ ಬೇಲಿಯ ಪಕ್ಕದಲ್ಲಿ ಇವರ ತಾಯಿ ರಾಮಕ್ಕ ಹೆಣ ಸುಟ್ಟ ಗೋಪುರ ಗಾತ್ರದಲ್ಲಿ ಮಣ್ಣಿನ ಗುಡ್ಡೆ ಮಾಡಿ, ಮೆಟ್ಟಿಲು ಮಾಡಿ ಅದರ ಮೇಲೆ ಸಣ್ಣ ಚಪ್ಪರ ಹಾಕಿ, ಎಣ್ಣೆ ದೀಪ ಇಡಲಾಗಿತ್ತು. ಮೇಲ್ನೋಟಕ್ಕೆ ಇದು ಒಂದು ಸಣ್ಣ ಘೋರಿಯಂತೆ ನಮಗೆ ಕಾಣುತ್ತದೆ. ಇದರ ಹಿನ್ನೆಲೆಯನ್ನು ಕೇಳಿದಾಗ ಇದು ತುಂಬಾ ಕುತೂಹಲವಾಗಿತ್ತು. ಬಾಬು ಹೇಳುವ ಪ್ರಕಾರ ಇದಕ್ಕೆ 'ದೂಪೆ' ಎಂದು ಕರೆಯಲಾಗುತ್ತದೆ. ಶವ ಸುಟ್ಟ ಮೇಲೆ ಹನ್ನೊಂದನೇ ದಿನದಲ್ಲಿ ಇದರ ಬೂದಿಯನ್ನು ಒಟ್ಟು ಮಾಡಲಾಗುತ್ತದೆ. ಒಂದು ಮಾಡುವಾಗಲು ಸಹ ತಲೆ, ಸೊಂಟ, ಕಾಲು ಹೀಗೆ ಮೂರು ಭಾಗದಿಂದ ಸುಟ್ಟ ಬೂದಿ ಮಣ್ಣನ್ನು ನೀರಿನಿಂದ ಒಟ್ಟು ಮಾಡಿ ಅದನ್ನು ಗುಡ್ಡೆ ಮಾಡಿ ಅದನ್ನು ಸಣ್ಣ ಪಿರಾಮಿಡ್ ಗೋಪುರ ಆಕಾರದಲ್ಲಿ ಮಾಡಿ ಅದಕ್ಕೆ ಮೆಟ್ಟಲು ಮಾಡಲಾಗುತ್ತದೆ. ಅದಕ್ಕೆ ಮೇಲೆ ಹತ್ತಿಗಿಡದ ಸಹಾಯದಿಂದ ಚಪ್ಪರ ಹಾಕಿ ಅದರಲ್ಲಿ ಒಂದು ಹಂತದಲ್ಲಿ ಎಣ್ಣೆ ದೀಪ ಇಡುವಂತೆ ಮಾತ್ರ ಮಾಡಲಾಗುತ್ತದೆ. ಮನೆಯವರೆಲ್ಲರೂ ಸೇರಿ ಪೂಜೆ ಮಾಡಲಾಗುತ್ತದೆ. ಪೂಜೆ ಸಮಯದಲ್ಲಿ ಅವಲಕ್ಕಿ ಬೆಲ್ಲದ ನೈವೇದ್ಯವನ್ನು ಬಾಳೆ ಎಲೆಯಲ್ಲಿ ಇಡಲಾಗುತ್ತದೆ. ಇದಕ್ಕೆ 'ಬಜಿಲು' ಎಂದು ಕರೆಯಲಗುತ್ತದೆ. ಹೀಗೆ ಪ್ರತಿ ತಿಂಗಳು ಈ ಘೋರಿಗೆ ಪೂಜೆ ಸಲ್ಲಿಸುವ ಪದ್ಧತಿ ಇದೆ. ಇದಕ್ಕೆ 'ಅಗೇಲು' ಎಂದು ಕರೆಯುತ್ತಾರೆ. ಈ ಅಗೇಲು ನಲ್ಲಿ ಪೂಜೆಮಾಡಿ ಬಜಿಲು ಇಲ್ಲವೇ ಕೋಳಿ ಪದಾರ್ಥದ ನೈವೇದ್ಯದಿಂದ ಮನೆಯವರೆಲ್ಲರೂ ಸೇರಿ ಪೂಜೆ ಸಲ್ಲಿಸುತ್ತಾರೆ. ಹೀಗೆ ಈ ಅಗೇಲು ಸೇವೆ ಒಂದು ವರ್ಷದವರೆಗೆ ನಡೆಯುತ್ತದೆ. ವರ್ಷದ ದೀಪಾವಳಿಯಲ್ಲಿ ಹಿರಿಯರಿಗೆ ಪೂಜೆ ಸಲ್ಲಿಸುತ್ತಾರೆ. ಬಲೀಂದ್ರ ಪೂಜೆ ಮಾಡುತ್ತಾರೆ. ಆಗ ಈ ಘೋರಿ ಕಟ್ಟುತ್ತಾರೆ. ಕೆಲವರು ಘೋರಿ ಕಟ್ಟದೆ ಹಾಗೆಯೇ ಬಿಡುತ್ತಾರೆಂಬುದನ್ನು ಬಾಬು ಮಲೆಕುಡಿಯ ವಿವರಿಸಿದ್ದಾರೆ. ಸಂಜೀವ ಮಲೆತ್ತಾಯ ಹೇಳುವ ಮಲೆತ್ತಾಯ ಹೇಳುವ ಪ್ರಕಾರ ಹೆಣ ಸುಟ್ಟು ಸ್ಥಳದ ೩ ಭಾಗದ ಬೂದಿ ಮತ್ತು ಮಣ್ಣನ್ನು ಒಟ್ಟು ಮಾಡಿ ಸಣ್ಣ ಗುಡ್ಡೆ ಮಾಡಿ ಗೋಪುರದ ಎತ್ತರಕ್ಕೆ ಸಣ್ಣ ಮೆಟ್ಟಿಲು ಮಾಡಿ ಅದರ ಮೇಲಿನ ಭಾಗಕ್ಕೆ ಚಪ್ಪರ ಹಾಕಿ ತಲೆ ಮಾಡಿ ದೂಪ ಹಾಕಿ ಪೂಜೆ ಮಾಡಲಾಗುವುದು. ಇದಕ್ಕೆ 'ದೂಪೆ' ಎಂದು ಕರೆಯಲಾಗುವುದು.

ಮನೆಯ ಹಿರಿಯ ಮಗ ಒಂಧು ತೆಂಗಿನ ಎಳೆನೀರು(ಬೊಂಡವನ್ನು) ಬರಿ ತಲೆ ಮೇಲೆ ಹೊತ್ತುಕೊಂಡು ಹೋಗಬೇಕು ಅಂದರೆ ತಲೆ ಮೇಲೆ ಯಾವುದೇ ರೀತಿಯ ಬಟ್ಟೆ ಹಾಕಬಾರದು. ಈ ಬೊಂಡಕ್ಕೆ ಮೇಲೆ ಹೊಟ್ಟೆಮಾಡಿ(ರಂದ್ರ ಮಾಡಿ) ಈ ದೂಪೆ ಮೇಲೆ ಇಡಲಾಗುವುದು, ಈ ದಿನ ದೂಪೆಯ ಮೆಟ್ಟಲಿನ

ಬಲಗಡೆಯಲ್ಲಿ ತುಳಸಿ ಗಿಡವನ್ನು ನೆಡಬೇಕು. ಆಗ ಮನೆಯವರೆಲ್ಲರೂ ಸೇರಿ ಪೂಜೆ ಮಾಡಬೇಕು. ಆಗ ಮನೆಯವರೆಲ್ಲರೂ ಸೇರಿ ಈ ಶರೀರವನ್ನು ಬಿಟ್ಟು ಮಾಯೆಯನ್ನು ಸೇರಿಕೋ, ಇನ್ನ ಮುಂದೆ ನೀನು ದೈವ ಸ್ವರೂಪಿ ಎಂದು ನಾವು ನಿನ್ನನ್ನು ಭಾವಿಸುತ್ತೇವೆ. ನೀನು ನಿನ್ನ ಮೊದಲಿನ ಕುಟುಂಬದವರನ್ನು, ನಮ್ಮನ್ನೆಲ್ಲಾ ಯಾವುದೇ ಕಷ್ಟಕಾರ್ಪಣ್ಯ ಬಾಧೆಗಳು ಬಾರದಂತೆ ಕಾಪಾಡಬೇಕು. ನೀನು ನಮ್ಮನ್ನು ರಕ್ಷಣೆ ಮಾಡಬೇಕು. ನಿನ್ನ ಪ್ರೇತ ಬಾಧೆಗಳು ನಮ್ಮ ಕುಟುಂಬದಲ್ಲಿ ಯಾರಿಗೂ ಕಾಣಿಸಬಾರದು, ಅದಕ್ಕಾಗಿ ನಾವು ನಿನ್ನ ಸದ್ಗತಿಗಾಗಿ ನಿನ್ನ ವೈಕುಂಠ ಸಮಾರಂಭ ಬೊಜ್ಜವನ್ನು ಮಾಡುತ್ತೇವೆ. ನಿನ್ನ ಇಷ್ಟಾರ್ಥ ಸಿದ್ಧರಾಗಿ ನಿನಗೆ ಬೇಕಾದೆಲ್ಲವನ್ನು ನಿನಗೆ ನಾವು ಒಪ್ಪಿಸಿ ನಿನ್ನನ್ನು ಸಂತೃಪ್ತಿ ಪಡಿಸುತ್ತೇವೆ. "ಅಗೇಲು" ಅರ್ಪಿಸುತ್ತೇವೆ". ಅಲ್ಲಿಯವರೆಗೆ ನೀನು ಏನು ತೊಂದರೆ ಕೊಡಬಾರದು ಎಂದು ನಾವು ನಿಮ್ಮಲ್ಲಿ ಕೈ ಮುಗಿದು ಬೇಡಿಕೊಳ್ಳುತ್ತೇವೆ.' ಎಂಬ ಹೇಳಿಕೆಯನ್ನು ಕುಟುಂಬದ ಹಿರಿಯ ಅನುಭವಿಗಳು ಕುಟುಂಬದವರ ಪರವಾಗಿ ಕೇಳಿಕೊಳ್ಳುತ್ತೇವೆ.

**ಸಾವು:** ಹನ್ನೊಂದನೇ ದಿನದಲ್ಲಿ ಮಾಡುವ ಉತ್ತರ ಕ್ರಿಯಾವಿಧಿಯನ್ನು ಸಾವು, ಬೊಜ್ಜ ಎಂದು ಕರೆಯುತ್ತಾರೆ. ಆ ದಿನ ಬೆಳಿಗ್ಗೆಯಿಂದ ರಾತ್ರಿವರೆಗೆ ವಿವಿಧ ರೀರಿಯ ವಿಧಿ-ವಿಧಾನಗಳನ್ನು ನೆರವೇರಿಸಲಾಗುವುದು. ಈ ದಿನದ ಅಡಿಗೆ ಮಾಡಲು ಹೊರಗಿನ ಜನ ಬರುತ್ತಾರೆ. **ಬೆಳಿಗ್ಗೆ** ಮನೆಯ ಹೆಬ್ಬಾಗಿಲಿನ ಪ್ರವೇಶದ ಮೆಟ್ಟಿಲುಗೆ ಒಂದು ಕುಂಬಳಕಾಯಿಯನ್ನು ಕಡಿದು ತಲೆಬಾಗಿಲಿನ ಕೆಳಗೆ ಇಟ್ಟು ನಮಸ್ಕರಿಸಬೇಕು. ಮನೆಯ ಹಿರಿಯ ಮಗ ಈ ಕಾರ್ಯವನ್ನು ಮಾಡುತ್ತಾನೆ. ಹಿರಿಯ ಮಗ ಈ ಕುಂಬಳಕಾಯಿಯನ್ನು ಕತ್ತಿಯಿಂದ ಒಂದೇ ಕಡೆಗೆ ಎರಡು ಹೋಳು ಆಗುವಂತೆ ಕತ್ತರಿಸಬೇಕು. ಇವರಲ್ಲಿನ ¼ ಕಾಲು ಭಾಗವನ್ನು ಕ್ಷೌರಿಕನಿಗೆ ಮುಂದಿನ ಶಾಸ್ತ್ರಕ್ಕೆ ಬೇಕಾಗಿ ತೆಗೆದು ಉಳಿದವರನ್ನು ಆ ದಿನದ ಪದಾರ್ಥಕ್ಕೆ ಬಳಸಲು ಕೊಡಬೇಕು. ಈ ಕಾರ್ಯದ ನಂತರ ಅಡಿಗೆ ಕೆಲಸ ಪ್ರಾರಂಭವಾಗುತ್ತದೆ. ಈ ಕುಂಬಳಕಾಯಿ ಜೊತೆಗೆ ಇತರ ತರಕಾರಿಯನ್ನು ಬಳಸುತ್ತಾರೆ. ಬಾಳೆಕಾಯಿ, ಜೊತೆಗೆ ಇತರ ಐದು ಇಲ್ವೇ ಏಳು ಬಗೆಯ ಬೆಸಸಂಖ್ಯೆ ಬರುವಂತೆ ಪದಾರ್ಥವನ್ನು ಈ ದಿನದ ಅಡಿಗೆಗೆ ಮಾಡಬೇಕು. ಬೆಳಿಗ್ಗೆ ಕೋಳಿಮಾಂಸ ಮಾಡುವುದಿಲ್ಲ. ಸುಬ್ರಮಣ್ಯ, ಸುಳ್ಯ, ನೆರಿಯಾ ಕಡೆಗಳಲ್ಲಿ ರಾತ್ರಿಗೆ ಕೋಳಿ ಇಲ್ಲವೇ ಹಂದಿಮಾಂಸದ ಊಟ ಮಾಡುತ್ತಾರೆ. ನಮ್ಮ ಕಡೆ ಇದು ಮಾಡುವುದಿಲ್ಲ ಎಂಬುದನ್ನು ಅಕ್ಕರೆ ಕೋಡಿಯ ಸಂಜೀವ ಮಲತ್ತಾಯ ಅವರು ಹೇಳಿದ್ದಾರೆ.

ಬೆಳಿಗ್ಗೆ ಪೂಜೆ ಸಿದ್ಧವಾಗುವಷ್ಟರ ವೇಳೆಗೆ ಕ್ಷೌರಿಕ, ಭಂಡಾರಿ ಬರಬೇಕು, ಮನೆಯ ಹಿರಿಯಮಗ ಅಂದರೆ ಉತ್ತರ ಕ್ರಿಯಾಧಿಕಾರ್ಯ ಮಾಡಿದವರಿಗೆ ತಲೆಕೂದಲು ತೆಗೆದು ತಲೆ ಬೋಳಿಸುತ್ತಾನೆ. ನಂತರ ಸ್ನಾನ ಮಾಡಬೇಕು. ತಲೆ ಬೋಳಿಸಿದ ಕಾರ್ಯಮಾಡಿದ ಕ್ಷೌರಿಕನಿಗೆ ಬೆಳಿಗ್ಗೆ ಕುಂಬಳಕಾಯಿ ಹೊಡೆದ ಕಾಲು ಭಾಗವನ್ನು ಇಲ್ಲಿ ಕ್ಷೌರಿಕನಿಗೆ ಕೊಡಬೇಕು. ಪಾಯಿಸ ಮಾಡಲು ಬೇಕಾದ ಸಾಮಾನು ಬೆಲ್ಲ, ಹೆಸರು ಬೇಳೆ, ಬಾಳೆಕಾಯಿ ಕೊಡಬೇಕು. ಇದು ಇವರಲ್ಲಿರುವ ಪದ್ಧತಿಯಾಗಿದೆ.

**ಮುಕ್ಕಾರು:** ಮನೆಯ ಹಿರಿಯ ಮಗ ಕ್ಷೌರಿಕನಿಂದ ತಲೆ ಬೋಳು ಮಾಡಿಕೊಂಡು ಹೊಸ ಬಟ್ಟೆ ಅಂದರೆ ಸತ್ತ ವ್ಯಕ್ತಿ ಗಂಡಾದರೆ ಪಂಚೆ ಉಡಬೇಕು, ಹೆಣ್ಣಾದರೆ ಸೀರೆ ಉಟ್ಟು ಸ್ನಾನ ಮಾಡಿ ಮಡಿಯಲ್ಲಿಯೇ ಮನೆಗೆ ಬರಬೇಕು. ಮನೆಯಲ್ಲಿ ಪ್ರಾಣಬಿಟ್ಟ ಸ್ಥಳದಲ್ಲಿ ಅರಿಶಿಣ ಹುಡಿ ಹಾಕಿ ಕಲರ್ ಮಾಡಿ, ಪ್ರೇತದ

ಆಕಾರದಲ್ಲಿ ಅಕ್ಕಿಯಲ್ಲಿ ಆಕಾರ ಮಾಡಲಾಗುತ್ತದೆ. ತೆಂಗಿನ ಗರಿಯಲ್ಲಿನ ೩ ಕಡ್ಡಿಗಳಿಂದ ತ್ರಿಕೋನಾಕಾರದಲ್ಲಿ ಒಂದುವರೆ ಅಡಿ ಎತ್ತರದಲ್ಲಿ ಮೂರು ಕಡೆ ಮಾಡಿ ನಿಲ್ಲಿಸಬೇಕು. ಅಂದರೆ ತಲೆ, ಸೊಂಟ, ಕಾಲು ಭಾಗದಲ್ಲಿ ನಿಲ್ಲಿಸಬೇಕು. ಇದಕ್ಕೆ 'ಮುಕ್ಕಾರು' ಎಂದು ಕರೆಯಲಾಗುವುದು.

**ಮುರೆ ಕೂರುವುದು**

ಒಂದು ನೂಲು ದಾರಕ್ಕೆ ಕೊನೆಯಲ್ಲಿ ಹರಿಷಿಣದ ಕೊಂಬಿನ ತುಂಡನ್ನು ಕಟ್ಟಿ ಈ ತ್ರಿಕೋನಾಕಾರದ ಮುಕ್ಕಾರುನಲ್ಲಿ ನೇತಾಡುವಂತೆ ಬಿಡಲಾಗುವುದು. ಇದಕ್ಕೆ ಮುರೆ ಕೂರುವುದು, ಮುರಿಯಕ್ಕೆ ಕೂರುವುದು ಎಂದು ಕರೆಯಲಾಗುವುದು. ಇದು ಸಿದ್ಧವಾದ ನಂತರ ಮಡಿಸ್ನಾನ ಮಾಡಿ ಬರುವ ಹಿರಿಯ ಮಗ ಮನೆಯ ಒಳಗೆ ಬರುವಾಗ ಸತ್ತವರ ಹೆಸರನ್ನು ಕೂಗಿ ಹೇಳಬೇಕು, ನಂತರ ಮನೆ ಒಳಗೆ ಬಂದು ಕೂರಬೇಕು. ನಂತರ ಕ್ಷೌರಿಕ ಮಡಿಯಲ್ಲಿ ಮಿಂದು ಬಂದ ವ್ಯಕ್ತಿಗೆ ಶುದ್ಧ ಮಾಡಲು ಸಿದ್ಧತೆ ಮಾಡಿಟ್ಟುಕೊಂಡಿರುತ್ತಾನೆ.

**ಶುದ್ಧ:** ಒಂದು ಬಾಲ್ದಿ(ಅರಿವಾಣ)ಯಲ್ಲಿ ನೀರು ಹಾಕಿ, ತೆಂಗಿನಕಾಯಿ ಹೊಡೆದು, ಮಾವಿನ ಸೊಪ್ಪು ಹಾಕಿ ಇಟ್ಟಿರುತ್ತಾನೆ. ತಮ್ಮ ಗ್ರಾಮದ ದೇವರ ತೀರ್ಥವನ್ನು ಸಹ ತಂದಿರುತ್ತಾನೆ. ಮಿಂದು ಮಡಿಯಲ್ಲಿರುವ ವ್ಯಕ್ತಿ ಮನೆಯ ಒಳಗೆ ಇದ್ದರೆ, ಉಳಿದ ಸಂಬಂಧಿಕರೆಲ್ಲರೂ ಮನೆಯ ಹೊರಗೆ ಅಂಗಳದಲ್ಲಿ ನಿಲ್ಲಬೇಕು. ಆಗ ಅಕ್ಕಿಯನ್ನು ಇವರ ಮೇಲೆ ಹಾಕಿ ಅಂದರೆ ಮಡಿಯಲ್ಲಿರುವ ವ್ಯಕ್ತಿ ಮತ್ತು ಇತರರು ಮೇಲೆ ಹಾಕಿ ಬಾಲ್ದಿಯಲ್ಲಿನ ನೀರನ್ನು ಮಾವಿನ ಎಲೆಯಿಂದ ಮೂರು ಸಾರಿ ಸಿಂಪಡಿಸುತ್ತಾನೆ. ನಂತರ ದೇವರ ತೀರ್ಥವನ್ನು ಸಹ ಹಾಕಲಾಗುತ್ತದೆ. ಇದಕ್ಕೆ "ಶುದ್ಧ" ಮಾಡುವುದು ಎಂದರ್ಥ. ಇಲ್ಲಗೆ ಇದುವರೆಗೆ ಇದ್ದ ಶೂತಕ ಕಳೆದು ಶುದ್ಧವಾಯಿತು ಈ ವೇಳೆಗೆ ಅಡಿಗೆ ಎಲ್ಲಾ ತಯಾರಾಗಿರುತ್ತದೆ. ಮಾಡಿದ ಎಲ್ಲಾ ಬಗೆಯ ಅಡಿಗೆ ಪದಾರ್ಥಗಳನ್ನು ಒಂದು ಬುಟ್ಟಿ ಕುಕ್ಕೆಯಲ್ಲಿ ಇಟ್ಟುಕೊಂಡು ತಲೆ ಮೇಲೆ ಹೊತ್ತುದೂಪೆಯ ಹತ್ತಿರ ಹೋಗಬೇಕು. ಆಗ ಈ ಕುಕ್ಕೆ ಹೊತ್ತವರ ಮೇಲೆ ಒಂದು ಬಿಳಿ ಪಂಚೆ-ವಸ್ತ್ರ ೮ ಮೊಳದ ವಸ್ತ್ರವನ್ನು ನಾಲ್ಕು ಕಡೆ ಅಂಚನ್ನು ಹಿಡಿದು ಮೇಲೆ ಇಟ್ಟು ಮುಂದೆ ಸಾಗುತ್ತಾನೆ. ಇದರ ಕೆಳಗೆ ಈ ಆಹಾರ ಅಡುಗೆ ಪದಾರ್ಥ ಹೊತ್ತ ಕುಕ್ಕೆ ಇರುತ್ತದೆ. ಇದೆಲ್ಲವನ್ನೂ ದೂಪೆಯ ಹತ್ತಿರ ಇಟ್ಟು ತೆಂಗಿನಕಾಯಿ, ಬೊಂಡದ ನೀರು ಸಿಂಪಡಿಸಿ, ಕೈಮುಗಿದು ದೂಪ ಹಾಕುತ್ತಾರೆ. ಒಂದು ಎಲೆಯಲ್ಲಿ ಮಾಡಿದ ಅನ್ನ ಸಾರು, ಎಲ್ಲಾ ಬಗೆಯ ಅಡಿಗೆ ಬಡಿಸಿಟ್ಟು ಎಲ್ಲರೂ ಕೈ ಮುಗಿದು ಪ್ರಾರ್ಥನೆ ಮಾಡುತ್ತಾರೆ. ಆಗ ಕ್ಷೌರಿಕ ಅಲಿಯೇ ಪಕ್ಕದಲ್ಲಿರುತ್ತಾನೆ. ಒಂದು ಪ್ರೇತಾಕಾರದ ರಾಶಿಯನ್ನು ಮಾಡಿ ಅಲ್ಲಿಗೆ ಹರಿಷಿಣದ ಕೊಂಬನ್ನು ಸಹ ಕೊಂಡೋಗಿಟ್ಟು, ಹಿರಿಯ ಮಗ ತಂದ ಅಕ್ಕಿಯನ್ನು ದೂಪೆಯ ಸುತ್ತ ಮೂರು ಸುತ್ತಿನಲ್ಲಿ ಬರುವ ಹಾಗೆ ಬಿಸಾಡಿ, ಮುಗಿಸಬೇಕು, ಅಕ್ಕಿ ಮುಗಿದ ಕೊಡಲೇ ಅಲ್ಲಿ ಬಡಿಸಿಟ್ಟ ಬಟ್ಟಲನ್ನು ಬೋರಲಾಗಿ ಬೀಳುವಂತೆ ಕವಚಿ ಹಾಕಿ, ಅಲ್ಲಿಯೇ ಅಡ್ಡಕ್ಕೆ ಬೀಳಬೇಕು. ದೂಪೆ ಘೋರಿಗೆ ನಮಸ್ಕಾರ ಮಾಡಬೇಕು, ಆಗ ತಂದ ಹರಿಷಿಣ ಕೊಂಬನ್ನು ದೂಪೆ ಹತ್ತಿರದ ಮೆಟ್ಟಿಲಿನ ಬಳಿ ಕೂ ಮೇಲೇಳಬೇಕು. ೧೧ನೇ ದಿನದ ಕತ್ತಲಲ್ಲಿ ರಾತ್ರಿಗೆ ಕಡುಬು ಊಟವಿರುತ್ತದೆ. ಆ ರಾತ್ರಿ ಕುಡಿಯುವವರು ಕುಡಿಯುತ್ತಾರೆ. ಕೋಳಿ ಊಟ ಸಹ ಇರುತ್ತದೆ.

**ಪ್ರೇತವನ್ನು ಒಳಗೆ ಕರೆಯುವುದು**

ರಾತ್ರಿ ಶುದ್ದ ಮಾಡಿಸಿಕೊಂಡ ವ್ಯಕ್ತಿ ಸ್ನಾನ ಮಾಡಿ ಸತ್ತ ವ್ಯಕ್ತಿ ಗಂಡು ಆದರೆ ಬೈರಸ್ಸು ಉಡಬೇಕು, ಹೆಣ್ಣು ಆದರೆ ಸೀರೆ ಉಟ್ಟು, ಮಡಿಯಲ್ಲಿ ಒದ್ದೆ ಬಟ್ಟೆಯಲ್ಲಿ ಚಂಡಿಯಾಗಿ ಮನೆಯ ಒಳಗೆ ಬರಬೇಕು. ಇದನ್ನು ಆಗ ಪ್ರೇತ ಎಂದು ಭಾವಿಸಲಾಗುವುದು. ಈ ಪ್ರೇತವನ್ನು ಮನೆಯ ಒಳಗೆ ಕರೆಯುವ ಪದ್ಧತಿ ಇದೆ. ಕೋಳಿ ಮಾಂಸದ ಅಡಿಗೆ ಮಾಡಿ ಹನ್ನೊಂದು ಎಲೆ ಹಾಕಿ ಮನೆಯ ಒಳಗೆ ಕರೆದು ಈ ಪ್ರೇತಕ್ಕೆ ಬಡಿಸುತ್ತಾರೆ. ಆ ದಿನವೇ ಸತ್ತ ವ್ಯಕ್ತಿಯು 'ಕುಲೆ' ದೈವಗಳ ಪಾಲಿಗೆ ಸೇರಿಸಲಾಗುತ್ತದೆ. ಈ ಸಮಯದಲ್ಲಿ ಅನುಭವಿ ಹಿರಿಯ ವ್ಯಕ್ತಿ ಸತ್ತವರ ಹೆಸರು ಹೇಳಿ ಇಂತಹವರ ಪ್ರೇತ, ಈಗ ಸ್ನಾನಕ್ಕೆ ಕರೆದುಕೊಂಡು ಹೋಗುತ್ತೇವೆ. ಎಂದು ಹೇಳಲಾಗುವುದು. ಸ್ನಾನ ಮಾಡಿ ಬಂದ ನಂತರ ಒಳಗೆ ಕರೆದು ಮಾಡಿದ ಅಡಿಗೆಯನ್ನು ಬಡಿಸಲಾಗುವುದು. ಒಳಗೆ ಕರೆಯುವಾಗೆ, ಹೊರಗೆ ಇದ್ದು ನಮ್ಮ ರಕ್ಷಣೆ ಮಾಡಬೇಕು ನಮಗೆ ಯಾವುದೇ ತೊಂದರೆ ಕೊಡಬಾರದು, ಇಲ್ಲಿ ನಿನಗೆ ಬೇಕಾದ ಇಷ್ಟವಾದ ಅಡಿಗೆ ಮಾಡಿದ್ದೇವೆ. ಬಡಿಸಿದ್ದೇವೆ. ಇನ್ನು ನೀನು ಸ್ವೀಕಾರ ಮಾಡಿ ನಿನ್ನಷ್ಟಕ್ಕೆ ನೀನುಇರು, ಯಾರ ತಂಟೆಗೆ ಬರಬೇಡ, ಯಾರಿಗೂ ಉಪದ್ರವ ತೊಂದರೆ ಕೊಡಬೇಡ" ಎಂಬ ಕೋರಿಕೆ ಮಾಡುತ್ತಾರೆ. ಪ್ರೇತವನ್ನು ಕರೆಯುವಾಗ ಮನೆ ಒಳಗೆ ಬಂದಾಗ ಮನೆಯವರು ಕೂಗುತ್ತಾರೆ. ಅಂದರೆ ಸತ್ತವರನ್ನು ನೆನೆದು ಅಳುತ್ತಾರೆ. ಇಲ್ಲಿ ಶಾಸ್ತ್ರಕ್ಕೆ ಆದರೂ ಅಳಲೇಬೇಕು. ೧೬ನೇ ದಿನದಲ್ಲಿ ಕೋಳಿ ಪದಾರ್ಥದ ಅಡುಗೆ ಮಾಲೆ ಎಲೆಯನ್ನು ಹಾಕುತ್ತಾರೆ. ಇದಕ್ಕೆ **'ಅಗೇಲು' ಬಡಿಸುವುದು** ಎಂದು ಕರೆಯುತ್ತಾರೆ. ಇಲ್ಲಿ ಎಲ್ಲಾ ಕಾರ್ಯಗಳನ್ನು ಸತ್ತ ವ್ಯಕ್ತಿಯ ಮಗ ಇಲ್ಲವೇ ಹಿರಿಯ ಮಗನ ಮಗನೇ ಮಾಡತ್ತಾನೆ. ಇದನ್ನು ಅವರ ಅನುಕೂಲಕ್ಕೆ ತಕ್ಕಂತೆ ಇಲ್ಲವೆ ಹರಕೆಯ ಪ್ರಕಾರ ಮುಂದುವರಿಸಿಕೊಂಡು ಹೋಗುತ್ತಾರೆ. ನಂತರ ಪ್ರತಿ ವರ್ಷ ದೀಪಾವಳಿಯಲ್ಲಿ ಬಲೀಂದ್ರ ಪೂಜೆಯಲ್ಲಿ ಹಿರಿಯರನ್ನು ಕರೆಯುವ, ಪೂಜಿಸುವ ಕ್ರಮ ಮಲೆಕುಡಿಯ ಸಮುದಾಯದವರಲ್ಲಿದೆ.

**ಸಾವಿನ ಮನೆ**

**ಸೂತಕ-ಮುಟ್ಟಿನ ಮನೆ**

ಮರಣ ಸಂಭವಿಸಿದ ಮನೆ ಶುದ್ಧ ಆಗುವವರೆಗೆ ಅದನ್ನು ಆ ಸಮುದಾಯದವರು ಸಾವಿನ ಮನೆ ಮುಟ್ಟಿನ ಮನೆ ಸೂತಕದ ಮನೆ ಎಂದು ಕರೆಯುತ್ತಾರೆ. ಸತ್ತ ವ್ಯಕ್ತಿಯ ಕುಟುಂಬದವರು ಶವಸಂಸ್ಕಾರದ ದಿನ ಇಲ್ಲವೇ ಮರಣದ ದಿನ ರಾತ್ರಿಗೆ ಮನೆಯಲ್ಲಿ ಏನು ಸಹ ಆಹಾರ ಪದಾರ್ಥ ಮಾಡುವುದಿಲ್ಲ. ಆ ಸಮುದಾಯದ ಇತರ ಕುಟುಂಬದವರು ನೆರೆಯವರು ಸೇರಿ ಬಜೀಲು ಚಹಾ ಇಲ್ಲವೇ ರಾಗಿ ಅಂಬಲಿ ಮಾಡಿಕೊಡುತ್ತಾರೆ. ಸಾವಿನ ದಿನಗಳ ಕಷ್ಟದ ದಿನಗಳಾಗಿದ್ದು ಪರಸ್ಪರ ನೆರವಾಗುವುದರ ಮೂಲಕ ಬಾಂದವ್ಯದ ಬೆಸುಗೆ ಕಂಡುಬರುತ್ತದೆ. ಆಗ ತಾನೆ ಹುಟ್ಟಿದ ನವಜಾತ ಶಿಶು, ಸಣ್ಣ ಮಕ್ಕಳು ಸತ್ತಾಗ ಅವರನ್ನು ಬಟ್ಟೆಯಲ್ಲಿ ಸುತ್ತಿಕೊಂಡು ಹೋಗಿ ಮಣ್ಣಿನಲ್ಲಿ ಹೂಳುವ ಪದ್ಧತಿ ಇದೆ. ಕಾಡು ಪ್ರಾಣಿಗಳಿಂದ ನಾನು ಇಲ್ಲವೇ ದುರ್ಮರಣಕ್ಕೆ ಒಳಗಾದ ದೊಡ್ಡವರು, ಬಾಣಂತಿಯರು, ಗರ್ಭಿಣಿಯರು ಸತ್ತಾಗ ಸಹ ಎಲ್ಲರಿಗೂ ಮಾಡಿದ ಶಾಸ್ತ್ರಗಳನ್ನು ಮಾಡಿಯೇ ಸುಡುವ ಪದ್ಧತಿ ಇವರಲ್ಲಿದೆ.

**ಕುಲೆ(ಪ್ರೇತ) ಮದುವೆ**

ತುಳುನಾಡಿನ ವ್ಯಾಪ್ತಿಯ ದಕ್ಷಿಣ ಕನ್ನಡ ಜಿಲ್ಲೆಯ ತುಳುವರಲ್ಲಿ ಅವಿವಾಹಿತರಾಗಿ ಸತ್ತ ತರುಣಿ ಹುಡುಗಿಗೆ ಆಟಿ(ಆಷಾಢ) ಅಮವಾಸ್ಯೆ ನಡುರಾತ್ರಿಯಲ್ಲಿ ಸತ್ತ ಪ್ರೇತಗಳ ವಿವಾಹ ಮಾಡುವ ಸಂಪ್ರದಾಯವನ್ನು ಕುಲೆ ಮದುವೆ, ಪ್ರೇತ ವಿವಾಹ ಎಂದು ಕರೆಯಲಾಗುತ್ತದೆ. ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಮದುವೆಯಾಗದೇ ಸತ್ತ ಗಂಡು ಇಲ್ಲವೇ ಹೆಣ್ಣಿಗೆ ಮದುವೆ ಮಡುವ ಕ್ರಮವನ್ನು ಪ್ರೇತ ಮದುವೆ, ಕುಲೆ ಮದುವೆ ಎಂದು ಕರೆಯುತ್ತಾರೆ. ಮದುವೆಯಾಗದ ಸತ್ತವರು ಕುಲೆ ಪ್ರೇತಗಳಾಗಿರುತ್ತಾರೆಂಬ ನಂಬಿಕೆ ಇವರಲ್ಲಿದೆ. ಸತ್ತವರು ಮನೆಯವರಿಗೆ ತೊಂದರೆ ಕೊಡುತ್ತಾರೆ, ಪೀಡೆಗಳಾಗಿ ಕಾಡುತ್ತಾರೆ. ಸಣ್ಣ ಮಕ್ಕಳಿಗೆ ಒಂದಲ್ಲ ಒಂದು ರೀತಿ ತೊಂದರೆಯಾಗುತ್ತದೆ. ಇದರ ಪರಿಹಾರಕ್ಕಾಗಿ ಈ ಕುಲೆ ಮದುವೆ ಮಾಡುವ ಪದ್ಧತಿ ಇವರಲ್ಲಿದೆ.

**ಮದುವೆ ಆಗದೆ ಸಾಯಲು ಕಾರಣ**

ನಾನು ಕ್ಷೇತ್ರ ಕಾರ್ಯಕ್ಕೆ ಹೋದಾಗ ಹತ್ಯಡ್ಕ ಕೊಕ್ಕಡದ ಕಡೆಗಳಲ್ಲಿ ೪೫ ವರ್ಷ ದಾಟಿದ ಗಂಡು-ಹೆಣ್ಣುಗಳು ಈಗಲೂ ಅವಿವಾಹಿತರಾಗಿಯೇ ಇರುವುದು ಕಂಡು ಬರುತ್ತದೆ. ವಿವಾಹದ ವಯಸ್ಸು ಮೀರಿದೆ. ಇದು ಏಕೆ ಹೀಗೆ ಎಂದು ಆ ಮನೆಯವರನ್ನು ಕೇಳಿದಾಗ ನಮ್ಮಲ್ಲಿ ಮೊದಲು ಹೆಣ್ಣು ಮಕ್ಕಳ ಮದುವೆ ಆಗಬೇಕು ಅವರ ಮದುವೆ ನಂತರ ಗಂಡು ಮಕ್ಕಳ ಮದುವೆ . ಹೆಣ್ಣು ಮಕ್ಕಳಿಗೆ ಗಂಡು ಕೂಡಿ ಬರದೆ ಹಾಗೆಯೇ ಇದ್ದಾರೆ. ಹೀಗಾಗಿ ನಾವು ಗಂಡು ಮಕ್ಕಳು ಸಹ ಮದುವೆ ಆಗದೆ ಇದ್ದೇವೆ ಎಂದು ಹೇಳಿದರು. ಈ ಕಾರಣಕ್ಕಾಗಿ ಇವರು ಅವಿವಾಹಿತರಾಗುವ ಪ್ರಸಂಗಗಳು ಇವರಲ್ಲಿ ಕಂಡುಬರುತ್ತವೆ. ಇಂತಹವರು ಆಕಸ್ಮಿಕವಾಗಿ ಮರಣಕ್ಕೆ ಒಳಗಾದಾಗ ಈ ಕುಲೆ ಮದುವೆಗಳು ನಡೆಯಲು ಕಾರಣವಾಗುತ್ತದೆ. ಈ ಕುಲೆ ಮದುವೆಯು ನಿಜವಾಗಿ ಮದುವೆಯಲ್ಲಿ ಮಾಡಬೇಕದ ಎಲ್ಲಾ ಶಾಸ್ತ್ರ ವಿಧಿ-ವಿಧಾನಗಳನ್ನು ಪಾಲಿಸಲಾಗುತ್ತದೆ. ಈ ಮದುವೆ ಯಾವುದಾದರೂ ದೇವಸ್ಥಾನದಲ್ಲಿ ನಡೆಯಬೇಕು. ಮದುವೆಗೆ ಬೇಕಾದ ಜೋಡಿ ಹೆಣ್ಣು ಇಲ್ಲವೆ ಗಂಡು ಅವರ ಬರಿಗೆ ಹೊಂದಿಕೊಂಡತೆ ಇರಬೇಕು. ನಿಶ್ಚಿತಾರ್ಥ ಕಾರ್ಯವು ನಡೆಯಬೇಕು. ನಂತರ ಕುಲೆ ಮದುವೆಗೆ ವ್ಯವಸ್ಥೆ ಆಗುತ್ತದೆ.

ಈ ಕುಲೆ ಮದುವೆಯಲ್ಲಿ ಸತ್ತ ಗಂಡುಗೆ ಅವರದೇ ಸಂಬಂಧದ ಹೆಣ್ಣನ್ನು ಗೊತ್ತು ಪಡಿಸುತ್ತಾರೆ. ಅದರ ಪ್ರತೀಕವಾಗಿ ಒಂದು ತೆಂಗಿನಕಾಯಿಯನ್ನು ಹೆಣ್ಣಿನ ಪರವಾಗಿ, ಹಾಗೆಯೇ ಸತ್ತ ವ್ಯಕ್ತಿಯ ಗಂಡಿನ ಪರವಾಗಿ ಒಂದು ತೆಂಗಿನಕಾಯಿ ಹೀಗೆ ಎರಡು ತೆಂಗಿನಕಾಯಿಗಳನ್ನು ಎರಡು ಕಡೆಯವರು ದೇವಸ್ಥಾನಕ್ಕೆ ತಂದು, ಗಂಡು-ಹೆಣ್ಣು ವಧು-ವರರಂತೆ ಈ ತೆಂಗಿನಕಾಯಿಗಳಿಗೆ ಉಡುಗೆ-ತೊಡುಗೆ ತೊಡಿಸಿ, ಅಲಂಕಾರ ಮಾಡಿ ಹೆಣ್ಣಿನ ಕಡೆಯಿಂದ ತಂದ ತೆಂಗಿನಕಾಯಿಗೆ ಕರಿಮಣಿಯ ತಾಳಿಯನ್ನು ಕಟ್ಟಿ ವಿವಾಹ ಮಾಡುವ ಪದ್ಧತಿ ಕುಲೆ ಮದುವೆಯಾಗಿದೆ. ನಂತರ ಗಂಡಿನ ಮನೆಯವರು ಹೆಣ್ಣಿನ ಮನೆಗೆ ಬಂದು ಹೋಗುವ ಶಾಸ್ತ್ರವನ್ನು ಅಲ್ಲಿಯೇ ಮಾಡಿ ಮುಗಿಸುತ್ತಾರೆ. ನಂತರ ಪ್ರತಿವರ್ಷ ಕುಲೆಗಳಿಗೆ ಬಡಿಸುವಾಗ ಒಂದು ಮಣಿಯಲ್ಲಿ ಹೆಣ್ಣಿನ ಕರಿಮಣಿಯನ್ನು ಇಟ್ಟು ಬಡಿಸುತ್ತಾರೆ. ಈ ರೀತಿ ಕುಲೆ ಮದುವೆ ಮಾಡಿದರೆ ಕುಟುಂಬಕ್ಕೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇರುತ್ತದೆ ಎಂಬುದನ್ನು ಧರ್ಮಸ್ಥಳದ

ವಯೋವೃದ್ಧೆ ಗೌರಿ ವಿವರಿಸುತ್ತಾರೆ. ಮಲೆಕುಡಿಯ ಸಮುದಾಯದಲ್ಲಿ ಸಹ ಈ ಕುಲೆ ಮದುವೆ ಮಾಡುತ್ತಾರೆ. ೧೨ ವರ್ಷದ ಒಳಗಿನ ಮಕ್ಕಳು ಸತ್ತರೆ ಇವರಿಗೆ ಇಂತಹ ಯಾವುದೇ ರೀತಿಯ ಆಚರಣೆ ಇರುವುದಿಲ್ಲ. ಅಮವಾಸ್ಯೆಯ ದಿನದ ರಾತ್ರಿಯ ಪ್ರೇತಗಳು ಬರುವ ಸಮಯದಲ್ಲಿ ಕತ್ತಲೆಯಲ್ಲಿ ೪ ಗೊಂಬೆಗಳನ್ನು ಮಾಡಿ, ಇದರಲ್ಲಿ ಎರಡು ಹೆಣ್ಣು, ಎರಡು ಗಂಡು ಗೊಂಬೆಗಳಾಗಿರುತ್ತವೆ. ಗಂಡು ಗೊಂಬೆಗೆ ಪಂಚೆ, ಶರ್ಟ್, ಪೇಟ ತೊಡಿಸಿ ಅಲಂಕರಿಸುತ್ತಾರೆ. ಹುಡುಗಿಗೆ ಸೀರೆ, ಕುಪ್ಪಸ, ಕುಂಕುಮ ತೊಡಿಸಿ ಅಲಂಕರಿಸುತ್ತಾರೆ. ಈ ಗೊಂಬೆಗಳಿಗೆ ಪುರುಷ, ಸ್ತ್ರೀ ರೂಪ ನೀಡುತ್ತಾರೆ. ಅಲ್ಲದೆ ಈ ಗೊಂಬೆಗಳಿಗೆ ಶಾಸ್ತ್ರೋಕ್ತವಾಗಿ ಹಾಕಬೇಕಾದ ಒಡವೆಗಳನ್ನು ಸಹ ಮಾಡಿ ಹಾಕುತ್ತಾರೆ. ಈ ಆಭರಣಗಳನ್ನು ಹಾಕಿ ಒಂದು ಡಬ್ಬಿಯಲ್ಲಿ ಇಟ್ಟು, ಈ ಡಬ್ಬಿಯನ್ನು ಪ್ರೇತಗಳ ಮುಂದೆ ಇಡುತ್ತಾರೆ. ಮದುವೆಯಲ್ಲಿ ಸಂಪ್ರದಾಯ ಪದ್ಧತಿ ಪ್ರಕಾರ ಒಡವೆಗಳನ್ನು ಹಾಕಿದಂತೆ ಇಲ್ಲಿ ಸಹ ಹಾಕುತ್ತಾರೆ. ಈ ಮದುವೆ ಕುಟುಂಬದವರಲ್ಲಿಯೇ ನಡೆಯುತ್ತದೆ. ವಾದ್ಯ ಮೇಳಗಳು ಇರುತ್ತವೆ. ಆದರೆ ಇತರರಿಗೆ ಬಹಿರಂಗಪಡಿಸುವುದಿಲ್ಲ. ಆದರೆ ನೆಂಟರಿಷ್ಟರು ಬರುತ್ತಾರೆ. ಇತರರು ಬರುವುದಿಲ್ಲ. ವರದಕ್ಷಿಣೆ ಜೊತೆಗೆ ಉಡುಗೊರೆ ನೀಡುವ ಶಾಸ್ತ್ರವು ಇಲ್ಲಿ ನಡೆಯುತ್ತದೆ. ಎರಡು ಮಣೆಗಳ ಮುಂದೆ ಇಟ್ಟ ಅಲಂಕೃತ ಗೊಂಬೆಗಳ ಹರಿವಾಣಕ್ಕೆ ಉಡುಗೊರೆ ಹಾಕುವ ಆಚರಣೆ ನಡೆಯುತ್ತದೆ. ಹಸೆಮಣೆ ಏರುವ ಪದ್ಧತಿ ನಂತರ ನೆಂಟರಿಷ್ಟರು ಮಂತ್ರಾಕ್ಷತೆ ಹಾಕುತ್ತಾರೆ. ಈ ಮದುವೆ ಕುಟುಂಬದ ಗಂಡಿನ ಮನೆಯಲ್ಲಿ ನಡೆಯುತ್ತದೆ. ಮದುವೆಯಲ್ಲಿ ಪಾಲಿಸುವ ಬರಿಗಳ ಕ್ರಮದ ಅನುಸರಣೆ ಇಲ್ಲಿ ನಡೆಯುತ್ತದೆ. ತುಳುನಾಡಿನ ಸಂಪ್ರದಾಯದಲ್ಲಿ ವಿವಾಹದಲ್ಲಿ ಧಾರೆ ಇರುವುದಿಲ್ಲ. ಅಂತೆಯೇ ಪ್ರೇತ ವಿವಾಹಗಳಿಗೆ ಧಾರೆ ನಡೆಯುವುದಿಲ್ಲ. ಮದುವೆ ಸಂದರ್ಭದಲ್ಲಿ ಎರಡು ಗೊಂಬೆಗಳನ್ನು ಒಂದಕ್ಕೊಂದು ಸೇರಿಸಿ ಒಂದು ಮಾಡುತ್ತಾರೆ, ಕೂಡಿಸುತ್ತಾರೆ. ಈ ಎಲ್ಲಾ ಆಚರಣೆಗಳು ಕುಟುಂಬದ ಯಜಮಾನ ಗುರಿಕಾರಕ ಸಮ್ಮುಖದಲ್ಲಿ ನಡೆಯುತ್ತದೆ. ಶೋಭನಶಾಸ್ತ್ರ ನಡೆಯುವುದಿಲ್ಲ. ಮೊದಲ ರಾತ್ರಿ ಪದ್ಧತಿ ಇಲ್ಲಿ ಇರುವುದಿಲ್ಲ. ಮದುವೆ ಆಚರಣೆ ಮಾತ್ರ ಮಾಡುತ್ತಾರೆ. ಬಂದ ನೆಂಟರಿಷ್ಟರು ಸೇರಿ ಅಕ್ಷತೆ ಹಾಕುತ್ತಾರೆ. ಸತ್ತವರ ಕುಟುಂಬದವರು ಇದರ ಒಳಿತು ಕೆಡುಕುಗಳ ಬಗ್ಗೆ ಮನೆಯ ದೈವ, ಕೋಲದಲ್ಲಿ ಕೇಳಿಕೊಳ್ಳುತ್ತಾರೆ. ಈ ಕುಲೆ ಮದುವೆ ಮಾಡಿ ಮುಗಿಸುತ್ತಾರೆ. ಒಂದು ವೇಳೆ ಈ ಕುಲೆ ಮಾಡದಿದ್ದರೆ ಕುಟುಂಬಕ್ಕೆ ಒಳಿತಾಗುವುದಿಲ್ಲ ಎಂಬ ನಂಬಿಕೆ ಇದೆ. ಸತ್ತ ಒಂಟಿ ಆತ್ಮಕ್ಕೆ ವಿವಾಹ ಮಾಡುವ ಪದ್ಧತಿ ಕುಲೆ ಮದುವೆ ಎಂದು ಕರೆಯುತ್ತಾರೆ. ಒಂದು ವೇಳೆ ೧೨ ವರ್ಷದ ಒಳಗೆ ೧೧ ವರ್ಷದ ತರುಣಿ ಆದರೂ ಸಹ ಆಯಾ ಕುಟುಂಬದವರ ನಂಬಿಕೆಯಂತೆ ಇದು ನಡೆಯುತ್ತದೆ. ಸತ್ತ ಪ್ರೇತ ಆತ್ಮಕ್ಕೆ ವಿವಾಹ ಮಾಡಿದರೆ ಕುಟುಂಬಕ್ಕೆ ಯಾವುದೇ ರೀತಿಯ ಬಾಧೆ, ಕಂಟಕಗಳು ಬರುವುದಿಲ್ಲ ಎಂಬ ನಂಬಿಕೆ ಇವರಲ್ಲಿರುತ್ತದೆ.ಎರಡು ಹಸೆಮಣೆ ಹಾಕಿ ಅದರ ಮುಂದೆ ಎರಡು ಗೊಂಬೆಗೆ ಅಲಂಕಾರವಾದ ನಂತರ ಎರಡು ತಂಬಿಗೆಗೆ ತೆಂಗಿನ ಕಾಯಿ, ವೀಳ್ಯದ ಎಲೆ ಇಟ್ಟು ಅದರ ಮುಂದೆ ಬಾಳೆಯ ಎಲೆ ಹಾಕಿ, ಅದಕ್ಕೆ ಅಕ್ಕಿ, ತೆಂಗಿನ ಕಾಯಿ, ಎಲೆ, ಅಡಿಕೆ ಇಡುತ್ತಾರೆ. ಈ ಗೊಂಬೆಗಳನ್ನು ಸತ್ತ ಪ್ರೇತಗಳೆಂದು ಭಾವಿಸಿ, ಪೂಜಿಸುತ್ತಾರೆ. ಬಂದ ನೆಂಟರು ಅಕ್ಷತೆಕಾಳು ಹಾಕುತ್ತಾರೆ. ಇದು ತುಳು ನಾಡಿನ ಜನರು ಮಾತ್ರವಲ್ಲದೆ ಮಲೆಕುಡಿಯ ಸಮುದಾಯದವರಲ್ಲಿ ಸಹ ನಡೆಯುವುದು. ಎಂದು ಅಕ್ಕರೆಕೋಡಿಯ ಸಂಜೀವ ಮಲೆಕುಡಿಯ ಹೇಳಿದ್ದಾರೆ.

ಈ ಕುಲೆ ಮದುವೆ ಪದ್ಧತಿಯು ತುಳುನಾಡಿನ ಎಲ್ಲಾ ಜಾತಿಗಳಲ್ಲಿ ಇಂದಿಗೂ ಆಚರಣೆಯಲ್ಲಿದೆ. ಈ ಆಚರಣೆ ಪದ್ಧತಿಯು ಗೌಡ, ಬಂಟ, ಬಿಲ್ಲವರ ಪ್ರಭಾವದಿಂದಾಗಿ ಇದು ಮಲೆಕುಡಿಯ ಬುಡಕಟ್ಟು ಸಮುದಾಯದ ಮೇಲೆ ಪ್ರಭಾವ ಭೀರಿ ಅನುಕರಣೆ ಮಾಡುತ್ತಾ ಬಂದಿರುವುದು ಇಲ್ಲಿನ ಪರಂಪರೆಯಾಗಿದೆ. ಅಲ್ಲದೆ ಮಲೆಕುಡಿಯ ಸಮುದಾಯವೂ ಸಹ ತುಳುನಾಡಿನ ಸಂಸ್ಕೃತಿಯ ಭಾಗವಾಗಿಯೂ, ಇಲ್ಲಿನ ಪದ್ಧತಿ ಆಚರಣೆಗಳನ್ನು ಮೈಗೂಡಿಸಿಕೊಂಡು ಬಂದಿರುವುದನ್ನು ನಾವಿಲ್ಲಿ ಕಾಣುತ್ತೇವೆ.

**೨.೭. ಮಲೆಕುಡಿಯ ಸಮುದಾಯದಲ್ಲಿನ ಆಂತರಿಕ ಶ್ರೇಣೀಕರಣ**

ಮಲೆಕುಡಿಯ ಸಮುದಾಯದಲ್ಲಿನ ಜೀವನ ಪದ್ಧತಿಯು ಈ ಸಮುದಾಯದ ಆಂತರಿಕ ಶ್ರೇಣೀಕರಣವನ್ನು ವಿವರಿಸುತ್ತದೆ. ಇಲ್ಲಿ ಕಂಡು ಬರುವ ಮಕ್ಕಳ ಕಟ್ಟು ಮತ್ತು ಅಳಿಯಕಟ್ಟು ನಡುವಿನ ಅಂತರ ಮತ್ತು ಕೌಟುಂಬಿಕ ನಿರ್ವಹಣೆ ಜವಾಬ್ದಾರಿ ಭೂ ಮಾಲೀಕತ್ವ ಅಂತಸ್ತು ಮತ್ತು ಸ್ಥಾನಮಾನಗಳು ನಿರ್ಧಾರವಾಗುತ್ತವೆ. ಸಮುದಾಯದ ಮುಖ್ಯಸ್ಥನನ್ನು ಗುರಿಕಾರ ಎಂದು ಕರೆಯಲಾಗುವುದು. ಅನೇಕ ಕುಟುಂಬದವರು ಸೇರಿ ಒಬ್ಬ ಗುರಿಕಾರನನ್ನು ಆಯ್ಕೆ ಮಾಡುತ್ತಾರೆ. ಇದು ವಂಶ ಪರಂಪರೆಯಿಂದ ಮುಂದುವರೆಯುತ್ತಾ ಬಂದಿದೆ. ಇವರ ಅಧಿಕಾರ ಆ ಸಮುದಾಯಕ್ಕೆ ಮಾತ್ರ ಸೀಮಿತ ಹೊರತು ಪ್ರಾದೇಶಿಕತೆಗೆ ಇದು ಅನ್ವಯವಾಗುವುದಿಲ್ಲ. ಇವರದೇ ಆದಂತಹ ಆಡಳಿತ ಕಟ್ಟು ಪಾಡುಗಳನ್ನು ಕಾಪಾಡಿಕೊಂಡು ಬರುವ ಜವಾಬ್ದಾರಿ ಗುರಿಕಾರರದ್ದಾಗಿದೆ. ಗುರಿಕಾರನ ಪದವಿಯನ್ನು ಪಡೆದುಕೊಂಡವರು ಧಣಿಗಳಿಗೆ ಮರ್ಯಾದೆಯನ್ನು ಸಲ್ಲಿಸಬೇಕು. ಗುರಿಕಾರ ಸತ್ತರೆ ಗುರಿಕಾರ ಯಾರೆಂಬುದನ್ನು ಏಳು ದಿನಗಳಲ್ಲಿ ನಿರ್ಧರಿಸಬೇಕು. ಗುರಿಕಾರ ನಿರ್ಧರಿಸುವುದು ಕೂಡುಕಟ್ಟಿನ ಜವಾಬ್ದಾರಿ. ಕೂಡುಕಟ್ಟು ಎಂದರೆ ಹಲವಾರು ಕುಟುಂಬಗಳ ಸೇರುವಿಕೆಯನ್ನು ಕೂಡುಕಟ್ಟು ಎಂದು ಕರೆಯುವರು. ಗುರಿಕಾರನ ಆಯ್ಕೆಯಲ್ಲಿ ಧಣಿಗೂ ಈ ವಿಷಯದಲ್ಲಿ ಕೈ ಹಾಕುವ ಹಕ್ಕಿಲ್ಲ. ಜಾತಿಯಿಂದ ತೆಗೆಯುವ ಸೇರಿಸಿಕೊಳ್ಳುವ ವಿಷಯ ಮದುವೆಯ ಮಾತು ಬೊಜ್ಜದ ಮಾತು ಕಸುಬಿನ ವಿಷಯಕ್ಕೆ ಸಂಬಂಧವಿಲ್ಲ. ಗುರಿಕಾರ ಪದವಿ ವಿಷಯದಲ್ಲಿ ತಗಾದೆ ಬಂದರೆ ಅದನ್ನು ತೀರ್ಮಾನಿಸುವುದು ದೈವ. ದೈವ ಗುರಿಕಾರನಿಗೆ ಪಟ್ಟಕಟ್ಟಿ ಗೌರವಿಸುವುದು ಇದೆ. ದೈವದ ಜಗಣಿ ಬಂದರೆ ಮಾತನಾಡಿಸುವುದು ಗುರಿಕಾರನ ಜವಾಬ್ದಾರಿ. ದೈವದ ಮೊದಲ ಪ್ರಸಾದವು ಗುರಿಕಾರನಿಗೆ ಸೇರಿದೆ ಎಂಬ ಮಾಹಿತಿಯನ್ನು ಶಿವರಾಮ ಕಾರಂತರು ತಮ್ಮ ಕುಡಿಯರ ಕೂಸು ಕಾದಂಬರಿಯಲ್ಲಿ ವಿವರಿಸಿದ್ದಾರೆ(ಪುಟ. ೨೪೯, ೨೫೬, ೨೫೮, ೨೬೮, ೨೯೯, ೪೨೪)[೧೮].

ಗುರಿಕಾರ ಹಿರಿಯರ ಸಭೆ ನಡೆಸುವುದು ಗುರಿಕಾರನ ಕೆಲಸ. ಕುಲದ ವಿಚಾರ ಸರಿ ತಪ್ಪುಗಳ ನಿರ್ಣಯ ದೈವಗಳನ್ನು ಮಾತನಾಡಿಸುವ ಜವಾಬ್ದಾರಿಯನ್ನು ಹೊರಬೇಕು. ಕುಲದ ಮೇಲ್ವಿಚಾರಕನಾಗಿ ಜವಾಬ್ದಾರಿ ಹೊರಬೇಕು. ಗುರಿಕಾರ ನ್ಯಾಯ ತೀರ್ಮಾನ ಮಾಡಬೇಕು. ಇಲ್ಲವೇ ಕಲ್ಲುಡ ದೈವ ನ್ಯಾಯ ತೀರ್ಮಾನ ಮಾಡಬೇಕು. ದೈವ ಸರ್ವೋಚ್ಛ ಅಧಿಕಾರ ಪಡೆದರೆ ಅದರ ನಂತರದ ಅಧಿಕಾರವನ್ನು ಗುರಿಕಾರ ಅನುಭವಿಸುತ್ತಾನೆ. ಈಗ ಬಾಂಜಾರು ಮಲೆಯಲ್ಲಿ ಲಕ್ಷ್ಮಣ ಮತ್ತು ಸುಬ್ರಮಣ್ಯದಲ್ಲಿ ರಾಮ ಗುರಿಕಾರರಾಗಿದ್ದಾರೆ. ಬದಲಾದ ಕಾಲಘಟ್ಟಕನುಗುಣವಾಗಿ ಹಿಂದೆ ನಡೆದುಕೊಂಡು ಬಂದ ಗುರಿಕಾರನ ಅಧಿಕಾರ ವ್ಯಾಪ್ತಿ ಅಷ್ಟು ಪ್ರಧಾನವಾಗಿಲ್ಲ.

ಡಿ.ಬಿ. ರಾಮಚಂದ್ರಾಚಾರ್‌ರವರು ತಮ್ಮ ಕುಡಿಯರ ಸಂಸ್ಕೃತಿ, ಪುಟ ೮ರಲ್ಲಿ ೧೮೯೩ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ನಾಲ್ಮಲೆಯರಂತಲೂ ಕರೆದಿದ್ದಾರೆ. ಮಡಿಕೇರಿಯ ಮೂರು ಮಲೆಯರೆಂದು ಕರೆದಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕುಡಿಯರು ಹಿಂದುಳಿದವರಾದರೂ ಕೆಲ ಜನಾಂಗಕ್ಕೆ ಅಸ್ಪೃಶ್ಯರಲ್ಲ. ಪುಟ ೯ ಎಂದಿದ್ದಾರೆ. ಕುಡಿಯರನ್ನು ಮೇಲು ಜಾತಿಯ ಗೌಡರು ಜೈನರು ಕೊಡವರು ಅಸ್ಪೃಶ್ಯರೆಂದು ಪರಿಗಣಿಸುವುದಿಲ್ಲ(ಪುಟ ೨೩).[೧೯] ಈ ಹಿನ್ನಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯರನ್ನು ಮಕ್ಕಳಕಟ್ಟು ಸಮುದಾಯದವರನ್ನು ನಾಲ್ಮಲೆಯವರಂತಲೂ ಅಳಿಯಕಟ್ಟು ಪಂಗಡದವರನ್ನು ಊರುಮಲೆ ಎಂತಲೂ ಕರೆಯಲಾಗುವುದು. ಈ ಎರಡು ಪಂಗಡಗಳಲ್ಲಿಯೂ ಸಾಮ್ಯತೆ ಕಂಡುಬರುವುದಿಲ್ಲ. ಭಿನ್ನತೆ ಇದೆ. ಇದಕ್ಕೆ ಮೂಲ ಕಾರಣ ಇವರ ಪ್ರಾದೇಶಿಕ ವೈವಿಧ್ಯತೆ ಮತ್ತು ಭಾಷಾ ಪರಂಪರೆಯಾಗಿದೆ. ಈ ಸಮುದಾಯಗಳ ಮಧ್ಯೆ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ವಿವಾಹ ಸಂಪ್ರದಾಯ ಆಚರಣೆಗಳಲ್ಲಿ ಭಿನ್ನತೆ ಇದೆ. ಮಕ್ಕಳ ಕಟ್ಟು ಸಂಸ್ಕಾರಗಳು ಬ್ರಾಹ್ಮಣ ಪುರೋಹಿತರ ಹೊರತಾದ ಆಚರಣೆಗಳಾಗಿವೆ. ಅಳಿಯಕಟ್ಟು ಆಚರಣೆ ಪದ್ಧತಿಗಳಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಯಲಾಗುತ್ತದೆ. ಮತ್ತು ಇವರು ತುಳು ನಾಡಿನ ಸಂಸ್ಕೃತಿಯ ಒಂದು ಭಾಗವಾಗಿದ್ದಾರೆ. ಈ ಎರಡು ಸಮುದಾಯಗಳ ಮಧ್ಯೆ ಈಗಲೂ ವಿವಾಹ ಸಂಬಂಧಗಳು ನಿಷೇಧ ಇವೆ.

ಕೋಲೋಡಿಯ ಎಲ್ಯಣ್ಣ ಮಲೆಕುಡಿಯ ಹೇಳುವ ಪ್ರಕಾರ ನಮ್ಮ ವಾಸದ ಪ್ರದೇಶಗಳು ಅನಾದಿ ಕಾಲದ ಪಾರಂಪರಿಕ ತಾಣಗಳಾಗಿವೆ. ನಮ್ಮ ಭಾಷೆ ಇತರ ತುಳು ಭಾಷೆಗಿಂತ ಭಿನ್ನ ನಮ್ಮ ಜನರು ಮಾತನಾಡುವ ಭಾಷೆ ಅಳಿಯ ಸಂತಾನದವರಿಗೆ ಒಂದು ರೀತಿಯ ಇರಿಸು ಮುರಿಸು ಮತ್ತು ಹಿಂಜರಿಕೆ ಸ್ವಭಾವದ ಕಾರಣದಿಂದ ಮೊದಲಿಂದಲೂ ಈ ಸಮುದಾಯದೊಂದಿಗೆ ಬೆರೆಯದೇ ಪ್ರತ್ಯೇಕವಾಗಿಯೇ ಉಳಿಯುತ್ತಾ ಬಂದಿದ್ದಾರೆ. ನಾನು ಮಾತ್ರ ಅವರೊಟ್ಟಿಗೆ ಬೆರೆತು ಕೆಲಸ ಮಾಡುತ್ತೇನೆ ಎನ್ನುತ್ತಾರೆ. ಇದು ಇವರಲ್ಲಿನ ಆಂತರಿಕ ಭಿನ್ನತೆ ಮತ್ತು ಅಂತರವನ್ನು ಸೂಚಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಸಾಮಾಜಿಕ ಸ್ಥಾನಮಾನವು ಈ ಪ್ರದೇಶದ ಗೌಡ,ಮತ್ತು ಪೂಜಾರಿ ಜನಾಂಗಗಳು ಸ್ಥಾನಮಾನಕ್ಕೆ ಸಮನಾಗಿರುವುದು ಕಂಡುಬರುತ್ತದೆ. ಈ ಸಮುದಾಯದ ಮೂಲ ಉದ್ಯೋಗ ಕೃಷಿ ಮತ್ತು ಕೃಷಿಗೆ ಪೂರಕವಾದ ಪಶುಸಂಗೋಪನೆ ಮತ್ತು ಕಾಡುತ್ಪತ್ತಿ ಸಂಗ್ರಹವಾಗಿದೆ. ಈ ಹಿನ್ನೆಲೆಯಲ್ಲಿ ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಯ ಗಡಿಭಾಗದಲ್ಲಿರುವ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯದ ಕುಟುಂಬಗಳು ತಮ್ಮ ಹೆಸರಿನ ಮುಂದೆ 'ಗೌಡ' ಎಂದು ಗುರುತಿಸಿಕೊಳ್ಳುತ್ತಾರೆ.ಈ ಪ್ರದೇಶವು ಸೇರಿದಂತೆ ಇಡೀ ಜಿಲ್ಲೆಯಲ್ಲಿ ಈ ಸಮುದಾಯವನ್ನು ರೈತಾಪಿ ಕುಟುಂಬ ಎಂದು ಪರಿಗಣಿಸಲಾಗಿದೆ. ಈ ಸಮುದಾಯ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮಧ್ಯಮ ವರ್ಗ ಸ್ಥಾನಮಾನವನ್ನು ಹೊಂದಿದ್ದಾರೆ. ಮಲೆಕುಡಿಯ ಸಮುದಾಯದಲ್ಲಿನ ಹೆಸರುಗಳಲ್ಲಿ ವೈವಿಧ್ಯತೆ ಇದೆ. ಇವರನ್ನು ಒಂದೇ ಹೆಸರಿನಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ಮಡಿಕೇರಿಯಲ್ಲಿ ಕುಡಿಯರಂತಲೂ ದಕ್ಷಿಣ ಕನ್ನಡದಲ್ಲಿ ಮಲೆಕುಡಿಯರಂತಲೂ ಮತ್ತು ಚಿಕ್ಕಮಗಳೂರಿನಲ್ಲಿ ಮಲೆಯರಂತಲೂ

ಕರೆಯಲಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರನ್ನು ಒಂದೇ ಹೆಸರಿನಲ್ಲಿ ಗುರುತಿಸಲಾಗುತ್ತಿಲ್ಲ. ಮಲೆಕುಡಿಯ, ಮಲತ್ತಾಯ, ಬರ್ಕೆ, ಗೌಡ ಎಂತಲೂ ಕರೆಯಲಾಗುತ್ತದೆ. ಸಾಮಾಜಿಕ ಅಂತಸ್ತಿನಲ್ಲಿ ಇವರು ತಮ್ಮನ್ನು ಗೌಡ ಮತ್ತು ಪೂಜಾರಿ ಜಾತಿ ಸಮುದಾಯಗಳ ಸಾಲಿನಲ್ಲಿ ಉಳಿಯುವ ಪ್ರಯತ್ನವನ್ನು ಮಾಡಿದ್ದಾರೆ. ಕುದುರೆಮುಖ ರಾಷ್ಟ್ರೀಯ ಉದ್ಯಾನದ ವ್ಯಾಪ್ತಿಯಲ್ಲಿ ವಾಸವಾಗಿರುವ ಮಲೆಕುಡಿಯರು ತಮ್ಮನ್ನು ಗೌಡ ಎಂತಲೇ ಗುರುತಿಸಿಕೊಂಡಿದ್ದಾರೆ. ಇವರ ತಮ್ಮ ಹೆಸರಿನ ಮುಂದೆ ಮಲೆಕುಡಿಯರ ಬದಲಾಗಿ ಗೌಡ ಎಂಬ ಹೆಸರನ್ನು ಸೇರಿಸುತ್ತಿದ್ದಾರೆ. ಈ ಸಮುದಾಯದ ಮತಾಂತರ ಮತ್ತು ಅಂತರ್ಜಾತಿ ವಿವಾಹಕ್ಕೆ ಸಂಬಂಧಪಟ್ಟಂತೆ ತೀರ ಕೆಳಹಂತದ ಮನೋಭಾವನೆಗಳು ಕಂಡುಬರುತ್ತವೆ.

ಕುಡಿಯರ ಕೂಸು ಕಾದಂಬರಿಯ ಪುಟ. ೨೦೬ರಲ್ಲಿ ಚೋಮನ ಮಕ್ಕಳಾದ ಗಿಡ್ಡಿ ಕುಕ್ಕರನ್ನು ಹಿರೇಮಲೆಯ ಯಜಮಾನರಲ್ಲಿ ಮತಾಂತರ ಮಾಡಿ ಪಾದ್ರಿ ಮತಕ್ಕೆ ಸೇರಿಸುತ್ತಾನೆ.[೨೦] 'ಕಲ್ಕುಡ ದೈವ ನನ್ನ ಕೇರಿಯವರು ಕುಲ ಬಿಟ್ಟು ಹೋದುದಾದರೆ ರಕ್ತ ಕಾರಿ ಸಾಯುತ್ತಾರೆ. ಹಾಗೊಮ್ಮೆ ಹೋಗಿದ್ದರೂ ಕ್ಷಮಿಸುತ್ತೇನೆ. ತಿರುಗಿ ತಪ್ಪು ಕಾಣಿಕೆ ಕೊಟ್ಟು ಬಂದು ಸೇರಲಿ ಇಲ್ಲವಾದರೆ ಅವರ ಕುಲವನ್ನೇ ಸುಟ್ಟು ಧ್ವಂಸ ಮಾಡುತ್ತೇನೆ.'[೨೧] ಪುಟ.೩೦೨. ಇಲ್ಲಿ ಮತಾಂತರ ಹೋದರೆ ತಪ್ಪು ಕಾಣಿಕೆ ಕಟ್ಟಿಸಿ ಕಟ್ಟಳೆಯ ಪ್ರಕಾರ ಶುದ್ಧಿ ಸಂಸ್ಕಾರ ಮಾಡಿದರೆ ಆಯಿತು. ಪುಟ. ೩೧೮.[೨೨] ಒಂದು ಮತದಿಂದ ಮತ್ತೊಂದು ಮತಕ್ಕೆ ಹೋಗುವುದು ತಪ್ಪು ದಂಡ ಕಟ್ಟಿ ಮರಳಿ ಬರುವುದು ಸಾಧ್ಯ ಎಂಬ ಕಲ್ಪನೆ ಇತ್ತು ಎಂಬುದು ಇದರಿಂದ ತಿಳಿದುಬರುತ್ತದೆ.

ಕ್ಷೇತ್ರಕಾರ್ಯ ಅಧ್ಯಯನದಲ್ಲಿ ಕಂಡುಬಂದ ಅಂಶಗಳೆಂದರೆ ಬಂಜಾರು ಮಲೆಯ ಇಬ್ಬರು ಹೆಣ್ಣು ಮಕ್ಕಳು ಆ ಕಾಲದಲ್ಲಿ ಅಂತರ್ಜಾತಿ ವಿವಾಹವಾಗಿದ್ದಾರೆ. ಆಗಿನ ಬಿಗುವಿನಿಂದ ಸ್ವಲ್ಪ ತೊಂದರೆಯಾದರೂ ಈಗ ಸುಧಾರಿಸಿದೆ ಎಂಬ ಮನೋಭಾವನೆ ಅವರಿಂದ ಬರುತ್ತದೆ. ನಾರಾಯಣ ಶಿಶಿಲ ಹೇಳುವ ಪ್ರಕಾರ ನಮ್ಮ ಜಾತಿಯ ಒಬ್ಬ ಕೆಳ ಜಾತಿಯ ಹೆಣ್ಣುಮಗಳನ್ನು ವಿವಾಹವಾಗಿದ್ದಾನೆ. ಇದು ನಮ್ಮಲ್ಲಿ ನಿಶಿದ್ಧ ಇದು ನಮಗೆ ಸೇರಿಕೆಯಾಗುವುದಿಲ್ಲ. ಎಂದು ಹೇಳುತ್ತಾರೆ. ಸುಬ್ರಮಣ್ಯದಲ್ಲಿ ನಾಲ್ಕು ಅಂತರ್ಜಾತಿ ವಿವಾಹ ಸಂಬಂಧಗಳಾಗಿವೆ. ಅಲ್ಲಿಯೂ ಸಹ ಒಂದು ರೀತಿಯ ಭಿನ್ನತೆಯ ದೃಷ್ಟಿಕೋನಗಳು ಕಂಡುಬರುತ್ತವೆ. ಈಗಾಗಲೇ ಅಂತರ್ಜಾತಿ ವಿವಾಹವಾಗಿರುವವರು ನಮ್ಮ ಜನಾಂಗದಿಂದ ಬೇರೆಯಾಗಿದ್ದಾರೆ ಎಂಬ ಭಾವನೆ ಇವರದ್ದಾಗಿದೆ. ಅದಕ್ಕೆ ಇವರು ಕೊಡುವ ಕಾರಣ ವಿವಾಹವಾದ ನಂತರ ಇವರು ತಮ್ಮ ಮಕ್ಕಳನ್ನು ನಮ್ಮ ಜಾತಿಯವರಿಗೆ ಕೊಡುವುದಿಲ್ಲ. ಅವರು ಬೇರೆಕಡೆ ಕೊಡುತ್ತಾರೆ ಎಂಬ ಕಲ್ಪನೆ ಇವರಲ್ಲಿದೆ. ಏನೇ ಆದರೂ ಅಂತರ್ ಧರ್ಮ ಮತ್ತು ಅಂತರ್ಜಾತಿ ವಿವಾಹ ವಿಚಾರಗಳಲ್ಲಿ ಸಡಿಲತೆ ಇಲ್ಲದಿರುವುದು ಅಧ್ಯಯನದಿಂದ ಕಂಡು ಬರುತ್ತದೆ. ಆಂತರಿಕ ಏಣಿ ಶ್ರೇಣಿಯಲ್ಲಿ ಈ ಮೇಲಿನ ಎಲ್ಲಾ ಭಿನ್ನತೆಗಳು ಈ ಸಮುದಾಯದಲ್ಲಿ ಕಂಡುಬರುತ್ತವೆ.

ತೀ.ನಂ. ಶಂಕರನಾರಾಯಣರವರು ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಕುರಿತು ಇತರ ದೇಶಗಳಲ್ಲಿ ಕಂಡು ಬರದ ಮತ್ತು ಭಾರತಕ್ಕೆ ಮಾತ್ರ ಸೀಮಿತವಾದ ಸಾಮಾಜಿಕ ವ್ಯವಸ್ಥೆಯಾಗಿದೆ. ಭಾರತೀಯ ಸಾಮಾಜಿಕ ಶ್ರೇಣೀಕೃತ ಜಾತಿ ಪದ್ಧತಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಈ

ನಾಲ್ಕು ವರ್ಣ ಶ್ರೇಣಿಗಳಲ್ಲದೇ ಇವುಗಳನ್ನು ಹೊರತಾದ ಈ ಸಮಾಜದ ಅತ್ಯಂತ ಕೆಳಸ್ಥರವನ್ನು ಪ್ರತಿನಿಧಿಸುವ ಪಂಚಮ ಎಂಬ ವ್ಯವಸ್ಥೆ ಇದೆ. ಎನ್ನುತ್ತಾರೆ(ಪುಟ. ೪೦ ಆದಿವಾಸಿ ಆಖ್ಯಾನ).

ಆರಂಭದಲ್ಲಿದ್ದ ಸಾಮಾಜಿಕ ಆರ್ಥಿಕ ವೃತ್ತಿ ಆಧಾರಿತ ವರ್ಣ ವ್ಯವಸ್ಥೆ ಕಾಲ ಕ್ರಮೇಣ ಜಾತಿ ಆಧಾರಿತ ವ್ಯವಸ್ಥೆ ರೂಪುಗೊಂಡ ಬೆಳವಣಿಗೆಯಲ್ಲಿ ಬುಡಕಟ್ಟು ಸಮುದಾಯಗಳು ಈ ಶ್ರೇಣೀಕೃತ ವ್ಯವಸ್ಥೆಯಿಂದ ಹೊರತಾಗಿ ಉಳಿದಿವೆ. ಈ ಜಾತಿಗಳನ್ನು ಬಿಟ್ಟು ಉಳಿದ ಸಾಮಾಜಿಕ ವರ್ಗಗಳನ್ನೆಲ್ಲಾ ಭಾರತದಲ್ಲಿ ಬುಡಕಟ್ಟುಗಳೆಂದು ಕರೆಯಬಹುದು ಎಂದು ಇವರು ಹೇಳಿದ್ದಾರೆ. ಈ ಬುಡಕಟ್ಟುಗಳು ಜಾತಿಗಳೊಡನೆ ಬೆರೆಯದೆ ಬಹಳ ಕಾಲದಿಂದ ಸ್ವತಂತ್ರವಾಗಿದ್ದು, ತಮ್ಮ ಸಂಸ್ಕೃತಿ ಮತ್ತು ತಮ್ಮತನವನ್ನು ಉಳಿಸಿಕೊಂಡು ಬಂದಿವೆ. ಇವರು ಅನಾದಿಕಾಲದಿಂದಲೂ ಕಾಡು ಬೆಟ್ಟ ಗುಡ್ಡ ಪ್ರದೇಶಗಳಲ್ಲಿ ಪ್ರತ್ಯೇಕವಾಗಿ ಜೀವನ ಸಾಗಿಸಿಕೊಂಡು ಬಂದಿರುವುದೇ ಇದಕ್ಕೆ ಪ್ರಮುಖ ಕಾರಣ ಎಂದು ಸ್ಪಷ್ಟವಾಗುತ್ತದೆ. ಹೀಗೆ ಪ್ರತ್ಯೇಕವಾಗಿ ಜೀವನ ನಡೆಸುವ ಈ ಸಮುದಾಯವು ಹಿಂದು ಧರ್ಮದ ಪ್ರಭಾವಕ್ಕೆ ಒಳಗಾಗದೆ ತನ್ನದೇ ಆದ ಆದಿವಾಸಿ ಧರ್ಮಕ್ಕೆ ಬದ್ಧವಾಗಿರುವುದು ಕಂಡು ಬರುತ್ತದೆ. ಇದರಿಂದಾಗಿ ಆದಿವಾಸಿ ಸಂಸ್ಕೃತಿ ವಿಶಿಷ್ಟ ಸಂಸ್ಕೃತಿಯಾಗಿರಲು ಸಾಧ್ಯವಾಯಿತು. ಭಾರತದ ಎಲ್ಲಾ ಜಾತಿಗಳು ಹಿಂದು ಧರ್ಮ ವ್ಯವಸ್ಥೆಯಲ್ಲಿದ್ದು, ಈ ಧರ್ಮದ ಒಂದು ಭಾಗವೇ ಆಗಿ ಉಳಿದಿರುವುದರಿಂದ ಜಾತಿ ತನ್ನ ಸಾಂಪ್ರದಾಯಿಕ ಜಡತ್ವದಿಂದ ಹೊರಬರಲು ಸಾಧ್ಯವಾಗಿಲ್ಲ. ಜಾತಿಯ ಸದಸ್ಯತ್ವ ಹುಟ್ಟಿನಿಂದ ನಿರ್ಧಾರವಾಗುತ್ತದೆ. ಇದು ರಕ್ತ ಸಂಬಂಧ ಮತ್ತು ಅನುವಂಶೀಯವಾಗಿರುತ್ತದೆ. ಯಾರು ಯಾವ ಜಾತಿಯಲ್ಲಿ ಹುಟ್ಟುತ್ತಾರೋ ಅದೇ ಜಾತಿಯ ಸದಸ್ಯತ್ವ ಪಡೆಯಬೇಕಾಗುತ್ತದೆ. ಇವರ ಅಂತಸ್ತು ಸ್ಥಾನ ಮಾನ ಅವರು ಹುಟ್ಟುವ ಮೊದಲೇ ನಿರ್ಧಾರವಾಗಿರುತ್ತದೆ. ಮತ್ತು ಹುಟ್ಟಿದ ನಂತರವೂ ಮುಂದುವರೆಯುತ್ತದೆ. ಬದಲಾವಣೆಗೆ ಯಾವುದೇ ಅವಕಾಶವಿಲ್ಲ. ಆಹಾರ ಪದ್ಧತಿ ವಿವಾಹ ಸಂಬಂಧಗಳು ಉದ್ಯೋಗ ಮಡಿ ಮೈಲಿಗೆ ಕಲ್ಪನೆ ಉಚ್ಛ ನೀಚ ಕಲ್ಪನೆ ಮುಂತಾದ ಸಾಮಾಜಿಕ ಅಸಮಾನತೆ ಏಣಿ ಶ್ರೇಣಿ ವ್ಯವಸ್ಥೆ ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯಾಗಿದೆ. ಇಲ್ಲಿರುವ ನಿರ್ಬಂಧಗಳಿಂದಾಗಿ ಬದಲಾವಣೆ ಸಾಧ್ಯವಿಲ್ಲ. ಆದ್ದರಿಂದ ಜಾತಿ ಆಧಾರಿತ ಸಮಾಜವು ಒಂದು ಮುಚ್ಚಿದ ಸಮಾಜವಾಗಿದೆ.

ಬರ್ಕೆ ಎಂದು ಕರೆಯುವುದಕ್ಕೆ ಗೌರಿ ಒಂದು ಕಥೆಯನ್ನು ಹೇಳುತ್ತಾರೆ. ಹಿಂದಿನ ಕಾಲದಲ್ಲಿ ನಮ್ಮ ಮಲೆತ್ತಾಯರ ಮಂತ ರಾಜನಿದ್ದ. ಈ ರಾಜ ಕಾಲಲ್ಲಿ, ಕೈಯಲ್ಲಿ ಕಡಗ ಹಾಕಿಕೊಂಡು ತುಂಬಾ ವೈಭವದಿಂದ ಇದ್ದ. ಈ ರಾಜ ನಮ್ಮ ಮಲತ್ತಾಯರ ಜನರನ್ನು ಹುಡುಕಿಕೊಂಡು ಧರ್ಮಸ್ಥಳಕ್ಕೆ ಬರುತ್ತಾರೆ. ಇಲ್ಲಿಗೆ ಬಂದು ನಮ್ಮ ಮಲತ್ತಾಯ ಜನರನ್ನು ನಾನು ಕರದುಕೊಂಡು ಹೋಗುತ್ತಾನೆ. ನನ್ನೊಂದಿಗೆ ಕಳಿಸಿಕೊಡಿ ಎಂದು ಇಲ್ಲಿನ ಹೆಗ್ಗಡೆ ಧಣಿಗಳಲ್ಲಿ ಕೇಳುತ್ತಾನೆ. ಇವರನ್ನು ಇಲ್ಲಿಂದ ಕಳಿಸಬೇಕಲ್ಲ ಎಂದು ತಳಿದ ನಮ್ಮ ಹಿಂದಿನ ಹೆಗ್ಗಡೆ ಮನೆತನದ ಧಣಿಗಳು, ನಿಮ್ಮ ಮಲೆತ್ತಾಯದವರು 'ಇಲ್ಲಿ ಇಲ್ಲ ಇಲ್ಲಿರುವವರು ಬರ್ಕೆಯವರು ಎಂದು ಹೇಳುತ್ತಾರೆ. ಆಗಿನಿಂದ ನಮ್ಮವರನ್ನು ಬರ್ಕೆಯವರು ಎಂತಲೇ ಕರೆಯಲಾಗಿದೆ ಎಂಬುದನ್ನು ಇಲ್ಲಿನ ವಯೋವೃದ್ದೆ ಹೇಳುತ್ತಾರೆ ಇದರಿಂದ ನಮಗೆ ತಿಳಿದು ಬರುವ ಸಂಗತಿ ಎಂದರೆ ಈ ಸಮುದಾಯದಲ್ಲಿ ಹೀಗೆ ಆಳುವ ದೊರೆಗಳಾಗಿದ್ದರು ಎಂಬುದು ತಿಳಿಯುತ್ತದೆ.

## ಮಲೆಕುಡಿಯರಲ್ಲಿ ಕಂಡುಬರುವ ಶ್ರೇಣೀಕೃತ ವ್ಯವಸ್ಥೆ

ಕೋಷ್ಟಕ ೨.೯(೧)

ಮಲೆಕುಡಿಯರಲ್ಲಿ ಕಂಡುಬರುವ ಶ್ರೇಣೀಕೃತ ವ್ಯವಸ್ಥೆ




ಮೇಲಿನ ಕೋಷ್ಟಕದಲ್ಲಿ ಕಂಡುಬರುವ ಈ ಶ್ರೇಣೀಕೃತ ವ್ಯವಸ್ಥೆಯು ಈ ಸಮುದಾಯದ ಜೀವನ ಪದ್ಧತಿಯನ್ನು ಸೂಚಿಸುತ್ತದೆ. ಈ ವ್ಯವಸ್ಥೆ ಪರಸ್ಪರ ಅವಲಂಬಿತವಾಗಿದೆ ಮತ್ತು ಅಷ್ಟೇ ಬದ್ಧತೆಯನ್ನು ಹೊಂದಿದೆ. ಎರಡು ಪಂಗಡಗಳಲ್ಲಿ ಕಂಡುಬರುವ ಅಂತರ ಮತ್ತು ಭಿನ್ನತೆಗಳು ಇವರ ಆಂತರಿಕ ಏಣಿ-ಶ್ರೇಣಿ ವ್ಯವಸ್ಥೆಯನ್ನು ಸೂಚಿಸುತ್ತದೆ. ಎರಡು ಪಂಗಡಗಳಲ್ಲಿ ವಿವಾಹ ಸಂಬಂಧಗಳಿಲ್ಲ ಮತ್ತು ಕೂಡುವುದಿಲ್ಲ. ಹೊಂದಿಕೊಳ್ಳುವುದಿಲ್ಲ. ನಾಲ್ಮಲೆಯವರಲ್ಲಿಯೇ ವೈರುಧ್ಯಗಳಿವೆ. ಮಕ್ಕಳಕಟ್ಟು ಸಂತತಿಯವರು ನೆರಿಯಾ ವ್ಯಾಪ್ತಿಯ ನಾಲುಮಲೆಗಳಲ್ಲಿ ವಾಸವಾಗಿದ್ದಾರೆ ಮತ್ತು ಇವರು ಇಂದಿಗೂ ಪ್ರತ್ಯೇಕವಾಗಿಯೇ ಇದ್ದು,

ತಮ್ಮ ಮೂಲ ಸಂಸ್ಕೃತಿಯ ವಾರಸುದಾರರಾಗಿದ್ದಾರೆ. ಅಳಿಯ ಸಂತಾನ ಪರಂಪರೆಯು ತುಳು ನಾಡಿನ ಸಂಸ್ಕೃತಿಯ ಭೂತಾಳ ಪಾಂಡ್ಯನ ಅಳಿಯಕಟ್ಟು ಸಂತತಿಯ ಒಂದು ಭಾಗವಾಗಿದ್ದಾರೆ. ಇವರು ತುಳು ಸಂಸ್ಕೃತಿಯ ಪಾಲನೆ ಮಾಡುತ್ತಾ ಬಂದಿದ್ದಾರೆ. ಪ್ರಾದೇಶಿಕ ಮತ್ತು ಭಾಷಾ ಭಿನ್ನತೆಗಳಿಂದಾಗಿ ಈ ಎರಡು ಪಂಗಡಗಳ ನಡುವೆ ಅಂತರ ನಿರ್ಮಾಣವಾಗಿದೆ. ಇಂದಿಗೂ ಈ ಎರಡು ಪಂಗಡಗಳ ಮಧ್ಯೆ ಸಾಮ್ಯತೆ ಕಂಡು ಬರುತ್ತಿಲ್ಲ. ನಾಲುಮಲೆಯವರು ಮೂಡಿಗೆರೆ, ಶೃಂಗೇರಿ, ಕಳಸ ಕಡೆಗೆ ತಮ್ಮ ವಿವಾಹ ಸಂಬಂಧಗಳನ್ನು ಏರ್ಪಡಿಸಿಕೊಂಡರೆ, ಊರುಮಲೆಯವರು ತಮ್ಮ ಅಳಿಯ ಕಟ್ಟು ಪಂಗಡದಲ್ಲಿ ವಿವಾಹ ಸಂಬಂಧಗಳನ್ನು ಏರ್ಪಡಿಸಿಕೊಳ್ಳುತ್ತಾರೆ. ಇವರು ಕಾಸರಗೋಡು ಪ್ರದೇಶಗಳಲ್ಲಿಯೂ ಸಹ ವಿವಾಹ ಸಂಬಂಧಗಳನ್ನು ಹೊಂದಿದ್ದಾರೆ.

**೨.೮. ದಕ್ಷಿಣ ಕನ್ನಡದ ಸಾಮಾಜಿಕ ಪರಿಸರದಲ್ಲಿ ಮಲೆಕುಡಿಯರ ಸ್ಥಾನಮಾನ**

ಭಾರತದ ಬುಡಕಟ್ಟುಗಳ ಸ್ವರೂಪವು ಅವುಗಳ ಕುರಿತು ಅಧ್ಯಯನ ಮತ್ತು ಇದುವರೆಗೂ ನಡೆದ ಸಂಶೋಧನೆಗಳು ಮತ್ತು ಸಮೀಕ್ಷೆಗೂ ಮೊದಲು ಭಾರತದಲ್ಲಿನ ಜಾತಿ ಮತ್ತು ಬುಡಕಟ್ಟು ಗಳಿಗಿರುವ ಇರುವ ವ್ಯತ್ಯಾಸ ಮತ್ತು ಭಿನ್ನತೆಗಳನ್ನು ಗುರುತಿಸಿದಾಗ ಮಲೆಕುಡಿಯ ಆಂತರಿಕ ಶ್ರೇಣೀಕರಣ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಕೆ.ಮೋಹನ್‌ಕೃಷ್ಣ ರೈ ರವರ ತುಳು ಸಂಸ್ಕೃತಿ ಚತುರ್ಮುಖೀ ಅಧ್ಯಯನದಲ್ಲಿ ತುಳುನಾಡಿನ ಸಾಮಾಜಿಕ ಆಂತರಿಕ ವ್ಯವಸ್ಥೆಯ ಶ್ರೇಣೀಕರಣದ ವಿಶ್ಲೇಷಣೆ ಮಾಡಿದ್ದಾರೆ. ತುಳು ನಾಡಿನ ಸಾಮಾಜಿಕ ರಚನೆ ಜಾತಿ ವ್ಯವಸ್ಥೆ ಪ್ರಾದೇಶಿಕ ಭಿನ್ನತೆ ನಂಬಿಕೆ ಆಚಾರ ವಿಚಾರಗಳು ಭೌಗೋಳಿಕ ಪರಂಪರೆ ಸಾಮಾಜಿಕ ಆಂತರಿಕ ಶ್ರೇಣೀಕರಣದ ಮೇಲೆ ಪರಿಣಾಮ ಬೀರಿದೆ. ಇದಕ್ಕೆ ಅಲೂಪರ ಆಳ್ವಿಕೆಯಿಂದ ವಸಾಹತುಶಾಹಿ ಯವರೆಗಿನ ಬದಲಾವಣೆಗಳೇ ಸಾಕ್ಷಿಯಾಗಿದೆ. ಬ್ರಾಹ್ಮಣ, ಕ್ಷತ್ರೀಯ, ವೈಶ್ಯ, ಶೂದ್ರ ವ್ಯವಸ್ಥೆಗೆ ಹೊರತಾಗಿ ಸಮಾಜದ ಪಂಗಡಗಳು ಉಪಪಂಗಡಗಳು ಸಮುದಾಯದ ಅಧಿಕಾರ ಸಂಪತ್ತು ಸವಲತ್ತುಗಳನ್ನು ಶ್ರೇಣೀಕರಿಸಿದೆ. ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ 'ಸಾಮಾಜಿಕ ವ್ಯವಸ್ಥೆಯೊಳಗಿಂದ ಜಾತಿ ಹುಟ್ಟಿಕೊಂಡಿದೆಯೋ ಅಥವಾ ಜಾತಿ ವ್ಯವಸ್ಥೆಯೇ ಸಾಮಾಜಿಕ ವ್ಯವಸ್ಥೆ ಹುಟ್ಟುಹಾಕಿದೆಯೋ ಎನ್ನುವುದು ಚರ್ಚೆಯ ವಸ್ತುವಾಗಿದೆ ಎಂದು ಮೋಹನ್‌ಕೃಷ್ಣ ರೈರವರು ವಿಶ್ಲೇಷಿಸಿದ್ದಾರೆ.

**ಗುತ್ತಿನ ವ್ಯವಸ್ಥೆ(ಗುತ್ತುದ ಬಾರಿಕೆ):** ತುಳುನಾಡಿನ ಸಾಮಾಜಿಕ ವ್ಯವಸ್ಥೆಯಲ್ಲಿ ಬಂಟರು, ಜೈನರ ಸ್ಥಾನಮಾನಗಳು ಗುತ್ತಿನ ಪದ್ಧತಿ ಊಳಿಗಮಾನ್ಯ ವ್ಯವಸ್ಥೆಯ ವಾರಸುಧಾರಕರಾಗಿದ್ದಾರೆ. ತುಳುನಾಡನ್ನು ಆಳಿದ ಅರಸರಲ್ಲಿ ಜೈನರು, ಚೌಟರು, ಅಜಿಲರು, ಬಂಗರು, ವಿಜಯನಗರ ಹೊಯ್ಸಳ, ಭೈರರು ಮುಂತಾದ ಅರಸು ಮನೆತನಗಳು ಪ್ರಮುಖವಾಗಿವೆ. ಇವರ ಆಳ್ವಿಕೆಯ ಪ್ರತೀಕಗಳಾಗಿ ದ,ಕ,ಜಿಲ್ಲೆಯ ತುಳುನಾಡಿನಲ್ಲಿ ಗುತ್ತು ಮನೆಗಳು, ಬಸದಿಗಳು, ಅರಮನೆಗಳು ಪ್ರಧಾನವಾಗಿ ಕಂಡುಬರುತ್ತವೆ. ತುಳುನಾಡನ್ನು ಆಳಿದ ಜೈನ ಅರಸರ ಆಳ್ವಿಕೆ ಬಾಹ್ಯದೀರ್ಘವಾಗಿದ್ದರೂ ಸಹ ಇವರ ಪ್ರಭಾವ ತುಳುನಾಡಿನ ಮೇಲೆ ಅಧಿಕಾರ ಬೀರುವುದು ಕಂಡುಬರುವುದಿಲ್ಲ. ಅಂದರೆ ಜೈನ ಧರ್ಮ ತುಳು ಸಂಸ್ಕೃತಿಯೊಂದಿಗೆ ಹೊಂದಿಕೊಂಡಿದೆ. ಜೈನ ಸಂಸ್ಕೃತಿ ತುಳು ಸಂಸ್ಕೃತಿಯ ಆಕರ್ಷಣೆ, ಪ್ರಭಾವಕ್ಕೆ ಒಳಗಾಗಿದೆ. ಆದರೆ ತುಳು ಸಂಸ್ಕೃತಿಯು ಜೈನ ಸಂಸ್ಕೃತಿಯ ಪ್ರಭಾವ ಆಕರ್ಷಣೆಗೆ ಒಳಗಾಗುವುದು ಇಲ್ಲಿ ಕಂಡುಬರುವುದಿಲ್ಲ. ತುಳುವರ ಸಂಖ್ಯೆ ಗಣನೀಯವಾಗಿ ಏರಿಕೆಯಾಗುತ್ತಾಹೋಗಿವೆ. ಜೈನರ ಸಂಖ್ಯೆ ಕಡಿಮೆಯಾಗುತ್ತಾ

ಹೋಗಿದೆ. ತುಳುನಾಡಿನ ಅನೇಕ ಪಾಡ್ದನಗಳಲ್ಲಿ ಅಂದಿನ ಜೈನರಸರ ಉಲ್ಲೇಖವಿದೆ. ಈ ಪಾಡ್ದನಗಳಲ್ಲಿ ಅಂದಿನ ಜೈನಧರ್ಮವು ವಹಿಸಿದ ಮಹತ್ವಗಳನ್ನು ವಿವರಿಸುತ್ತವೆ. ಕೋಟಿ ಚೆನ್ನಯ ಪಾಡ್ದನದಲ್ಲಿ ಜೈನ ಅರಸರ ಉಲ್ಲೇಖ ಪ್ರಧಾನವಾಗಿದೆ. ಬಂಟರು ಮತ್ತು ಜೈನ ಅರಸು ಮನೆತನಗಳು ಕೆಳವರ್ಗದವರ ಮೇಲೆ ಹಿಡಿತ ಹೊಂದಿ ಅಧಿಕಾರವನ್ನು ಚಲಾಯಿಸುತ್ತಲೇ ಬಂದಿದ್ದಾರೆ. ಸಾಮಾಜಿಕ ನ್ಯಾಯ ತೀರ್ಮಾನಗಳು ಇವರಿಂದಲೇ ನಡೆಯುತ್ತಿದ್ದವು. ಜೈನರ ಆಚರಣೆಗಳು ತುಳುನಾಡಿನ ಬಂಟರ ಆಚರಣೆಗಳೊಂದಿಗೆ ಸಂಬಂಧವನ್ನು ಹೊಂದಿರುವುದು ಅಳಿಯಕಟ್ಟು ಸಂತಾನದಲ್ಲಿನ ಸೌಮ್ಯತೆಯಲ್ಲಿ ಕಂಡುಬರುತ್ತದೆ.

ಭೂತಾಳಪಂಡ್ಯನ ಕತೆಯಲ್ಲಿ ಅಳಿಯಕಟ್ಟು ಸಂತಾನಕ್ಕೆಸಂಬಂದಿಸಿದಂತೆ ಇವರಿಬ್ಬರಲ್ಲಿ ಹೊಂದಾಣಿಕೆ ಇಲ್ಲಿ ಕಂಡುಬರುತ್ತದೆ. ಶೆಟ್ಟಿ, ಆಳ್ವ, ಹೆಗ್ಗಡೆ, ಭಂಡಾರಿ, ಅಜಿಲ, ಬಲ್ಲಾಳ ಮುಂತಾದ ಕೂಲನಾಮಗಳು ಇವರಿಬ್ಬರಲ್ಲಿ ಕಂಡುಬರುತ್ತದೆ. ಈ ಎರಡು ಜನಾಂಗಗಳಲ್ಲಿ ಕಂಡುಬರುವ ಪ್ರಮುಖವಾದ ಭಿನ್ನತೆ ಎಂದರೆ ಬಂಟರು ಮಾಂಸಹಾರಿಗಳಾಗಿದ್ದಾರೆ, ಜೈನರು ಸಸ್ಯಹಾರಿ ಗಳಾಗಿದ್ದಾರೆ.

**ಗುತ್ತದ ಬಾರಿಕೆ:** ಪ್ರತಿಯೊಂದು ಗುತ್ತ ಮನೆಯು ತಮ್ಮದೇ ಆದ ದೈವ ಸ್ಥಾನವನ್ನು ಹೊಂದಿದೆ. ಈ ದೈವ ಸ್ಥಾನದ ಆಚರಣೆಗಳಲ್ಲಿ, ನೇಮದ ಸಂದರ್ಭದಲ್ಲಿ ಜಾತಿ ಆಧಾರಿತ ಹಕ್ಕುಬಾಧ್ಯತೆಗಳನ್ನು ನೀಡಲಗಿದೆ, ಇವರಲ್ಲಿಯೇ ಒಡಂಬಡಿಕೆ ಇದೆ.

ಸಾಮಾಜಿಕ ಆಡಳಿತ ವ್ಯವಸ್ಥೆಯಲ್ಲಿ ಬರುವ ಗುತ್ತಿನವರು ಭೂ ಮಾಲಿಕರಾಗಿದ್ದು, ಜಮೀನ್ದಾರರಾಗಿದ್ದರು. ಒಂದು ಪ್ರದೇಶದಲ್ಲಿ ತಮ್ಮ ಹಿಡಿತವನ್ನು ಹೊಂದಿದವರಾಗಿದ್ದರು. ಇಲ್ಲಿನ ಜಾತಿ ವ್ಯವಸ್ಥೆಯ ಸ್ತರದಲ್ಲಿ ಗುತ್ತಿನವರಿಗೆ ಉನ್ನತಸ್ಥಾನವಿತ್ತು. ಕೆ. ಮೋಹನ್‌ಕೃಷ್ಣ ರೈ ಅವರು ತಮ್ಮ ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನದಲ್ಲಿ ತುಳುನಾಡಿನಲ್ಲಿರುವ ಜಾತಿಮುಖಗಳನ್ನು ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಪುಟ. ೨೪ರಲ್ಲಿ ಇವರು ತುಳುನಾಡಿನ ಸಮಾಜದ ರಚನೆ ಕುರಿತು ವಿವರಿಸುತ್ತಾ, 'ತುಳುನಾಡಿನ ಸಾಮಾಜಿಕ ರಚನೆ ಜಟಿಲವಾಗಿದ್ದು, ಬಹುರೂಪತೆಯನ್ನು ಹೊಂದಿದೆ' ಎನ್ನುತ್ತಾರೆ[೨೪].

ತುಳುನಾಡಿನ ವಿಶಿಷ್ಟತೆಯನ್ನು ಪ್ರತಿಬಿಂಬಿಸುವ ಇಲ್ಲಿನ ಜಾತಿವ್ಯವಸ್ಥೆ ಪ್ರಾದೇಶಿಕ ಭಿನ್ನತೆಗಳು, ಆಚಾರ ವಿಚಾರ, ನಂಬಿಕೆಗಳು ಭೌಗೋಳಿಕ ಹಿನ್ನೆಲೆ ಇವರಲ್ಲವೂ ತುಳುನಾಡಿನ ಸಮಾಜವನ್ನು ಒಂದು ವಿಶಿಷ್ಟ ಸಮಾಜವನ್ನಾಗಿಸಿರುವುದನ್ನು ಇವರು ಗುರುತಿಸಿದ್ದಾರೆ. ಇಲ್ಲಿ ಆಳ್ವಿಕೆ ಮಾಡಿದ ಅಲೂಪರ ಆಳ್ವಿಕೆಯ ಕಾಲದಿಂದ ವಸಹಾತುಶಾಹಿ ವ್ಯವಸ್ಥೆಯ ಕಾಲದವರೆಗೆ ಆದ ಬದಲಾವಣೆಗಳೇ ಇದಕ್ಕೆ ಸಾಕ್ಷಿ ಎನ್ನುವ ಇವರು ಚಾತುವರ್ಣಗಳ ಹಿನ್ನೆಲೆಯಲ್ಲಿ ಇಲ್ಲಿನ ಸಮಾಜವನ್ನು ಅರ್ಥೈಸಿಕೊಳ್ಳಲು ಸಾಧ್ಯವಿಲ್ಲ ಎನ್ನುತ್ತಾರೆ. ಇಲ್ಲಿನ ಪ್ರತಿಯೊಂದು "ಸಮುದಾಯವು ಹೊಂದಿರುವ ಲಕ್ಷಣಗಳನ್ನು ಮತ್ತೆ ಮತ್ತೆ ನಿರೂಪಿಸುತ್ತವೆ. ಭೂತವನ್ನು ಪುನರ್ನಿಮಾನಿಸಿ ವರ್ತಮಾನವನ್ನು ನಿರ್ದಿಷ್ಟಗೊಳಿಸಿ, ಭವಿಷ್ಯವನ್ನು ಆಶಾದಾಯಕವನ್ನಾಗಿಸುವ ಪ್ರಯತ್ನಗಳಾಗಿರುವುದನ್ನು ಇವರು ಗುರುತಿಸಿದ್ದಾರೆ(ಪುಟ. ೨೪-೨೫)[೨೫]. ತುಳುನಾಡಿನ ಸಮಾಜದ ಪಂಗಡಗಳು ಉಪಪಂಗಡಗಳಲ್ಲಿ ಆದ ಸಂಕೀರ್ಣತೆಯನ್ನು ಇವರು ಗುರುತಿಸುತ್ತಾ ತುಳುನಾಡಿನ ಜಾತಿ ವ್ಯವಸ್ಥೆಯಲ್ಲಿನ ಅಧಿಕಾರ ಸಂಪತ್ತು ಮತ್ತು ಸವಲತ್ತುಗಳನ್ನು ಅವಲಂಬಿಸಿಕೊಂಡಿದೆ ಎನ್ನುತ್ತಾರೆ(ಪುಟ.೨೫)[೨೬]. ಇದರಿಂದ ಶ್ರೇಣಿಕೃತ ಸಮಾಜದ ನಿರ್ಮಾಣಕ್ಕೆ ಅವಕಾಶ ಮಾಡಿಕೊಟ್ಟಿರುವುದನ್ನು

ಇವರು ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಬದಲಾಗುತ್ತಿರುವ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ತನ್ನ ಹಿರಿಮೆಯನ್ನು ಹೇಗೆ ಕಾಪಾಡಿಕೊಂಡು ಬಂದಿದೆ ಎಂಬುದನ್ನು ಉದಾಹರಣೆ ಸಹಿತವಾಗಿ ವಿವರಿಸಿದ್ದಾರೆ. ಅಲ್ಪಸಂಖ್ಯಾತ ಶ್ರೀಮಂತ ವರ್ಗ ಮತ್ತು ಬಹುಸಂಖ್ಯಾತ ವರ್ಗದಲ್ಲಿನ ಆದ ಬದಲಾವಣೆಯನ್ನು ಇವರು ಗುರುತಿಸುತ್ತಾರೆ. ತುಳುನಾಡಿನ ಸಾಮಾಜಿಕ ವ್ಯವಸ್ಥೆಯ ಶ್ರೇಣೀಕೃತ ಸಮಾಜದಲ್ಲಿ ಅರಸರು ಶ್ರೀಮಂತ ವರ್ಗದವರು ರಾಜಕೀಯ ಅಧಿಕಾರವನ್ನು ಹೊಂದಿದ್ದಾರೆ. ಬ್ರಾಹ್ಮಣರು ಧಾರ್ಮಿಕ ಅಧಿಕಾರವನ್ನು ಹೊಂದಿದ್ದಾರೆ. ಇವರು ಜಾತಿ ಆಧಾರಿತ ತುಳು ಸಮಾಜದಲ್ಲಿ ತುತ್ತ ತುದಿಯಲ್ಲಿ ನಿಲ್ಲುತ್ತಿರುವುದನ್ನು ಗುರುತಿಸಿದ್ದಾರೆ. ತುಳುನಾಡಿನ ವಿವಿಧ ಆಡಳಿತ ಘಟಕಗಳಾದ ಸೀಮೆ, ಮಾಗಣಿ ಮತ್ತು ಗ್ರಾಮ ಮುಂತಾದ ಆಡಳಿತ ಘಟಕಗಳು ಜಾತಿ ಆಧಾರಿತ ಜಮೀನ್ದಾರಿ ಪದ್ಧತಿಯನ್ನು ಸೂಚಿಸು ತ್ತಿರುವುದನ್ನು ಇಲ್ಲಿ ಗುರುತಿಸಿರುವ ಇವರು ಈ ಆಡಳಿತ ಘಟಕಗಳು ವಸಹಾತುಶಾಹಿ ವ್ಯವಸ್ಥೆಯವರೆಗೆ ಹೆಚ್ಚಿನ ಅಧಿಕಾರವನ್ನು ಹೊಂದಿದ್ದವು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಸೀಮೆ, ಮಾಗಣೆಗಳಲ್ಲಿ ಜೈನರು ಅಧಿಕಾರಿಗಳಾಗಿದ್ದಾರೆ. ಗ್ರಾಮ ಮತ್ತು ಗುತ್ತುಗಳಲ್ಲಿ ಬಂಟರು ಮುಖ್ಯಸ್ಥರಾಗಿದ್ದಾರೆ. ಬ್ರಾಹ್ಮಣರು ಧಾರ್ಮಿಕ ಆಚರಣೆಗಳ ಮೂಲಕ ಇವರಿಗಿಂತ ಎತ್ತರದ ಸ್ಥಾನದಲ್ಲಿ ನಿಂತಿದ್ದಾರೆ. ಉಳಿದ ಜಾತಿಗಳಾದ ಬಿಲ್ಲವರು, ಗೌಡರು, ಮೊಗವೀರರು, ಮಡಿವಾಳರು, ಕುಂಬಾರರು, ಗಾಣಿಗರು, ವಿಶ್ವಕರ್ಮರು, ಕೊಂಕಣಿಗಳು, ದೇವಾಡಿಗರು, ಬೀವಿ, ಮೊಗೇರರು, ಪರವರು, ಪಂಬದರು, ನಲಿಕೆಯವರು, ಮೇರರು, ಮನ್ಸರು, ಬೈರ ಇನ್ನು ಅನೇಕ ಜಾತಿ ಸಮುದಾಯಗಳ ಹಕ್ಕು ನಿರ್ಧರಿಸುವವರು ಶ್ರೀಮಂತ ವರ್ಗದವರಾಗಿದ್ದಾರೆ. ಈ ಜಾತಿ ಸಮುದಾಯಗಳಲ್ಲಿ ಕೊರಗರು, ಮಲೆಕುಡಿಯರು ಸಹ ಇದ್ದಾರೆ.

ವೈದಿಕ ಸಂಸ್ಕೃತಿಯನ್ನು ಪ್ರತಿನಿಧಿಸುವ ಬ್ರಾಹ್ಮಣರು, ಭಟ್ಟರು, ಅಂತೆಯೇ ಉಳಿದವರು ಬ್ರಾಹ್ಮಣೇತರ ಅವೈದಿಕ ಸಂಸ್ಕೃತಿಯನ್ನು ಪ್ರತಿನಿಧಿಸುವ ಪರಂಪರೆಯನ್ನು ಇವರು ಉಲ್ಲೇಖಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನು ಇಲ್ಲಿನ ಭೂತಾರಾಧನೆಯು ಸಂಕೇತಿಸುತ್ತದೆ. ಈ ಭೂತಾರಾಧನೆಯ ಆಚರಣೆ ವ್ಯವಸ್ಥೆಯಲ್ಲಿ ಈ ಕೇಂದ್ರೀಕೃತ ಜಾತಿ ವ್ಯವಸ್ಥೆಗಳ ಸ್ಥಿತಿ ಗೋಚರವಾಗುತ್ತದೆ. "ಭೂತಾರಾಧನೆಯ ಸುತ್ತ ಹೆಣೆದಿರುವ ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಅಸಮತೋಲನ ಹಾಗೂ ಶೋಷಣೆಯನ್ನು ಗಮನ ಸೆಳೆಯುವುದರಲ್ಲಿ ತಪ್ಪಿಲ್ಲ(ಪುಟ, ೨೮)ಎನ್ನುತ್ತಾರೆ."[೨೭]

ಕೆಳಜಾತಿಗಳಾದ ಪಂಬದರು, ನಲಿಕೆಯವರು ಈ ಭೂತಾರಾಧನೆಯಲ್ಲಿ ತೊಡಗಿದ್ದು, ಪಾಡ್ದನಗಳ ಮೂಲಕ ಹಾಡುತ್ತಾರೆ. ಇಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಮಧ್ಯೆ ಭಿನ್ನತೆ ಕಂಡುಬರುತ್ತದೆ. ಬ್ರಾಹ್ಮಣರು ದೇವರನ್ನು ಆರಾಧಿಸುತ್ತಾರೆ. ಧೈವ ಭೂತಗಳನ್ನು ಆರಾಧಿಸುವುದಿಲ್ಲ. ಬ್ರಾಹ್ಮಣೇತರು ದೈವಗಳಲ್ಲಿ ನಂಬಿಕೆ ಹೊಂದಿದ್ದಾರೆ. ಈ ಭೂತಾರಾಧನೆ ಬ್ರಾಹ್ಮಣೇತರ ಆಚರಣೆ ನಂಬಿಕೆಯಾಗಿದೆ. ಇಲ್ಲಿನ ಪಾಡ್ದನಗಳು ಕೆಳಜಾತಿಗಳ ವ್ಯವಸ್ಥೆ ಸ್ಥಿತಿಯನ್ನು ಪ್ರತಿನಿಧಿಸುತ್ತವೆ.

ಭೂತಾರಾಧನೆಯಲ್ಲಿ ಎಲ್ಲಾ ಜಾತಿಗಳು ಒಂದು ಕಡೆ ಸೇರುತ್ತಾರೆ. ಆದರೂ ಜಾತಿಗೆ ತಕ್ಕಂತೆ ಇಲ್ಲಿನ ಕೆಲಸ ಕಾರ್ಯಗಳು ವರ್ಗೀಕರಣಗೊಂಡಿವೆ. ಪರವ, ಪಂಬದ, ನಲಿಕೆ, ಕೆಳಜಾತಿಯವರು ವೇಷ ಹಾಕಿ ಕುಣಿಯುತ್ತಾರೆ. ಬ್ರಾಹ್ಮಣೇತರ ಮೇಲ್ಜಾತಿಗಳು, ಪ್ರಬಲ ಜಾತಿಗಳು ಇವರಿಂದ ಭೂತ ಕಟ್ಟಿಸುವಲ್ಲಿ ಶಕ್ತರಾಗಿರುತ್ತಾರೆ. ಇದು ಇವರಲ್ಲಿನ ಅಧಿಕಾರವನ್ನು ಸೂಚಿಸುತ್ತದೆ. ಇಲ್ಲಿ ಸಾಮಾಜಿಕವಾದ

ಅಂತರವಿದೆ. ಅಲ್ಲದೆ ಇದು ಪ್ರತಿಷ್ಟೆಯ ಪ್ರಶ್ನೆಯಾಗಿದೆ. ತಮ್ಮ ಮನೆತನದ ಘನತೆ ಗೌರವದ ಪ್ರತೀಕಗಳಾಗಿ ಇವು ಆಚರಣೆ ಬರುತ್ತವೆ. ಭೂತ ಕಟ್ಟುವವನಿಗೆ ಹಾಕುವ ಬಳೆಗಳ ಸ್ವರೂಪವು ಇವರ ಪ್ರತಿಷ್ಟೆಯನ್ನು ಸಂಕೇತಿಸುತ್ತದೆ. ಬಂಗಾರ ಕೆಲವರು ಬೆಳ್ಳಿಯ ಬಳೆಗಳನ್ನು ಹಾಕಿ ಭೂತ ಕಟ್ಟಿಸುತ್ತಾರೆ. ಇದು ಇವರ ಮನೆತನದ ಘನತೆ ಗೌರವವನ್ನು ಸೂಚಿಸುತ್ತದೆ. ಇಲ್ಲಿ ಸಹ ಹಲವಾರು ನಿರ್ಬಂಧಗಳಿವೆ.

೧. ವೇಷ ಕಟ್ಟುವವರ ಸಂಭಾವನೆ ಮೊದಲೇ ನಿಗದಿಯಾಗಿರುತ್ತದೆ., ೨. ಒಂದೇ ಹೆಸರಿನ ವೇಷಕ್ಕೆ ಮಾತ್ರ ಭೂತಕಟ್ಟಬೇಕು., ೩. ಭೂತ ಕಟ್ಟುವವ ಸೀಮೆಯನ್ನು ದಾಟಿ ಹೋಗಬಾರದು., ೪. ನಿಗದಿಗೊಳಿಸಿದ್ದಾರಂತ ಹೆಚ್ಚಿಗೆ ಸಂಭಾವನೆಗೆ ಬೇಡಿಕೆ ಸಲ್ಲಿಸುವಂತಿಲ್ಲ., ೫. ಬಳೆ ಹಾಕುವುದು, ಬಳೆಹಾಕಿಸಿಕೊಂಡವ ನಿಯಮ ನಿರ್ಬಂಧನೆಗಳನ್ನು ಪಾಲಿಸಬೇಕು. ಇದರಿಂದಾಗಿ ಭೂತಕಟ್ಟುವವರಿಗೆ ಅನುಕೂಲಕ್ಕಿಂತ ಅನಾನುಕೂಲಗಳೇ ಆಗುತ್ತವೆ.

೧. ಭೂತ ನೇಮಗಳಲ್ಲಿ ಹಣ ಹರಿದು ಬಂದರೂ ಸಹ ಇದರ ಪ್ರಯೋಜನ ಇವರಿಗೆ ದೊರೆಯುವುದಿಲ್ಲ, ೨. ರಾತ್ರಿಯಿಡಿ ಕುಣಿದು ಧಣಿಯುವ ಇವರಿಗೆ ಸಾರಾಯಿ ನೀಡಿ ಸಂತೈಸುತ್ತಾರೆ., ೩. ಈ ಭೂತಕಟ್ಟುವವರು ತಮ್ಮ ವೃತ್ತಿಯಲ್ಲಿ ನಿಷ್ಠೆ ತೋರಬೇಕು.

ತುಳುನಾಡಿನ ದೈವ ಆರಾಧನೆಗಳಿಗೆ ತನ್ನದೇ ಆದ ವೈವಿದ್ಯತೆ ಇರುವುದು ಕಂಡು ಬರುತ್ತದೆ. ಚತುರ್ಮುಖ ಬ್ರಹ್ಮನನ್ನು ಚಮೇರ್ ಎಂದು ಶಕ್ತಿ ಮಾರಿಯಮ್ಮ ಮಾರಿಕಾಂಬ ಆಗಿದ್ದಾಳೆ. ಕಾಳಮ್ಮ ಕಾಳಿಕಾಂಬ ಆಗಿದ್ದಾರೆ. ಲೆಕ್ಕೆಏಸಿರಿಯು ರಕ್ತೇಶ್ವರಿ ಆಗಿದ್ದಾಳೆ.

ಬಾಮಕುಮಾರ ಪಾಡ್ದನದಲ್ಲಿ ತುಳುನಾಡಿನ ಆಟಿಕಳಂಜನಿಗೂ, ಗಣಪತಿಗೂ ಸಾಮ್ಯತೆಗಳಿರುವ ಬಗ್ಗೆ ವಿವರಗಳಿವೆ. ಗಣಪತಿಯನ್ನು ಭೂತಗಳ ಒಡೆಯನೆಂದು ಮೊದಲು ಪರಿಗಣಿಸಲಾಗಿದೆ. ಆಟಿಕಳಂಜ ತುಳುನಾಡಿನ ಜನಪದರ ಸಾಮಾನ್ಯ ಮಾಂತ್ರಿಕ ಶಕ್ತಿಯನ್ನು ಪ್ರತಿನಿಧಿಸುವ ವ್ಯಕ್ತಿಯ ರೂಪವೇ ಆಗಿದೆ. ವೈದಿಕ ಸಂಸ್ಕೃತಿಯಲ್ಲಿ ಗಣಪತಿಗೆ ಅಗ್ರಪೂಜೆ ಸಲ್ಲುತ್ತದೆ.

ತುಳುನಾಡಿನ ಶಿವ ದೇವಸ್ಥಾನದ ವಾರ್ಷಿಕ ಜಾತ್ರೆ, ಉತ್ಸವ, ಸಂಧರ್ಭಗಳಲ್ಲಿ ದೇವರ ಮೆರವಣಿಗೆ ನಿಗದಿತ ಸ್ಥಳ ಪ್ರದೇಶ ಬೀದಿಗಳಿಗೆ ಹೋಗುದನ್ನು ದೇವರ ಸವಾರಿ ಎಂದು ಕರೆಯುತ್ತಾರೆ. ದೇವರ ಉತ್ಸವ ಮೂರ್ತಿಯನ್ನು ಹೊತ್ತು ಮೆರವಣಿಗೆ ಹೋಗುವ ಸಂಧರ್ಭದಲ್ಲಿ ದೈವದ ವೇಷದ ಭೂತಧಾರಿ ಈ ದೇವರನ್ನು ಕಾವಲುಗಾರನಂತೆ ಹಿಂಬಾಲಿಸುತ್ತದೆ. ಇದಕ್ಕೆ ಕ್ಷೇತ್ರಪಾಲ ಎಂದು ಕರೆಯಲಾಗುತ್ತದೆ. ಈ ಪದ್ಧತಿಯು ತುಳುನಾಡಿನ ಪರಂಪರೆಯನ್ನು ಮಾತ್ರವಲ್ಲದೆ ಇಲ್ಲಿನ ಸಾಮಾಜಜಿಕ, ಧಾರ್ಮಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ಆಧಾರಿಸಿದ ಸೇವೆಯನ್ನು ಸೂಚಿಸುತ್ತದೆ. ಜಾತಿ ಆಧಾರಿತ ಸಾಮಾಜಿಕ, ಆರ್ಥಿಕ ಸಂಬಂಧದ ಪ್ರತೀಕವಾಗಿದೆ, ದೇವಸ್ಥಾನದ ಉತ್ಸವ ಮುಗಿದ ಬಳಿಕ ಅದಕ್ಕೆ ಸಂದಂಧಿಸಿದ ದೈವದ ನೇಮ ನಡೆಸುವ ಪದ್ಧತಿ ಇದೆ. ದೇವರ ಉತ್ಸವದ ಸಂದರ್ಭದಲ್ಲಿ ವಾದ್ಯ ಬಾಜಭಜತ್ರಿ ಪಟಗಳೊಂದಿಗೆ ಸಾಗಿ ದೇವಾಲಯವನ್ನು ಪ್ರವೇಶ ಮಾಡಿದರೆ ಇದುವರೆಗೆ ಈ ದೇವರ ಕಾವಲಿಗೆ ಇದ್ದ ಈ ದೈವ ದೇವಾಲಯದ ಹೊರಗೆ ಇಲ್ಲವೇ ಯಾವುದೇ ಮೂಲೆಯಲ್ಲಿ..ಇಲ್ಲ ಹೊರವಲಯದ

ಸಂತೆ ಪ್ರದೇಶದಲ್ಲಿ ಇರಬೇಕಾಗುತ್ತದೆ. ಇದರೊಟ್ಟಿಗೆ ದೈವದ ವೇಷಗಳನ್ನು ಜಾತ್ರೆಯ ಜನರು ಮಾತ್ರ ಇವರೊಟ್ಟಿಗೆ ಇರುತ್ತಾರೆ. ಇದನ್ನು ಗಮನಿಸಿದ ನಮಗೆ ಗೋಚರವಾಗುವ ಸಂಗತಿ ಜಾತಿವ್ಯವಸ್ಥೆಯ ರೂಪವೇ ಆಗಿದೆ. ಈ ಭೂತ ಕಟ್ಟುವವರು ಕೆಳಜಾತಿಯವರಾಗಿದ್ದು ಇವರು ಇರಬೇಕಾದ ಸ್ಥಿತಿ ಸ್ಥಾನಮಾನವನ್ನು ಈ ವ್ಯವಸ್ಥೆ ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ. ತುಳುನಾಡಿನ ಅರಸರಾದ ಜೈನರು, ಬಂಟರು, ಬಲ್ಲಾಳರು ವೈದಿಕ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಾರೆ. ಸಾಮಾಜಿಕ, ಆರ್ಥಿಕ ವ್ಯವಸ್ಥೆಯಲ್ಲಿ ಇವರು ಮೇಲಿನ ಸ್ಥಾನಹೊಂದಿದ್ದಾರೆ. ಭೂತವೇಷ ಕಟ್ಟುವ ಪರವ, ಪಂಬದ, ನಲಿಕೆಯವರು ಕೆಳಜಾತಿ ಸ್ತರದವರಾಗಿದ್ದಾರೆ. ಇಲ್ಲಿನ ಅಧಿಕಾರಗಳ ಹಂಚಿಕೆ, ಸವಲತ್ತು ಪಡೆಯುವ ರೀತಿ ಸೇವೆಯ ಸ್ವರೂಪ ಎಲ್ಲವೂ ಜಾತಿ ಆಧಾರಿತ ವ್ಯವಸ್ಥೆಯನ್ನಾಧರಿಸಿದೆ.

೧. ಬ್ರಾಹ್ಮಣರು: ಧರ್ಮದಲ್ಲಿನ ವೈದಿಕವನ್ನು ಪ್ರತಿನಿಧಿಸುತ್ತಾರೆ. ೨. ಬಂಟರು: ಜೈನರು ರಾಜಕೀಯ ಅಧಿಕರವನ್ನು ಪ್ರತಿನಿಧಿಸುವ ಆಳುವ ವರ್ಗವಾಗಿವೆ. ೩. ಗೌಡರು: ಗುತ್ತಿನವರು.

ದಕ್ಷಿಣ ಕನ್ನಡ ಜಿಲ್ಲೆಯ ಜಾತಿಗಳು ಹಾಗೂ ಅವುಗಳ ಸಾಮಾಜಿಕ ಸ್ಥಾನಮಾನವನ್ನು ಕೇಶವ ಶರ್ಮ.ಕೆ. ರವರು ಸ್ಥೂಲವಾಗಿ ಹೀಗೆ ಗುರುತಿಸಿದ್ದಾರೆ(ಪುಟ ೮,೯)[೨೪].

ಬ್ರಾಹ್ಮಣರು: ಹವ್ಯಕರು: ಮಾಧ್ವರು ಸಾರಸ್ವತರೆಂಬ ವರ್ಗ, ಭೂ ಹಿಡುವಳಿ, ಪಿತ್ರಾರ್ಜಿತ ಆಸ್ತಿ, ಪೌರೋಹಿತ ವೃತ್ತಿ. ಬಂಟರು: ಭೂ ಹಿಡುವಳಿ, ಜಾತಿಯಾಧಾರಿತ ವೃತ್ತಿ ಇಲ್ಲ, ಮಾತೃಮೂಲೀಯ ಪದ್ಧತಿ, ಹಿಡುವಳಿಯೇ ವೃತ್ತಿ. ಗೌಡರು: ಭೂ ಹಿಡುವಳಿ, ಬೇಸಾಯ. ಜೈನರು: ಭೂ ಹಿಡುವಳಿ, ಸ್ವಯಂ ಬೇಸಾಯ ಇಲ್ಲ. ಬಿಲ್ಲವರು: ಸೇಂದಿ ಮಾರಾಟ ವೃತ್ತಿ, ಸ್ವಯಂ ಜಮೀನು ಕಡಿಮೆ. ಮರಾಠಿ ನಾಯ್ಕರು: ಮರಾಠಿ ಇವರ ಮನೆಮಾತು, ಜಮೀನು ಕಡಿಮೆ, ಕೂಲಿ ಮತ್ತು ವ್ಯಾಪಾರ ವೃತ್ತಿಯನ್ನಾಧರಿಸಿದ ಇವರು ಮಕ್ಕಳಕಟ್ಟು ಸಂತತಿಗೆ ಸೇರಿದವರಾಗಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವರು ಪರಿಶಿಷ್ಟ ಪಂಗಡ ಪಟ್ಟಿಯಲ್ಲಿದ್ದಾರೆ. ಕ್ರಿಶ್ಚಿಯನ್ನರು ಮತ್ತು ಮುಸ್ಲಿಂರು: ಇವರು ಈ ಪ್ರದೇಶದ ಅಲ್ಪಸಂಖ್ಯಾತ ಸಮುದಾಯವಾಗಿದ್ದು, ಕೃಷಿ ಮತ್ತು ವ್ಯಾಪಾರಸ್ಥರಾಗಿದ್ದಾರೆ. ತಮ್ಮ ದುಡಿಮೆಗಾಗಿ ಎರಡೂ ಮತಧರ್ಮದವರು ವಿದೇಶಗಳಲ್ಲಿ ಉದ್ಯೋಗ ಮಾಡಿಕೊಂಡಿದ್ದಾರೆ. ಭಂಡಾರಿ ವರ್ಗ, ಕ್ಷೌರಿಕ ವರ್ಗ ಮಣಿಯಾಣಿ, ಮಲೆಯಾಳಂ ಮನೆಮಾತು, ಕೂಲಿ ಮತ್ತು ವ್ಯಾಪಾರ ವೃತ್ತಿ. ಮಲೆಕುಡಿಯರು, ಬೆಟ್ಟ ಕಾಡುಗಳಲ್ಲಿ ವಾಸಿಸುವ ಮೂಲ ನಿವಾಸಿಗಳಾಗಿದ್ದಾರೆ. ಸಮಗಾರರು, ಚರ್ಮದ ವೃತ್ತಿ. ಪಂಬದರು, ನಲಿಕೆ, ಭೈರ, ಮನ್ಸ, ಮೇರರು, ಕೊರಗರು ಮತ್ತು ಆದಿ ದ್ರಾವಿಡ, ಅಸ್ಪೃಶ್ಯವರ್ಗವಾಗಿ ಪರಿಗಣಿಸಲ್ಪಟ್ಟಿದ್ದಾರೆ.

ಶ್ರೇಣೀಕೃತವಾದ ಜಾತಿ ವ್ಯವಸ್ಥೆಯಲ್ಲಿ ಭೂ ಹಿಡುವಳಿ ವರ್ಗ ಮತ್ತು ಇತರ ವರ್ಗಗಳ ನಡುವಣ ಸಂಬಂಧವನ್ನು ಸ್ಥೂಲವಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದು.

೧. ಭೂಮಾಲೀಕ ವರ್ಗ ಹಾಗೂ ಸ್ವಯಂ ದುಡಿಯದ ವರ್ಗ ೨. ಭೂ ಮಾಲೀಕ ವರ್ಗ ಮತ್ತು ಸ್ವಯಂ ತಾವೇ ದುಡಿಯುವ ವರ್ಗ. ೩. ಕೂಲಿ ಕಾರ್ಮಿಕ ವರ್ಗ ೪. ಇದ್ಯಾವುದಕ್ಕೂ ಸಂಬಂಧ ಪಡದಿರುವ ಇತರ ಉತ್ಪಾದನೆಯಲ್ಲಿ ತೊಡಗಿರುವ ವರ್ಗ. ಉದಾ. ಚಪ್ಪಲಿ ಹೊಲಿಯುವುದು, ಬುಟ್ಟಿ ತಯಾರಿಕೆ ಕ್ಷೌರ ಇತ್ಯಾದಿ. ಇದು ಈ ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಸೂಚಿಸುತ್ತದೆ. ಕೆ. ಕೇಶವ

ಶರ್ಮರವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೂರು ವರ್ಗಗಳು ಕೃಷಿ ಚಟುವಟಿಕೆಗಳಲ್ಲಿ ತೊಡಗಿದರೆ, ಮೇಲಿನ ಒಂದು ವರ್ಗ ಆರ್ಥಿಕ ಉತ್ಪಾದನೆಯಲ್ಲಿ ಬೇರೊಂದು ರೀತಿಯಲ್ಲಿ ತೊಡಗಿರುತ್ತದೆ. ಆದರೆ ಒಂದು ಗ್ರಾಮೀಣ ಸಮುದಾಯದ ಅವಶ್ಯಕತೆಗೆ ತಕ್ಕ ಚಟುವಟಿಕೆ ಮುಖ್ಯ 'ಭೂ ಮಾಲೀಕ ವರ್ಗವು ತನ್ನ ಅಗತ್ಯಕ್ಕೆ ತಕ್ಕಂತೆ ತನಗಿಂತ ಕೆಳಗಿನ ಜಾತಿಯನ್ನು ಬಳಸಿಕೊಳ್ಳುತ್ತದೆ. ಮತ್ತು ಕೆಳಗಿನ ಜಾತಿ ವರ್ಗದವರು ಆಯಾ ಗ್ರಾಮೀಣ ಸಮುದಾಯಕ್ಕೆ ಬೇಕಾದ ರೀತಿಯಲ್ಲಿ ತನ್ನ ಉತ್ಪಾದನಾ ಮಾರ್ಗಗಳನ್ನು ಕಂಡುಕೊಳ್ಳುತ್ತಾರೆ' ಎಂದು ಹೇಳುತ್ತಾ ಒಂದು ನಿರ್ದಿಷ್ಟ ಜಾತಿಯ ಜನರಿಗೆ ಆ ಪ್ರದೇಶದಲ್ಲಿ ಭೂಮಿಯ ಅಥವಾ ಆಸ್ತಿಯ ಆಸರೆ ಇಲ್ಲವಾದರೆ ಅದು ಆ ಪ್ರದೇಶದಲ್ಲಿ ಬೇರೆ ಮಾದರಿಯ ಉದ್ಯೋಗವನ್ನು ಆಶ್ರಯಿಸಿಬೇಕಾಗುತ್ತದೆ. ಇದರಲ್ಲಿ ಆಳುವ ಮತ್ತು ಆಳಿಸಿಕೊಳ್ಳುವಲ್ಲಿ ವರ್ಗದ ಸಂಬಂಧವನ್ನು ನಾವು ಸಂವಾದರಹಿತವಾದ ಒಂದು ಅವಕಾಶದಲ್ಲಿ ಇದೆಯೆಂದು ತಿಳಿದುಕೊಳ್ಳಬೇಕಾಗಿಲ್ಲ. ಆಕಸ್ಮಿಕವಾಗಿ ಅಲ್ಲಿ ಒಂದು ಖಾಲಿಯಾದ ಅವಕಾಶ ಇದೆಯೆಂದಾದರೆ ಅದನ್ನು ತುಂಬಿಕೊಳ್ಳುವುದಕ್ಕೆ ದುಡಿಯುವ ವರ್ಗವು ಬೇರೆ ಮಾರ್ಗವನ್ನು ಕಂಡುಕೊಳ್ಳುತ್ತದೆ ಎಂದು ತಮ್ಮ ಒಂದು ಬುಡಕಟ್ಟು ಕಥನದಲ್ಲಿ ವಿಮರ್ಶಿಸಿದ್ದಾರೆ ಪುಟ ೧೦.[೬೦]

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಸಾಮಾಜಿಕ ಸ್ಥಾನಮಾನವು ಈ ಪ್ರದೇಶದ ಗೌಡ,ಮತ್ತು ಪೂಜಾರಿ ಜನಾಂಗಗಳು ಸ್ಥಾನಮಾನಕ್ಕೆ ಸಮನಾಗಿರುವುದು ಕಂಡುಬರುತ್ತದೆ. ಈ ಸಮುದಾಯದ ಮೂಲ ಉದ್ಯೋಗ ಕೃಷಿ ಮತ್ತು ಕೃಷಿಗೆ ಪೂರಕವಾದ ಪಶುಸಂಗೋಪನೆ ಮತ್ತು ಕಾಡುತ್ಪತ್ತಿ ಸಂಗ್ರಹವಾಗಿದೆ. ಈ ಹಿನ್ನೆಲೆಯಲ್ಲಿ ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಯ ಗಡಿಭಾಗದಲ್ಲಿರುವ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯದ ಕುಟುಂಬಗಳು ತಮ್ಮ ಹೆಸರಿನ ಮುಂದೆ 'ಗೌಡ' ಎಂದು ಗುರುತಿಸಿಕೊಳ್ಳುತ್ತಾರೆ.ಈ ಪ್ರದೇಶವು ಸೇರಿದಂತೆ ಇಡೀ ಜಿಲ್ಲೆಯಲ್ಲಿ ಈ ಸಮುದಾಯವನ್ನು ರೈತಾಪಿ ಕುಟುಂಬ ಎಂದು ಪರಿಗಣಿಸಲಾಗಿದೆ. ಈ ಸಮುದಾಯ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮಧ್ಯಮ ವರ್ಗ ಸ್ಥಾನಮಾನವನ್ನು ಹೊಂದಿದ್ದಾರೆ.

**ಜನಾಂಗಗಳು:** ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ, ಬೌದ್ಧ ಪರಂಪರೆಯ ಜನರು ಇಲ್ಲಿ ನೆಲೆಸಿದ್ದಾರೆ. ಹಿಂದೂ ಧರ್ಮದ ಬ್ರಾಹ್ಮಣರು, ಭಟ್ಟರು, ಹವ್ಯಕರು, ಶಿವಳ್ಳಿ, ಭಂಟರು, ಶೆಟ್ಟರು, ಗೌಡ, ಗಾಣಿಗ, ಪೂಜಾರಿ, ಅಕ್ಕಸಾಲಿಗ ಜಾತಿ ಸಮುದಾಯದವರು ನೆಲೆಸಿದ್ದಾರೆ. ಅಲ್ಲದೆ ಮರಾಠಿ, ನಾಯಕ್, ಕೊರಗ, ಮಲೆಕುಡಿಯ ಸಮುದಾಯದವರು ಇಲ್ಲಿ ನೆಲೆಸಿದ್ದಾರೆ. ಮೊಗೇರ, ಆದಿದ್ರಾವಿಡ, ನಳಿಕೆ, ಭೈರ, ಮನ್ಸ ಜಾತಿಗಳು ಇಲ್ಲಿವೆ. ಪ್ರಾಟಸ್ಟಂಟ್ ಕ್ಯಾಥೊಲಿಕ್ ಕ್ರೈಸ್ತರು, ಬ್ಯಾರಿ ಜನರು ಇಲ್ಲಿ ನೆಲೆಸಿದ್ದಾರೆ. ಮಲೆಕುಡಿಯ ಬಡಕಟ್ಟು ಸಮುದಾಯದವರು ಈ ಜಿಲ್ಲೆ ವ್ಯಾಪ್ತಿಯ ಬೆಳ್ತಂಗಡಿ ಮತ್ತು ಸುಳ್ಯ ತಾಲ್ಲೂಕುಗಳಲ್ಲಿ ನೆಲೆಸಿದ್ದಾರೆ.

### ೨.೯. ವರ್ತಮಾನದಲ್ಲಿ ಮಲೆಕುಡಿಯರ ಸಾಮಾಜಿಕ ಸ್ಥಾನಮಾನಗಳೇನು?

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಸಾಮಾಜಿಕ ಸ್ಥಾನಮಾನವು ಹಿಂದಿನ ಕಾಲದ ಅವದಿಯಲ್ಲಿ ಜೀತಗಾರರಾಗಿದ್ದು ಜೀತ ಪದ್ಧತಿಯನ್ನು

ಅವಲಂಬಿಸಿದ್ದರು, ನಂತರದಲ್ಲಿ ಇವರು ಗೇಣಿದಾರರಾದರು. ಸ್ವತಂತ್ರನಂತರದ ದಿನಗಳಲ್ಲಿ ಅದರಲ್ಲೂ ವಿಶೇಷವಾಗಿ ಭೂಸುಧಾರಣೆಯ ಪಲವಾಗಿ ಈ ಸಮುದಾಯವು ಭೂಒಡೆತನವನ್ನು ಪಡೆಯಲು ಸಾಧ್ಯವಾಯಿತು.ಬಾಂಜಾರು ಮಲೆ, ಅಂಬಟಮಲೆ, ಇಳಿಮಲೆ, ನೆರಿಯ, ಶಿಶಿಲ, ಸುಬ್ರಹ್ಮಣ್ಯ, ಕನ್ಯಾನದ ಅಕ್ಕರಕೋಡೆ,ಬೆಟ್ಟಂಪಾಡಿ, ಕೆಲವು ಪ್ರದೇಶಗಳಲ್ಲಿ ಮಾತ್ರ ಇವರು ಭೂಒಡೆತನ ದೊರೆತಿದೆ. ಉಳಿದ ಕಡೆಗಳಲ್ಲಿ ಅರಣ್ಯಕಾಯಿದೆಯ ಪರಿಣಾಮದಿಂದಾಗಿ ಇವರಿಗೆ ಈಗಲೂ ಭೂ ಒಡೆತನ ದೊರೆಯದೆ ಸಾಮಾಜಿಕವಾಗಿ ಆರ್ಥಿಕವಾಗಿ ನಿರಾಶ್ರಿತರಾಗಿದ್ದಾರೆ. ಇಲ್ಲಿನ ಮೂಲನಿವಾಸಿಗಳಾದ ಇವರಿಗೆ ಆದ ನೆಲದಲ್ಲಿ ವಾಸಿಸಲು ಅವಕಾಶವಿಲ್ಲದೆ ಇಲ್ಲಿ ಇವರು ಅತಂತ್ರರಾಗಿದ್ದಾರೆ.ಇವರ ಅಕ್ರಮವಾಸ, ಅಕ್ರಮಭೂಸಾಗುವಳಿಗಳು ಎಂದು ಪರಿಗಣಿಸಿ ಇವರನ್ನು ಒಕ್ಕಲೆಬ್ಬಿಸುವ, ಹೊರಹಾಕುವ ಪ್ರಯತ್ನದಿಂದಾಗಿ ಇವರ ಸಾಮಾಜಿಕ ಸ್ಥಿತಿ ಶೋಚನೀಯವಾಗಿದೆ.ಆರ್ಥಿಕ ಸ್ಥಾನಮಾನ ಸುಧಾರಣೆಯಾದಲ್ಲಿ ಸಾಮಾಜಿಕ ಅಂತಸ್ತು, ಸ್ಥಿತಿ ಸುಧಾರಿಸಲು ಸಾಧ್ಯ.

ಕೊರಗ, ಮಲೆಕುಡಿಯ, ಮರಾಠಿನಾಯಕ್, ಬುಡಕಟ್ಟು ಸಮುದಾಯುಗಳು, ಇಲ್ಲಿನ ಮೂಲನಿವಾಸಿಗಳೆಂದು ಪರಿಗಣಿತವಾಗಿದ್ದರೂ ಈ ಸಮುದಾಯಗಳ ಅನನ್ಯತೆ,ಸಾಮಾಜಿಕ ಸ್ಥಾನಮಾನದಲ್ಲಿ ಅಂತರವಿದೆ. ಮರಾಠಿನಾಯಕ್ ಸಮುದಾಯವು ಆರ್ಥಿಕವಾಗಿ ಮುಂದುವರಿದ ಸಮುದಾಯವಾಗಿದೆ. ಮಲೆಕುಡಿಯ ಸಮುದಾಯವು ಕೆಳಹಂತಕ್ಕಿಂತ ಭಿನ್ನವಾಗಿ ಮೇಲಿನಸ್ಥಾನಕ್ಕೇರದೆ ಮಧ್ಯಮ ವರ್ಗದ ಸ್ಥಾನದಲ್ಲಿದೆ. ಕೊರಗ ಸಮುದಾಯವು ಇಲ್ಲಿನ ಮೂಲನಿವಾಸಿ ಬುಡಕಟ್ಟು ಸಮುದಾಯ ಎಂದು ಪರಿಗಣಿತವಾದರೂ ಅಜಲು ಪದ್ಧತಿಯಿಂದಾಗಿ ಈ ಸಮುದಾಯವು ಅಸ್ಪೃಶ್ಯತೆಯ ಸೋಂಕಿನಲ್ಲಿ ನಲುಗಬೇಕಾಯಿತು. ಹೀಗಾಗಿ ಈ ಸಮುದಾಯವನ್ನು ಸಾಮಾಜಿಕವಾಗಿ ತೀರ ನಿಕೃಷ್ಟವಾಗಿ ಕಾಣುವ ಸ್ಥಿತಿ ನಿರ್ಮಾಣವಾಗಿದೆ. ಮಲೆಕುಡಿಯ ಸಮುದಾಯಕ್ಕೆ ಭೂಮಿಯ ಒಡೆತನ ದೊರೆತಿದೆ ಆದರೆ ಕೊರಗ ಸಮುದಾಯಕ್ಕೆ ಭೂ ಒಡೆತನ ಒಂದು ಮರೀಚಿಕೆಯಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನ ಯೋಜನೆ ಅನುಷ್ಠಾನದ ನಂತರ ಆದ ಬೆಳವಣಿಗೆಗಳಿಂದಾಗಿ ನಡೆದ ಹೋರಾಟಗಳು ಈ ಸಮುದಾಯದ ದಿಕ್ಕನ್ನೇ ಬದಲಿಸಿದೆ. ಈ ಪ್ರದೇಶದ ವ್ಯಾಪ್ತಿಯಲ್ಲಿನ ಕೆಲವು ಯುವಕರು ನಕ್ಸಲ್ ಚಳುವಳಿಯ ಮೂಲಕ ಈ ಸಮುದಾಯದ ಅತಂತ್ರ ಬದುಕಿನ ಸವಾಲುಗಳಿಗೆ ಹೋರಾಟ ಮಾಡಬೇಕಾದ ಅನಿವಾರ್ಯತೆ ಒದಗಿತು. ಇದರ ಪರಿಣಾಮವಾಗಿ ಮಲೆಕುಡಿಯ ಸಮುದಾಯವನ್ನು ಸುದಾರಿಸುವುದರ ಮೂಲಕ ಸಾಮಾಜಿಕವಾಗಿ ಬದಲಾವಣೆ ಮಾಡುವ ಪ್ರಯತ್ನಗಳು ನಡೆಯುತ್ತಿವೆ.

ಪ್ರೊ.ಹಿ.ಚಿ. ಬೋರಲಿಂಗಯ್ಯ ಪ್ರಕಾರ ಈ ಭಾಗದ ಮೂಲ ನಿವಾಸಿಗಳಾದ ಮಲೆಕುಡಿಯ, ಕೊರಗ, ಬೈರ, ಮನ್ಸ, ಮೇರ ಮುಂತಾದ ಜನಾಂಗಗಳು ಮೊದಲಿಗೆ ಗುಹೆಗಳಲ್ಲಿ ವಾಸ ಮಾಡುತ್ತಾ ಪ್ರಾಣಿ ಬೇಟೆಯಲ್ಲಿ ಜೀವನ ಹೊರೆಯುತ್ತಿದ್ದರೆಂಬ ಪ್ರತೀತಿ ಇದೆ ಎಂದಿದ್ದಾರೆ. ನಂತರ ಆಹಾರ ಸಂಗ್ರಹಣೆ, ಪಶುಸಂಗೋಪನೆಗೆ ಇವರು ದೂರವಾಗಿದ್ದಾರೆ. ನಾಗರೀಕತೆ ಬದಲಾದಂತೆ ಜಮೀನ್ದಾರ ಪದ್ಧತಿ ಇಣುಕು ಹಾಕ ತೊಡಗಿತು. ನಾಗರಿಕತೆಯ ಆಸೆ ಬುರುಕ ಮಾನವನ ದೃಷ್ಟಿ ಈ ಕಣಿವೆಗಳ ಮೇಲೆ ಬಿದ್ದು, ಒಬ್ಬೊಬ್ಬ ಜಮಿನ್ದಾರನಿಗೆ ಈಗ ೧೦-೧೫ ಸಾವಿರ ಎಕರೆ ಭೂಮಿ ಇದೆ ಎಂಬುದನ್ನು ಗುರುತಿಸಿದ್ದಾರೆ. ಇಲ್ಲಿನ ಮೂಲ ನಿವಾಸಿಗಳು ಈ ಭೂಮಾಲೀಕರ ಆಳುಗಳಾಗಿದ್ದಾರೆ. ಮಲೆಕುಡಿಯರಿಗೆ

ಆಗುತ್ತಿರುವ ತೀವ್ರ ಆಹಾರದ ಅಭಾವವನ್ನು ಹಿ.ಚಿ. ಬೋರಲಿಂಗಯ್ಯನವರು ಗುರುತಿಸಿದ್ದಾರೆ. ಇದಕ್ಕೆ ಇವರು ಕಂಡುಕೊಂಡ ಬೇಸಾಯ ಪದ್ಧತಿಯೇ ಕುಮರಿ ಬೆಳೆ ಪದ್ಧತಿಯಾಗಿದೆ.

ಕುಮರಿ ಬೆಳೆ– ಇಳಿಜಾರಾದ ಕಣಿವೆಗಳ ಕಾಡಿಗೆ ಬೆಂಕಿ ಹಾಕಿ ಈ ಜಾಗವನ್ನು ಸುಟ್ಟು ಬಯಲು ಮಾಡಿ, ಈ ಭೂಮಿಯನ್ನು ಚೂಪಾದ ಮರದ ಕೋಲಿನಿಂದ ಅಗೆತ ಮಾಡಿ ಭತ್ತ ಚೆಲ್ಲುವುದು, ಬೆಳೆ ತೆಗೆಯುವುದು 'ಕುಮರಿ ಬೆಳೆಯಾಗಿದೆ. ಈಗ ಈ ಪ್ರದೇಶ ೧೦ ಸಾವಿರ ಎಕ್ರೆಗೆ ಕೇರಳದ ಮುಸ್ಲಿಂ ಬ್ಯಾರಿ. ಉದ್ಯಮಿ ಒಡೆಯನಾಗಿದ್ದಾರೆ. ನೆರೆಯಾದ ೧೦ ಸಾವಿರ ಎಕರೆ ಭೂಮಿಗೆ ಹೆಬ್ಬಾರ ಕುಟುಂಬಕ್ಕೆ ಸೇರಿರುವ ಅಂಶವನ್ನು ಇಲ್ಲಿ ಗುರುತಿಸಲಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

**ಸಾಮಾಜಿಕ, ಆರ್ಥಿಕ ಸ್ಥಿತಿ**

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಇಲ್ಲಿನ ಮೂಲನಿವಾಸಿಗಳೆಂದು ಪರಿಗಣಿಸಿದ್ದರೂ ಇವರ ಅನನ್ಯತೆ ವಿಷಯದಲ್ಲಿ ಗೊಂದಲಗಳಿಗೆ ಒಳಗಾಗಿರುವುದು ಗೋಚರವಾಗುತ್ತದೆ.ಇವರನ್ನು ಒಂದೇ ಹೆಸರಿನಲ್ಲಿ ಗುರುತಿಲಾಗದೇ ಇರುವುದರಿಂದ ಅನನ್ಯತೆಯ ಸ್ಥಿತಿ ಅತಂತ್ರತೆಯನ್ನು ಸೂಚಿಸುತ್ತದೆ. ಈ ಅನನ್ಯತೆಯ ಗೊಂದಲ ಗಳಿಂದಾಗಿ ಸರ್ಕಾರದಿಂದ ಇವರಿಗೆ ಸಿಗಬೇಕಾದ ಮೂಲಭೂತ, ನಾಗರೀಕ ಮತ್ತು ಮೀಸಲಾತಿ ಸೌಲಭ್ಯಗಳು ದೊರೆಯದೇ ಇರುವಂತ ಸ್ಥಿತಿ ಇದೆ. ಇವರು ವಾಸವಾಗಿರುವ ಮೂಲನೆಲೆ, ಪ್ರದೇಶಗಳಿಗೆ ಇವರೇ ವಾರಸುದಾರರಾದರೂ ಇವರಿಗೆ ಇದುವರೆವಿಗೂ ಭೂಮಿಯ, ಜಾಗದ ಹಕ್ಕುದಾಖಲೆಗಳು ದೊರೆಯದೇ ಇರುವ ಅತಂತ್ರ ಸ್ಥಿತಿಯಿಂದಾಗಿ ಇವರದೇ ಆದ ಮೂಲ ನೆಲೆಯಲ್ಲಿ ಇಂದು ಇವರು ಅಕ್ರಮವಾಸಿಗಳೆಂದು ಕರೆಸಿಕೊಳ್ಳಬೇಕಾದ ಸ್ಥಿತಿ ಒದಗಿದೆ. ಈ ಸಮುದಾಯವು ಇತರ ಸಮುದಾಯಗಳೊಂದಿಗೆ ಹೊಂದಿಕೊಂಡು ಬಾಳುವ ಸಮನ್ವಯತೆಯನ್ನು ಸಾಧಿಸುವುದರ ಮೂಲಕ ಆಧುನಿಕ ಬದುಕಿನೊಂದಿಗೆ ಬದಲಾವಣೆ ಬಯಸುತ್ತಿರುವುದು ಕಂಡು ಬರುತ್ತದೆ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ, ಕುಣಿತ, ವಾದ್ಯ ಇರುತ್ತದೆ. ಆದರೆ ಬಂಜಾರುಮಲೆಯಲ್ಲಿನ ಮಾರಿ ಹಬ್ಬದ ಕುಣಿತದ ಹೊರತುಪಡಿಸಿದರೆ ಇತರ ಯಾವುದೇ ಪ್ರದೇಶದಲ್ಲಿ ಮಲೆಕುಡಿಯ ಸಮುದಾಯದ ಕುಣಿತ ಇಲ್ಲವೆ ವಾದ್ಯ ಪರಂಪರೆ ಕಂಡುಬರುವುದಿಲ್ಲ. ಈ ಸಮುದಾಯವು ತುಳುನಾಡಿನ ಸಂಸ್ಕೃತಿ, ಜೀವನ ಪದ್ಧತಿ, ಆಚರಣೆಗಳ ಒಂದು ಭಾಗವಾಗಿದೆ. ಕೃಷಿ ಪ್ರಧಾನತೆಯನ್ನು ಹೊಂದಿರುವ ಈ ಸಮುದಾಯವು ಹಿಂದೆ ಜೀತಪದ್ಧತಿ, ಗೇಣಿಪದ್ದತಿ, ಧಣಿವಕ್ಕಲು ವ್ಯವಸ್ಥೆಯಿಂದ ಬದಲಾಗಿ ಈಗ ಕೃಷಿಕೂಲಿಕಾರ್ಮಿಕ ರಾಗಿದ್ದಾರೆ. ಪ್ರಾದೇಶಿಕವಾಗಿ ಈ ಸಮುದಾಯ ವೈವಿದ್ಯತೆ ಹಾಗೂ ಸ್ಥಳಾಂತರಗಳಿಂದಾಗಿ ಹಲವಾರು ಹೊಸ ಸವಾಲುಗಳನ್ನು ಹೆದಿರುಸುತ್ತಿದೆ. ಒಂದು ಕಡೆ ಅರಣ್ಯಹಕ್ಕು ಕಾಯ್ದೆ, ಇನ್ನೊಂದು ಕಡೆ ಪ್ಲಾಂಟೇಶನ್ ಕಾಯ್ದೆಗಳು ಇವರ ಬದುಕಿನ ದಿಕ್ಕನ್ನೇ ಬದಲಾಯಿಸಿವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವರ ವ್ಯಾಪ್ತಿಯಲ್ಲಿನ ಮಲೆಕುಡಿಯ ಸಮುದಾಯವು ತಮ್ಮ ಸ್ಥಿರತೆಗಾಗಿ ನಿರಂತರವಾದ ಹೋರಾಟವನ್ನು ಮಾಡುತ್ತಾಬಂದಿರುವುದರ ಪರಿಣಾಮವಾಗಿ ಇಂದು ಇವರು ಭವಿಷ್ಯದ ಬದುಕಿನ ಭಯದ ನೆರಳಲ್ಲಿ ಜೀವಿಸಬೇಕಾದ ಸ್ಥಿತಿಯಿದೆ. ಈ ಪ್ರದೇಶದಿಂದ ಹೊರಬರಲಾಗದೇ ಇರುವ ಸ್ಥಿತಿ, ಮತ್ತೊಂದು

ಬದಲಾವಣೆಯನ್ನು ಬಯಸುವ ಪ್ರಯತ್ನಕ್ಕಾಗಿ ಇಲ್ಲಿಂದ ಒಕ್ಕಲೆಬ್ಬಿಸುವ ನೀತಿಗಳಿಂದಾಗಿ ಇವರು ಇಂದು ಆತಂಕ ಮತ್ತು ನಿರಾಶ್ರಿತ ಕರಿನೆರಳಿನಲ್ಲಿ ಬದುಕುತ್ತಿದ್ದಾರೆ. ಇವರದೇ ಆದ ಮೂಲನೆಲಕ್ಕಾಗಿ ಇವರು ನಡೆಸಿದ ನಿರಂತರ ಹೋರಾಟದ ಫಲವಾಗಿ ಇವರ ಹೋರಾಟದ ದಿಕ್ಕನ್ನು ಬದಲಾಯಿಸಿದೆ. ಕಾಡಿನಿಂದ ನಾಡಿಗೆ ಬಂದ ಈ ಸಮುದಾಯ ತಾವು ವಾಸಿಸುವ ಪರಿಸರದ ದೇವಾಲಯಗಳಲ್ಲಿ ಸೇವೆ ಸಲ್ಲಿಸುವುದರ ಮೂಲಕ ತಮ್ಮ ಬದ್ಧತೆಯನ್ನು ಇದುವರೆವಿಗೂ ಇವರು ಕಾಪಾಡಿಕೊಂಡು ಬಂದಿದ್ದಾರೆ. ಇದು ಇವರ ಜೀವನ ನಿರ್ವಹಣೆಯ ಮೂಲವಾಗಿದೆ. ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಇವರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸ್ಥಳಾಂತರಗೊಂಡರೂ ಅ ಪ್ರದೇಶಗಳಲ್ಲಿ ಹಲವರ ವಿರೋಧಗಳನ್ನು ಹೆದಿರುಸುತ್ತಾ ಬಂದಿದ್ದಾರೆ. ಸಾಕ್ಷರತೆಯ ಪ್ರಮಾಣ ಕಡಿಮೆ ಇರುವ ಈ ಸಮುದಾಯದಲ್ಲಿ ಪ್ರಾಥಮಿಕ ಪ್ರೌಢಶಿಕ್ಷಣಕ್ಕೆ ಸ್ಥಗಿತಗೊಳಿಸಬೇಕಾದ ಸ್ಥಿತಿಗಳಿವೆ. ಈ ಸಮುದಾಯದಲ್ಲಿನ ಸಂಘಟನೆ ಮತ್ತು ನಾಯಕತ್ವ ಕೊರತೆಯಿಂದಾಗಿ ಒಂದೊಂದು ರಾಜಕೀಯ ಪಕ್ಷಗಳು ಈ ಸಮುದಾಯವನ್ನು ಒಲಿಸಿ ಕೊಳ್ಳುವುದಕ್ಕಾಗಿ ಹಲವಾರು ಸವಾಲುಗಳನ್ನು ಸೃಷ್ಟಿಸಿದೆ. ಸರ್ಕಾರದಿಂದ ದೊರೆಯುವ ಮೀಸಲಾತಿ ಸೌಲಭ್ಯದಲ್ಲಿ ಈ ಸಮುದಾಯಕ್ಕೆ ಸರಿಯಾದ ಪ್ರಾತಿನಿದ್ಯ ದೊರೆತಿಲ್ಲ ಈ ಸಮುದಾಯದ ಮೂಲ ನೆಲೆಗಳಲ್ಲಿ ವಾಸವಾಗಿರುವವರನ್ನು ಒಕ್ಕಲೆಬ್ಬಿಸದೆ ಅವರನ್ನು ಅಲ್ಲಿಯೇ ಅಭಿವೃದ್ಧಿಪಡಿಸಲಾಗದೇ, ಇವರಿಗಾಗಿ ಕೈಗೊಂಡ ಪುನರ್ವಸತಿ ಯೋಜನೆಗಳು ಇವರಿಗೆ ಹೊಸ ಸವಾಲುಗಳನ್ನು ಸೃಷ್ಟಿಸಿವೆ. ಕಾಡನ್ನು ನಂಬಿರುವ,ಪ್ರಕೃತಿಯ ಆರಾಧಕರಾದ ಇವರನ್ನು ಅಲ್ಲಿಂದ ಒಕ್ಕಲೆಬ್ಬಿಸಲು ಅವರಿಗೆ ಕೊಡುವ ಹತ್ತು ಲಕ್ಷ ರೂ.ಗಳ ಪರಿಹಾರ ಇವರನ್ನು ಅತಂತ್ರರನ್ನಾಗಿಸಿದೆ. ಈ ಸಮುದಾಯದ ಬದುಕಿಗೆ ಬೇಕಾಗಿರುವುದು ಇವರ ವಾಸವಾಗಿರುವ ಜಾಗ ಮತ್ತು ಭೂಮಿಗೆ ಹಕ್ಕು ದಾಖಲೆಗಳು, ಇದು ಈಡೇರದೇ ಇರುವುದು ಈ ಸಮುದಾಯದ ಸಾಮಾಜಿಕ, ಆರ್ಥಿಕ ದುಸ್ಥಿತಿಯನ್ನು ಸೂಚಿಸುತ್ತದೆ.

## ಟಿಪ್ಪಣಿಗಳು

೧. ಹೆಚ್.ಜೆ. ಲಕ್ಕಪ್ಪಗೌಡ(ಪ್ರಸಂ), **ಕರ್ನಾಟಕ ಬುಡಕಟ್ಟುಗಳು ಸಂ.೧,** ನಾಗಣ್ಣ ಡಿ. 'ಕುಡಿಯರು ಮಲೆಕುಡಿಯ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೯೮, ಪು. ೬೦೯, ೧೯೯೮.

೨. ಕಾರಂತ ಎಸ್, **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೧, ೧೯೫೧.

೩. ಬೋರಲಿಂಗಯ್ಯ .ಹಿ.ಚಿ ಮತ್ತು ಎ.ಎಸ್. ಪ್ರಭಾಕರ(ಸಂ), **ಬುಡಕಟ್ಟು ಅಧ್ಯಯನ ೨,** ಶಂಕರನಾರಾಯಣ ಎಂ.ಪಿ, 'ಮೂರು ಗಿರಿಜನರ ಸಮುದಾಯಗಳಲ್ಲಿ ಕೇಳಿದ ಐತಿಹ್ಯಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೬೯, ೨೦೦೪.

೪. ಅದೇ ಪು.೬೯, ೨೦೦೪.

೫. ಸರ್ಕಾರದ ಆದೇಶ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ(ತಿದ್ದುಪಡಿ ಅಧಿನಿಯಮ), ೧೯೫೬, III ಮೈಸೂರು(೧), ೭.

೬. ಬೋರಲಿಂಗಯ್ಯ .ಹಿ.ಚಿ ಮತ್ತು ಪ್ರಭಾಕರ .ಎ.ಎಸ್.(ಸಂ), **ಬುಡಕಟ್ಟು ಅಧ್ಯಯನ-೪,** ಮೈತ್ರಿ ಕೆ.ಎಂ., 'ಮಲೇರು ಮಾಲೇರು, ಕೆಲವು ಸಂದೇಹಗಳು ಮತ್ತು ಉತ್ತರಗಳು', ಬುಡಕಟ್ಟು ಅಧ್ಯಯನ ವಿಭಾಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೯೫, ೨೦೧, ೨೦೦೫.

೭. ಪ್ರಭಾಕರ .ಎ.ಎಸ್.(ಸಂ), **ಆದಿವಾಸಿ ಆಖ್ಯಾನ,** ಶಂಕರನಾರಾಯಣ ತೀ.ನಂ, 'ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪುಟ. ೪೦,೪೪, ೨೦೦೬.

೮. ಅದೇ ಪುಟ. ೪೩, ೨೦೦೬.

೯. ಬೋರಲಿಂಗಯ್ಯ ಹಿ.ಚಿ, **ಕರ್ನಾಟಕ ಜಾನಪದ ಕಲೆಗಳ ಕೋಶ,** 'ಕುಡಿಯರ ಕುಣಿತ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೯೯, ೧೯೯೬.

10. Lawrence A Disoza, **Malekudiyas of Primitive Tribe of South India,** Unisco Learning Centre Mangalore, 1994.

೧೧. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು. ೫೪, ೧೯೯೧.

೧೨. ಏರ್ಯ ಲಕ್ಷ್ಮಿನಾರಾಯಣ ಆಳ್ವ, 'ಅಳಿದರು ಅಳಿಯದ ಸಂಬಂಧ ಸೂತ್ರ ಅಳಿಯ ಕಟ್ಟು', *ಪ್ರಜಾವಾಣಿ,* ೧೦.೧೨.೨೦೦೯, ಮುಖಪುಟ.

೧೩. ಅದೇ ಪುಟ *ಪ್ರಜಾವಾಣಿ,* ೧೦.೧೨.೨೦೦೯, ಮುಖಪುಟ.

೧೪. ಹೆಚ್‌ಸ್ಕೆ(ಸಂ), **ಅವಲೋಕನ,** ಶಿವರಾಮಕಾರಾಂತ ಕೆ, 'ಜನಾಂಗ ವೈವಿಧ್ಯ', ವಿಶ್ವಕನ್ನಡ ಸಮ್ಮೇಳನ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ.೪೧, ೧೯೮೬.

೧೫. ಕಾರಂತ ಎಸ್, **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೨, ೧೯೫೧.

೧೬. ಅದೇ ಪು.೩, ೧೯೫೧.

೧೭. ವಿವೇಕ ರೈ ಬಿ.ಎ, ಯದುಪತಿಗೌಡ ಡಿ(ಸಂ)., **ಮಲೆಕುಡಿಯ,** ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೬.

೧೮. ಕಾರಂತ ಎಸ್, **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೨೪೯, ೪೨೪, ೧೯೫೧.

೧೯. ಬರಗೂರು ರಾಮಚಂದ್ರಪ್ಪ(ಸಂ)., ರಾಮಚಂದ್ರ ಆಚಾರ್ ಡಿ.ವಿ(ಲೇ)., **ಕುಡಿಯರ ಸಂಸ್ಕೃತಿ,** ಉಪಸಂಸ್ಕೃತಿ ಮಾಲೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು.೮, ೧೯೯೩.

೨೦. ಕಾರಂತ ಎಸ್, **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೨೦೬, ೧೯೫೧.

೨೧. ಅದೇ ಪು.೩೦೨, ೧೯೫೧.

೨೨. ಅದೇ ಪು.೩೧೮, ೧೯೫೧.

೨೩. ಪ್ರಭಾಕರ .ಎ.ಎಸ್(ಸಂ)., **ಆದಿವಾಸಿ ಆಖ್ಯಾನ,** ಶಂಕರನಾರಾಯಣ ತೀ.ನಂ, 'ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪುಟ. ೪೦, ೨೦೦೬.

೨೪. ಮೋಹನ್‌ಕೃಷ್ಣ ರೈ ಕೆ, **ತುಳು ಸಂಸ್ಕೃತಿ ಚತುರ್ಮುಖಿ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨೪, ೧೯೯೯.

೨೫. ಅದೇ ಪು. ೨೫, ೧೯೯೯.

೨೬. ಅದೇ ಪು. ೨೫, ೧೯೯೯.

೨೭. ಅದೇ ಪು. ೨೬, ೧೯೯೯.

೨೮. ಬೋರಲಿಂಗಯ್ಯ .ಹಿ.ಚಿ ಮತ್ತು ಎ.ಎಸ್. ಪ್ರಭಾಕರ(ಸಂ), **ಬುಡಕಟ್ಟು ಅಧ್ಯಯನ ೩,** ಕೇಶವಶರ್ಮ.ಕೆ., 'ಒಂದು ಬುಡಕಟ್ಟು ಕಥನ: ಕುಡಿಯರ ಕೂಸು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮, ೨೦೦೫.

೨೮. ಅದೇ ಪು.೯, ೨೦೦೫.

೩೦. ಅದೇ ಪು.೧೦, ೨೦೦೫.

# ಅಧ್ಯಾಯ ಮೂರು

## ಮಲೆಕುಡಿಯರ ಆರ್ಥಿಕ ಸ್ಥಿತಿಗತಿ

೩.೭. ಆಧುನಿಕ ವೃತ್ತಿಗಳು

೧. ಬೀಡಿ ಕಾರ್ಮಿಕರು

೨. ಕಾರ್ಖಾನೆಗಳಲ್ಲಿ ದುಡಿಮೆ

೩. ಸರಕಾರಿ- ಖಾಸಗಿ ಉದ್ಯೋಗ

೩.೮. ಶೈಕ್ಷಣಿಕ ಸ್ಥಿತಿ

೩.೯. ಮಲೆಕುಡಿಯರ ಸಂಘಟನೆ ಮತ್ತು ನಾಯಕತ್ವ

೧. ಮಲೆಕುಡಿಯರ ಸಂಘ

೨. ಮಲೆಕುಡಿಯರ ನಾಯಕತ್ವ

೩. ಲ್ಯಾಂಪ್ಸ್

## ಮಲೆಕುಡಿಯರ ಆರ್ಥಿಕ ಸ್ಥಿತಿಗತಿ

ಮಲೆಕುಡಿಯ ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿಗತಿಯ ಅಧ್ಯಯನವು ಅವರ ಮೂಲ ಕುಲಕಸಬುಗಳು, ಪಾರಂಪರಿಕ ವೃತ್ತಿಗಳು, ವೃತ್ತಿಕೌಶಲ್ಯ, ಕರಕುಶಲತೆ, ವೈದ್ಯಪದ್ಧತಿ, ಕುಟುಂಬ ಮತ್ತು ಆರ್ಥಿಕತೆ, ಕೃಷಿ ಮತ್ತು ಪಶುಸಂಗೋಪನೆ, ಸಮುದಾಯ ಮತ್ತು ಆರ್ಥಿಕತೆ, ಪಾರಂಪರಿಕ ಆರಾಧನೆಗಳನ್ನು ಅವಲಂಬಿಸಿದೆ. ಮಲೆಕುಡಿಯರ ಜೀವನಕ್ಕೆ ಆಧಾರವಾದ ಆರ್ಥಿಕತೆ ಇವರು ಅನಾದಿಕಾಲದಿಂದಲೂ ಆಚರಣೆ ಮಾಡಿಕೊಂಡು ಬಂದಿರುವ ಅವರ ವಾಸದ ಸ್ಥಳಗಳಲ್ಲಿ ನಡೆಯುವ ಜಾತ್ರೆ, ಉತ್ಸವ, ಆರಾಧನೆಗಳನ್ನು ಅವಲಂಬಿಸಿದೆ. ಇದು ಇವರ ಆರ್ಥಿಕ ಬದುಕಿನ ಮೂಲವಾಗಿದೆ. ಇವರಲ್ಲಿನ ಬದ್ಧತೆ, ಸೇವಾಮನೋಭಾವನೆ ಇವರ ಆರ್ಥಿಕ ಸ್ಥಿತಿಯನ್ನು ಸೂಚಿಸುತ್ತದೆ. ಬಂಜಾರುಮಲೆಯಲ್ಲಿ ಪ್ರತಿವರ್ಷ ಆಚರಣೆ ಮಾಡುವ ಮಾರಿ ಪೂಜೆ, ನೆರಿಯಾದ ಹೆಬ್ಬಾರರ ಒಡೆತನದಲ್ಲಿ ಆಚರಣೆ ಮಾಡುವ ನೆರಿಯಾದ ಉತ್ಸವ, ಕುಕ್ಕೆ ಸುಬ್ರಹ್ಮಣ್ಯ ಬ್ರಹ್ಮರಥೋತ್ಸವ, ಧರ್ಮಸ್ಥಳ ರಥೋತ್ಸವ, ಕೊಕ್ಕಡ ರಥೋತ್ಸವ, ಶಿಶಿಲದ ರಥೋತ್ಸವ, ಕುಟುಂಬ ಮತ್ತು ಗ್ರಾಮದಲ್ಲಿ ನಡೆಯುವ ನೇಮ ದೈವ ಕೋಲ ಉತ್ಸವಗಳು, ಧರ್ಮಸ್ಥಳ ಮತ್ತು ಕೊಕ್ಕಡ ಸುತ್ತಮುತ್ತ ಆಚರಣೆ ಮಾಡುವ ಪುರುಷ ಪೂಜೆ, ಅಲ್ಲದೆ ಇವರು ಇಂದು ಅವಲಂಬಿಸಿರುವ ಆಧುನಿಕ ವೃತ್ತಿಗಳು, ಬೀಡಿ ಕಾರ್ಮಿಕರಾಗಿ ದುಡಿಯುವುದು, ಕಾರ್ಖಾನೆಗಳಲ್ಲಿ ದುಡಿಮೆ, ಸರಕಾರಿ ಮತ್ತು ಖಾಸಗಿ ಉದ್ಯೋಗಗಳಲ್ಲಿ ದುಡಿಮೆಗಳು ಇವರ ಜೀವನದ ಆರ್ಥಿಕ ಮೂಲಗಳಾಗಿವೆ. ಈ ಸಮುದಾಯದ ಶೈಕ್ಷಣಿಕ ಸ್ಥಿತಿ ಮತ್ತು ಇದಕ್ಕೆ ಪೂರಕವಾಗಿ ಇವರಲ್ಲಿರುವ ಸಂಘಟನೆ, ಜಾಗೃತಿ ಮತ್ತು ನಾಯಕತ್ವವು ಇವರ ಆರ್ಥಿಕ ಸ್ಥಿತಿಗತಿಯ ಮಾನದಂಡಗಳಾಗಿವೆ.

ಸುಬ್ರಹ್ಮಣ್ಯದ ಸುತ್ತಲಿನ ನೆಲೆಗಳಲ್ಲಿರುವ ಮಲೆಕುಡಿಯರ ಜೀವನಾಧಾರವೆಂದರೆ ಅವರಿಗೆ ಇರುವ ಅಲ್ಪಸ್ವಲ್ಪ ಕೃಷಿ ಇದನ್ನು ಬಿಟ್ಟರೆ ದಿನಕೂಲಿ ಕಾರ್ಮಿಕರಾಗಿ ದುಡಿಯುತ್ತಾರೆ. ಪುರುಷರಿಗೆ ದಿನಕ್ಕೆ ೧೭೦ ರೂ. ಕೂಲಿ ಇದೆ. ಸ್ತ್ರೀಯರಿಗೆ ೬೦ ರೂ. ದಿನಕೂಲಿ ಸಿಗುತ್ತದೆ. ಇದನ್ನು ಬಿಟ್ಟರೆ ಇವರಿಗೆ ಆದಾಯದ ಮೂಲಗಳು ಇಲ್ಲ. ಹೆಣ್ಣುಮಕ್ಕಳು ಈಗ ಮಹಿಳಾ ಸ್ವಸಹಾಯ ಗುಂಪುಗಳ ಮೂಲಕ ಉಳಿತಾಯ ಯೋಜನೆಯಡಿಯಲ್ಲಿ ಸ್ವಾವಲಂಭಿಗಳಾಗುತ್ತಿದ್ದಾರೆ. ಇವರಿಗೆ ಇಲ್ಲಿ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ

ಆರ್ಥಿಕ ನೆರವು ದೊರೆಯುತ್ತದೆ. ಇದನ್ನು ಹೊರತುಪಡಿಸಿದಂತೆ ಇವರಿಗೆ ಸರ್ಕಾರದಿಂದ ವಿವಿಧ ಯೋಜನೆಗಳ ಪ್ರಯೋಜನಗಳು ಬಿ.ಪಿ.ಎಲ್ ಪಡಿತರ ಚೀಟಿ, ಮತದಾನ ಗುರುತು ಚೀಟಿ ಇವುಗಳನ್ನು ಹೊರತುಪಡಿಸಿದಂತೆ ರಾಜೀವಗಾಂಧಿ ಕುಡಿಯುವ ನೀರು ಸರಬರಾಜು ಯೋಜನೆ ಸಿಕ್ಕಿದೆ. ಬ್ಯಾಂಕ್ ಮೂಲಕ ಕೃಷಿಗೆ, ಮನೆಕಟ್ಟಲು, ವ್ಯಾಪರಕ್ಕೆ ಹೆಚ್ಚು ಎಂದರೆ ೫೦ ಸಾವಿರ ರೂಗಳವರೆಗೆ ಸಾಲ ಸೌಲಭ್ಯ ಸಿಕ್ಕಿದೆ. ಸುಳ್ಯದ ಲ್ಯಾಂಪ್ಸ್ ಮತ್ತು ಮಂಗಳೂರಿನ ಐ.ಟಿ.ಡಿ.ಪಿ ಯೋಜನೆಗಳ ಪ್ರಯೋಜನವನ್ನು ಇಲ್ಲಿ ಪಡೆಯುತ್ತಿದ್ದಾರೆ.

**ಭೂ ದಾಖಲೆಗಳು**

ಈ ಪ್ರದೇಶದ ಮೂಲ ನಿವಾಸಿಗಳಾದ ಇವರು ಈಗ ತಮ್ಮ ಭೂಮಿಯ ಹಕ್ಕು ಪಡೆಯಲು ಪ್ರತಿ ವರ್ಷ ಅರ್ಜಿಗಳನ್ನು ಕೊಡುತ್ತಲೇ ಇದ್ದಾರೆ. ಆದರೂ ಇದು ಆಗದೇ ಇರುವುದು ಇವರ ವಾಸದ ನೆಲೆಗಳ ಅತಂತ್ರ ಸ್ಥಿತಿಯನ್ನು ಸೂಚಿಸುತ್ತವೆ. ಇವರ ಇಲ್ಲಿನ ಬದುಕಿಗೆ ಸ್ಥಿರತೆ ಬೇಕಾದರೆ ಇವರ ವಾಸದ ನೆಲೆಗಳಿಗೆ ಸ್ಥಿರತೆ ಬೇಕು. ಈ ಸ್ಥಿರತೆ ದೊರೆಯಬೇಕಾದರೆ ಇವರು ವಾಸಿಸುವ ಸ್ಥಳ, ಕೃಷಿ ತೋಟ ಭೂಮಿಗಳಿಗೆ ಭೂ ಮಂಜೂರಾತಿ ದಾಖಲೆಗಳ ಅವಶ್ಯಕತೆಯಿದೆ. ಈಗ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಕಾಯ್ದೆ ೨೦೦೬ರ ಅಡಿಯಲ್ಲಿ ಭೂ ಮಂಜೂರಾತಿಗೆ ಪ್ರಸ್ತಾವನೆಗಳನ್ನು ಸಲ್ಲಿಸಲಾಗಿದೆ. ಇವರ ಮಂಜೂರಾತಿಗೆ ಸಂಬಂಧಿಸಿದಂತೆ ಯೋಜನೆಯ ಕಾರ್ಯಗಳು ಹಂತ ಹಂತವಾಗಿ ಪ್ರಗತಿಯಲ್ಲಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಕುಲಕುಂದ ಕಾಲೋನಿಯಲ್ಲಿ ಈ ಹಿಂದೆಯೇ ಪುನರ್ವಸತಿ ಯೋಜನೆಯಡಿಯಲ್ಲಿ ಅಭಿವೃದ್ಧಿ ಕ್ರಮಗಳನ್ನು ಕೈಗೊಳ್ಳಲಾಗಿದೆ. ಆದರೂ ಇಲ್ಲಿ ಭೂ ಮಂಜೂರಾತಿ ಸ್ಥಿತಿ ಮಾತ್ರ ಶೋಚನೀಯವಾಗಿದೆ.

**೩.೧. ಮೂಲ ಕುಲಕಸುಬುಗಳು**

ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ಕುಲಕಸಬುಗಳು ಇವರ ಅನಾದಿಕಾಲದ ಪರಂಪರೆಯನ್ನು ಸೂಚಿಸುತ್ತವೆ. ಗುಡ್ಡಗಾಡು ಪ್ರದೇಶದಲ್ಲಿ ವಾಸವಾಗಿದ್ದ ಇವರು ಕಾಡಿನ ಸಂಪತ್ತಿಗೆ ಒಡೆಯರಾಗಿದ್ದರು. ಇವರ ಕಾಡಿನ ಬದುಕು ಕಾಡಿನ ಸಂಪತ್ತನ್ನು ಅವಲಂಬಿಸಿದ ಬದುಕಾಗಿತ್ತು. ಕುಮರಿಬೇಸಾಯ ಪದ್ಧತಿ, ಪಶುಸಂಗೋಪನೆ, ಕಾಡುತ್ಪತ್ತಿ ಸಂಗ್ರಹ, ಬಿದಿರು ಬುಟ್ಟಿ ಹೆಣೆಯುವುದು, ಸೇಂದಿ, ಕಳ್ಳು ಇಳಿಸುವುದು, ಬೇಟೆಯಾಡುವುದು, ಜೇನು ಸಂಗ್ರಹ ಏಲಕ್ಕಿಕೃಷಿ, ಕಾಳುಮೆಣಸು, ಬಡವರ ಬಾದಾಮಿಯೆಂದು ಪ್ರಸಿದ್ಧವಾದ ಗೇರು ಕೃಷಿ ಇವರ ಮೂಲ ಕಸುಬುಗಳನ್ನು ಸೂಚಿಸುತ್ತದೆ. ಲಿಂಗವಾರು ಕಸುಬುಗಳನ್ನು ಪು. ೧೧೧ರ ಅಂಕಿ-ಅಂಶಗಳಲ್ಲಿ ಕಾಣುತ್ತೇವೆ.

## ಅಂಕಿ-ಅಂಶಗಳು ೩.೧(೧)
## ಮಲೆಕುಡಿಯ ಸಮುದಾಯದ ಲಿಂಗವಾರು ಕಸುಬುಗಳು: (ಮಾದರಿ ಸಮೀಕ್ಷೆ)

| ಕ್ರ. ಸಂ. | ತಾಲ್ಲೂಕು | ಕುಟುಂಬಗಳ ಸಂಖ್ಯೆ | ಕಸುಬುಗಳು | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | | ಕೃಷಿ | | | ಕೃಷಿಕೂಲಿ | | | ಗುಡಿಕೆಲಸ | | | ವ್ಯಾಪಾರ | | | ಸರ್ಕಾರಿ | | | ಖಾಸಗಿ | | | ಇತರ | | |
| | | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಬೆಳ್ತಂಗಡಿ | ೩೯ | ೧೨೫ | ೪೫ | ೧೭೦ | ೨೮೧ | ೧೩೭ | ೪೧೮ | ೮ | ೧೦ | ೧೮ | ೨ | – | ೨ | ೬ | ೫ | ೧೧ | ೩೪ | ೧೨ | ೪೬ | ೧೯ | ೮೯ | ೧೧೦ |
| ೨ | ಸುಳ್ಯ | ೫೧ | ೧ | – | ೧ | ೫೪ | ೪೨ | ೯೬ | ೧೨ | ೭ | ೧೯ | – | – | – | ೧ | – | ೧ | – | – | – | ೧೨ | ೧೨ | ೨೪ |
| ೩ | ಬಂಟ್ವಾಳ | ೩೫ | ೩ | – | ೨ | ೫೨ | ೨೩ | ೭೪ | – | ೨ | ೨ | – | – | – | ೧ | ೨ | ೩ | – | – | – | ೯ | ೨೨ | ೩೧ |
| ೪ | ಪುತ್ತೂರು | ೪೬ | ೧೫ | ೩ | ೧೮ | ೬೦ | ೩೪ | ೯೪ | ೪ | ೨೭ | ೩೧ | ೨ | – | ೨ | – | – | – | ೩ | ೩ | ೬ | ೬ | ೮ | ೧೪ |
| | ಒಟ್ಟು | ೫೨೧ | ೧೪೪ | ೪೮ | ೧೯೧ | ೪೪೭ | ೨೩೧ | ೬೭೨ | ೨೪ | ೪೬ | ೭೦ | ೪ | – | ೪ | ೮ | ೭ | ೧೫ | ೩೭ | ೧೫ | ೫೨ | ೪೬ | ೧೩೧ | ೧೭೭ |

### ೩.೨. ಪಾರಂಪರಿಕ ವೃತ್ತಿಗಳು

ಮಲೆಕುಡಿಯ ಸಮುದಾಯದ ಮೂಲ ವೃತ್ತಿಗಳಲ್ಲಿ ಕಾಡುತ್ಪತ್ತಿ ಸಂಗ್ರಹ ಕಂಡುಬರುತ್ತದೆ.

**ಕೋಷ್ಟಕ: ೩.೧(೨)**

**ಕಾಡುತ್ಪತ್ತಿ ಸಂಗ್ರಹಗಳ ವಿವರ.**

| ಕ್ರಸಂ. | ಕಾಡುತ್ಪತ್ತಿ | ಮಾದರಿ |
|---|---|---|
| ೧ | ಅಳಲೆಕಾಯಿ | ಹಣ್ಣು |
| ೨ | ಉಪಗಿಮರ | ಹಣ್ಣು |
| ೩ | ಕಾಳುಮೆಣಸು | ಕಾಳು |
| ೪ | ಕಾಸರ್ಕ | ಬೀಜ ಚೆಕ್ಕೆ |
| ೫ | ಗೇರು | ಹಣ್ಣು |
| ೬ | ಗೆಣಸು | ಗೆಡ್ಡೆ |
| ೭ | ಗಮಟ್ ವಾಗ್ | ಹಣ್ಣು |
| ೮ | ದಾಲ್ಚಿನ್ನಿ | ಎಲೆ ಹೂವು ಮೊಗ್ಗು ಚೆಕ್ಕೆ |
| ೯ | ಜಾರಿಗೆ | ಹಣ್ಣು |
| ೧೦ | ನೆಲ್ಲಿಕಾಯಿ | ಹಣ್ಣು |
| ೧೧ | ಪುನರ್ ಪುಳಿ | ಹಣ್ಣು |
| ೧೨ | ಬೆತ್ತ – ಬಿದಿರು | ಬಿದಿರು |
| ೧೩ | ರಾಮ ಪತ್ರೆ | ಹೂವು ಬೀಜ |
| ೧೪ | ಸೀಗೆ ಕಾಯಿ | ಹಣ್ಣು |
| ೧೫ | ಶಾಂತಿ | ಹಣ್ಣು |
| ೧೬ | ಹುಣಸೆ | ಹಣ್ಣು |
| ೧೭ | ಹಲಸು | ಹಣ್ಣು |
| ೧೮ | ಮುಳಿಹುಲ್ಲು | ಹುಲ್ಲು |

ಬಾಂಜಾರು ಎಂಬ ಪದದ ಅರ್ಥವು ಬಂಜರು ಭೂಮಿ, ಬರಡು ನೆಲ, ಎಂಬ ಅರ್ಥ ಬರುತ್ತದೆ. ಮಲೆ ಎಂದರೆ ಎತ್ತರದ ಶಿಖರ, ಗುಡ್ಡ ಎಂಬ ಅರ್ಥ ಬರುತ್ತದೆ. ಸುಮಾರು ೧೦೦ ವರ್ಷಗಳ ಹಿಂದೆ ನೆರಿಯಾದ ಹೆಬ್ಬಾರರ ಒಡೆತನದಲ್ಲಿದ್ದ ಬಾಂಜಾರು ಮಲೆ, ಇಳಿಮಲೆ, ಅಂಬಟಮಲೆ, ಈ ಮೂರು ಮಲೆಗಳಲ್ಲಿ ವಾಸವಾಗಿದ್ದ ಹಿರಿಯ ತಲೆಮಾರಿನ ಅಜ್ಜನಿಗೆ ಎರಡು ಬಂಗಾರದ ಬಳೆ ಕೊಟ್ಟು, ಈ ಮಲೆಗಳಿಗೆ ಗುರಿಕಾರರನ್ನಾಗಿ ಮಾಡಿದ್ದಾರೆಂಬ ವಿಷಯವನ್ನು ಬೈರು ತಿಳಿಸುತ್ತಾರೆ. ಹಿಂದೆ ೨೪ ಕುಟುಂಬಗಳಿದ್ದ ಈ ಪ್ರದೇಶದಲ್ಲಿ ಈಗ ೩೭ ಮನೆಗಳಿವೆ. ಒಟ್ಟು ಜನಸಂಖ್ಯೆ ೧೩೦, ೧೦೦ ಓಟುಗಳಿವೆ. ೧೮೦ ಎಕರೆ ಭೂಮಿ ವಿಸ್ತೀರ್ಣ ಹೊಂದಿರುವ ಈ ಪ್ರದೇಶ ದಾಟಿದರೆ, ಅಭಯಾರಣ್ಯ ತಲುಪುತ್ತೇವೆ. ಸುಲ್ತಾನ್ ಈ ಕಡೆಗೆ ತನ್ನ ಸೈನ್ಯದೊಂದಿಗೆ ಎತ್ತರವಾದ ಈಪ್ರದೇಶದಲ್ಲಿ ರಾತ್ರಿ ತಂಗಿದ್ದು, ವಿಶ್ರಾಂತಿ ಪಡೆದು ಮುಂದೆ ಸಾಗುತ್ತಿದ್ದನಂತೆ. ಆಗ ತನ್ನ ಸೈನ್ಯ ಆನೆ, ಒಂಟೆ, ಕುದುರೆಗಳಿಗೆ ಬೇಕಾದ ನೀರು, ಮೇವು ಇಲ್ಲಿ ಸಿಗುತ್ತದೆ. ನೇರ್ಲಕೆರೆಯನ್ನು ಕಾಡಿನಲ್ಲಿ ಟಿಪ್ಪು ಕಟ್ಟಿಸಿದ್ದಾನೆ. ಅದನ್ನು ಈಗಲೂ ನಾವು ನೋಡಬಹುದು. ಆದರೆ ಈಗ ಅದು ಹಾಳಾಗಿದೆ. ಇಲ್ಲಿ ನಿಲ್ಲುವ ನೀರು ಇಲ್ಲಿನ ಕಾಡು ಪ್ರಾಣಿಗಳಿಗೆ ಆಸರೆಯಾಗಿದೆ. ಎಂಬ ವಿಷಯವನ್ನು ಬಿ.ಆರ್. ಲಕ್ಷ್ಮಣ್ ತಿಳಿಸುತ್ತಾರೆ. ನಾವು ಚಾರ್ಮಾಡಿಯಿಂದ ಮೂಡಿಗೆರೆಗೆ ಹೋಗುವಾಗ ಬರುವ ರಸ್ತೆ ಬದಿಯ ಬಲಭಾಗದಲ್ಲಿ ಬ್ರಿಟಿಷರ ಕಾಲದಲ್ಲಿ ಹಳೆಯದಾದ ಒಂದು ನಾಮಫಲಕ ಕಂಡುಬರುತ್ತದೆ. ಸೋಮನ ಕಾಡು ಎಂಬ ಹೆಸರು ಇಲ್ಲಿ ಕಂಡುಬರುತ್ತದೆ.

ಸೋಮನಕಾಡು ಎಂಬ ಹೆಸರಿನ ಸೋಮ ಯಾರು ಎಂದು ಕೇಳಿದಾಗ ನಮಗೆ ತುಂಬಾ ಆಶ್ಚರ್ಯಕರವಾದ ಸಂಗತಿ ತಿಳಿದುಬರುತ್ತದೆ. ಇಲ್ಲಿರುವ ಸೋಮ ಎಂಬ ಹೆಸರಿನ ಮಲೆಕುಡಿಯ ಬುಡಕಟ್ಟು ಸಮುದಾಯದವರಾಗಿದ್ದು, ಕಾಡಿನಲ್ಲಿ ಬಯನಿ ಮರದಿಂದ ಹೆಂಡ ಇಳಿಸುವ ಕಾಯಕದಲ್ಲಿ ತೊಡಗಿದ್ದು, ಕಾಡಿನಲ್ಲಿ ಶ್ರಮಜೀವಿಯಾಗಿದ್ದು, ಕಾಡಿನ ಸ್ಥಳ, ದಾರಿಯ ಪರಿಪೂರ್ಣ ಪರಿಚಯವಿತ್ತು. ಬ್ರಿಟಿಷರು ಸರ್ವೆಗಾಗಿ ಬಂದಾಗ ಚೋಮವರಿಗೆ ಕಾಡಿನ ದಾರಿ ತೋರಿಸಿ, ಈ ಚೋಮನ ಸಹಾಯದಿಂದಲೇ ಚಾರ್ಮಾಡಿ ಘಾಟ್‌ನ ರಸ್ತೆಯನ್ನು ನಿರ್ಮಿಸಲಾಗಿದೆ. ಹೀಗಾಗಿ ಅವನ ಸಹಾಯ ಮತ್ತು ನೆನಪಿಗಾಗಿ ಈ ಪ್ರದೇಶದ ಕಾಡಿಗೆ ಸೋಮನಕಾಡು ಎಂದು ಹೆಸರಿಟ್ಟಿದ್ದಾರೆ ಎಂಬ ಮಾಹಿತಿ ಲಕ್ಷ್ಮಣ್ ಅವರಿಂದ ತಿಳಿದಾಗ ತುಂಬಾ ಕುತೂಹಲವಾಯಿತು. ನಾವು ಈಗ ಓಡಾಡುವ ಚಾರ್ಮಾಡಿ ಘಾಟಿಯ ರಸ್ತೆಯ ದಾರಿಯನ್ನು ತೋರಿಸಿದವರು ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಸೇರಿದ ಸೋಮ. ಚೋಮ ಎಂಬ ಸಂಗತಿಯ ಆಧಾರವಾಗಿ ಈಗಲೂ ಬ್ರಿಟಿಷರು ಹಾಕಿದ ನಾಮಫಲಕ ಸಾಕ್ಷಿಯಾಗಿದೆ. ಈ ಪ್ರದೇಶವನ್ನು ಬಾರಿಮಲೆ ಎಂದು ಕರೆಯಲ್ಪಡುವುದು ಹಿಂದೆ ಇಲ್ಲಿ ಜನರು ಇದ್ದರು ಈಗ ಯಾರು ಇಲ್ಲ. ಅಲ್ಲಿರುವವರು ಬೇರೆಬೇರೆ ಕಡೆಗೆ ಬಂದು ನೆಲೆಸಿದ್ದಾರೆ. ಆದರೆ ಈ ಪ್ರದೇಶದಲ್ಲಿ ಕಾಲಭೈರವ ಎಂಬ ಹಳೆಯ ದೇವಸ್ಥಾನ ಈಗಲೂ ಇದೆ. ಇಲ್ಲಿಂದ ಬೇರೆಬೇರೆ ಕಡೆಗೆ ಹೋದರೂ ಸಹ ವರ್ಷಕ್ಕೆ ಒಮ್ಮೆ ಬಂದು ಪೂಜೆ ಮಾಡಿಸಿಕೊಂಡು ಹೊಗುವ ಪದ್ಧತಿ ಈಗಲೂ ಇದೆ. ಈ ದೇವರಿಗೆ ಬಾಂಜಾರು ಮಲೆ, ಇಳಿಮಲೆ. ಅಂಬಟಮಲೆಯಲ್ಲಿ ನೆಲೆಸಿರುವವರೆಲ್ಲರೂ ಸಹ ತಪ್ಪದೇ ಬಂದು ಪೂಜೆ ಸಲ್ಲಿಸಿ ಹೋಗುವ ಪದ್ಧತಿ ಸಹ ಈಗಲೂ ಇದೆ. ಈ ಕಾಲಭೈರವ ದೇವಸ್ಥಾನ ತುಂಬಾ ಹಳೆಯ ಗುಡಿಯಾಗಿದ್ದು,

ಕಾಡಿನ ಮಧ್ಯೆ ಇದೆ. ಇಲ್ಲಿ ಭಟ್ಟರು ಪೂಜೆ ಮಾಡುತ್ತಿದ್ದಾರೆ. ಆದರೆ ಜನರು ವಾಸ ಮಾಡಿದ ಸ್ಥಳದ ಗುರುತು ಅಲ್ಲಲ್ಲಿ ಕಂಡುಬರುತ್ತದೆ. ಈಗ ಯಾರು ವಾಸ ಮಾಡುತ್ತಿಲ್ಲ ಎಂಬ ಸಂಗತಿ ಲಕ್ಷ್ಮಣ್ ಅವರಿಂದ ತಿಳಿದುಬಂತು. ಹಿಂದೆ ಕಾಡಿನಲ್ಲಿದ್ದ ಕಾಡುತ್ಪತ್ತಿ ಸಂಗ್ರಹಿಸಿ ಜೀವನ ಸಾಗಿಸುತ್ತಿದ್ದ ಇವರು ಬಯನಿ ಮರದಿಂದ ಹೆಂಡ ಇಳಿಸುವುದು ಸೇರಿದಂತೆ ಕುಮರಿ ಬೇಸಾಯ, ಕಣ ಮಾಡಿಕೊಂಡು ಹೆಬ್ಬಾರರ ಮನೆತನಕ್ಕೆ ನಿಷ್ಠೆ ತೊರಿಸಿದ್ದಾರೆ. ನಾವು ಧಣಿಗಳ ಬಗ್ಗೆ ಏನೂ ಹೇಳುವುದಿಲ್ಲ ಅವರು ನಮ್ಮನ್ನು ಸಾಕಿದ ಧಣಿಗಳು ಅವರ ಬಗ್ಗೆ ಏನನ್ನೂ ಬರೆಯಬೇಡಿ, ನಾವು ಎಂತಾದರೂ ಹೇಳಿದರೂ ಸಹ ಅದು ಬೇಡ, ಎಂಬ ಮಾತು ಹಿರಿಯರಲ್ಲಿ ಬರುತ್ತದೆ. ಇದು ಅವರು ಹೆಬ್ಬಾರರಲ್ಲಿ ಹೊಂದಿದ ಬದ್ಧತೆ, ನಷ್ಠೆ, ಕಾಳಜಿ ತೋರಿಸುತ್ತದೆ. ಪ್ರತಿನಿತ್ಯ ನಮ್ಮ ಕೃಷಿ ತೋಟದಲ್ಲಿನ ಅಡಿಕೆ, ತೆಂಗು, ರಬ್ಬರ್, ಬಾಳೆ, ಕಾಳು ಮೆಣಸು, ಏಲಕ್ಕಿ, ಭತ್ತದ ಗದ್ದೆಯಲ್ಲಿ ಕೃಷಿ ಮಾಡಿಕೊಂಡಿರುವ ಇವರು ಇಲ್ಲಿನ ಎಸ್ಟೇಟ್ ನಲ್ಲಿ ದಿನಾಲೂ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಗಂಡಸರಿಗೆ ೧೫೦ ರೂನಂತೆ, ಹೆಂಗಸರಿಗೆ ೧೩೦ ರೂನಂತೆ, ದಿನಗೂಲಿ ಪಡೆಯುತ್ತಾರೆ. ಹಿಂದೆ ಹೆಬ್ಬಾರರು ಈಗ ವೈ.ಎಂ.ಕೆ. ಒಡೆತನದ ಎಸ್ಟೇಟ್‌ನಲ್ಲಿ ಇವರು ಕಾಡು, ಗಿಡ, ಮರ ಕಡಿದು ಈ ಪ್ರದೇಶದಲ್ಲಿ ಕೃಷಿಗೆ ಯೊಗ್ಯ ಮಾಡುವ ಕೆಲಸ ಮಾಡುತ್ತಿದ್ದಾರೆ. ಹಿಂದೆ ಇದ್ದ ಕುಮರಿ ಬೆಸಾಯ ಪದ್ದತಿ ಈಗ ಇಲ್ಲ. ಇವರ ವಿವಾಹ ಸಂಬಂಧಗಳು ಬಾಂಜಾರುಮಲೆ, ಅಂಬಟಮಲೆ, ಪರ್ಪಳ, ಕೋಲೋಡಿ ಮತ್ತು ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖ, ಕಳಸ, ಮೂಡಿಗೆರೆ, ಮತ್ತು ಮಡಿಕೇರಿಯ ಕಡೆಗೆ ಬೆಳೆಸಿದ್ದಾರೆ. ೧೯೬೦ರಿಂದ ಭೂ ಸುಧಾರಣೆ ಕಾಯಿದೆಯಿಂದಾಗಿ ಇವರು ಭೂಮಿಗೆ ಒಡೆಯರಾಗಿದ್ದಾರೆ. ಮೂಡಿಗೆರೆ, ಚಿಕ್ಕಮಗಳೂರು ಕಡೆಯ ಎಸ್ಟೇಟ್‌ಗಳಲ್ಲಿ ಕೆಲಸ ಮಾಡುವಾಗ ಮಹಿಳೆಯರು ಶರ್ಟ್ ಹಾಕಿಕೊಂಡು ಕೆಲಸ ಮಾಡುತ್ತಿರುವುದು ಸಹ ಬಾಂಜಾರು ಮಲೆಯಲ್ಲಿ ಕಂಡು ಬರುತ್ತದೆ. ವಯೋವೃದ್ಧ ಪುರುಷರು ಅಂಗಿ ಶರ್ಟ, ಲುಂಗಿ ಧರಿಸಿ ಕೈಯಲ್ಲಿ ಊರುಗೋಲು ಹಿಡಿದು ಮಲೆಗಳಲ್ಲಿ ಸರಾಗವಾಗಿ ತಿರುಗಾಡುತ್ತಾರೆ ಇವರು ಕಿವಿಗೆ ಬೆಂಡೋಲೆ, ತಲೆಯಲ್ಲಿ ಭಟ್ಟರಂತೆ ಜುಟ್ಟು ಕಟ್ಟಿಕೊಂಡಿರುತ್ತಾರೆ. ಹಳೆತಲೆಮಾರಿನ ವಯೋವೃದ್ಧ ಲಕ್ಷ್ಮಣ್‌ರನ್ನು ಹೀಗೇಕೆ ಎಂದು ಕೇಳಿದಾಗ ಇದು ಹಿಂದೆ ನಮ್ಮ ಅಜ್ಜನ ಕಾಲದಿಂದ ಬಂದಿದೆ. ನಾವು ಹಿಂದೂಗಳು ಎಂದೂ ಗೊತ್ತಾಗಲೂ ಕಿವಿಯಲ್ಲಿ ಬೆಂಡೋಲೆ, ತಲೆಯಲ್ಲಿ ಜುಟ್ಟು ಬಿಡುವ ಪದ್ಧತಿ, ನಮ್ಮ ಧಣಿಗಳಿಂದ ರೂಢಿಗೆ ಬಂದಿದೆ ಎಂಬ ಮಾಹಿತಿಯನ್ನು ನೀಡುತ್ತಾರೆ. ಹಿಂದೂಧರ್ಮ ಸಂಸ್ಕೃತಿಯ ಪಾಲಕರಾದ ಇಲ್ಲಿಯ ಭೂಮಾಲಿಕ ಹೆಬ್ಬಾರರ ಮನೆತನದ ಉಡುಪು ವೇಷ ಭೂಷಣದಲ್ಲಿ ತಲೆಯಲ್ಲಿ ಹಿಂದೆ ಜುಟ್ಟು ಬಿಡುವ ಮತ್ತು ಗಂಡಸರು ಕಿವಿಗೆ ಸಹ ಬೆಂಡೋಲೆ ಹಾಕುವ ಪದ್ಧತಿ ರೂಢಿಯಲ್ಲಿದೆ. ಇದರ ಪ್ರಭಾವ ಹಾಗೂ ಸಂಪರ್ಕದಿಂದಾಗಿ ಇಲ್ಲಿನ ಮೂಲ ನಿವ್ವಾಸಿಗಳಾದ ಮಲೆಕುಡಿಯ ಗಂಡಸರು ಸಹ ಜುಟ್ಟು ಬಿಡುವ ಕಿವಿಗೆ ಬೆಂಡೋಲೆ ಧರಿಸುವಲ್ಲಿ ಮುಂದಾಗಿರುವುದು ತಿಳಿದುಬರುತ್ತದೆ. ಯುವಕರು ಮಾತ್ರ ಈಗಿನ ಆಧುನಿಕ ಮಾರ್ಪಾಡಿಗೆ ತಕ್ಕಂತೆ ಪ್ಯಾಂಟ್, ಶರ್ಟ, ಧರಿಸುತ್ತಾರೆ. ಮಹಿಳೆಯರು ಸೀರೆ ರವಿಕೆ ಧರಿಸುವುದು ಸಾಮಾನ್ಯವಾಗಿದೆ. ಆದರೆ ಹಳಿತಲೆಮಾರಿನ ಪರಂಪರೆಯ ಉಡುಪು ಅಜ್ಜಿಯರಲ್ಲಿ ಈಗಲೂ ಕಂಡುಬರುತ್ತದೆ. ಕೆಲವರು ರವಿಕೆ ಹಾಕಿದರೆ ಕೆಲವರು ಹಾಕದೇ ಇರುತ್ತಾರೆ. ಇನ್ನೂ ಸೀರೆ ಉಡುವ ಪದ್ಧತಿಯಲ್ಲಿ ಇವರ ಮೂಲಸಂಸ್ಕೃತಿ

ಕಂಡುಬರುತ್ತದೆ. ಒಂದು ಸೀರೆಯನ್ನು ಎರಡು ತುಂಡು ಮಾಡಿ ಒಂದನ್ನು ಸುತ್ತಿಕೊಂಡು, ಇನ್ನೊಂದನ್ನು ಎಡಭುಜದಲ್ಲಿ ಸೆರಗಿಗೆ ಹಾಕುವ ಪದ್ಧತಿ ಇವರಲ್ಲಿದೆ. ಹಿಂದೆ ಧಣಿಗಳು ವರ್ಷಕ್ಕೊಮ್ಮೆ ಬಟ್ಟೆ, ಉಪ್ಪು, ಅಕ್ಕಿ, ಸೀರೆ, ಕೊಡುತ್ತಿದ್ದರು. ಆಗ ಹಿಂದೆ ಕೊಡುತ್ತಿದ್ದ ಒಂದು ಸೀರೆಯಲ್ಲಿ ಎರಡು ತುಂಡು ಮಾಡಿ ಉಡುವ ಪದ್ಧತಿ ಹಿಂದಿನಿಂದಲೂ ಜಾರಿಯಲ್ಲಿದೆ.

ಸುಬ್ರಹ್ಮಣ್ಯದ ದೇವಸ್ಥಾನದ ಬ್ರಹ್ಮರಥೋತ್ಸವ ಹಾಗೂ ಪಂಚಮಿ ರಥಗಳ ಸಂದರ್ಭಗಳಲ್ಲಿ ಇವರ ಪಾರಂಪರಿಕ ನೈಪುಣ್ಯತೆ ಕಂಡುಬರುತ್ತದೆ. ಇದು ವರ್ಷಕ್ಕೆ ಒಮ್ಮ ಜಾತ್ರೆಯಲ್ಲಿ ಮಾತ್ರ ಕಂಡುಬರುತ್ತದೆ. ಜಾತ್ರೆಯನ್ನು ಹೊರತುಪಡಿಸಿ ಬೇರೆ ದಿನಗಳಲ್ಲಿ ದೇವಸ್ಥಾನದ ಮುಂದಿನ ಬ್ರಹ್ಮರಥವನ್ನು ನೋಡಿದರೆ. ಆ ರಥವನ್ನು ಹೊದಿಕೆ ಹಾಕಿ ಭದ್ರ ಪಡಿಸುತ್ತಾರೆ. ಜಾತ್ರೆಯಲ್ಲಿ ನೊಡಿದರೆ ತುಂಬಾ ಎತ್ತರದ ಆಕರ್ಷಕ ಅಲಂಕೃತ ರಥ ಕಾಣುತ್ತದೆ. ಸುಮಾರು ೪೦೦ ವರ್ಷಗಳ ಇತಿಹಾಸವುಳ್ಳ ಈ ಬ್ರಹ್ಮರಥವನ್ನು ಬೆತ್ತದಿಂದ ಕಟ್ಟುವವರು, ಅಲಂಕರಿಸುವವರು ಮಲೆಕುಡಿಯ ರಾಗಿದ್ದಾರೆ; ಇದೇ ರಥವನ್ನು ಕೇವಲ ಬಿದಿರಿನ ಬೆತ್ತವನ್ನು ಮಾತ್ರ ಬಳಸಿ ನಿರ್ಮಿಸುವ ಇವರ ವೃತ್ತಿ ಪರಿಣತೆ, ನೈಪುಣ್ಯತೆ ಇಲ್ಲಿ ಪ್ರಧಾನವಾಗಿರುತ್ತದೆ. ಇಂದಿನ ಆಧುನಿಕ ನಾಗರಿಕತೆಯ ದಿನಗಳಲ್ಲಿ ಇವರ ಸಾಂಪ್ರದಾಯಿಕ ಬದುಕು ಮಾಯವಾಗಿದ್ದರೂ ಸಹ ಇಲ್ಲಿನ ಇವರ ಸಾಂಪ್ರದಾಯಿಕ ವೃತ್ತಿ ಮಾತ್ರ ಮಾಯವಾಗದೆ ಇಂದಿಗೂ ಹಾಗೆಯೇ ಉಳಿಯುತ್ತಾ ಬೆಳೆಯುತ್ತಾ ಬಂದಿದೆ. ಬಹುತೇಕವಾಗಿ ಎಲ್ಲಾ ರಥಗಳನ್ನು ಎಳೆಯಲು ಉದ್ದವಾದ ಹಗ್ಗಗಳನ್ನು ಬಳಸುತ್ತಾರೆ. ಆದರೆ ಇಲ್ಲಿನ ರಥವನ್ನು ಎಳೆಯಲು ಹಗ್ಗವನ್ನು ಬಳಸುವುದಿಲ್ಲ. ಹಗ್ಗಕ್ಕೆ ಬದಲಾಗಿ ೧೦-೧೨ ಅಡಿ ಉದ್ದದ ಕೈ ಹಿಡಿಕೆಗೆ ಸಿಗುವಷ್ಟು ದಪ್ಪವಾದ ಬೆತ್ತವನ್ನು ಮಾತ್ರ ಬಳಸುತ್ತಾರೆ. ಇದನ್ನು ರಥದ ಮುಂದಿನ ವೃತ್ತಾಕಾರ ಕಬ್ಬಿಣದ ೮ ಕೊಂಡಿಗಳಿಗೆ, ೮ ಬೆತ್ತಗಳನ್ನು ಜೋಡಿಸಿ ಹಾಕಿ ಸಿದ್ಧತೆ ಮಾಡುವವರು ಮಲೆಕುಡಿಯರೇ ಆಗಿದ್ದಾರೆ, ರಥ ಎಳೆಯುವಾಗ ರಥದ ಚಕ್ರಗಳನ್ನು ನಿಯಂತ್ರಿಸಲು ದಪ್ಪ ಮರದ ತುಂಡುಗಳನ್ನು ಕೈಯಲ್ಲಿ ಹಿಡಿದು ನಿಯಂತ್ರಣ ಮಾಡುತ್ತಿರುತ್ತಾರೆ. ಜಾತ್ರೆಯಲ್ಲಿ ಪಟ, ಛತ್ರ, ಚಾಮರ, ಎಣ್ಣೆದೀಪಗಳನ್ನು ಹಿಡಿದು ಸಾಗುವವರು ಸಹ ಇವರೇ ಆಗಿರುತ್ತಾರೆ. ರಥದ ಏಣಿ ಹೊತ್ತು ಸಾಗುವುದು ಸೇರಿದಂತೆ ರಥಕ್ಕೆ ಕಳಸವನ್ನು ಏರಿಸುವ ಹಾಗೂ ಇಳಿಸುವ ಜವಾಬ್ದಾರಿ ಇವರದ್ದೇ ಆಗಿದೆ. ರಥದ ಕಳಸವನ್ನು ಈ ರಥದ ಮೇಲ್ಭಾಗದಲ್ಲಿರಿಸುವ ಜವಾಬ್ದಾರಿ ಇಲ್ಲಿ ಇವರಿಗೆ ದೊರೆತಿರುವುದು ಒಂದು ವಿಶೇಷವಾಗಿದೆ. ಈ ಜಾತ್ರೆಯಲ್ಲಿನ ಇವರ ಈ ಕೆಲಸ ಕಾರ್ಯಗಳು ಇವರ ವೃತ್ತಿ ಪರಂಪರೆಯನ್ನು ಸಂಕೇತಿಸುತ್ತವೆ. ಇದನ್ನು ಹೊರತು ಪಡಿಸಿದಂತೆ ಇವರಲ್ಲಿ ಕೆಲವು ವ್ಯಕ್ತಿಗಳಲ್ಲಿ ಮಾತ್ರ ಪಾರಂಪರಿಕ ವೃತ್ತಿಗಳು ಇಲ್ಲಿ ಕಂಡುಬರುತ್ತವೆ.

ದಿನಾಂಕ ೧೩.೮.೨೦೦೯ರಂದು ಗುರುವಾರ ಸುಬ್ರಮಣ್ಯದ ಹರಿಗುಡಿಗೆ ಕ್ಷೇತ್ರಕಾರ್ಯಕ್ಕೆ ಹೋದಾಗ ಚೆನ್ನಪ್ಪ ಮಲೆಕುಡಿಯ ತಂದೆ ಕೊರಗಪ್ಪ ಮಲೆ ಇವರು ಹಳೆಯ ಮನೆಯಲ್ಲಿ ಬಿದಿರಿನ ಸಣ್ಣ ಬುಟ್ಟಿಗಳನ್ನು ತಯಾರಿಸುತ್ತಿದ್ದಾರೆ. ದೇವಸ್ಥಾನಕ್ಕೆ ದೇವರ ಪೂಜೆಗೆ ಹಣ್ಣುಕಾಯಿ ಹೂವುಗಳನ್ನು ಕೊಂಡುಹೋಗಲು ಬೇಕಾದ ಬಿದಿರಿನ ಸಣ್ಣ ಬುಟ್ಟಿಗಳನ್ನು 'ವಾಟೆ' ಎಂದು ಕರೆಯುತ್ತಾರೆ. ಈ ವಾಟೆಗಳನ್ನು ತಯಾರಿಸಿ, ಅಂಗಡಿಗಳಿಗೆ ಕೊಡುತ್ತೇನೆ. ಅಂಗಡಿಯವರು ಒಂದುವಾಟೆಗೆ ೧.೫೦ ರೂ. ಕೊಡುತ್ತಾರೆ ಎಂದು ಚೆನ್ನಪ್ಪ ಹೇಳಿದ. ಇಲ್ಲಿನ ಕಾಡಿನಿಂದ ಬಿದಿರನ್ನು ತಂದು ದಿನಕ್ಕೆ ೫೦ರಿಂದ ೭೦ ವಾಟೆಗಳನ್ನು ಮಾಡುತ್ತಾನೆ.

ಇದು ಇವರ ಪಾರಂಪರಿಕ ವೃತ್ತಿಯಾಗಿದೆ. ಹರಿಗುಡಿಯ ಗಿರಿಜಾ ಗಂಡ ಬೆಳಿಯಪ್ಪ ಮನೆಯಲ್ಲಿನ ಹೆಣ್ಣು ಮಕ್ಕಳು ತುಂಡು ಬಟ್ಟೆಗಳನ್ನು ಬಳಸಿ "ಕಾರ್ಪೆಟ್"ಗಳನ್ನು ಮಾಡಿರುವುದು ಕಂಡುಬಂದಿತು. ಇದನ್ನು ನಾವು ದಿನಕ್ಕೆ ೧೦-೧೫ ಮಾಡುತ್ತೇವೆ. ನನಗೆ ಒಂದಕ್ಕೆ ೫ ರೂ. ಕೊಡುತ್ತಾರೆ. ಅಂಗಡಿಗೆ ಕೊಡುತ್ತೇವೆ. ಮನೆಯ ಬಾಗಿಲಲ್ಲಿ ಇದನ್ನು ಹಾಕಲು ಬಳಸುತ್ತಾರೆ ಎಂದು ಮಗಳು ತೇಜಾ ಹೇಳಿದಳು. ಏನೇ ಆದರೂ ಇಲ್ಲಿನ ಬಹುತೇಕರು ದೇವಸ್ಥಾನದಲ್ಲಿ ಕೆಲಸ ಖಾಯಂ ಸಿಗುತ್ತದೆ ಎಂಬ ಉದ್ದೇಶದಿಂದಲೇ ದಿನ ಕಳೆಯುತ್ತಿರುವುದು ಇಲ್ಲಿನ ವಿಶೇಷವಾಗಿದೆ.

ಈ ಪ್ರದೇಶಗಳಲ್ಲಿ ನಲೆಸಿರುವ ಮಲೆಕುಡಿಯರು ಕೃಷಿಯನ್ನು ಅವಲಂಬಿಸಿದ್ದಾರೆ. ಇವರಿಗೆ ಬರುವ ಅಲ್ಪಸ್ವಲ್ಪ ಭೂಮಿಯಲ್ಲಿ ಇವರು ತೆಂಗು ಅಡಿಕೆ ಹಾಕಿ ಕೊಂಡಿದ್ದಾರೆ. ಇದರಲ್ಲಿ ಇವರು ಕೃಷಿ ಮಾಡಿಕೊಂಡಿದ್ದಾರೆ. ಇವರು ತೋಟದ ಕೆಲಸ ಇಲ್ಲದೆ ಇರುವಾಗ ಕೂಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಕಂಡು ಬರುತ್ತದೆ. ಇದರ ಜೊತೆಗೆ ನಿರಂತರವಾಗಿ ಉದ್ಯೋಗವನ್ನು ಒದಗಿಸುತ್ತಿರುವುದು ಇಲ್ಲಿನ ಪ್ರಸಿದ್ಧ ಧಾರ್ಮಿಕ ಪುಣ್ಯಕ್ಷೇತ್ರವಾದ ಶ್ರೀಕ್ಷೇತ್ರ ಕುಕ್ಕೆ ಸುಬ್ರಮಣ್ಯ ದೇವಸ್ಥಾನ. ಈ ದೇವಸ್ಥಾನ ನಗರದ ಧಾರ್ಮಿಕ ದತ್ತಿ ಇಲಾಖೆಯ ಅಧೀನದಲ್ಲಿರುವುದರಿಂದ ಇಲ್ಲಿ ಕೆಲಸ ಮಾಡುತ್ತಿರುವವರಿಗೆ ಖಾಯಂ ಆಗಿದೆ ಇನ್ನು ಬಹಳ ಜನರಿಗೆ ಖಾಯಂ ಆಗಬೇಕಾಗಿದೆ. ದೇವಸ್ಥಾನದ ಭದ್ರತಾ ಸಿಬ್ಬಂದಿಗಳಾಗಿ ದುಡಿವವರು ಮಲೆಕುಡಿಯರೇ ಆಗಿದ್ದಾರೆ. ನಾಗೇಶ, ಸುಂದರ, ಎಮ್. ಕೃಷ್ಣಪ್ಪ, ಶಿವಕುಮಾರ ಮುಂತಾದವರು ಈಗಾಗಲೇ ಖಾಯಂ ಆಗಿದ್ದಾರೆ. ಚಿಕ್ಕಮಕ್ಕಳಿಂದ ಗಂಡು-ಹೆಣ್ಣು ಎಲ್ಲರೂ ಒಂದಲ್ಲ ಒಂದು ಕೆಲಸ ಮಾಡಿಕೊಡಿದ್ದಾರೆ. ಇಲ್ಲಿ ಕೆಲಸ ಮಾಡುವವರಿಗೆ ಪುರುಷರಿಗೆ ೧೬೦ ರೂ. ಸ್ತ್ರೀಯರಿಗೆ ೬೦ ರೂ. ದಿನಗೂಲಿಸಿಗುತ್ತದೆ. ಇವರಿಗೆ ಎರಡು ಹೊತ್ತು ಊಟಸಿಗುತ್ತದೆ. ಚಂಪಾ ಷಷ್ಠಿಯಲ್ಲಿ ನಡೆಯುವ ಬ್ರಹ್ಮ ರಥೋತ್ಸವದಲ್ಲಿ ಇವರಿಗೆ ನಿರಂತರ ಕೆಲಸ ಸಿಗುತ್ತದೆ. ಆನೆಯ ಮಾವುತನಾಗಿ, ಆನೆಗೆ ಸೊಪ್ಪು ತರುವವರು, ದೇವಸ್ಥಾನದ ಸ್ವಚ್ಚತೆ, ಅಡಿಗೆ ಸಹಾಯಕರಾಗಿ, ಭೋಜನಾ ಶಾಲೆಯಲ್ಲಿ, ಊಟ ಬಡಿಸುವುದು, ಎಲೆ ಹಾಕುವುದು, ನೀರು ಕೇಳುವುದು ಸೇರಿದಂತೆ ಊಟದ ನಂತರ ಸ್ವಚ್ಚಗೊಳಿಸುವುದರಲ್ಲಿ ಇಲ್ಲಿನ ಮಹಿಳೆಯರು ಕೆಲಸ ಮಾಡುತ್ತಾರೆ. ಚಿಕ್ಕಮಕ್ಕಳು ಸಹ ಊಟದ ಎಲೆ ಸರಬರಾಜು ಮಾಡುತ್ತಿರುತ್ತಾರೆ ಇದನ್ನು ಹೊರತುಪಡಿಸಿದರೆ ಮಕ್ಕಳ ಉದ್ಯೋಗದ ಪ್ರಮಾಣ ವಿರಳವಾಗಿರುವುದು ಕಂಡುಬರುತ್ತದೆ. ದೇವರ ಗದ್ದೆಯ ಪೋಡಿಯರವರು ಕಾಡುತ್ಪತ್ತಿಯ ತುಂಡು ಗುತ್ತಿಗೆದಾರರಾಗಿದ್ದಾನೆ. ಇವರ ಮಗ ಮಾಧವ ರಥಬೀದಿಯಲ್ಲಿ ಫ್ಯಾನ್ಸಿ ಅಂಗಡಿಯನ್ನು ಹಾಕಿದ್ದಾನೆ.

**ಕುಮರಿ ಬೇಸಾಯ ಪದ್ಧತಿ:** ಮಲೆಕುಡಿಯ ಬುಡಕಟ್ಟು ಸಮುದಾಯದ ಪ್ರಧಾನವಾದ ಮೂಲ ವೃತ್ತಿಯೆಂದರೆ ಕುಮರಿ ಬೇಸಾಯ ಪದ್ಧತಿಯಾಗಿದೆ. ಇದು ಅಂದಿನ ಕಾಲದ ಅವಧಿಯ ಕೃಷಿ ಪದ್ಧತಿಯನ್ನು ಸೂಚಿಸುತ್ತದೆ. ಇವರು ವಾಸಮಾಡುತ್ತಿದ್ದ ಇಳಿಜಾರಾದ ಗುಡ್ಡದ ಕಾಡನ್ನು ಕಡಿದು ಬಯಲುಮಾಡಿ ಆ ಬಯಲುಜಾಗದಲ್ಲಿ ನೆಲವನ್ನು ಹದಮಾಡಿ ಭತ್ತದ ಬೆಳೆಯನ್ನು ಬೆಳೆಯುವ ಪದ್ಧತಿಯನ್ನು ಕುಮರಿ ಬೇಸಾಯ ಪದ್ಧತಿ ಎಂದು ಕರೆಯಲಾಗುವುದು. ಆ ಕಾಲದ ಅವಧಿಯಲ್ಲಿ ಕೃಷಿಗೆ ಇವರು ಎತ್ತು ಕೋಣಗಳನ್ನು ಬಳಸದೆ ತಮ್ಮ ಮಾನವ ಶಕ್ತಿಯನ್ನು ಬಳಸಿ ಭೂಮಿಯನ್ನು ಅಗೆತ ಮಾಡುವ ಪದ್ಧತಿಯಾಗಿದೆ. ಇಲ್ಲಿನ ಜೋಗು ನೀರಿನ ಬಸಿತದಿಂದ ಗದ್ದೆ ಕೃಷಿ ಮಾಡುವ ಪರಂಪರೆ ಇವರದ್ದಾಗಿದೆ.

ಡಾ.ಕೆ. ಶಿವರಾಮಕಾರಂತರ ಕುಡಿಯರ ಕೂಸು ಕಾದಂಬರಿಯು ಕಾಡಿನ ಬದುಕಿನಲ್ಲಿ ಲೀನವಾದ ಮಲೆಕುಡಿಯರ ಜೀವನವನ್ನು ಒಳಗೊಂಡ ಒಂದು ಮಹತ್ವದ ಕೃತಿಯಾಗಿದೆ. ಕಾರಂತರ ಈ ಕಾದಂಬರಿಯಲ್ಲಿ ಮಲೆಕುಡಿಯರ ಬೇಸಾಯ ಪದ್ಧತಿಯಾದ 'ಕುಮರಿ ಬೆಳೆ'ಯ ಬಗ್ಗೆ ಉಲ್ಲೇಖವಿದೆ. ಕಾರಂತರು ತಮ್ಮ ಕಾದಂಬರಿಯಲ್ಲಿ ಕಿರಿಮಲೆಯಿಂದ ಕವಲು ಹೊಡೆಯುವ ಒಂದು ಬೆಟ್ಟದ ತಪ್ಪಲಲ್ಲಿ ಕುಮರಿ ಭೂಮಿ ಇದೆ. ಇಲ್ಲಿ ಕುಡಿಯರು ಎಲ್ಲರೂ ಸೇರಿ ಚಳಿಗಾಲ ಕಳೆಯುತ್ತಾರೆ. ಇಲ್ಲಿನ ೨೦ ಎಕರೆ ಕಾಡನ್ನು ಕಡಿದು, ಸವರುತ್ತಾರೆ. ಇಲ್ಲಿನ ಕಾಡನ್ನು ಕಡಿದು ಬಯಲು ಪ್ರದೇಶವನ್ನಾಗಿ ಮಾಡುತ್ತಾರೆ. ಹಿಂದಿನ ಕಾಲದಿಂದಲೂ ಇವರು ಮರದ ಮೊನಚಾದ ಗಟ್ಟಿ ಕೋಲುಗಳಿಂದಲೇ ಇಲ್ಲಿನ ನೆಲವನ್ನು ಅಗೆತ ಮಾಡುತ್ತಾರೆ. ಈ ನೆಲವನ್ನು 'ಕುಮರಿ ನೆಲ' ಎಂದು ಕರೆಯಲಾಗುತ್ತದೆ. ಇಲ್ಲಿನ ಕಾಡನ್ನು ಸುಟ್ಟು ಬರಿದು ಮಾಡಿ, ಅಗೆತ ಮಾಡುತ್ತಾರೆ. ಬಳಿಕ ವಿಶು ಸಂಕ್ರಾಂತಿ ಕಳೆದ ಮೇಲೆ ಕುಮರಿ ಬಿತ್ತನ್ನು ಬಿತ್ತುತ್ತಾರೆ. ಇದರಿಂದ ಮಲೆಕುಡಿಯರು ಕುಮರಿ ಬೆಳೆ ಬೇಸಾಯ ಪದ್ಧತಿಯನ್ನು ಅವಲಂಬಿಸಿರುವುದು ತಿಳಿದುಬರುತ್ತದೆ. ಇವರು ವಿಷು ಸಂಕ್ರಾಂತಿ ಕಳೆದ ಮೇಲೆ ಕುಮರಿಬಿತ್ತನೆ ಮಾಡುವುದರಿಂದ, ಇವರಲ್ಲಿ ವಿಶು ಸಂಕ್ರಾಂತಿಯ ಆಚರಣೆ ಪ್ರಧಾನವಾಗಿರುವುದು ತಿಳಿದುಬರುತ್ತದೆ. ಈ ವಿಷು ಕಳೆದ ನಂತರ ಇವರ ಈ ಕುಮರಿ ಬೆಳೆ ಬೆಳೆಯುತ್ತದೆ. ಬೆಳೆಪಡೆಯುವವರೆಗೆ ಹೊಲವನ್ನು ಕಾಯಬೇಕು. ಬೆಳೆದ ಈ ಪೈರನ್ನು ಆನೆಗಳು ಹಾಳು ಮಾಡುತ್ತವೆ ಈ ಆನೆಗಳಿಂದ ಬೆಳೆಯನ್ನು ಉಳಿಸಿಕೊಳ್ಳಬೇಕು. ಈ ಸಮಯದಲ್ಲಿ ಇಲ್ಲಿ ಮಳೆ ನೀರು ಜಿನಗುತ್ತದೆ. ಜೋಗು ಹರಿಯುತ್ತದೆ. ಈ ಪ್ರದೇಶದ ಕಾಡಿನಲ್ಲಿ ಜಿಗಳೆಗಳೇ ತುಂಬಿರುತ್ತವೆ. ಈ ಜಿಗಳೆಗಳ ಬಗ್ಗೆ ಕಾರಂತರು ತಮ್ಮ ಕಾದಂಬರಿಯಲ್ಲಿ ವಿವರಿಸಿದ್ದಾರೆ. ಮಳೆಗಾಲದಲ್ಲಿನ ಜಿಗಳೆಗಳ ಕಡಿತವನ್ನು ತಪ್ಪಿಸಿಕೊಳ್ಳುವುದು ಕಷ್ಟ. ಇದರಿಂದಾಗಿ ಇವರು ಕುಮರಿಬೆಳೆ ಪ್ರದೇಶದಲ್ಲಿ ಬಿದಿರು ಮತ್ತು ಹುಲ್ಲುಗಳಿಂದ ಬೇರೆ ಮನೆ-ಗುಡಿಸಲು ಕಟ್ಟುತ್ತಾರೆ. ಇದು ತಿಂಗಳು ಅಥವಾ ೨ ತಿಂಗಳು ಇರುತ್ತದೆ. ಬೆಳೆ ಪಡೆಯುವವರೆಗೆ ಈ ಗುಡಿಸಲುಗಳಲ್ಲಿ ಇವರು ವಾಸ ಇದ್ದು ಜಿಗಳೆಗಳ ಕಾಟವನ್ನು ತಪ್ಪಿಸಿಕೊಳ್ಳಲು ಇವರು ಮಾಡಿಕೊಂಡ ರಕ್ಷಣೆಯಾಗಿದೆ. ಅರಣ್ಯದ ಮಧ್ಯದ ಗುಡಿಯಲ್ಲಿ 'ಮಲೆರಾಯ' ಎಂಬ ಗುಡಿ ಇದೆ. ಇದು ಇವರ ಕುಲದೈವವಾಗಿದೆ, ಕುಡಿಯರು ನೇಗಿಲು, ನೊಗ ಕಂಡವರಲ್ಲ ಇವರು ಜಾನುವಾರುಗಳನ್ನು ಸಾಕಿದವರಲ್ಲ, ಮರದಿಂದಲೇ ತಾವೆ ಸ್ವತಃ ತಯಾರಿಸಿದ ಚೂಪಾದ ಮರದ ಕೊನೆಯಿಂದಲೇ ನೆಲವನ್ನು ಅಗೆಯುವ ಕೌಶಲ್ಯತೆ ಇವರಲ್ಲಿ ಕಂಡುಬರುತ್ತದೆ. ಒಮ್ಮೆ ಒಂದು ನೆಲದಲ್ಲಿ ಕುಮರಿಬೆಳೆ ತೆಗೆದರೆ ಮತ್ತೆ ಆ ಪ್ರದೇಶಕ್ಕೆ ಇವರು ತಿರುಗಿ ನೋಡುವುದಿಲ್ಲ. ಅಂದರೆ, ಒಂದು ನಿರ್ದಿಷ್ಟ ಸ್ಥಳದಲ್ಲಿಯೇ ಇವರು ನೆಲೆನಿಂತು ಬೇಸಾಯ ಮಾಡುವ ಪದ್ಧತಿ ಇವರಲ್ಲಿ ಕಂಡುಬರುವುದಿಲ್ಲ ಎಂಬ ಉಲ್ಲೇಖವು ಕುಡಿಯರ ಕೂಸು ಕಾದಂಬರಿಯ ಪುಟ-೧೧ರಲ್ಲಿ ತಿಳಿದುಬರುತ್ತದೆ.[೧]

ಇಲ್ಲಿನ ಭಟ್ಟರು, ಬಂಟರು, ಗೌಡರು, ಒಂದು ನೆಲದಲ್ಲಿ ನಿಂತು ಬೇಸಾಯ ಮಾಡುತ್ತಾರೆ ಆದರೆ ಮಲೆಕುಡಿಯರಲ್ಲಿ ಇಂತಹ ಬೇಸಾಯ ಪದ್ಧತಿ ಕಂಡುಬರುವುದಿಲ್ಲ ಎಂಬ ಅಂಶವನ್ನು ಶಿವರಾಮಕಾರಂತರು ತಮ್ಮ ಕಾದಂಬರಿಯಲ್ಲಿ ತಿಳಿಸಿದ್ದಾರೆ. ಈ ಕಾದಂಬರಿಯಲ್ಲಿ ಮಲೆಕುಡಿಯರ ಕೌಶಲ್ಯತೆಗಳ ಬಗ್ಗೆ ಆಧಾರ ದೊರೆಯುತ್ತದೆ. ಜೇನು ಬೇಟೆಯಲ್ಲಿ ತುಕ್ರನಗೆ ೪-೮ ಆಳು ಎತ್ತರದಲ್ಲಿ ಜೇನು ಕಾಣುತ್ತದೆ. ಈ ಜೇನನ್ನು

ಬಂಡೆಯ ಮೇಲೆ ಏರಿ ಮೇಲಿನಿಂದ ಹಗ್ಗ, ಇಳಿದು ತಾನು ಹಗ್ಗದಲ್ಲಿ ಇಳಿದು ತೂಗಿಕೊಂಡು ಜೇನು ತೆಗೆಯುವ ಸಾಹಸಮಯವಾದ ಈ ಜೇನು ಬೇಟೆಯ ವಿಧಾನದ ವಿವರಣೆಯು ಈ ಸಮುದಾಯದಲ್ಲಿನ ಜೇನು ಬೇಟೆಯ ವೃತ್ತಿ ಕೌಶಲ್ಯತೆಗೆ ಒಂದು ನಿದರ್ಶನವಾಗಿದೆ. ಇವರು ಕುಮರಿ ಬೆಳೆಯನ್ನು ಕಾಯಲು ಕೇರಿಯ ಪ್ರತಿಯೊಬ್ಬರು ಇಲ್ಲಿ ಬಿದಿರು, ಹುಲ್ಲುಗಳಿಂದ ಬೇರೆಬೇರೆ ಕಾವಲು ಗುಡಿಸಲು ಮನೆ ಕಟ್ಟಬೇಕು.ಇದು ಇವರ ವೃತ್ತಿ ಕೌಶಲ್ಯವನ್ನು ಸೂಚಿಸುತ್ತದೆ.

ಹಿ.ಚಿ. ಬೋರಲಿಂಗಯ್ಯರವರ **'ಗಿರಿಜನ ನಾಡಿಗೆ ಪಯಣ'** ಕೃತಿಯಲ್ಲಿ ಪ್ರಕಟಿಸಲಾದ ೧೨ ಲೇಖನಗಳಲ್ಲಿ ನಾಲ್ಕನೇ ಲೇಖನ 'ಚಾರ್ಮಾಡಿಯ ಪಾತಾಳ ಲೋಕ'ದ ಪುಟ ೫೧ರಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದ ಕುಮರಿಬೆಳೆ ಬೇಸಾಯ ಪದ್ದತಿಯನ್ನು ವಿವರಿಸಿದ್ದಾರೆ ಇವರ ಪ್ರಕಾರ 'ಇಳಿಜಾರಾದ ಕಣಿವೆಗಳ ಕಾಡಿಗೆ ಬೆಂಕಿ ಹಾಕಿ ಈ ಜಾಗವನ್ನು ಸುಟ್ಟು ಬಯಲು ಮಾಡಿ, ಈ ಭೂಮಿಯನ್ನು ಚೂಪಾದ ಮರದ ಕೋಲಿನಿಂದ ಅಗೆತ ಮಾಡಿ ಭತ್ತ ಚೆಲ್ಲುವುದು, ಬೆಳೆ ತೆಗೆಯುವುದು 'ಕುಮರಿ ಬೆಳೆಯಾಗಿದೆ'. ಈಗ ಈ ಪ್ರದೇಶ ೧೦ ಸಾವಿರ ಎಕ್ರೆಗೆ ಕೇರಳದ ಮುಸ್ಲಿಂ ಬ್ಯಾರಿ ಉದ್ಯಮಿ ಒಡೆಯನಾಗಿದ್ದಾರೆ. ನೆರೆಯಾದ ೧೦ ಸಾವಿರ ಎಕರೆ ಭೂಮಿ ಹೆಬ್ಬಾರ ಕುಟುಂಬಕ್ಕೆ ಸೇರಿರುವ ಅಂಶವನ್ನು ಇಲ್ಲಿ ಇವರು ಗುರುತಿಸಿರುತ್ತಾರೆ.[೨] ಈಗ ಈ ಕುಮರಿಬೇಸಾಯ ಪದ್ಧತಿ ಮಲೆಕುಡಿಯರಲ್ಲಿ ಕಂಡುಬರುತ್ತಿಲ್ಲ. ಆದರೆ ಆ ಕಾಲದ ಅವಧಿಯಲ್ಲಿ ಕುಮರಿಬೇಸಾಯ ಆರಂಬಿಸುವ ಮೊದಲು ಬಂಜಾರುಮಲೆಯ ಸಮುದಾಯದವರು ಮಾರಿ ಪೂಜೆಯನ್ನು ಮಾಡುವುದರ ಮೂಲಕ ಕುಮರಿಬೇಸಾಯಕ್ಕೆ ಚಾಲನೆ ಕೊಡುತ್ತಿದ್ದರು. ಅದರ ಪ್ರತೀಕವಾಗಿ ಈಗಲೂ ಬಂಜಾರು ಮಲೆಯಲ್ಲಿ ಪ್ರತಿ ವರ್ಷ ಮಾರಿಪೂಜೆ ನಡೆಯುತ್ತದೆ.

ಬಂಜಾರುಮಲೆ, ಅಂಬಟೆಮಲೆ, ಇಳಿಮಲೆ, ನೆರಿಯಾದ ಭೂಪ್ರದೇಶಗಳಲ್ಲಿ ಇವರಿಗೆ ಸರ್ಕಾರ ಈಗಾಗಲೇ ಭೂಮಂಜೂರಾತಿ ಮಾಡಿ ಭೂಮಿಯ ಹಕ್ಕು ನೀಡಿದ ನಂತರ ಇವರು ತಮ್ಮ ಹಿಂದಿನ ಪಾರಂಪರಿಕ ಕುಮರಿ ಬೇಸಾಯ ಪದ್ಧತಿಯನ್ನು ಬಿಟ್ಟು ಈಗಿನ ಸಾವಯವ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ. ಕುಮರಿಬೇಳೆ ಬೇಸಾಯಪದ್ದತಿಯ ಪ್ರತೀಕವಾಗಿ ಬಂಜಾರುಮಲೆಯಲ್ಲಿ ಈಗಲೂ ಪ್ರತಿವರ್ಷ ಮಾರಿಪೂಜೆಯನ್ನು ಆಚರಣೆಮಾಡಿಕೊಂಡು ಬರುತ್ತಿದ್ದಾರೆ. ಇವರಲ್ಲಿ ಈಗಲೂ ಪಾರಂಪರಿಕ ವೃತ್ತಿಗಳು ಕಂಡುಬರುತ್ತದೆ. ಆದರೂ ಇವರ ಕೃಷಿ ಮತ್ತು ಪಶುಸಂಗೋಪನೆ ಇವರ ಈಗಿನ ಪ್ರಧಾನವಾದ ಪಾರಂಪರಿಕ ವೃತ್ತಿಯಾಗಿದೆ. ಇದರ ಜೊತೆಗೆ ಕಾಡುತ್ಪತ್ತಿ ಸಂಗ್ರಹ ಇವರಲ್ಲಿ ಇಂದಿಗೂ ಕಂಡುಬರುತ್ತದೆ. ಆದರೆ ಕಾನೂನಿನ ಪರಿಣಾಮವಾಗಿ ಕಾಡುತ್ಪತ್ತಿ ಸಂಗ್ರಹಕ್ಕೆ ಈಗ ಅಡ್ಡಿಯಾಗಿದೆ. ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ಪಾರಂಪರಿಕ ವೃತ್ತಿಗಳು ಬದಲಾದ ಕಾಲಘಟ್ಟಕ್ಕೆ ಅನುಗುಣವಾಗಿ ಮಾಯ ವಾಗಿರುತ್ತವೆ. ಇವರಿಗೆ ಅರಣ್ಯ ಉತ್ಪನ್ನಗಳ ಸಂಗ್ರಹಕ್ಕೆ ಅವಕಾಶ ಇಲ್ಲದೇ ಇರುವುದರಿಂದ ಇವರು ಈಗ ಗುತ್ತಿಗೆದಾರರ ಅಧೀನದಲ್ಲಿ ಕೆಲಸಗಾರರಾಗಿರಬೇಕಾದ ಸ್ಥಿತಿ ಬಂದಿದೆ. ಅನಾದಿಕಾಲದಿಂದಲೂ ಇವರು ಬದುಕಿ ಬಾಳಿದ ಇವರದೇ ಆದ ನೆಲದಲ್ಲಿನ ಕಾಡುತ್ಪತ್ತಿ ಸಂಪತ್ತಿಗೆ ಇವರು ಹಕ್ಕುದಾರರಾದರೂ ಈಗ ತಮ್ಮ ಮೂಲಹಕ್ಕು ಪ್ರತಿಪಾದಿಸಲು ಆಗದೆ ಅತಂತ್ರರಾಗಿ, ತಮ್ಮ ಮೂಲ ಹಕ್ಕಿನಿಂದ ವಂಚಿತರಾಗಿ ಲ್ಯಾಂಪ್ಸ ಮೂಲಕ ಹರಾಜಿನಿಂದ ಪಡೆದ ಗುತ್ತಿಗೆದಾರರ ಅಧೀನದಲ್ಲಿ ದುಡಿಯುವ ಸ್ಥಿತಿ ಇವರದಾಗಿದೆ.

ಇವರ ಪಾರಂಪರಿಕ ವೃತ್ತಿಗಳಲ್ಲಿ ಕಾಡುತ್ಪತ್ತಿಯು ಸೇರಿದಂತೆ ಜೇನು ಸಂಗ್ರಹಣೆ, ಬಿದಿರು ಬೆತ್ತದ ಬಳಕೆ, ಔಷದೀಯ ಗಿಡಮೂಲಿಕೆಗಳನ್ನು ಬಳಸಲು ಇವರಿಗೆ ಕಾನೂನಿನ ತೊಡಕು ಒಂದು ದೊಡ್ಡ ಸವಾಲಾಗಿದೆ. ಬೆಳ್ತಂಗಡಿ, ಸೂಳ್ಯ, ಲ್ಯಾಂಪ್ಸ್ ಸೊಸೈಟಿಗಳ ಮೂಲಕ ಇವರ ಈ ಕಾಯಕ ಮುಂದುವರಿಯುತ್ತಿದೆ. ದೇವಸ್ಥಾನಗಳ ಅಲಂಕಾರ, ರಥಗಳ ನಿರ್ಮಾಣ ಮತ್ತು ಅಲಂಕಾರಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದ ಇವರು ಇಂದಿಗೂ ತಮ್ಮ ಪಾರಂಪರಿಕ ವೃತ್ತಿಗಳನ್ನು ಇಲ್ಲಿ ಮುಂದುವರಿಸಿಕೊಂಡು ಬಂದಿದ್ದಾರೆ. ಅಂಬಟೆಮಲೆಯ ಮಾವೋರಿರಾಮಣ್ಣ ಪುಂಗಿ ತಯಾರಿಸುವುದರಲ್ಲಿ ಪರಿಣಿತನಾದರೆ, ಶಿಶಿಲದ ವೆಂಕಪ್ಪಮಲೆಕುಡಿಯ ಬೆತ್ತದ ಕುಸರಿ ಕಲೆಯಲ್ಲಿ ರಾಜ್ಯಪ್ರಶಸ್ತಿಯನ್ನು ಪಡೆದಿದ್ದಾರೆ, ಬಿದಿರು ಮತ್ತು ಬೆತ್ತ ಬಳಸಿ ಸುಬ್ರಹ್ಮಣ್ಯದ ಬ್ರಹ್ಮರತೋತ್ಸವ ಕಟ್ಟುವ ಇವರ ಪಾರಂಪರಿಕ ವೃತ್ತಿ, ಇಂದಿಗೂ ಕಂಡುಬರುತ್ತದೆ. ಸುಬ್ರಹ್ಮಣ್ಯದ ಚಿನ್ನಪ್ಪ ಮಲೆ ಈಗಲೂ ದೇವಸ್ಥಾನದ ಪೂಜೆಗೆ ಬೇಕಾದ ಹಣ್ಣು, ಕಾಯಿ ಕೊಂಡೊಯ್ಯುವುದಕ್ಕೆ ಬಿದುರಿನ ಕೈಬುಟ್ಟಿಗಳನ್ನು ತಯಾರಿಸುತ್ತಾ ಬಂದಿದ್ದಾರೆ. ಹಿ.ಚಿ. ಬೋರಲಿಂಗಯ್ಯರವರು ತಮ್ಮ ಗಿರಿಜನ ನಾಡಿಗೆ ಪಯಣದ ಚಾರ್ಮಾಡಿಯ ಪಾತಾಳ ಲೋಕದ ಪು. ೫೦ರಲ್ಲಿ ತಮ್ಮ ಅಂದಿನ ದಿನಗಳ ಪ್ರವಾಸದ ಪರಿಸರ ಸಮೃದ್ಧಿಯನ್ನು ವರ್ಣಿಸುತ್ತ 'ಇಷ್ಟೆಲ್ಲಾ ಸಮೃದ್ಧಿಯನ್ನು ವರ್ಣಿಸಿದೆ ನಿಜ, ಆದರೆ ಇಂಥ ಸ್ವರ್ಗದಲ್ಲಿರುವ ಮಲೆಕುಡಿಯರು ನಿಜವಾಗಲೂ ಸುಖಿಗಳೇ?' ಎಂದು ಪ್ರಶ್ನಿಸಿದ್ದಾರೆ. ಆ ಕಾಲದಲ್ಲಿ ಇವರ ಪ್ರಶ್ನೆ ಇಂದಿಗೂ ಅದೇ ಸ್ಥಿತಿಯನ್ನ ಹೊಂದಿರುವುದು ತುಂಬಾ ಶೋಚನೀಯವಾಗಿದೆ.

ಗುಂಡ್ಯ ತೋಟದಲ್ಲಿ ನೆಲೆಸಿರುವ ಮಲೆಕುಡಿಯರು ಕೃಷಿ, ಕೂಲಿ ಕಾರ್ಮಿಕರು ಮಾತ್ರವಲ್ಲಿ ಕಾಡುತ್ಪತ್ನಗಳ ಸಂಗ್ರಹ ಮೀನು ಹಿಡಿಯುವುದು, ಇಲ್ಲಿನ ಗುಂಡ್ಯ ಡ್ಯಾಂನಲ್ಲಿ ಕೂಲಿಗಳಾಗಿ ಹೋಗುತ್ತಿದ್ದಾರೆ. ಇವರಿಗಿರುವ ಅಲ್ಪ ಸ್ವಲ್ಪ ತೋಟದಲ್ಲಿ ಕೃಷಿ ಕೆಲಸ ಮಾಡಿಕೊಂಡಿದ್ದಾರೆ. ಇವರ ತೋಡದಲ್ಲಿ ಕೆಲಸ ಇಲ್ಲದಿರುವಾಗ ಗುಂಡ್ಯ ಡ್ಯಾಂನಲ್ಲಿ ಕೂಲಿ ಕಾರ್ಮಿಕರಾಗಿ ಹೋಗುತ್ತಿದ್ದಾರೆ. ಡ್ಯಾಂನಲ್ಲಿ ಕೂಲಿ ಕಾರ್ಮಿಕರಾಗಿ ಹೋಗುವ ಗಂಡಸರಿಗೆ ದಿನಕ್ಕೆ ೧೫೦, ಹೆಂಗಸರಿಗೆ ೧೦೦ ರೂಪಾಯಿಗಳ ದಿನಗೂಲಿ ದೊರೆಯುತ್ತದೆ. ಹೆಣ್ಣು ಮಕ್ಕಳು ಮನೆಕೆಲಸದ ಜೊತೆಗೆ ಬೀಡಿ ಕಟ್ಟುವ ಕೆಲಸವನ್ನು ಮಾಡುತ್ತಿದ್ದಾನೆ ಎಂಬುದನ್ನು ಹೊನ್ನಪ್ಪ ಮಲೆಕುಡಿಯ ತಿಳಿಸುತ್ತಾನೆ. ಇಲ್ಲಿನ ಅರಣ್ಯ ಪ್ರದೇಶದಲ್ಲಿ ದೊರೆಯುವ ಕಾಡುತ್ಪತ್ತಿಯಾದ ರಾಮಪತ್ರ ಗೆಡ್ಡೆ, ಸೀಗೆ, ಮಂತೂಳಿ, ಹುಳಿ, ಕೆತ್ತೆ ಹುಳಿ, ಬೀಡಿ ಎಲೆ, ದೂಪದ ಮರಗಳ ಸಂಗ್ರಹವನ್ನು ಮಾಡಿಕೊಂಡು ಬರುತ್ತಾರೆ. ಇದು ಅಲ್ಲದೆ ಇಲ್ಲಿ ಹರಿಯುವ ಹೊಳೆ ಮತ್ತು ಡ್ಯಾಂನಲ್ಲಿ ಮೀನುಹಿಡಿಯುವ ಕೆಲಸ ಮಾಡುತ್ತಿದ್ದಾರೆ. ಲಿಂಗಪ್ಪ ಮಲೆಕುಡಿಯರ ಮನೆಯಲ್ಲಿ ಮೀನು ಹಿಡಿಯುವುದಕ್ಕಾಗಿ ಬಲೆ, ಮುಂಕರಿ, ಬುಟ್ಟಿಗಳಿವೆ. ಕಾಡುತ್ಪತ್ತಿ ಸಂಗ್ರಹ, ಮೀನು ಬೇಟೆ ಇವರ ಪರಾಂಪರಿಕ ವೃತ್ತಿಗಳಾಗಿವೆ.

### ದೇವಾಲಯದಲ್ಲಿ ಊಳಿಗ

ದಕ್ಷಿಣ ಕನ್ನಡ ಜಿಲ್ಲೆಯ ದೇವಾಲಯಗಳು ಮಲೆಕುಡಿಯ ಸಮುದಾಯದವರು ಸೇರಿದಂತೆ ಎಲ್ಲಾ ಜಾತಿ ಜನರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವುದರ ಮೂಲಕ ಇಲ್ಲಿನ ಜನರು ದೇವಾಲಯಕ್ಕೆ ಊಳಿಗ ಸಲ್ಲಿಸುತ್ತಿರುವುದು ಕಂಡುಬರುತ್ತದೆ. ಅಂತೆಯೇ ಮಲೆಕುಡಿಯ ಸಮುದಾಯವು ಸಹ ತಮ್ಮ ಸಮೀಪದ ದೇವಸ್ಥಾನಕ್ಕೆ ಅನಾಧಿ ಕಾಲದಿಂದಲೂ ಊಳಿಗ ಮಾಡುತ್ತಾ ಬಂದಿದ್ದಾರೆ. ಇದು ಇವರ ಪರಂಪರೆಯನ್ನು ಸೂಚಿಸುತ್ತದೆ ಮತ್ತು ಜೀವನದ ಆಧಾರಕ್ಕೆ ಸಹ ಅವಕಾಶ ಕಲ್ಪಿಸಿರುವುದು ಕಂಡುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದವರು ತಮ್ಮ ಸಮೀಪದ ದೇವಸ್ಥಾನಗಳಿಗೆ ಅನಾದಿ ಕಾಲದಿಂದಲೂ ಊಳಿಗ ಮಾಡುತ್ತಾ ಬಂದಿದ್ದಾರೆ. ಇದರ ಹಿನ್ನೆಲೆ ಏನು? ಇದಕ್ಕಿರುವ ಮೂಲ ಆಧಾರಗಳು ಯಾವುವು? ಎಂಬುದನ್ನು ಅಧ್ಯಯನ ಮಾಡಿದಾಗ ಪೊಲಿಕೆನರಾ ೨೦೦, ಸಂಪುಟದ ಪುಟ ೨೬೯-೩೦೨ರಲ್ಲಿ ಡಾ. ವೀರೇಂದ್ರ ಹೆಗ್ಗಡೆಯವರು 'ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು' ಎಂಬ ಲೇಖನದಲ್ಲಿ ಪ್ರತಿಯೊಂದು ಜಾತಿ ಸಮುದಾಯದವರು ದೇವಾಲಯಗಳಿಗೆ ಸೇವೆ ಸಲ್ಲಿಸುತ್ತಿರುವ ಹಿನ್ನೆಲೆಯನ್ನು ಕುರಿತು ವಿವರಿಸಿದ್ದಾರೆ. ಇದರಲ್ಲಿ ಮಲೆಕುಡಿಯರ ಊಳಿಗದ ಉಲ್ಲೇಖವು ಬರುತ್ತದೆ. ಇವರ ಪ್ರಕಾರ 'ದಕ್ಷಿಣ ಭಾರತದ ದೇವಾಲಯಗಳಲ್ಲಿ ಕ್ರಿಶ ೧೮೦೦ರಲ್ಲಿ ತಾಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಸುಮಾರು ೬೦೦ ಜನರು ಉದ್ಯೋಗಗಳು ಇದ್ದರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ(ಪುಟ ೩೦೦, ಪೊಲಿ ೨೦೦). ಅವರನ್ನು "ಕೋಯಿಲ್ ಪರಿವಾರಂಗಳ್" ಎಂದು ಕರೆಯಲಾಗುತ್ತಿತ್ತು. ಮೂರನೇ ಕುಲೋತ್ತುಂಗ ಚೋಳನ ಕಾಲದಲ್ಲಿ ಕ್ರಿ.ಶ. ೧೨೧೩ರ ಶಾಸನದಲ್ಲಿ ಕಾಂಚಿಯ ವರದರಾಜ ಸ್ವಾಮಿಯ ದೇವಾಲಯದಲ್ಲಿ ೨೦೦ ಜನರು ಮಹಿಳೆಯರು ಉದ್ಯೋಗದಲ್ಲಿದ್ದಾರೆಂಬ* ಮಾಹಿತಿ ಇದೆ'. ದೇವಾಲಯದ ವತಿಯಿಂದ ಇವರಿಗೆ ವಾಸಿಸಲು ಮನೆಗಳನ್ನು ಕಟ್ಟಿ ಕೊಟ್ಟಿರುವುದು ತಿಳಿದುಬರುತ್ತದೆ. ಅಂತೆಯೇ ಈಗಲೂ ಸಹ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಮಲೆಕುಡಿಯರಿಗೆ ಇಲ್ಲಿನ ದೇವಾಲಯಗಳು ಉದ್ಯೋಗಾವಕಾಶ ಕಲ್ಪಿಸಿಕೊಡುವುದರ ಮೂಲಕ ಆರ್ಥಿಕ ಸ್ಥಿತಿಗೆ ಆಧಾರವಾಗಿವೆ.

**ದೇವಾಲಯಗಳಲ್ಲಿನ ಊಳಿಗದ ವರ್ಗೀಕರಣ:** ದಕ್ಷಿಣ ಕನ್ನಡದ ಜಿಲ್ಲೆಯ ದೇವಾಲಯಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳನ್ನು ನಾಲ್ಕು ರೀತಿಯಲ್ಲಿ ವರ್ಗೀಕರಿಸಿದ್ದಾರೆ(ಪೊಲಿ ೨೦೦ ಪುಟ. ೩೦೦).** ೧. ವೈದಿಕರು. ೨. ಆಡಳಿತಗಾರರು/ಆಡಳಿತ ಮುಕ್ತೇಸರರು. ೩. ನಿತ್ಯ ಸೇವೆ ಮಾಡುವವರು. ೪. ಸಾಂಧರ್ಬಿಕ ಉದ್ಯೋಗ ಪಡೆಯುವವರು ಎಂದು ನಾಲ್ಕು ಪ್ರಕಾರಗಳನ್ನಾಗಿ ವರ್ಗೀಕರಿಸಿದ್ದಾರೆ. ಈ ನಾಲ್ಕು ವರ್ಗಗಳಲ್ಲಿ ಕೆಲಸ ಮಾಡುವವರು ವಿವಿಧ ಜಾತಿ ಸಮುದಾಯಗಳಿಗೆ ಸೇರಿದವರಾಗಿದ್ದಾರೆ.

**೧. ವೈದಿಕರು:** ವೈದಿಕರಲ್ಲಿ ಅರ್ಚಕರು, ತಂತ್ರಿಗಳು, ಕೀಳ್ ಶಾಂತಿಯವರು, ಮುಟ್ಟು ಶಾಂತಿಯವರು, ಉಪಾಧಿವಂತರು, ಪಾರಕರು, ಘಂಟಾನಾದ ಮಾಡುವವರು ಇತ್ಯಾದಿ ಇದ್ದಾರೆ.

**೨. ಆಡಳಿತಗಾರರು:** ದೇವಾಲಯದ ಆಡಳಿತವನ್ನು ನೋಡಿಕೊಳ್ಳುವವರನ್ನು ಆಡಳಿತ ಮುಕ್ತೇಸರರು ಎಂದು ಕರೆಯಲಾಗಿರುತ್ತದೆ. ಈ ವರ್ಗದಲ್ಲಿ ಮುಕ್ತೇಸರರು ಮಣಗಾರರು, ಪಾರುಪತ್ಯಗಾರರು, ಕೊಠಾರಿಗಳು, ಶ್ಯಾನುಭಾಗರು, ಉಗ್ರಾಣದವರು, ಕಾರ್ಯಂತರು ಅನ್ನದಾನ ಮುಂತಾದ ಥಾನಗಳ ವ್ಯವಸ್ಥಾಪಕರು ಪಹರೆಯವರು ಇತ್ಯಾದಿಗಳಿದ್ದಾರೆ.

**೩. ನಿತ್ಯ ಸೇವೆ ಮಾಡುವವರು:** ದೇವಾಲಯದಲ್ಲಿ ದಿನ ನಿತ್ಯದ ಸೇವೆ ಮಾಡುವವರು ಇದ್ದಾರೆ.

ಊಳಿಗದವರನ್ನು ಇಲ್ಲಿ ಪದಾರ್ಥಿಗಳೆಂದು ಕರೆದಿದ್ದಾರೆ. ವಾದ್ಯದವರು, ಪುರಾಣವಚನ ಮಾಡುವವರು, ಪಂಚಾಂಗ ಶ್ರವಣ ಮಾಡುವವರು, ಉರುಳುಸೇವೆ ಮಾಡುವವರು, ದ್ವಾರಪಾಲಕರು,ದೀಪದ ವ್ಯವಸ್ಥೆ ನೋಡುವವರು, ಬೋಜನಾಲಯದಲ್ಲಿ ಕೆಲಸ ಮಾಡುವವರು, ನಮ್ಮ ಅಧ್ಯಯನದಿಂದ ಗೋಚರವಾಗುವ ಮಾಹಿತಿಯೆಂದರೆ ಮಲೆಕುಡಿಯರು ಉಗ್ರಾಣದ ಸಹಾಯಕರಾಗಿ ಅನ್ನದಾನದ ಸಹಾಯಕರಾಗಿ ವ್ಯವಸ್ಥಾಪಕರ ಸಹಾಯಕರಾಗಿ ಪಹರೆಯವರಾಗಿ ದೇವರ ಉತ್ಸವ ಮೆರವಣಿಗೆ ಸವಾರಿಗಳಲ್ಲಿ ಛತ್ರಿ,

ಧ್ವಜ, ಬಿರುದು ಬಾವಳಿ ಹಿಡಿಯುವವರು, ರಥಕಟ್ಟುವವರು, ರಥ ಎಳೆಯುವವರು, ಉರುಳುಸೇವೆ ಮಾಡುವವರು, ಅಡಿಗೆ ಸಹಾಯಕರಾಗಿ ಅಲಂಕಾರಗೊಳಿಸುವವರು ಚಪ್ಪರ ಹಾಕುವವರು, ಪೂಜೆಗೆ ಬೇಕಾದ ಹೂವು ಇತರೆ ಸಾಮಗ್ರಿಗಳನ್ನು ತಂದು ಕೊಡುವವರು ಮಲೆಕುಡಿಯರೇ ಆಗಿದ್ದಾರೆ. ಇದು ಇವರ ವೃತ್ತಿ ಬದುಕಿನ ಆಧಾರ ಮತ್ತು ಅವಲಂಬನೆಯಾಗಿದೆ.

### ೩.೩. ವೃತ್ತಿ ಕೌಶಲ್ಯ-ಕರಕುಶಲತೆ

ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ಪಾರಂಪರಿಕ ವೃತ್ತಿಗಳಲ್ಲಿ ಕಂಡುಬರುವ ಇವರ ವೃತ್ತಿಕೌಶಲ್ಯ ಮತ್ತು ಕರಕುಶಲತೆ ಈ ಸಮುದಾಯದ ಪಾರಂಪರಿಕತೆಯ ಜೊತೆಗೆ ಇವರ ಜೀವನದ ಆಧಾರ ಮೂಲಗಳನ್ನು ಸೂಚಿಸುತ್ತದೆ.

### ಸುಣ್ಣ ತಯಾರಿಕೆ

ಬಂಜಾರುಮಲೆಯ ಕುಲ ಕಸುಬುಗಳಲ್ಲಿ ಸುಣ್ಣ ತಯಾರಿಕೆಯು ಒಂದು ವೃತ್ತಿಯಾಗಿ ಬಳಕೆಗೆ ಬಂದಿದೆ. ಒಂದೊಂದು ಪ್ರದೇಶದಲ್ಲಿ ಒಂದೊಂದು ಜಾತಿ ಜನಾಂಗ ಸಮುದಾಯದವರು ತಮ್ಮ ಪರಾಂಪರಿಕ ವೃತ್ತಿಯನ್ನಾಗಿ ಮಾಡಿಕೊಂಡು ಬಂದಿದ್ದಾರೆ. ಬಾಂಜಾರುಮಲೆಯ ಮಲೆಕುಡಿಯರು ತಮ್ಮ ಎಲೆಅಡಿಕೆಗೆ ಬೇಕಾಗುವ ಸುಣ್ಣವನ್ನು ತಾವೇ ತಯಾರಿಸಿಕೊಳ್ಳುತ್ತಾರೆ ಬಂಜಾರುಮಲೆಯ ಮಲೆಕುಡಿಯರು ತಮ್ಮ ಪರಿಸರದ ಹೊಳೆಬದಿಯಲ್ಲಿ ಸಿಗುವ ಸಣ್ಣ ಗಾತ್ರದ ಕಪ್ಪೆಚಿಪ್ಪು ಆಕಾರದ ಶಂಖಹುಳು ಇದನ್ನು ಮಲೆಕುಡಿಯರ ತುಳುಭಾಷೆಯಲ್ಲಿ ಚಿಂಬರಕೋಟಿ ಎಂದು ಕರೆಯುತ್ತಾರೆ. ಹೊಳೆಯಲ್ಲಿ ಯಥೇಚ್ಚವಾಗಿ ದೊರೆಯುವ ಇದನ್ನು ಆರಿಸಿ ತಂದು ಬಿಸಿಲಲ್ಲಿ ಒಣಗಿಸಿದಾಗ ಇದರಲ್ಲಿರುವ ಹುಳ ಸತ್ತುಹೋಗುತ್ತದೆ. ನಂತರ ಈ ಶಂಕಾಕೃತಿಯ ಚಿಪ್ಪನ್ನು ಇವರು ಬಾಳೆಎಲೆಯಲ್ಲಿ ಸುತ್ತಿ ಸುಡುತ್ತಾರೆ. ಈ ಚಿಪ್ಪು ಬೆಂಕಿ ಶಾಖಕ್ಕೆ ಸುಟ್ಟು ಊದಿಕೊಳ್ಳುತ್ತದೆ. ನಂತರ ಇದನ್ನು ನುಣೂಪಾದ ಕಲ್ಲಿನಲ್ಲಿ ಅರೆದಾಗ ಸುಣ್ಣ ತಯಾರಾಗುತ್ತದೆ. ನೀರು ಮಿಶ್ರ ಮಾಡಿ ಒಂದು ಡಬ್ಬಿಯಲ್ಲಿ ಸಂಗ್ರಹಿಸಿಕೊಂಡು ದಿನಬಳಕೆಗೆ ಎಲೆ, ಅಡಿಕೆಗೆ ಬೇಕಾದ ಸುಣ್ಣವನ್ನು ಇವರೇ ತಯಾರಿಸಿಕೊಳ್ಳುತ್ತಾರೆ. ಕಾಡುತ್ಪತ್ತಿಯಾದ ರಾಮಪತ್ರೆ ಸಂಗ್ರಹ, ಜೇನು, ದಾಲ್ಚಿನ್ನಿ, ಬಿದಿರು, ಬೆತ್ತ, ಭಯನ ಮರದಿಂದ ಕಳ್ಳು, ಹೆಂಡ ಇಳಿಸುವ, ಏಲಕ್ಕಿ, ಕಾಳುಮೆಣಸು, ಸಂಗ್ರಹಿಸುವ ವೃತ್ತಿ ಈಗಲೂ ಇವರಲ್ಲಿದೆ. ಕಾನೂನು ಅಡೆತಡೆ ನಡುವೆಯೂ ದಿನಾಲು ಇವರಿಗೆ ಬೇಕಾದ ಶೇಂದಿ ಕಳ್ಳನ್ನು ಇವರೇ ತಯಾರಿಸಿಕೋಳ್ಳುತ್ತಾರೆ. ಕೆಲವರು ಪೇಟೆಯಿಂದ ತಂದು ಪ್ರತಿನಿತ್ಯ ಸೇವಿಸುವ ರೂಢಿ ಇವರಲ್ಲಿ ಕಂಡುಬರುತ್ತದೆ.

### ಮುಳಿಹುಲ್ಲಿನ ಮನೆ

ದಕ್ಷಿಣಕನ್ನಡ ಜಿಲ್ಲೆಯ ಗ್ರಾಮೀಣ ಪರಿಸರ ಮತ್ತು ಮಲೆಕುಡಿಯ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುವ ತುಂಬಾ ಹಳೆಯದಾದ ಕೌಶಲ್ಯವೆಂದರೆ ಮುಳಿ ಹುಲ್ಲಿನ ಮನೆ ನಿರ್ಮಾಣ. ಮುಳಿಹುಲ್ಲು ಹೊದಿಕೆ ಎಂದಾಕ್ಷಣ ನಮಗೆ ಇಂದಿನ ಕಾಂಕ್ರೇಟ್ ನಾಡಿನ ಮದ್ಯ ತಲೆಯೆತ್ತಿರುವ ರೆಸಾರ್ಟಗಳಲ್ಲಿ ಮುಳಿಹುಲ್ಲಿನ ಹೊದಿಕೆ ಕಂಡುಬರುತ್ತದೆ. ನಾವು ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗ ಗೊಳಿತಟ್ಟು ಆಲಂತಾಯ, ಧರ್ಮಸ್ಥಳ, ಕೊಕ್ಕಡ, ಹತ್ಯಡ್ಕ, ಗುಂಡ್ಯತೋಟ, ಸುಲ್ಕೇರಿ, ಪಾಣಾಜೆಗಳಲ್ಲಿ ಈ ಮುಳಿಹುಲ್ಲಿನ

ಹೊದಿಕೆಯ ಗುಡಿಸಲುಗಳು ಕಂಡುಬರುತ್ತವೆ. ಈ ಗುಡಿಸಲುಗಳನ್ನು ಇವರೇ ಸ್ವತಃ ನಿರ್ಮಿಸಿಕೊಳ್ಳುವುದ ವೃತ್ತಿ ಕೌಶಲ್ಯವಾಗಿದೆ.ಕಾಡಿನಲ್ಲಿ ಬೆಳೆಯುವ ಈ ಮುಳಿಹುಲ್ಲನ್ನು ತಂದು ದಾಸ್ತಾನು ಮಾಡಿಕೊಂಡು ತಮ್ಮ ತಮ್ಮ ಮನೆಗಳಿಗೆ ಹೊದಿಸುತ್ತಾರೆ ಇದು ಮಳೆಗಾಲಕ್ಕೂ ಮತ್ತು ಬೇಸಿಗೆ ಕಾಲಕ್ಕೂ ರಕ್ಷಣೆಯನ್ನು ಹೊದಗಿಸುತ್ತದೆ. ದೀಪಾವಳಿ ಮುಗಿದು ತಿಂಗಳು ಕಳೆಯುವ ಮುನ್ನ ಗುಡ್ಡದಿಂದ ಈ ಹುಲ್ಲನ್ನು ಕೊಯ್ದು ಬಂಡೆಕಲ್ಲಿನ ಮೇಲೆ ಒಣಗಿಸಿ ಏಪ್ರಿಲ್ ಮೇ ತಿಂಗಳಲ್ಲಿ ಮಳೆ ಪ್ರಾರಂಭವಾಗುವ ಮೊದಲೆ ತಮ್ಮ ಜೋಪಡಿ, ಗುಡಿಸಲುಗಳಿಗೆ ಹೊದಿಸುವ ಇವರ ವೃತ್ತಿ ಕೌಶಲ್ಯ ಎಂತವರನ್ನು ಬೆರಗಾಗಿಸುತ್ತದೆ. ಮುಳಿಹುಲ್ಲು ಕೊಯ್ದು ಬಳಿಕ ಆ ಗುಡ್ಡಕ್ಕೆ ಬೆಂಕಿ ಕೊಟ್ಟು ಸುಡುತ್ತಾರೆ. ಇದರ ಉದ್ದೇಶ ಮುಂದಿನ ವರ್ಷ ಈ ಹುಲ್ಲು ಸಮೃದ್ಧವಾಗಿ ಬೆಳೆಯಲಿ ಎಂಬುದ ಇವರ ಉದ್ದೇಶ ಚಾವಣಿ ಹೊದಿಸುವ ದಿನ ಅವರವರ ಮನೆಯಲ್ಲಿ ಹಬ್ಬದ ವಾತಾವರಣ ನಿರ್ಮಾಣವಾಗಿರುತ್ತದೆ.ಮನೆಯವರೆಲ್ಲಾ ಸೇರಿ ಹೊದಿಕೆ ಹೊದಿಸಲು ನರತರಾಗಿರುತ್ತಾರೆ. ಸಿಹಿ ಪಾಯಸ ನೀಡಿ ಸಂತೋಷಪಡುತ್ತಾರೆ. ಈ ಹುಲ್ಲು ಮಳೆಗೆ ರಕ್ಷಣೆ ಒದಗಿಸುತ್ತದೆ ಬೇಸಿಗೆಗೆ ತಂಪಾಗಿಸುತ್ತದೆ.ಇದು ಪ್ರತಿವರ್ಷ ನಡೆಯುವ ಕ್ರಿಯೆ ಕನಿಷ್ಠ ಮೂರು ವರ್ಷಗಳಿಗೊಮ್ಮೆಯಾದರೂ ಈ ಹುಲ್ಲನ್ನು ತೆಗೆದು ಹೊಸ ಹುಲ್ಲನ್ನು ಹಾಕುವಂತಹ ಕೆಲಸ ನಡೆಯುತ್ತದೆ. ಈ ಮುಳಿಹುಲ್ಲಿನ ಮನೆ ತಯಾರಿಕೆಯಲ್ಲಿ ಮಲೆಕುಡಿಯರು ಪರಿಣಿತಿಯನ್ನು ಹೊಂದಿದ್ದಾರೆ.

### ಸುಬ್ರಹ್ಮಣ್ಯದ ಬ್ರಹ್ಮರಥದ ನಿರ್ಮಾಣ ಮತ್ತು ಅಲಂಕಾರದ ಊಳಿಗ

ಸುಳ್ಯ ತಾಲ್ಲೂಕಿನ ಪ್ರಸಿದ್ಧ ಧಾರ್ಮಿಕ ಯಾತ್ರಾ ಸ್ಥಳವಾದ ಶ್ರೀ ಕ್ಷೇತ್ರ ಕುಕ್ಕೆ ಸುಬ್ರಮಣ್ಯ ವಾರ್ಷಿಕ ಜಾತ್ರೆ ಬ್ರಹ್ಮರಥ, ಪಂಚಮಿ ರಥ ಮತ್ತು ಗುರ್ಜಿ ರಥದ ನಿರ್ಮಾಣ ಮಾಡುವ ಜವಾಬ್ದಾರಿ ಇಲ್ಲಿನ ಮೂಲ ನಿವಾಸಿಗಳಾದ ಮಲೆಕುಡಿಯ ಬುಡಕಟ್ಟು ಸಮುದಾಯದವರಾಗಿದ್ದಾರೆ. ಅನಾದಿಕಾಲದಿಂದಲೂ ಪಾರಂಪರಿಕವಾಗಿ ಮುಂದುವರೆಸಿಕೊಂಡು ಬಂದಿರುವ ಇವರ ಈ ವೃತ್ತಿ ಕೌಶಲ್ಯ ಇವರ ಪರಂಪರೆಯನ್ನು ಸೂಚಿಸುತ್ತದೆ. ಕಾಡಿನಿಂದ ಬಿದುರಿನ ಬೆತ್ತವನ್ನು ತಂದು ಈ ರಥಗಳನ್ನು ನಿರ್ಮಿಸುವ ಜವಾಬ್ದಾರಿ ಇವರದ್ದಾಗಿದೆ. ಇಡೀ ರಥವನ್ನು ಹಗ್ಗವನ್ನು ಬಳಸದೇ ಬಿದುರಿನ ಬೆತ್ತವನ್ನು ಮಾತ್ರ ಬಳಸಿ ನಿರ್ಮಿಸುತ್ತಾರೆ. ಮತ್ತು ಇದಕ್ಕೆ ಅಲಂಕಾರಿಕ ಬಣ್ಣದ ಪತಾಕೆ ಬಾವುಟಗಳನ್ನು ಮತ್ತು ಬಾಳೆ, ಅಡಿಕೆ ಮತ್ತು ಹೂಗಳಿಂದ ಅಲಂಕರಿಸುತ್ತಾರೆ. ಬ್ರಹ್ಮ ರಥ ಮತ್ತು ಪಂಚಮಿ ರಥವನ್ನು ಎಳೆಯಲು ಸಹ ಬಿದುರಿನ ಬೆತ್ತವನ್ನೇ ಅಳವಡಿಸುವುದು ಇವರ ವೃತ್ತಿ ಕೌಶಲ್ಯ ಮತ್ತು ಪರಿಣತಿಯನ್ನು ಸೂಚಿಸುತ್ತದೆ.

### ಸುಬ್ರಹ್ಮಣ್ಯದ ಗುರ್ಜಿ ರಥ ನಿರ್ಮಾಣದ ವೃತ್ತಿಕೌಶಲ್ಯ

ಸಾಮಾನ್ಯವಾಗಿ ರಥೋತ್ಸವ ಎಂದರೆ ನಮ್ಮ ಕಲ್ಪನೆಗೆ ಬರುವುದು ಚಕ್ರವನ್ನು ಹೊಂದಿರುವ ಅಲಂಕಾರಿಕ ರಥವಾಗಿರುತ್ತದೆ. ಆದರೆ ಇಲ್ಲಿನ ಗುರ್ಜಿ ರಥದ ಕಲ್ಪನೆಯಲ್ಲಿ ರಥ ಎಂಬ ಪದ ಬಳಕೆಯಾಗಿರುತ್ತದೆ. ನಮಗೆ ಮೇಲಿನ ಭಾಗದಿಂದ ಕೆಳಗೆ ನೋಡುತ್ತಾ ಬಂದರೆ ರಥಕ್ಕೆ ಬೇಕಾದ ಮೇಲಿನ ಕಳಶ, ಗುಮ್ಮಟ ವಿವಿಧ ಬಣ್ಣಗಳಿಂದ ಅಲಂಕೃತವಾದ ಗೋಳಾಕಾರದ ಹಳದಿ ಕೆಂಪು ಬಣ್ಣದ ಬಾವುಟ, ಪತಾಕೆ, ಬಣ್ಣ ಬಣ್ಣದ ಹೂವಿನ ಅಲಂಕಾರ, ಬಾಳೆ, ತೆಂಗು, ಅಡಿಕೆ, ಎಲಕ್ಕಿ ಇನ್ನಿತರ ಆಕರ್ಷಕ ಅಲಂಕಾರ ಈ ರಥಕ್ಕೆ ಇರುತ್ತದೆ. ಈ ರಥದಲ್ಲಿ ದೇವರು ಕುಳಿತುಕೊಳ್ಳುವುದಕ್ಕೆ ಉತ್ಸವ

ಪೀಠವು ಸಹ ಇರುತ್ತದೆ. ಆದರೆ ಈ ರಥ ಮಾತ್ರ ಚಲಿಸುವುದಿಲ್ಲ. ಇದಕ್ಕೆ ಚಲಿಸಲು ಬೇಕಾದ ಚಕ್ರಗಳಿರುವುದಿಲ್ಲ. ಇದರ ಹೆಸರು ಮಾತ್ರ ಗುರ್ಜಿ ರಥ. ಆದರೆ ಇದು ಚಕ್ರಗಳೇ ಇಲ್ಲದ, ಚಲಿಸಲು ಬಾರದ ಇದ್ದಲ್ಲೇ ಆಕರ್ಷಕವಾಗಿ ಅಲಂಕೃತಗೊಂಡ ರಥವಾಗಿದೆ. ಇಲ್ಲಿನ ಕಾಶಿಕಟ್ಟೆಯ ದೊಡ್ಡದಾದ ಅಶ್ವತ್ತ ಕಟ್ಟೆಗೆ ಮಲೆಕುಡಿಯ ಜನಾಂಗದವರು ದೊಡ್ಡದಾದ ಮರದ ಕಂಬಗಳನ್ನು ಕಟ್ಟೆಗೆ ಕಟ್ಟಿ ಕೇವಲ ಬಿದಿರಿನ ಬೆತ್ತ ಮಾತ್ರ ಬಳಸಿ ತಮ್ಮದೇ ಆದ ವಿಶೇಷ ಶೈಲಿಯಲ್ಲಿ ಈ ರಥವನ್ನು ನಿರ್ಮಿಸುತ್ತಾರೆ. ಕಾರ್ತೀಕ ಬಹುಳ ೩ರಂದು ರಾತ್ರಿ ದೇವರ ಮಹಾಪೂಜೆಯ ಬಳಿಕ ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಹೊರಾಂಗಣದಲ್ಲಿ ಬಲಿ ಉತ್ಸವ ನಡೆದ ನಂತರ ರಥಬೀದಿಯಲ್ಲಿ ಶೃಂಗಾರಗೊಂಡ ಚಂದ್ರಮಂಡಲ ರಥದಲ್ಲಿ ಉತ್ಸವ ಮೂರ್ತಿಯನ್ನು ಕೂರಿಸಿ ಕಾಶಿಕಟ್ಟೆಯವರೆಗೆ ರಥೋತ್ಸವ ನಡೆಯುತ್ತದೆ. ಈ ದೇವರಿಗೆ ಸಂಬಂಧಿಸಿದ ಹೊಸಳಿಗಮ್ಮ, ಸಂಬಂಧಿಸಿದ ಕೋಲ, ಪುರುಷರಾಯ, ಪಂಜುರ್ಲಿ, ಪಾಷಾಣ ಮೂರ್ತಿಗಳ ಸೇವೆ ನಡೆಯುತ್ತದೆ. ಈ ಉತ್ಸವದಲ್ಲಿ ರಥ ಎಳೆಯುವಾಗ ಅಲ್ಲದೆ ಉತ್ಸವದ ಪೀಠ, ಛತ್ರಿ, ಚಾಮರ, ಭಜಂತ್ರಿಗಳನ್ನು ಹೊತ್ತು ಸಾಗುವವರು ಮಲೆಕುಡಿಯರಾಗಿದ್ದಾರೆ. ಯವುದೇ ರಥಕ್ಕಾದರೂ ಚಕ್ರಗಳಿರುತ್ತವೆ. ಆದರೆ ಮಲೆಕುಡಿಯರಿಂದ ಇಲ್ಲಿ ತಯಾರಿಸಲ್ಪಡುವ ಗುರ್ಜಿರಥಕ್ಕೆ ಚಕ್ರಗಳೇ ಇರುವುದಿಲ್ಲ. ಇದು ಇಲ್ಲಿನ ವಿಶೇಷ ಆಕರ್ಷಣೆಯಾಗಿದೆ. ಇದು ಮಲೆಕುಡಿಯ ಸಮುದಾಯದ ವಿಶಿಷ್ಟ ವೃತ್ತಿ ಕೌಶಲ್ಯವನ್ನು ಪ್ರತಿನಿಧಿಸುತ್ತದೆ.

### ಪುತ್ತೂರಿನ ಬ್ರಹ್ಮರಥದ ಅಲಂಕಾರದ ಕೌಶಲ್ಯ

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನ ಸೀಮೆಯ ಆರಾಧ್ಯ ದೈವ ಶ್ರೀಮಹಾಲಿಂಗೇಶ್ವರ ದೇವರ ವಾರ್ಷಿಕ ಜಾತ್ರೆ ಪ್ರತಿ ವರ್ಷ ನಡೆಯುತ್ತದೆ. ಈ ಜಾತ್ರೆಗೆ ಬ್ರಹ್ಮರಥ ಇರಲಿಲ್ಲ. ಈ ದೇವರ ಪರಮ ಭಕ್ತರಾದ ಪುತ್ತೂರಿನ ಉದ್ಯಮಗಳಾದ ಮುತ್ತಪ್ಪ ರೈರವರು ದಕ್ಷಿಣ ಭಾರತದಲ್ಲೇ ಅತ್ಯಂತ ಎತ್ತರದ ಒಂದು ಕೋಟಿ ರೂಗಳ ವೆಚ್ಚದಲ್ಲಿ ಈ ಬ್ರಹ್ಮರಥವನ್ನು ನಿರ್ಮಿಸಿ ದೇವರಿಗೆ ಸಮರ್ಪಿಸಿರುತ್ತಾರೆ. ನೆಲದಿಂದ ೭೧ ಅಡಿಗಳಷ್ಟು ಎತ್ತರವಾಗಿರುವ ಈ ಬ್ರಹ್ಮರಥವು ಇತರ ರಥಗಳಿಗಿಂತ ಭಿನ್ನ ಎನಿಸುತ್ತದೆ. ಮರ, ಬಿದುರು ಇಲ್ಲವೇ ಬೆತ್ತವನ್ನು ಬಳಸದೆ ರಥದ ಮೇಲಿನ ಭಾಗದ ನಿರ್ಮಾಣಕ್ಕೆ ಕಬ್ಬಿಣದ ಪೈಪ್‌ಗಳನ್ನು ಬಳಸಲಾಗಿದೆ. ೪೬ ಅಡಿ ಎತ್ತರದ ನಾಲ್ಕು ಕಬ್ಬಿಣದ ಪೈಪ್‌ಗಳಿಗೆ ಇತರ ಕಬ್ಬಿಣದ ಸಲಾಕೆಗಳನ್ನು ಬಳಸಿರುವುದು ಸೇರಿದಂತೆ ಒಟ್ಟು ೪.೫ ಟನ್ ಕಬ್ಬಿಣವನ್ನು ಬಳಸಿ ರಥದ ಮೇಲಿನ ಭಾಗವನ್ನು ನಿರ್ಮಾಣ ಮಾಡಿದ್ದಾರೆ. ಹೆಬ್ರಿಯ ಮುತ್ತು ಕುಲಾಲ್ ನೇತೃತ್ವದ ತಂಡ ಈ ಭಾಗದ ನಿರ್ಮಾಣದ ಜವಬ್ದಾರಿಯನ್ನು ನಿರ್ವಹಿಸಿದ್ದಾರೆ.

ಇದರ ನಂತರದ ಹಂತ ಇದಕ್ಕೆ ಐದಾರು ಅಡಿಯಿಂದ ಎಂಟು ಅಡಿವರೆಗೆ ಬೆತ್ತದ ಕಡ್ಡಿಗಳಿಗೆ ಬಿಳಿ ಕೆಂಪು ಹಳದಿ ಬಾವುಟಗಳ ಪತಾಕೆಗಳನ್ನು ಬಳಸಿ ಗೋಳಾಕಾರದ ರಥವನ್ನು ಸಿದ್ಧಗೊಳಿಸುವ ಹೊಣೆಗಾರಿಕೆಯನ್ನು ಸುಬ್ರಹ್ಮಣ್ಯ ಮಲೆಕುಡಿಯ ಬುಡಕಟ್ಟು ಸಮುದಾಯದವರಿಗೆ ವಹಿಸಿರುತ್ತಾರೆ. ಈಗಾಗಲೇ ಕುಕ್ಕೆ ಸುಬ್ರಹ್ಮಣ್ಯದ ಪ್ರಸಿದ್ಧ ರಥವನ್ನು ಕಟ್ಟುವಲ್ಲಿ ನುರಿತಿರುವ ಇವರು ಈಗ ಪುತ್ತೂರಿನ ಶ್ರೀ ಮಹಾಲಿಂಗೇಶ್ವರ ದೇವರ ಬ್ರಹ್ಮರಥದ ನಿರ್ಮಾಣಕ್ಕೆ ಪ್ರತಿ ವರ್ಷ ಬಂದು ಹೋಗುತ್ತಾರೆ. ಈ ರಥಕ್ಕೆ

ಬೇಕಾದ ಉದ್ದವಾದ ಬೆತ್ತದ ಕಟ್ಟುಗಳನ್ನು ಸುಬ್ರಹ್ಮಣ್ಯದ ಅರಣ್ಯದಿಂದ ಇವರೇ ಸಿದ್ದಪಡಿಸಿ ಪುತ್ತೂರಿಗೆ ತರುತ್ತಾರೆ. ಬಾಬು ಮಲೆಕುಡಿಯ ನೇತೃತ್ವದ ಹತ್ತು ಜನರ ತಂಡ ಹತ್ತು ದಿನಗಳವರೆಗೆ ಕೆಲಸ ಮಾಡಿ ಈ ರಥವನ್ನು ಅಲಂಕರಿಸುತ್ತಾರೆ. ಇವರಿಗೆ ಪ್ರತಿದಿನ ೨೦೦ ರೂನಂತೆ ದಿನಕೂಲಿ ನೀಡಲಾಗುತ್ತದೆ. ಊಟ, ವಸತಿ ಸೌಲಭ್ಯವನ್ನು ಇಲ್ಲಿ ಕಲ್ಪಿಸುತ್ತಾರೆ. ರಥವನ್ನು ಕಟ್ಟುವುದು ಮತ್ತು ರಥೋತ್ಸವದ ನಂತರ ಬಿಚ್ಚುವುದು ಸಹ ನಮ್ಮ ಕೆಲಸವಾಗಿದೆ ಎಂದು ಬಾಬು ಹೇಳುತ್ತಾರೆ. ಇದು ಆಯಾ ಕಾಲಾಮಾನದಲ್ಲಿ ನಡೆಯುವ ಉತ್ಸವ, ಜಾತ್ರೆ ಮತ್ತು ಆರಾಧನೆಗಳಿಗೆ ಸೀಮಿತವಾಗಿರುತ್ತದೆ. ಕೊಕ್ಕಡ ದೇವಸ್ಥಾನದ ಭೂಮಿಗಳನ್ನು ಉಂಬಳಿಯಾಗಿ ಪಡೆದುದರ ಪ್ರತೀಕವಾಗಿ ಇಲ್ಲಿ ನಡೆಯುವ ಜಾತ್ರೆ, ಕೋರಿ ಉತ್ಸವಕ್ಕೆ ಊಳಿಗ ಮಾಡುತ್ತಾರೆ. ಸುಬ್ರಹ್ಮಣ್ಯ ಧರ್ಮಸ್ಥಳದಲ್ಲಿ ಆಯಾ ಸಮಯದಲ್ಲಿ ಮಾತ್ರ ಇತರೆ ದಿನಗಳಿಗಿಂತ ಕಡಿಮೆ ಸಂಭಾವನೆಯನ್ನು ಪಡೆಯುತ್ತಿದ್ದಾರೆ.

**ಕೋಷ್ಟಕ ೩.೩(೩)**

**ಪುತ್ತೂರಿನ ಬ್ರಹ್ಮರಥದ ಅಲಂಕಾರಕ್ಕೆ ಬಂದ ಸುಬ್ರಹ್ಮಣ್ಯದ ಮಲೆಕುಡಿಯರ ತಂಡ**

| ಕ್ರಸಂ | ಹೆಸರು | ವಯಸ್ಸು | ಸ್ಥಳ |
|---|---|---|---|
| ೧ | ಬಾಬು.ಎ. | ೪೯ | ಅರಿಗುಡಿ ಮನೆ |
| ೨ | ಬಾಸ್ಕರ.ಎ | ೨೨ | ಅರಿಗುಡಿ ಸುಬ್ರಹ್ಮಣ್ಯ |
| ೩ | ಕುಮಾರ | ೨೫ | ಅರಿಗುಡಿ ಸುಬ್ರಹ್ಮಣ್ಯ |
| ೪ | ಉಮೇಶ | ೨೪ | ಕಲ್ಲುಗುಡ್ಡೆ |
| ೫ | ರಮೇಶ | ೨೭ | ಧರ್ಮಸ್ಥಳ ಸುಬ್ರಹ್ಮಣ್ಯ |
| ೬ | ತಿಮ್ಮಪ್ಪ | ೨೪ | ಅರಿಗುಡಿ ಸುಬ್ರಹ್ಮಣ್ಯ |
| ೭ | ಅಶೋಕ್ | ೨೭ | ಕಲ್ಕುಂದ ಕಾಲೋನಿ ಸುಬ್ರಹ್ಮಣ್ಯ |
| ೮ | ರೋಹಿತಾಕ್ಷ | ೨೧ | ಕಲ್ಕುಂದ ಕಾಲೋನಿ ಸುಬ್ರಹ್ಮಣ್ಯ |
| ೯ | ಹರೀಶ್ | ೨೫ | ದೇವರಗದ್ದೆ ಮನೆ |
| ೧೦ | ಮಾಧವ | ೨೨ | ಅರಿಗುಡಿ ಸುಬ್ರಹ್ಮಣ್ಯ |

ಸುಬ್ರಹ್ಮಣ್ಯದ ಕಾಡಿನಲ್ಲಿ ಎತ್ತರವಾಗಿ ಬೆಳೆದ ಮುಳ್ಳು ಬಿದಿರನ್ನು ಕಡಿದು ತಂದು ಅದನ್ನು ಉದ್ದಕ್ಕೆ ಹೋಳು ಮಾಡಿ ಅದನ್ನು ಸವರಿ ಸ್ವಚ್ಚಗೊಳಿಸಿದ ನಂತರ ಇದನ್ನು ರಥದ ಸುತ್ತ ಗೋಳಾಕಾರ

ಮಾಡಲು ಬಳಸುತ್ತಾರೆ. ರಥಕ್ಕೆ ಬಿಳಿ ಮತ್ತು ಕೆಂಪು ಬಣ್ಣದ ಪತಾಕೆ ಬಣ್ಣ ಬಾವುಟಗಳನ್ನು ಕಟ್ಟಲು 'ವಾಟೆ' ಜಾತಿಯ ಒಂದು ಕೈಬೆರಳು ಗಾತ್ರದ ೫-೬ ಅಡಿ ಉದ್ದದ ದುಂಡಾದ ಬೆತ್ತವನ್ನು ಕಾಡಿನಿಂದ ಕಡಿದು ತರುತ್ತಾರೆ. ಇದನ್ನು ಸಹ ಒಂದೇ ರೀತಿಯಲ್ಲಿ ಅಳತೆಗೆ ತಕ್ಕಂತೆ ತುಂಡು ಮಾಡಿ ಇದರ ಎರಡು ಕಡೆ ಕತ್ತಿಯಿಂದ ಮೊನಚಾಗಿ ಸಿದ್ದ ಮಾಡಿಕೊಂಡು ಅದನ್ನು ಬ್ರಹ್ಮರಥದ ಸುತ್ತ ರಥಕ್ಕೆ ಕಟ್ಟುತ್ತಾರೆ. ಇದನ್ನು ಬಿಗಿಗೊಳಿಸಲು ಇವರು ಹಗ್ಗವನ್ನೇ ಬಳಸುವುದಿಲ್ಲ. ಹಗ್ಗಕ್ಕೆ ಬದಲಾಗಿ ತೆಳುವಾದ ಬೆತ್ತವನ್ನು ಹಗ್ಗದ ರೂಪದಲ್ಲಿ ಬಿಗಿದು ಭದ್ರ ಮಾಡುತ್ತಾರೆ. ಒಂದು ರಥಕ್ಕೆ ಏನಿಲ್ಲಾ ಅಂದರೂ ಇಂತಹ ಎಂಟು ಸಾವಿರ ಕಟ್ಟಿಗೆಗಳಿಗೆ ಬಾವುಟ ಬೇಕಾಗುತ್ತದೆ. ಈ ಕಟ್ಟಿಗೆ ಒಂದು ಕಡೆ ಬುಡವನ್ನು ರಥಕ್ಕೆ ಕಟ್ಟುತ್ತಾರೆ. ಇದರ ಇನ್ನೊಂದು ತುದಿಗೆ ಬಟ್ಟೆಯ ಬಾವುಟವನ್ನು ಸಿಕ್ಕಿಸಿರುತ್ತಾರೆ. ಇದರ ಜೊತೆಗೆ ಹಸಿರು ಹೊರೆ ಕಾಣಿಕೆಯಿಂದ ಬಂದ ಬಾಳೆ, ತೆಂಗು, ಅಡಿಕೆ, ಮಾವು ಮತ್ತು ಹೂವುನ್ನು ಬಳಸಿ ರಥವನ್ನು ಅಲಂಕರಿಸಿರುತ್ತಾರೆ. ಈ ರಥದ ಅಲಂಕಾರ ರಥೋತ್ಸವದ ವೇಳೆಗೆ ನೋಡಿದಾಗ ತುಂಬಾ ಆಕರ್ಷಕವಾಗಿರುತ್ತದೆ. ಇವರ ಈ ಸಾಂಪ್ರಾದಾಯಿಕ ಕೌಶಲ್ಯತೆಯನ್ನಾಧರಿಸಿದ ಕೆಲಸ ಈ ಸಮುದಾಯದ ಪರಂಪರೆಯನ್ನು ಸಂಕೇತಿಸುತ್ತದೆ. ಈ ಕೌಶಲ್ಯ ಹಿಂದಿನ ಕಾಲದಿಂದಲೂ ಬಂದದ್ದಾಗಿದೆ. ರಥ ನಿರ್ಮಾಣದ ಈ ಕೆಲಸದಲ್ಲಿ ಅನುಬವಸ್ತರು ರಥದ ಕೆಳಗಿದ್ದು ಸಿದ್ಧಮಾಡಿ ಮಾರ್ಗದರ್ಶನ ಮಾಡುತ್ತಾರೆ.ಯುವಕರು ರಥದ ತತ್ತ ತುದಿ ಕಳಸದವರೆಗೆ ಏರಿ ರಥ ನಿರ್ಮಾಣ ಮತ್ತು ಅಲಂಕಾರ ಕೆಲಸವನ್ನು ಮಾಡುತ್ತಾರೆ ಇದು ಇವರ ಪಾರಂಪರಿಕ ವೃತ್ತಿ ಕೌಶಲ್ಯವನ್ನು ಪ್ರತಿನಿದಿಸುತ್ತದೆ. ಇದು ಇವರ ಕೌಟುಂಬಿಕ ಆರ್ಥಿಕ ಸಂಪಾದನೆಯ ಮೂಲವಾಗಿದೆ ಮತ್ತು ಇವರ ಆರ್ಥಿಕ ಬದುಕಿನ ಅವಲಂಬನೆಯಾಗಿದೆ.

**ಕೊಕ್ಕಡದ ರಥಕಟ್ಟುವುದು**

ಕೊಕ್ಕಡದ ಪರಿಸರದಲ್ಲಿ ವಾಸವಾಗಿರುವ ಮಲೆಕುಡಿಯರು ಕೊಕ್ಕಡದ ಶ್ರೀ ವೈದ್ಯನಾಥೇಶ್ವರ ದೇವರ ವಾರ್ಷಿಕ ಜಾತ್ರೆಗೆ ರಥ ನಿರ್ಮಿಸುವ ಅಲಂಕಾರ ಮಾಡುವುದು ಸೇರಿದಂತೆ ದೇವರ ಉತ್ಸವದ ಮುಂದೆ ಭಾವುಟ ಪಟ ಹಿಡಿದು ಸಾಗುತ್ತಾರೆ. ಕುರ್ಲೆಯ ಹೊನ್ನಪ್ಪ ಮಲೆಕುಡಿಯ ಹೇಳುವ ಪ್ರಕಾರ ವರ್ಷಜಾತ್ರೆಯಲ್ಲಿ ೮ ದಿನ ನಾವು ಎಲ್ಲರೂ ಮನೆಗೆ ಒಬ್ಬರಂತೆ ದೇವಸ್ಥಾನದ ರಥಕಟ್ಟುವ ಕೆಲಸ ಮಾಡುತ್ತೇವೆ. ಇದು ಚರ್ಷದ ಉತ್ಸವಕ್ಕೆ ನಾನು ಮಾಡುವ ಸೇವೆ. ನಮಗೆ ಹಿಂದೆ ದಿನಕ್ಕೆ ರೂ. ೩೦ ಮತ್ತು ಒಂದು ಸೇರು ಅಕ್ಕಿ ತರಕಾರಿ ಕೊಡುತ್ತಾರೆ. ನಾವು ಅಲ್ಲೆಯೇ ಇರುತ್ತೇವೆ. ನಮ್ಮಲ್ಲಿ ಒಬ್ಬನು ಇಬ್ಬರು ಅಡಿಕೆ ಮಾಡುತ್ತಾರೆ. ಈ ವರ್ಷ ದೇವಸ್ಥಾನದ ಮುಜುರಾಯಿ ಇಲಾಖೆಯಿಂದ ದಿನಕ್ಕೆ ೫೦ ರೂಗೆ ಏರಿಸಿದ್ದಾರೆ. ಒಟ್ಟು ನಾವು ೧೪ ಜನರು ೮ ದಿನ ಕೆಲಸ ಮಾಡುತ್ತೆವೆ. ರಥಕ್ಕೆ ಬೇಕಾದ ಮರ ಮತ್ತು ಬಿದಿರು ಬೆತ್ತವನ್ನು ಕಡಿದು ತರುವುದು, ಪತಾಕೆಗೆ ಬೇಕಾದ ವಾಟೆ ಮತ್ತು ಇದಕ್ಕೆ ಬಿಗಿಯುಲು ಬೇಕಾದ ಬಳ್ಳಿ 'ಮುಡಿತ್ತಾರುಬಳ್ಳಿ'ಯನ್ನು ತರುತ್ತೇವೆ. ಇದು ತೋಟದ ಬಳ್ಳಿ ಕಾಡಿನಲ್ಲಿ ಸಿಗುತ್ತದೆ. ಇದನ್ನು ನೆಲಕ್ಕೆ ಬಡಿದು ನಾರು ತೆಗೆದು ಹಗ್ಗವನ್ನಾಗಿ ಮಾಡಿ ರಥಕ್ಕೆ ಬಿಗಿಯಲು ಬಳಸುತ್ತೇವೆ. ಇದು ತುಂಬಾ ಬಿಗಿ ಭದ್ರವಾಗಿರುತ್ತದೆ. ರಥ ಕಟ್ಟಿ ಪತಾಕೆ ಹಾಕಿ ರಥಕ್ಕೆ ಅಲಂಕಾರ ಮಾಡಿದ ನಂತರ ರಥ ದೇವರ ಉತ್ಸವ ಸವಾರಿಯಲ್ಲಿ ಮುಂದೆ ನಿಶಾನೆ, ಬಾವುಟ, ಪತಾಕೆ ಹಿಡಿದು ಸಾಗುತ್ತೇವೆ ಎಂದು ಹೊನ್ನಪ್ಪ ಮಲೆಕುಡಿಯ ತಿಳಿಸುತ್ತಾರೆ. ಇದನ್ನು ಬಿಟ್ಟರೆ ಮತ್ತೆ ಇಲ್ಲಿನ ನಡೆಯುವ ಗದ್ದೆಕೋರಿಯಲ್ಲಿ ಪೊಕರಿ ಹಾಕುವುದು, ಗದ್ದೆಗೆ ಶೃಂಗರಿಸುವುದು ನಮ್ಮ ಕೆಲಸ ಎನ್ನುತ್ತಾರೆ.

**ಗದ್ದೆಕೋರಿ:** ಈ ಮೊದಲು ದಿನ ರಾತ್ರಿ ಗದ್ದೆಗೆ ಕೊಳ್ತಿರಿ ಹಾಕುತ್ತೇವೆ. ಅಂದರೆ ಬಿದಿರಿನ ಕಡ್ಡಿಗಳಿಗೆ ಬಟ್ಟೆ ಸುತ್ತಿಸಿ ಅಲ್ಲಲ್ಲಿ ಗದ್ದೆ ಸುತ್ತ ಸುಮಾರು ೧೨೦ ಕಡೆಗಳಲ್ಲಿ ಅರಳೆಯಿಂದ ಸುತ್ತಿ ಹೊತ್ತಿಸಿ ಎಲ್ಲಾ ಕಡೆ ಗುರುತು ಮಾಡಿದ್ದಲ್ಲಿ ಹಾಕುತ್ತೇವೆ. ಹಗಲಲ್ಲಿ ಗದ್ದೆಕೋರಿ ಕಟ್ಟೆಗೆ ಶೃಂಗಾರ ಮಾಡುತ್ತೇವೆ. ದೇವರು ಬಂದು ಇಲ್ಲಿನ ಈ ಕಟ್ಟೆಗೆ ಕುಳಿತುಕೊಳ್ಳುತ್ತದೆ. ಆಗ ದೇವರು ಬರುವಾಗ ಗದ್ದೆಯ ಎದುರು ನಿಂತು ಈಗಾಗಲೇ ತಯಾರಿಸಿರುವ ಪೋಕರಿಯನ್ನು ಗದ್ದೆಯ ನಡುವಿಗೆ ಕೊಂಡು ಹೋಗುವವರು ನಾವೇ ಈ ಪೋಕರಿಯನ್ನು ಬಂಡಿಗೆ ಇಟ್ಟು ನೆಟ್ಟಗೆ ನಲ್ಲಿಸುವವರು ನಾವೇ ಎಂದು ಹೊನ್ನಪ್ಪ ವಿವರಿಸಿ, ಗದ್ದೆ ಕೋರಿ ಉತ್ಸವದ ನಂತರ ದೇವರು ವಾಪಸ್ಸು ಬರುವಾಗ ದೇವರ ಮುಂದೆ ನಿಶಾನೆ ಹಿಡಿದು ಬರುವುದು ನಮ್ಮ ಕೆಲಸ ಎನ್ನುತ್ತಾರೆ.

**ಕರಕುಶಲತೆ:** ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ವೃತ್ತಿಗಳಲ್ಲಿ ಬಿದುರು ಮತ್ತು ಬೆತ್ತ ಬಳಸಿ ಬುಟ್ಟಿ ತಯಾರಿಸುವುದು ಮತ್ತು ಚಪ್ಪರ ತಯಾರಿಸುವುದು ಇವರ ಕರಕುಶಲತೆಯನ್ನು ಸೂಚಿಸುತ್ತದೆ. ಸುಬ್ರಮಣ್ಯದ ಚನ್ನಪ್ಪ ಮಲೆಕುಡಿಯ ಈಗಲೂ ಇಲ್ಲಿನ ದೇವಸ್ಥಾನಕ್ಕೆ ಬೇಕಾದ ಹಣ್ಣು ಕಾಯಿ ಕೊಂಡುಯ್ಯುವ ಸಣ್ಣ ಕೈಬುಟ್ಟಿಯನ್ನು ತಯಾರಿಸಿ ಅಲ್ಲಿನ ಅಂಗಡಿಗಳಿಗೆ ಮಾರಾಟ ಮಾಡುತ್ತಾನೆ. ಮಾತ್ರ ಸಿಗುತ್ತದೆ. ಇಂದಿನ ಒಂದು ಬುಟ್ಟಿಗೆ ೧ರೂ ೫೦ ಪೈಸೆ ಮಾತ್ರ ಕೊಡುತ್ತಾರೆ. ಇಂದಿನ ಆಧುನಿಕ ಬದಲಾವಣೆ ದಿನಗಳಲ್ಲೂ ಕಾಡಿಗೆ ಹೋಗಿ ಬಿದುರನ್ನು ತಂದು ಕೈಬುಟ್ಟಿಗಳನ್ನು ಹೆಣೆದು ಕೊಡುವ ಕೌಶಲ್ಯತೆಯನ್ನು ಚನ್ನಪ್ಪ ಮಲೆಕುಡಿಯ ವಹಿಸಿಕೊಂಡು ಬಂದಿದ್ದಾನೆ. ಇದು ಇವರ ಜೀವನಾಧಾರವಾಗಿದೆ. ದಿನಕ್ಕೆ ೪೦ರಿಂದ ೫೦ ಬುಟ್ಟಿಗಳನ್ನು ತಯಾರಿಸಿ ಅದರಿಂದ ಬಂದ ಹಣದಿಂದ ತನ್ನ ತುತ್ತಿನ ಚೀಲವನ್ನು ತುಂಬಿಕೊಂಡಿದ್ದಾನೆ.

ಯಾವುದೇ ವಂಶ ಪಾರಂಪರ್ಯ ಹಿನ್ನಲೆಯಿಲ್ಲದೆ ತನ್ನ ಸ್ವ ಸಾಮರ್ಥ್ಯದ ಮೂಲಕ ಬಿದುರಿನ ಬೆತ್ತವನ್ನು ಬೆಳಸಿ ಕಲಾತ್ಮಕ ಕರಕುಶಲ ಕಲೆಯನ್ನು ಮೈಗೂಡಿಸಿಕೊಂಡಿರುವ ಅಪ್ರತಿಮ ಕರಕುಶಲ ಪರಿಣಿತನಾದ ಶಿಶಿಲದ ವೆಂಕಪ್ಪ ಮಲೆಕುಡಿಯ. ಚಪ್ಪರ ಹಾಕುವುದು, ಬೆತ್ತದಿಂದ ಅಲಂಕಾರಿಕ ದೀಪಗಳನ್ನು ನಿರ್ಮಿಸುವುದು, ಕುರ್ಚಿ ಮತ್ತು ಸೋಫಾದಂತಹ ಮಾದರಿಗಳನ್ನು ಮಾಡುವುದರಲ್ಲಿ ಪರಿಣಿತಿಯನ್ನು ಪಡೆದಿದ್ದಾನೆ. ಇವರಿಗೆ ಕರಕುಶಲ ರಾಜ್ಯ ಪ್ರಶಸ್ತಿಯು ಸಹ ದೊರೆತಿದೆ.

**ಮಾವೋರಿವಾದಕ ರಾಮ ಮಲೆಕುಡಿಯ**

ಹಿ.ಚಿ. ಬೋರಲಿಂಗಯ್ಯರವರು ಬಾಂಜಾರುಮಲೆಗೆ ಭೇಟಿ ನೀಡಿದಾಗ 'ಸಂಜೆಯವರೆಗೆ ಹಳ್ಳ, ಜಲಪಾತ, ಕುಮರಿ ಬೇಸಾಯ, ಕುಮರಿ ಬೇಸಾಯದ ಜಾಗ, ಕಳ್ಳು ಇಳಿಸುವ ವಿಧಾನ ಮುಂತಾದವುಗಳನ್ನು ನೋಡಿದ ನಂತರ ಹಿರಿಯರನ್ನು ಒಟ್ಟಿಗೆ ಸೇರಿಸಿ ಅನೇಕಾನೇಕ ವಿಷಯಗಳನ್ನು ಸಂಗ್ರಹಿಸಿದೆವು. ಅವರ ಕಷ್ಟಸುಖಗಳನ್ನು ತಿಳಿದುಕೊಂಡೆವು. ಹಾಡುಗಳನ್ನು ಹಾಡಿಸಿದೆವು. ಅಲ್ಲೊಬ್ಬ ಯುವಕ ತಾನೇ ಸ್ವತಃ ಮಾಡಿದ ಪುಂಗಿಯನ್ನು ತುಂಬ ಮಧುರವಾಗಿ ಊದಿ ತೋರಿಸಿದ. ನಮ್ಮ ಮೋಹನ ಅದನ್ನು ತಾನೇ ಪಡೆಯುವವರೆಗೂ ಬಿಡಲಿಲ್ಲ'[೬] ಎಂಬುದನ್ನು ಗಿರಿಜನ ನಾಡಿಗೆ ಪಯಣದ ಚಾರ್ಮಾಡಿಯ ಪಾತಾಳ ಲೋಕ, ಪುಟ ೫೩ರಲ್ಲಿ ಉಲ್ಲೇಖಿಸಿದ್ದಾರೆ.

ಆಗ ಈ ಪುಂಗಿಯನ್ನು ತಯಾರಿಸಿ ಊದಿದ. ಆ ಹುಡುಗ ಯಾರಿರಬಹುದೆಂದು ನಾನು ಅಧ್ಯಯುನದಲ್ಲಿ ಹುಡುಕಲು ಹೊರಟಾಗ ಆ ಹುಡುಗ ಬೇರೆ ಯಾರು ಅಲ್ಲ, ಹಿಂದೆ ಬಾಂಜಾರುಮಲೆಯಲ್ಲಿದ್ದು, ಈಗ ಅಂಬಟಮಲೆಯಲ್ಲಿ ವಾಸವಾಗಿರುವ ಮಾವೋರಿ ರಾಮಣ್ಣ ಮಲೆಕುಡಿಯ ಮಾವೋರಿ ಎಂದು ಕರೆಯುವ ಪುಂಗಿಯನ್ನು ತಯಾರಿಸುವುದರಲ್ಲಿ ಮತ್ತು ಅದನ್ನು ರಾಗಬದ್ಧವಾಗಿ ಊದುವುದರಲ್ಲಿ ಪರಿಣಿತಿಯನ್ನು ಹೊಂದಿದ್ದಾನೆ. ಈಗ ಶ್ವಾಸಕೋಶದ ತೊಂದರೆ, ಉಬ್ಬಸ-ಆಯಾಸದಿಂದ ಬಳಲುತ್ತಿರುವ ಇವರು ಪುಂಗಿಯನ್ನು ಊದುವ ಶಕ್ತಿಯನ್ನು ಕಳೆದುಕೊಂಡಿದ್ದಾರೆ. ಬುಡಕಟ್ಟು ಸಮುದಾಯದ ಸಂಸ್ಕೃತಿಯ ಪರಂಪರೆಯು ಅವರ ಆಚರಣೆ ಸಂಪ್ರದಾಯಗಳಲ್ಲಿ ಮಾತ್ರವಲ್ಲ, ಅವರ ಕಾಡಿನ ಬದುಕಿನೊಂದಿಗೆ ಕಾಡಿನಲ್ಲಿನ ತಮ್ಮ ಮೂಲ ಪರಂಪರೆಯ ಕೌಶಲ್ಯ, ಸಂಗೀತ, ಹಾಡುಗಾರಿಕೆ, ವಾದ್ಯ ಕುಣಿತಗಳು ಹಿಂದಿನಷ್ಟು ಈಗ ಕಂಡುಬರುತ್ತಿಲ್ಲ. ಮೂಲ ನೆಲೆಗಳಾದ ಈ ಅಂಬಟೆಮಲೆ, ಬಾಂಜಾರುಮಲೆ ಕೋಲೋಡಿಗಳಲ್ಲಿ ಮಾತ್ರ ಈ ಆಚರಣೆಗಳು ಕಂಡುಬರುತ್ತವೆ ಇವರಿಗೆ ಇವರದೇ ಆದ ಒಂದು ವಾದ್ಯವಿದೆ. ಇವರು ತಮ್ಮ ಬಿದಿರಿನ ಕೊಳವೆಯಿಂದ ತಾವೆ ತಯಾರಿಸಿಕೊಂಡಿರುವ ಸಂಗೀತ ವಾದ್ಯವಿದೆ. ಹಾವು ಆಡಿಸುವ ಹಾವಾಡಿಗನ ಕೈಯಲ್ಲಿರುವ ಪುಂಗಿಯನ್ನು ತುಳು ಭಾಷೆಯಲ್ಲಿ ಮಾವೋರಿ ಎಂದು ಕರೆಯುತ್ತಾರೆ. ಈ ಮಾವೋರಿಯನ್ನು ತಾವೆ ತಯಾರಿಸಿ ಅದರಿಂದ ಸುಮಧುರ ಸಂಗೀತದ ನಾದವನ್ನು ಊದುವುದರಲ್ಲಿ ಪರಿಣಿತರಾಗಿರುವ ಅಕಾಂತೆ ಮಲೆ ರಾಮ ಈ ಮಾವೊರಿಯನ್ನು ತಾವೇ ತಯಾರಿಸುತ್ತಾರೆ. ತೆಂಗಿನಗೊರಟೆ ಎಂದು ಕರೆಯುವ ತೆಂಗಿನಕಾಯಿ ಸಣ್ಣ ಗಾತ್ರದ್ದು, ಹಳ್ಳಿಗಳಲ್ಲಿ ಜೂಜಾಟಕ್ಕೆ ಬಳಸುವಂತಹ ತೆಂಗಿನ ನಾರನ್ನು ತೆಗೆದು ಅದರ ಮೇಲೆ ಕೆಳಗೆ ರಂಧ್ರ ಮಾಡಿ ಈ ರಂಧ್ರಗಳಿಗೆ ಕೆಳಗೆ ಮತ್ತು ಮೇಲಿನ ಭಾಗದಲ್ಲಿ ಕಾಡಿನಲ್ಲಿ ಸಿಗುವ ಓಂಟೆ ಎಂದು ಕರೆಯುವ ಸಣ್ಣ ತೂತು ಕೊಳವೆ ಆಕಾರದಲ್ಲಿರುವುದನ್ನು ತಂದು, ಐದು ಅಡಿ ಲೆಕ್ಕದಲ್ಲಿ ಎರಡು ಕೊಳವೆಗಳನ್ನು ಈ ಗೆರಟೆಗೆ ಸೇರಿಸಿ ಒಂದು ಕೊಳವೆಗೆ ೬ ರಂಧ್ರ ಮಾಡಿ ಇನ್ನೊಂದಕ್ಕೆ ರಂಧ್ರ ಇಲ್ಲದೇ ಅಳವಡಿಸಲಾಗುತ್ತದೆ. ಇದನ್ನು ಊದಿದಾಗ ರಾಗ ಹೊರಬರುತ್ತದೆ.

### ಮನೆ ಗೋಡೆಗೆ ಬಣ್ಣಗಾರಿಕೆ

ಹತ್ಯಡ್ಕದ ಮೇದಿನದ ಮನೆಗಳ ಮಣ್ಣಿನ ಇಟ್ಟಿಗೆಯೊಂದಿಗೆ ಕಟ್ಟಲಾದ ಗೋಡೆಗೆ ಕೆಂಪು ಮಣ್ಣಿನ ಸಾರಣೆ ಮಾಡಿರುವುದರಿಂದ ಈ ಮನೆಗಳ ಗೋಡೆ ಕೆಂಪಾಗಿಯೇ ಕಾಣುತ್ತದೆ.ಮನೆಯ ಒಳಗೆ ಮತ್ತು ಹೊರಗೆ ಗೋಡೆಯ ಕೆಳಗಿನ ಸ್ವಲ್ಪ ಭಾಗಕ್ಕೆ ಕೆಂಪು ಬಣ್ಣವನ್ನು ಹೋಲುವಂತೆ ಇವರೇ ತಯಾರಿಸಿದ ಸಾರಣೆ ಇದೆ. ಇದು ಕಪ್ಪು ಇದೆ, ಆದರೆ ಪೇಟೆಯಲ್ಲಿರುವ ಕಪ್ಪು ಬಣ್ಣವಲ್ಲ. ಇದು ಇವರೇ ತಯಾರಿಸುವ ಅವರದ್ದೇ ಆದ ರೀತಿಯ ಬಣ್ಣವಾಗಿದೆ. ಇದು ಹೇಗೆ ಎಂದು ಪ್ರಶ್ನಸಿದಾಗ ನನ್ನ ಜೊತೆಗಿದ್ದ ತನಯ ಹೇಳುವ ಪ್ರಕಾರ "ಇದು ಪೇಟೆಯ ಅಂಗಡಿಯಲ್ಲಿ ಸಿಗುವ ಕಪ್ಪು ಬಣ್ಣವಲ್ಲ, ನಾನೇ ಬಳಿದ ಬಣ್ಣ. ದನದ ಸಗಣಿಯ ಸಾರಣೆಗೆ ಕಪ್ಪು ಇದ್ದಲನ್ನು ಹುಡಿ ಮಾಡಿ ರುಬ್ಬಿ ಗೋಡೆಗೆ ಬಳಿದಾಗ ಈ ರೀತಿ ಕಪ್ಪು ಬಣ್ಣವಾಗಿ ಕಾಣುತ್ತದೆ" ಎಂದು ಹೇಳಿದ. ಇಂದಿನ ಅಧಿನಿಕತೆಯ ಅಂಗಡಿಯಲ್ಲಿನ ಬಣ್ಣವನ್ನು ನಾವು ಅಂತಿರುವ ಇವರ ಈ ಕಲಾತ್ಮಕತೆ ಇವರ ಸಾಂಪ್ರದಾಯಿಕ ಬದುಕಿನ ಕೌಶಲ್ಯದ ಪ್ರತೀಕವಾಗಿದೆ. ಇದು ನುಣುಪಾಕಿ ಅಷ್ಟೇ ನಾಜೂಕಾಗಿ ಕಾಣುತ್ತದೆ. ಇವರು ತನ್ನ ಅಂಗಳಕ್ಕೆ ಸಹ ಸೆಗಣಿಯಿಂದಲೇ ಸಾರಣೆ ಮಾಡುವ ಪದ್ಧತಿ ಇವರಲ್ಲಿರುವುದು ಅಧ್ಯಯನದಿಂದ ಕಂಡುಬರುತ್ತದೆ.

ಗುಂಡ್ಯದ ವೆಂಕಮ್ಮರವರ ಹಳೆಯ ಹೆಂಚಿನ ಮನೆಗೆ ಸಗಣಿ ಸಾರಣೆ ಜೊತೆಗೆ ಕಪ್ಪು ಬಣ್ಣದಂತೆ ಕಾಣುವ ಕೆಳಗೆ ಕಪ್ಪು ಬಣ್ಣವನ್ನು ಇವರ ಗೋಡೆಗೆ ಬಳಿದಿದ್ದಾರೆ. ಗೋಡೆ ಒಳಗೆ ಮತ್ತು ಹೊರಗೆ ಕೆಂಪು ಬಣ್ಣದಂತೆ ಕಂಗೊಳಿಸುವ ಮಣ್ಣಿನ ಸಾರಣೆಯನ್ನು ಬಳಿದಿದ್ದಾರೆ. ಇದು ಹೇಗೆ ಏಕೆ? ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ನನ್ನ ಜೊತೆಗಿದ್ದ ರವಿ ಮಲೆಕುಡಿಯನನ್ನು ಕೇಳಿದಾಗ "ಹುತ್ತದ ಮಣ್ಣು ತುಂಬಾ ನುಣುಪಾಗಿರುತ್ತದೆ ಮತ್ತು ಕೆಂಪಾಗಿರುತ್ತದೆ. ಇದನ್ನು ತಂದು ಚೆನ್ನಾಗಿ ಕಲಸಿ ಗೋಡೆಗೆ ಬಳಿದರೆ ಈ ರೀತಿಯ ಕೆಂಪು ಬಣ್ಣ ಕಾಣುತ್ತದೆ ಮತ್ತು ಇದು ಚೆನ್ನಾಗಿ ಬಾಳಿಕೆ ಬರುತ್ತದೆ" ಎಂದು ಮಾಹಿತಿ ನೀಡಿರುತ್ತಾರೆ. ಇನ್ನು ಕಪ್ಪು ಬಣ್ಣ ಇದೆ ಅಲ್ಲ ಸಾರ್ "ಅದು ಅಕೇಶಿಯಾ ಮರದ ಕಟ್ಟಿಗೆಯಿಂದ ಮಾಡಿದ ಕಪ್ಪು ಇದ್ದಿಲನ್ನು ಚೆನ್ನಾಗಿ ಹರಿದು ಹುಡಿ ಮಾಡಿದ ನಂತರ ಇದನ್ನು ಸಗಣಿಗೆ ಕಲಸಿ ಗೋಡೆಗೆ ಸಾರಣೆ ಮಾಡಿದಾಗ ಹೀಗೆ ನುಣುಪಾದ ಕಪ್ಪು ಬಣ್ಣದಂತೆ ಕಾಣುತ್ತದೆ. ಇದನ್ನು ನಮ್ಮವರೇ ತಯಾರಿಸಿಕೊಳ್ಳುತ್ತಾರೆ". ಎಂಬುದನ್ನು ರವಿ ವಿವರಿಸುತ್ತಾನೆ. ಇದು ಈ ಸಮುದಾಯದ ದೇಸಿ ಸಂಸ್ಕೃತಿಯನ್ನು ಸಂಕೇತಿಸುತ್ತದೆ. ಮನೆಗೆ ಬಳಸಲು ತಾವೇ ತಯಾರಿಸುವ ಈ ಬಣ್ಣಗಾರಿಕೆಯು ತಮ್ಮ ಪ್ರಾಚೀನ ಪರಂಪರಯನ್ನು ಸೂಚಿಸುತ್ತದೆ. ಈ ಮನೆ ನೋಡಿದಾಗ ನಮಗೆ ಈ ಸಮುದಾಯದ ಸಾಂಪ್ರಾಯಿಕ ಬದುಕಿನ ಕೌಶಲ್ಯ ಬಣ್ಣಗಾರಿಕೆ ಚಿತ್ರಣ ದೊರೆಯತ್ತದೆ.

### ೩.೪. ವೈದ್ಯ ಪದ್ಧತಿ

ಬುಡಕಟ್ಟು ಸಮುದಾಯದ ವೈದ್ಯ ಪದ್ಧತಿ ಪ್ರಾಚೀನವಾದದ್ದು, ಅವರ ಜೀವನ ಆರಂಭದ ಜೊತೆ ಜೊತೆಗೆ ಅವರ ವೈದ್ಯ ಪಾರಂಪರೆಯ ಜ್ಞಾನವು ಬೆಳೆಯುತ್ತಾ ಬಂದಿದೆ. ಜಗತ್ತಿನ ವೈದ್ಯಕೀಯ ಕ್ಷೇತ್ರದ ಅಭಿವೃದ್ಧಿಗೆ ಆದಿವಾಸಿಗಳ ವೈದ್ಯ ಪದ್ಧತಿ ತನ್ನದೇ ಆದ ಕೊಡುಗೆಯನ್ನು ನೀಡಿದೆ. ವೇದಗಳ ಕಾಲದ ಅವಧಿಯಲ್ಲಿ ಆರಂಭವಾದ ಸಿಂಧೂ ಸಂಸ್ಕೃತಿಗೂ ಮೊದಲು ಆದಿವಾಸಿ ಸಮುದಾಯಗಳಲ್ಲಿ ವೈದ್ಯ ಪದ್ಧತಿ ಇತ್ತು ಎಂಬ ಅಭಿಪ್ರಾಯವನ್ನು ಡಾ.ಗಂಗಾಧರ್ ದೈವಜ್ಞರವರು ತಮ್ಮ ಆದಿವಾಸಿಗಳ ವೈದ್ಯ ಪದ್ಧತಿ ಪುಟ. ೨೧೨ ಆದಿವಾಸಿ ಆಖ್ಯಾನದಲ್ಲಿ ತಿಳಿಸಿದ್ದಾರೆ. ಇವರ ಪ್ರಕಾರ ಆದಿವಾಸಿಗಳ ವೈದ್ಯ ಪದ್ಧತಿಯನ್ನೇ ಅಧ್ಯಯನಕ್ಕೊಳಪಡಿಸಿ ಪರಿಷ್ಕರಿಸಿ ಅದಕ್ಕೆ ಆಯುರ್ವೇದ ಎಂದು ಹೆಸರಿಸಿದರು ಎನ್ನುತ್ತಾರೆ. ಆದಿವಾಸಿಗಳ ಈ ಪಾರಂಪರಿಕ ವೈದ್ಯ ಪದ್ಧತಿ ವೇದಗಳ ಕಾಲಕ್ಕೆ ನರಂತರ ಶೋಧನೆಗಳಿಗೊಳಗಾಗಿ ಒಂದು ಚೌಕಟ್ಟನ್ನು ಪಡೆದುಕೊಂಡಿತು.[೭]

ಡಾ.ಎ.ಎಸ್. ಪ್ರಭಾಕರರವರ ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು ಕುರಿತಂತೆ ನಾಗರಿಕ ಸಮುದಾಯದ ಆದಿವಾಸಿಗಳ ಅತ್ಯುತ್ತಮ ಜ್ಞಾನ ಶಿಸ್ತನ್ನು ತಮ್ಮದೆಂದು ದಕ್ಕಿಸಿಕೊಂಡ ಸಾಂಸ್ಕೃತಿಕ ಪ್ರಭುತ್ವವು ಸಾವಿರಾರು ವರ್ಷಗಳಿಂದ ಅಧಿಕಾರದ ಕೇಂದ್ರವನ್ನು ಹಿಡಿದುಕೊಂಡೇ ಬಂದಿದೆ. ಶತಶತಮಾನಗಳಿಂದ ಒಂದು ಸಮುದಾಯದ ಅಂತರಂಗವನ್ನು ಪೊರೆದ ಜ್ಞಾನ ಶಿಸ್ತು ಇದ್ದಕ್ಕಿದ್ದಂತೆ ನೆನಪಿನ ಸ್ತರಗಳ ಹಿಂದಕ್ಕೆ ಅಡಗಿ ಕೂರಬಲ್ಲದೇ? ಪುರೋಹಿತಶಾಹಿ, ವಸಾಹತುಶಾಹಿ, ಆಧುನಿಕತೆ, ಜಾಗತೀಕರಣ, ವೈಜ್ಞಾನೀಕರಣ ಯಾವುದೇ ಆಗದೆ ಅದು ಸಾವಿರಾರು ವರ್ಷಗಳಿಂದ ಜೀವಂತವಾಗಿ ಬೆಳೆದುಕೊಂಡು ಬಂದಿರುವ ಒಂದು ಜ್ಞಾನ ಶಿಸ್ತನ್ನು ನಾಶ ಮಾಡಬಲ್ಲದೇ? ಸಾಧ್ಯವೇ ಇಲ್ಲ. ಆದಿವಾಸಿಗಳ ಮೇಲೆ ಎಷ್ಟು ಆಕ್ರಮಣಗಳು ನಡೆದರೂ ಅವು ತಮ್ಮ ಪಾರಂಪರಿಕ ಜ್ಞಾನದ ಹಿನ್ನಲೆಯಲ್ಲೇ ಬದುಕುತ್ತವೆ. ಆದಿವಾಸಿಗಳ ಪಾರಂಪರಿಕ

ಜ್ಞಾನ ಜೀವಂತವಾಗಿರುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಭಾರತಕ್ಕೆ ಬಂದ ಕ್ರೈಸ್ತ ಮಿಷಿನರಿಗಳು ಧರ್ಮ ಪ್ರಚಾರ ಮತ್ತು ಮತಾಂತರ ಉದ್ದೇಶವನ್ನು ಹೊಂದಿ ಆದಿವಾಸಿಗಳ ಪ್ರದೇಶಗಳಿಗೆ ಹೋದಾಗ ಆದಿವಾಸಿಗಳ ಪಾರಂಪರಿಕ ವೈದ್ಯ ಪದ್ಧತಿ ಗಿಡಮೂಲಿಕೆಗಳ ಪರಿಚಯವಾಯಿತು. ಇದನ್ನು ಬಳಸಿಕೊಂಡ ಪಾಶ್ಚಾತ್ಯ ವೈದ್ಯರು ಗಿಡಮೂಲಿಕೆಗಳ ಮೇಲೆ ಪ್ರಯೋಗ ನೆಡೆಸಿ ಮಲೇರಿಯಾ, ಪ್ಲೇಗ್‌ನಂತಹ ಮಾರಕ ರೋಗಗಳಿಗೆ ಔಷಧ ಕಂಡು ಹಿಡಿದರು(ಪುಟ. ೨೧೨)[೮] ಇದರಿಂದ ಜಗತ್ತಿನ ವೈದ್ಯ ಲೋಕಕ್ಕೆ ಆದಿವಾಸಿ ವೈದ್ಯ ಪದ್ಧತಿಯ ಕೊಡುಗೆ ಮಹತ್ವದ್ದಾಗಿದೆ ಎಂದು ತಿಳಿದುಬರುತ್ತದೆ. ಇದರ ಪರಿಣಾಮವಾಗಿ ಇಂದು ಹಲವಾರು ವೈದ್ಯಕೀಯ ಸಂಶೋಧಕರು ಟಿ.ವಿ. ಮಾಧ್ಯಮದವರು ಆದಿವಾಸಿ ಪಾರಂಪಾರಿಕ ಜ್ಞಾನದ ನಿರಂತರ ಸಂಶೋಧನೆ ಮಾಡುತ್ತಾ ಬಂದಿದ್ದಾರೆ. ಇದರಿಂದಾಗಿ ಆಧುನಿಕ ಜಗತ್ತು ಆದಿವಾಸಿಗಳು ಅನಾಗರಿಕರು ಅವೈಚಾರಿಕರು ಮೂರ್ಖರು ಎಂಬುದನ್ನು ಬಿಡಬೇಕಾಗಿದೆ ಎಂಬ ಡಾ.ಎ.ಎಸ್. ಪ್ರಭಾಕರರವರ ಚಿಂತನೆಯನ್ನು ಗಂಗಾಧರ ದೈವಜ್ಞರವರು ಇಲ್ಲಿ ಉಲ್ಲೇಖಿಸಿದ್ದಾರೆ. ಅಲ್ಲದೆ ನಮ್ಮ ಆದಿವಾಸಿ ಸಮುದಾಯಗಳಲ್ಲಿ ಅಡಗಿರುವ ಪಾರಂಪರಿಕ ವೈದ್ಯಕೀಯ ಜ್ಞಾನದ ಅಧ್ಯಯನ ಮಾಡಲೇ ಬೇಕಾಗಿದೆ[೯] ಎಂಬ ನಿಲುವನ್ನು ಡಾ. ಗಂಗಾಧರ ದೈವಜ್ಞರವರು ತಾಳಿದ್ದಾರೆ. ಆದಿವಾಸಿಗಳ ವೈದ್ಯಕೀಯ ಜ್ಞಾನ ತುಂಬಾ ಪ್ರಾಚೀನವಾಗಿದ್ದು, ಇಂದಿನ ಆಧುನಿಕ ಯುಗದ ವೈದ್ಯ ಪದ್ಧತಿಯ ಹೊಂದಾಣಿಕೆ ಇಲ್ಲದೇ ಇರುವುದರಿಂದ ಅಂತರ ನಿರ್ಮಾಣವಾಗಿದೆ. ಆಧುನಿಕ ವೈದ್ಯ ಪದ್ಧತಿಯ ಆಕರ್ಷಣೆಯಿಂದ ಪಾರಂಪರಿಕ ವೈದ್ಯ ಪದ್ಧತಿ ಈಗ ಮೂಲೆ ಗುಂಪಾಗಿದೆ. ಆದಿವಾಸಿಗಳಲ್ಲಿರುವ ವೈದ್ಯಕೀಯ ಪದ್ಧತಿ ಒಂದು ವೇಳೆ ವರ್ತಮಾನದ ವೈದ್ಯಕೀಯ ಪದ್ಧತಿಯೊಂದಿಗೆ ಹೊಂದಾಣಿಕೆಯಾಗದೇ ಹೋಗಿದ್ದರೆ ಅದು ಎಂದೋ ನಾಶವಾಗಿ ಹೋಗುತ್ತಿತ್ತು. ವೈದ್ಯಕೀಯ ಪದ್ಧತಿಗೆ ಬುನಾದಿ ಹಾಕಿ ಕೊಟ್ಟ ಆದಿವಾಸಿ ವೈದ್ಯ ಪದ್ಧತಿಯನ್ನು ಮರು ಅಧ್ಯಯನ ಮಾಡುವುದರೊಂದಿಗೆ ಆಧುನಿಕ ಪರಿಸರದಲ್ಲಿ ಹುಟ್ಟಿಕೊಂಡಿರುವ ರೋಗಗಳಿಗೆ ಪರಿಹಾರ ಕಂಡುಕೊಳ್ಳಬಹುದಾಗಿದೆ(ಪುಟ. ೨೧೩).[೧೦] ಡಾ. ಗಂಗಾಧರ್ ದೈವಜ್ಞರವರ ಚಿಂತನೆ ಈಗಲೂ ಅನ್ವಯವಾಗುತ್ತದೆ. ಪ್ರಕೃತಿ ಆಧಾರಿತ ಬುಡಕಟ್ಟು ಜೀವನ ಮಳೆಗಾಲ, ಚಳಿಗಾಲ, ಬೇಸಿಗೆ ಕಾಲಗಳಿಗೆ ಹೊಂದಿಕೊಂಡು ಬದುಕುವಂತಹ ಸ್ಥಿತಿಗೆ ಗಿಡಮೂಲಿಕೆಗಳ ಬಳಕೆಯು ಇದರ ಜೊತೆ ಜೊತೆಗೆ ರೂಪುಗೊಳ್ಳುತ್ತಾ ಬಂದಿದೆ. ಮಾನವನ ಆರೋಗ್ಯಕ್ಕೆ ಸೇವಿಸುವ ಆಹಾರ ಮತ್ತು ಪರಿಸರ ಮುಖ್ಯವಾಗಿದೆ. ಒಂದು ಸಮೀಕ್ಷೆಯ ಪ್ರಕಾರ ಕಾಡು ಕುರುಬರು ಜೇನು ಕುರುಬರು ೪೭ ವಿವಿಧ ಗೆಡ್ಡೆ ಗೆಣಸುಗಳನ್ನು ಅವರು ಆ ಕಾಲಮಾನಕ್ಕೆ ತಕ್ಕಂತೆ ಸೇವಿಸುತ್ತಾರೆ. ೯೦ ಜಾತಿಯ ಹಣ್ಣು ಹಂಪಲುಗಳನ್ನು ೬೦ ಜಾತಿಯ ಸೊಪ್ಪನ್ನು ತಮ್ಮ ಆಹಾರದಲ್ಲಿ ಬಳಸುತ್ತಾರೆ. ಇದನ್ನು ನಿಸರ್ಗದ ಖನಿಜಗಳೆಂದೇ ಕರೆಯಲಾಗಿದೆ. ಯಾವ ಕಾಲಕ್ಕೆ ಯಾವ ಆಹಾರ ಸೇವಿಸಬೇಕೆಂಬ ಅರಿವು ಇರುವ ಇವರು ಹುಟ್ಟಿನಿಂದ ಸಾಯುವವರೆಗೆ ಪ್ರತಿನಿತ್ಯವೂ ತಮ್ಮ ಪರಿಸರದ ಆಹಾರ ಪದ್ಧತಿಯಲ್ಲಿ ಗಿಡಮೂಲಿಕೆಗಳು, ರೋಗನಿರೋಧಕ ವೈದ್ಯ ಪದ್ಧತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ.

ಬಾಂಜಾರುಮಲೆ ಅಂಬಟಮಲೆ ಇಳಿಮಲೆಗಳಿಗೆ ಅಧ್ಯಯನಕ್ಕೆ ಹೋದಾಗ ಅಲ್ಲಿ ಹರಿಯುವ ತಿಳಿಯಾದ ನೀರನ್ನು ಕುಡಿಯಲು ನಾವು ಮುಂದಾದರೆ ಅದನ್ನು ನೀವು ಕುಡಿಯಬೇಡಿ ಎಂದು ಅಲ್ಲಿನ ರಾಮಣ್ಣ ಆಕ್ಷೇಪಣೆ ವ್ಯಕ್ತಪಡಿಸುತ್ತಾರೆ. ಅಂಬಟಮಲೆಯ ರಾಮಣ್ಣ ಮಲೆಕುಡಿಯ ಈ ವಿಷಯದ ಬಗ್ಗೆ

ವಿವರವಾದ ಮಾಹಿತಿಯನ್ನು ನೀಡಿದರು. ನೋಡಿ ಇವು ಹರಿಯುವ ನೀರು ಇದು ತಂಪಾಗಿರುತ್ತದೆ. ನಮಗೆಲ್ಲ ಇದು ಕುಡಿದು ಅಭ್ಯಾಸ ಮತ್ತು ನಮಗೆ ಹಿಡಿಸಿದೆ. ಹೊಸದಾಗಿ ನೀವು ಈಗ ಈ ನೀರನ್ನು ಕುಡಿದರೆ ನಮಗೆ ಒಳ್ಳೆಯದಾಗುವುದಿಲ್ಲ. ಅಂದರೆ ನಮ್ಮ ತಲೆ ಹಿಡಿದು ಶೀತ ನೆಗಡಿ ಪ್ರಾರಂಭವಾಗುತ್ತದೆ ಎಂದು ಹೇಳಿದಾಗ ಕುಡಿಯುವ ನೀರಿನ ಬಳಕೆಯಲ್ಲಿಯೂ ಸಹ ವ್ಯತ್ಯಾಸವಾಗುತ್ತಿರುವುದು ತಿಳಿದು ಬರುತ್ತದೆ. ಅಂತೆಯೇ ತುಳುನಾಡಿನ ಆಹಾರ ಪದ್ಧತಿಯು ಆಯಾ ಕಾಲಮಾನವನ್ನ ಆಧರಿಸಿದೆ. ಅಂತೆಯೇ ಮಲೆಕುಡಿಯರಲ್ಲೂ ಸಹ ಋತುಮಾನವನ್ನು ಆಧರಿಸಿದ ಆಹಾರ ಪದ್ಧತಿ ಕಂಡುಬರುತ್ತದೆ. ಕಾಡಿನಿಂದ ನಾಡಿಗೆ ಬಂದ, ಸ್ಥಳಾಂತರಗೊಂಡು ಗ್ರಾಮ ನಗರ ಜೀವನವನ್ನು ನಡೆಸುವ ಮಲೆಕುಡಿಯ ಸಮುದಾಯದವರು ಈಗಲೂ ಸಹ ತಮ್ಮ ಮನೆಯಲ್ಲಿ ಮನೆ ಔಷಧಿಗಳನ್ನು ಗಿಡಮೂಲಿಕೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಬದಲಾದ ಜೀವನ ಪದ್ಧತಿಗೆ ಅನುಗುಣವಾಗಿ ಆಧುನಿಕ ವೈದ್ಯ ಪದ್ಧತಿಯ ಬಳಕೆ ಕಂಡುಬಂದರೂ ಅದು ಅನಿವಾರ್ಯವಾಗಿದೆ. ಕಷಾಯ, ಗಂಜಿ ಊಟ, ಪತ್ರೊಡೆ, ಆಟಿ ಕಷಾಯ ಇವೆಲ್ಲವೂ ಇವರ ಪಾರಂಪರಿಕ ವೈದ್ಯ ಪದ್ಧತಿಯನ್ನು ಅವಲಂಬಿಸಿವೆ.

ಬಿ.ಎ.ವಿವೇಕರೈ ಮತ್ತು ಡಿ.ಯದುಪತಿ ಗೌಡರವರ ಮಲೆಕುಡಿಯರು ೧೯೯೬ ಮಂಗಳೂರು ವಿಶ್ವವಿದ್ಯಾಲಯ ಪುಟ. ೧೩೦ರಲ್ಲಿ ಮಲೆಕುಡಿಯರ ವೈದ್ಯ ಪದ್ಧತಿ ಮತ್ತು ಔಷಧ ರೂಪದಲ್ಲಿ ಬಳಸಿರುವ ಸಸ್ಯಗಳು ಕುರಿತು ಮಾಹಿತಿಯನ್ನು ನೀಡಿದ್ದಾರೆ. ಸುಮಾರು ೧೭೩ ಔಷಧಿಯ ಸಸ್ಯಗಳ ಬಳಕೆ ಮತ್ತು ಉಪಯೋಗಗಳ ಕುರಿತು ವಿವರಿಸಿದ್ದಾರೆ.[೧೧]

ಮಲೆಕುಡಿಯ ಬುಡಕಟ್ಟು ಜನರ ಜೀವನ ಪದ್ಧತಿಯು ಅವರ ಸಾಂಪ್ರದಾಯಿಕ ವೈದ್ಯ ಪದ್ಧತಿಯನ್ನು ಅವಲಂಬಿಸಿದೆ. ಪ್ರಕೃತಿಯನ್ನು ಅವಲಂಬಿಸಿರುವ ಅವರ ಜೀವನವು ಅವರ ಆರೋಗ್ಯವನ್ನು ಸಂರಕ್ಷಿಸಲು ಸಹಾಯಕವಾಗಿವೆ. ಅವರು ಕುಡಿಯುವ ನೀರು ಹರಿಯುವ ನೀರಾಗಿದ್ದು, ತಿಳಿ ಮತ್ತು ಸ್ವಚ್ಛವಾಗಿರುತ್ತದೆ. ಹಿಂದೆ ಹೊಳೆಯಲ್ಲಿ ಹರಿಯುವ ನೀರನ್ನು ಕುಡಿಯುತ್ತಿದ್ದ ಇವರು ಇತ್ತೀಚಿಗೆ ತಮ್ಮ ಮನೆಗಳ ಮುಂದೆ ರಿಂಗ್ ಬಾವಿಗಳನ್ನು ತೋಡಿಕೊಂಡಿದ್ದಾರೆ. ಅಲ್ಲದೇ ಸುರಂಗದ ಮೂಲಕ ಪಡೆದ ನೀರನ್ನು ಸಹ ಇವರು ಕುಡಿಯಲು ಉಪಯೋಗಿಸುತ್ತಾರೆ. ನಾವೇನಾದರೂ ಇಲ್ಲಿ ಹರಿಯುವ ನೀರನ್ನು ಕುಡಿದರೆ ನಮಗೆ ಶೀತ ನೆಗಡಿ ಬಂದು ತಲೆ ಹಿಡಿಯುತ್ತದೆ. ಆದರೆ ಇದು ಇವರಿಗೆ ಮಾಮೂಲಾಗಿರುತ್ತದೆ. ಇವರ ಆಹಾರ ಪದ್ಧತಿ ರೋಗಗಳ ನಿಯಂತ್ರಣ ಇವರಲ್ಲಿನ ವೈದ್ಯ ಪದ್ಧತಿಯನ್ನು ಅವಲಂಬಿಸಿದೆ. ಋತುಮಾನವನ್ನು ಆಧರಿಸಿದ ಆಹಾರ ಪದ್ಧತಿಯು ತುಳು ನಾಡಿನ ಸಂಸ್ಕೃತಿಯ ಒಂದು ಭಾಗವಾಗಿದೆ. ಇದು ಈ ಸಮುದಾಯದ ಆಚರಣೆಗಲ್ಲಿ ಕಂಡುಬರುತ್ತದೆ. ಧರ್ಮಸ್ಥಳದ ಓಬಯ್ಯ ಮಲೆಕುಡಿಯ, ಪದ್ಮಯ್ಯ ಮಲವಂತಿಕೆ ಕಾಡೌಷಧಿ ಕೊಡುವುದರಲ್ಲಿ ಪರಿಣಿತರಾಗಿದ್ದಾರೆ.

ಮಲೆಕುಡಿಯರಲ್ಲಿನ ವೈದ್ಯ ಪದ್ಧತಿಯಲ್ಲಿ ಗಾಯವಾದರೆ ಗಾಯ ಯಾವ ರೀತಿ ಆಯಿತೆಂದು ತಿಳಿದುಕೊಂಡು ಚಿಕಿತ್ಸೆ ನೀಡುತ್ತಾರರೆ. ಸುಟ್ಟ ಗಾಯವಾದರೆ ಹಂದಿ ಸೊಪ್ಪನ್ನು ಅರೆದು ರಸ ಹಚ್ಚುತ್ತಾರೆ. ಗೇರು ಮರದ ಚೆಕ್ಕೆಯನ್ನು ಜಜ್ಜಿ ರಸ ತೆಗೆದು ಲೇಪನ ಮಾಡುತ್ತಾರೆ. ಜೀವಂತ ಕಪ್ಪೆಯನ್ನು ಹಿಡಿದು ಬಿಸಿ ಎಣ್ಣೆಯಲ್ಲಿ ಹಾಕಿ ಆ ಎಣ್ಣೆಯನ್ನು ಸವರುತ್ತಾರೆ. ಜೇನುತುಪ್ಪ ಕಬ್ಬ ಮರದ ರಸವನ್ನು ಕೂಡಾ

ಹಚ್ಚುತ್ತಾರೆ. ಸೀಮೆಎಣ್ಣೆಯನ್ನು ಸವರುತ್ತಾರೆ. ಗಾಯವಾದರೆ ಪರಂಗಿ ಸೊಪ್ಪನ್ನು ಅರೆದು ರಸ ತೆಗೆದು ಅದಕ್ಕೆ ಸುಣ್ಣ ಬೆರೆಸಿ ಲೇಪಿಸುತ್ತಾರೆ. ಗಾಂಧೀಗುಲಾಬಿ ರಸವನ್ನು ಸಹ ಹಚ್ಚುತ್ತಾರೆ. ಹಾಗೆಯೇ ಮೆಣಸಿನಕಾಯಿ, ಉಪ್ಪು, ಎಣ್ಣೆಯಲ್ಲಿ ಕುದಿಸಿ ಗಾಯಕ್ಕೆ ಹಚ್ಚುತ್ತಾರೆ. ಉಳುಕಡ್ಡಿಯಾದರೆ ಗಾಂಧಾರಿ ಮೆಣಸಿನಕಾಯಿ ಸೊಪ್ಪನ್ನು ಉರಿದು, ಎಣ್ಣೆಯಲ್ಲಿ ಕಾಯಿಸಿ ಹಚ್ಚುತ್ತಾರೆ. ಹರಳಿನ ಗಿಡದ ಚೆಕ್ಕೆಗೆ ಉಪ್ಪನ್ನು ಸೇರಿಸಿ ಅರೆದು ಹಚ್ಚುತ್ತಾರೆ ಎಂಬ ಮಾಹಿತಿಯನ್ನು ಮಂಗಳ ಶ್ರೀಧರ್‌ರವರು ತಮ್ಮ ಬುಡಕಟ್ಟು ವೈದ್ಯ ಸಂಸ್ಕೃತಿ ಗ್ರಂಥದ ಪುಟ. ೨೫೮ರಲ್ಲಿ ವಿವರಿಸಿದ್ದಾರೆ.[೮]

## ನುಗ್ಗೆ ಮತ್ತು ಆರೋಗ್ಯ

ಸುಮಾರು ೧೫ ವರ್ಷಗಳ ಹಿಂದೆ ಮಲೆಕುಡಿಯ ಸಮುದಾಯದ ಜನರಲ್ಲಿ ರೋಗನಿರೋಧಕ ಶಕ್ತಿ ಇತ್ತು. ಇವರು ಗಟ್ಟಿಯಾದ ಶಕ್ತಿವಂತ ಶರೀರವುಳ್ಳವರಾಗಿದ್ದರು. ಇದರ ಗುಟ್ಟನ್ನು ಅರಿತುಕೊಳ್ಳಲು ಅಮೆರಿಕಾದ ತಜ್ಞ ವೈದ್ಯರ ತಂಡ ಆಂಧ್ರಪ್ರದೇಶದ ಮಲೆಕುಡಿಯರ ವಾಸದ ಸ್ಥಳ ಕಾಡಿಗೆ ಭೇಟಿ ನೀಡಿದರು. ಈ ವೈದ್ಯರಿಗೆ ಕುಡಿಯಲು ನೀರು ಕೇಳಿದಾಗ ಮಲೆಕುಡಿಯ ಜನಾಂಗದವರು ತಮ್ಮ ಮನೆಯಲ್ಲಿ ಇರುವ ನೀರನ್ನು ತಂದು ವೈಧ್ಯರಿಗೆ ಕುಡಿಯುವುದಕ್ಕೆ ನೀಡಿದರು. ಈ ನೀರನ್ನು ನೋಡಿದ ವೈದ್ಯನಿಗೆ ಆಶ್ಚರ್ಯವಾಗುತ್ತದೆ. ಈ ನೀರನ್ನು ಎಲ್ಲಿಂದ ತಂದಿರಿ ಎಂದು ಕೇಳುತ್ತಾನೆ. ಅವರ ವಾಸದ ಸ್ಥಳದ ಹತ್ತಿರದಲ್ಲಿರುವ ಹೊಂಡದಿಂದ ತಂದಿರುವುದಾಗಿ ಹೇಳುತ್ತಾರೆ. ಎಲ್ಲಿ ನಾನು ನೋಡಬೇಕು ಆ ಹೊಂಡವನ್ನು ನನಗೆ ತೋರಿಸಿ ಎಂದು ವೈದ್ಯರು ಹೇಳುತ್ತಾರೆ. ಆಗ ಆ ಸ್ಥಳವನ್ನು ತೋರಿಸುತ್ತಾರೆ, ಅದು ತುಂಬಾ ಕಲುಷಿತವಾದ ಹೊಂಡವಾಗಿತ್ತು. ಈ ಹೊಂಡದ ನೀರು ಕುಡಿಯಲು ಯೋಗ್ಯವೇ ಅಲ್ಲ ಇದು ಹೇಗೆ? ಎಂಬ ಪ್ರಶ್ನೆ ಹಾಕುತ್ತಾರೆ. ಆಗ ಮಲೆಕುಡಿಯರು, ನೋಡಿ ಸ್ವಾಮಿ, ನಾವು ಈ ಹೊಂಡದಲ್ಲಿನ ನೀರನ್ನೇ ತಂದು ಪ್ರತಿದಿನ ಬಳಸುತ್ತೇವೆ. ಈ ನೀರನ್ನು ನಾವು ತಂದು ಈ ನೀರಿಗೆ ಒಣಗಿದ ನುಗ್ಗೆಯ ಬೀಜವನ್ನು ಪುಡಿಮಾಡಿ ಒಂದು ಮಣ್ಣಿನ ಮಡಿಕೆಯಲ್ಲಿನ ಈ ನೀರಿಗೆ ಹಾಕಿ ಒಂದು ದಿನ ರಾತ್ರಿ ಪೂರ್ತಿ ನೆನೆಯಲು ಬಿಡುತ್ತೇವೆ. ನಂತರ ಮರುದಿನ ಒಂದು ಬಟ್ಟೆಯಲ್ಲಿ ಈ ನೀರನ್ನು ಶುದ್ಧೀಕರಿಸಿ ಸೋಸಿ ಕುಡಿಯಲು ಬಳಸುತ್ತೇವೆ ಎಂಬ ಉತ್ತರವನ್ನು ನೀಡುತ್ತಾರೆ ಹೀಗೆ ಶುದ್ಧೀಕರಿಸಿ ಶೋಧಿಸಿದ ನೀರು ತುಂಬಾ ಶುದ್ಧ, ಸ್ವಚ್ಚ ಹಾಗೂ ರೋಗನಿರೋಧಕ ಶಕ್ತಿಯುಳ್ಳ ನೀರು ಆಗಿರುತ್ತದೆ. ಇದು ಈಗಿನ ಯಂತ್ರಗಳಿಂದ ಶುದ್ಧೀಕರಣ ಮಾಡಿ ತಯಾರಿಸಿದ ನೀರಿಗಿಂತ ಉತ್ತಮವಾಗಿರುತ್ತದೆ.[೯] ಈ ಶುದ್ಧೀಕರಿಸಿದ ನೀರಿನಲ್ಲಿ ನುಗ್ಗೆಯ ರೋಗನಿರೋಧಕ ಶಕ್ತಿಯುಳ್ಳ ಔಷಧೀಯ ಗುಣವೂ ಸೇರಿದೆ. ಈ ಶುದ್ಧ ನೀರನ್ನು ಈ ಜನಾಂಗ ದಿನನಿತ್ಯ ಸೇವಿಸುವುದರಿಂದಲೇ ಇವರಿಗೆ ಯಾವುದೇ ರೋಗ ರುಜಿನಗಳು ಬಂದಿಲ್ಲ ಎಂಬ ವಿಚಾರವನ್ನು ತಜ್ಞವೈದ್ಯರು ತಿಳಿದುಕೊಳ್ಳುತ್ತಾರೆ ಎಂಬ ವಿಷಯವನ್ನು ವಿಟ್ಲದ ದಿನೇಶ್ ನಾಯಕ್‌ರವರು ವಿವರಿಸುತ್ತಾರೆ. ವಿವಿಧ ಜಾತಿಯ ಗಿಡಮೂಲಿಕೆ ಸಸ್ಯಗಳ ಬಗ್ಗೆ ಅಪಾರವಾದ ಜ್ಞಾನವನ್ನು ಹೊಂದಿರುವ ಇವರು ವಿಟ್ಲದಲ್ಲಿ 'ಸಸ್ಯಶಾಮಲ'ವನ್ನು ಆರಂಭಿಸಿದ್ಧಾರೆ. ಇವರು ದಿನಾಂಕ ೫.೯.೨೦೦೮ರಂದು ಸರಕಾರಿ ಪದವಿ ಪೂರ್ವ ಕಾಲೇಜು ಪುತ್ತೂರುನಲ್ಲಿ ಔಷಧೀಯ ಸಸ್ಯಗಳ ಕುರಿತು ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆಯನ್ನು ನೀಡಿದರು. ಆಗ 'ನುಗ್ಗೆ'ಯನ್ನೂ ತೋರಿಸಿ ನುಗ್ಗೆಯಿಂದ ಆಗುವ ಪ್ರಯೋಜನ, ಔಷಧೀಯ ಗುಣದ ಬಗ್ಗೆ ವಿವರಣೆ ನೀಡುತ್ತಾ ಈ ಮೇಲಿನ ಮಾಹಿತಿಯನ್ನು ನೀಡಿದ್ದಾರೆ. ನಂತರ ಈ

ಕುರಿತು ಇವರೊಂದಿಗೆ ನಾನು ಹೆಚ್ಚಿನ ಸಂವಾದ ಮಾಡಿ ಚರ್ಚಿಸಲಾಯಿತು. ಮಂಗಳೂರು ವಿಶ್ವವಿದ್ಯಾನಿಲಯದ ಸಸ್ಯಶಾಸ್ತ್ರ ವಿಭಾಗದ ಜಯಕರ ಭಂಡಾರಿ ಕಾಲೇರಿ ಮತ್ತು ಡಾ. ಚಂದ್ರಶೇಖರರವರು ಜಂಟಿಯಾಗಿ ಔಷಧೀಯ ಸಸ್ಯಗಳ ಬಗ್ಗೆ ಸಂಶೋಧನೆ ಮಾಡಿದ್ದಾರೆ. ಇದು ಎಂ.ಫಿಲ್, ಪಿಎಚ್.ಡಿ. ಪದವಿಗೆ ಆಯ್ಕೆ ಮಾಡಿಕೊಂಡ ವಿಷಯವಾಗಿದೆ. ಇಲ್ಲಿ ಮಲೆಕುಡಿಯ ಸಮುದಾಯದಲ್ಲಿನ ನುಗ್ಗೆಯ ಬಳಕೆ ಮತ್ತು ಅದರಲ್ಲಿನ ಔಷಧೀಯ ಗುಣಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ ಎಂಬ ವಿಷಯವನ್ನು ವಿಟ್ಲದ ಎಂ. ದಿನೇಶ್ ನಾಯಕ್, ಸಸ್ಯ ಶ್ಯಾಮಲ, ವಿಟ್ಲ, ಔಷಧೀಯ ಸಸ್ಯ, ಪರಿಸರ ಪರಿಣಿತರು, ವಿಟ್ಲರವರು ತಮ್ಮ ಉಪನ್ಯಾಸದಲ್ಲಿ ತಿಳಿಸಿದ್ದಾರೆ. ಇವರು ಇಲ್ಲಿ ಪ್ರಸ್ತಾಪಿಸಿರುವ ಮಲೆಕುಡಿಯರು ಮತ್ತು ಆಂದ್ರಪ್ರದೇಶದ ಮೂಲದ ಕುರಿತು ಉಲ್ಲೇಖ ಬರುತ್ತದೆ.

**ಲಾವಂಚ:** ದಕ್ಷಿಣ ಕನ್ನಡ ಜಿಲ್ಲೆಯ ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದವರು ನೆಲೆಸುವ ಅರಣ್ಯ ಪ್ರದೇಶದಲ್ಲಿ ಔಷಧೀಯ ಸಸ್ಯ ಸಂಪತ್ತು ಹೇರಳವಾಗಿದೆ. ಇದರಲ್ಲಿ "ಲಾವಂಚ" ಹುಲ್ಲು ಒಂದು ವಿಶೀಷ್ಟವಾದ ಸಸ್ಯವಾಗಿದೆ. ಇದನ್ನು ವೆಟಿವೇರ್(ಲಾವಂಚ) ಎಂದು ಕರೆಯುತ್ತಾರೆ. ಲಾವಂಚ,ರಾಮಂಚ ಎಂಬ ಹುಲ್ಲು ಜಾತಿಯ ಸಸ್ಯವಾಗಿದೆ. ಮಲೆಕುಡಿಯರು ಬಳಸುವ ಮನೆ ಮದ್ದುಗಳಲ್ಲಿ ಒಂದಾಗಿದೆ. ಇದು ಸುಂಗಧ ಭರಿತವಾಗಿ ಸುವಾಸನೆ ಬೀರುತ್ತದೆ. ಇದರ ಬೇರುಗಳನ್ನು ತಂದು ಮನೆಯಲ್ಲಿ ಬಟ್ಟೆಗಳ ಮಧ್ಯೆ ಇಡುತ್ತಾರೆ. ಆದುದರಿಂದ ಇದನ್ನು ಮತಿನಾಳಬೇರು ಎಂದು ಕರೆಯುತ್ತಾರೆ. ಇದರ ಬೇರು ಕಲುಷಿತ ನೀರನ್ನು ಶುದ್ಧಗೊಳಿಸುತ್ತದೆ. ಇದು ಬಹು ಔಷಧೀಯ ಗುಣವುಳ್ಳ ಸಸ್ಯವಾಗಿದೆ. ಭಾರತೀಯ ಪಾರಂಪರಿಕ ವೈದ್ಯ ಪದ್ಧತಿಯಲ್ಲಿ ಸ್ಮೃತಿ ಪುರಾಣಗಳಲ್ಲಿ ರಾಮಂಚ ಎಂಬ ಹೆಸರು ಇದೆ. ಸುರಪಾಲರ ವೃಕ್ಷ ಆಯುರ್ವೇದದಲ್ಲಿ ಲಾವಂಚದ ಕುರಿತು ವಿವರಣೆ ಇದೆ. ಮಿಶ್ರ ಚಕ್ರಪಾಣಿಯ ವಿಷವ ವಲ್ಲಭದಲ್ಲಿ ನೀರಿನ ಶುದ್ಧೀಕರಣದಲ್ಲಿ ಲಾವಂಚದ ಪಾತ್ರವನ್ನು ವಿವರಿಸಲಾಗಿದೆ. ಇಲ್ಲಿಂದ ಆರಂಭವಾದ ಲಾವಂಚಕ ಬಳಕೆಯು ಬುಡಕಟ್ಟು ಸಮುದಾಯ ಗ್ರಾಮೀಣ ಪ್ರದೇಶದ ಜನರ ಜೀವನದಲ್ಲಿ ಬಳಕೆಗೆ ಬಂದಿದೆ. ಮಣ್ಣಿನ ಸವಕಳಿಯನ್ನು ತಪ್ಪಿಸುವಲ್ಲಿ ಇದರ ಬಳಕೆ ಜನಪ್ರಿಯವಾಗಿದೆ.

ನದೀ ತೀರದಲ್ಲಿ ಇಳಿಜಾರು ಪ್ರದೇಶದಲ್ಲಿ ಹಳ್ಳ,ದಂಡೆಮೇಲೆ ಈ ಲಾವಂಚದ ಹುಲ್ಲು ಪೊದೆಯಾಕಾರದಲ್ಲಿ ಬೆಳೆಯುತ್ತದೆ. ಕೇರಳ ತಮಿಳುನಾಡಿನಲ್ಲಿ ಕುಡಿಯುವ ನೀರಿನ ತೊಟ್ಟಿಗಳಿಗೆ ಈ ಬೇರುಗಳನ್ನು ಹಾಕುವ ಪದ್ಧತಿ ಇಂದಿಗೂ ಆಚರಣೆಯಲ್ಲಿದೆ. ಪಶ್ಚಿಮಘಟ್ಟ ಪ್ರದೇಶಗಳಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಲಾವಂಚದ ಬಳಕೆ ಇದೆ. ರಾಧಾಕೃಷ್ಣ ಭಡ್ತಿರವರು ತಮ್ಮ 'ನೀರು ನೆರಳು' ಲೇಖನದಲ್ಲಿ ಲಾವಂಚದ ಬಳಕೆಯ ಕುರಿತು ವಿವರಿಸುತ್ತಾರೆ. ಲಾವಂಚದ ಬಗ್ಗೆ ಇದುವರೆಗೆ ಹೇಳಿಕೊಳ್ಳುವ ಪ್ರಚಾರವೇ ಆಗಿರಲಿಲ್ಲ. ಈಮೂರು ವರ್ಷಗಳ ಹಿಂದೆ ಚೀನದಲ್ಲಿ ಅಂತರಾಷ್ಟೀಯ ಸಮ್ಮೇಳನದಲ್ಲಿ ರಿಚರ್ಡಗ್ರಿಮ್‌ಷಾ ಎಂಬ ಕೃಷಿ ತಜ್ಞರು ಪ್ರಯೋಗದೊಂದಿಗೆ ಮಂಡಿಸಲಾದ ಪ್ರಬಂಧದಿಂದಾಗಿ ಲಾವಂಚದ ಬಳಕೆಯ ಪ್ರಚಾರ ಆರಂಭವಾಗಿದೆ ಎಂದು ಹೇಳುತ್ತಾರೆ. ನಂತರ ಕ್ವೀನ್ ಲ್ಯಾಂಡ್‌ನಲ್ಲಿ ಗಣಿ ನೈಸರ್ಗಿಕ ಸಂಪನ್ಮೂಲ ಇಲಾಖೆ ಕೈಗೊಂಡ ಪರಿಸರ ಸ್ನೇಹಿ ಪ್ರಯೋಗದಲ್ಲಿ ಲಾವಂಚದ ಬಳಕೆಯ ಕುರಿತು ಜಾಗೃತಿ ಮೂಡಿದೆ. ಅತ್ಯಂತ ಕಡಿಮೆ ವೆಚ್ಚದಲ್ಲ ಲಾವಂಚವನ್ನು ಬಳಸಿ ನೀರನ್ನು ಶುದ್ಧೀಕರಿಸುವ ವಿಧಾನವನ್ನು ಈಗ ಕ್ವೀನ್ಸ್ ಲಾಂಡ್ ಕೊಂಡುಕೊಂಡಿದೆ. ನಗರ ಪ್ರದೇಶದಲ್ಲಿ

ಹರಿಯವ ಕೊಳಚೆಯನ್ನು ಒಂದು ಕಡೆ ಹರಿದು ಬರುವಂತೆ ಮಾಡಿ ಹೊರ ವಲಯದ ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಬೆಳಸಲಾದ ಲಾವಂಚದ ಪ್ರದೇಶಕ್ಕೆ ಈ ಕೊಳಚೆ ನೀರನ್ನು ಹರಿಸಲಾಗುತ್ತದೆ. ಅತ್ಯಂತ ದಟ್ಟವಾಗಿ ಬೆಳೆದು ಹಬ್ಬರುವ ಈ ಲಾವಂಚದ ಬೇರುಗಳ ನಡುವೆ ಈ ಕೊಳಚೆ ನೀರು ಹರಿದು ಬರುವಷ್ಟರಲ್ಲಿ ಈ ನೀರಿನಲ್ಲಿರುವ ಬಹುತೇಕ ಕಲ್ಮಶಗಳು ಹೊಗುತ್ತದೆ. ರೊಗನಿರೊಧಕ ಶಕ್ತಿಯೊಂದಿಗೆ ಈ ನೀರು ಶದ್ಧವಾಗುತ್ತದೆ. ಈ ಪ್ರಯೊಗ ಇಲ್ಲಿ ವೈಜ್ಞಾನಿಕವಾಗಿ ದೃಢಪಟ್ಟು ಆಸ್ಟ್ರೇಲಿಯ, ಚೀನಾ ಥೈಲ್ಯಾಂಡ್ ವಿಯೇಟ್ನಾಂ ಹಾಗೂ ಸೆರ್ನೆಲ್‌ಗಳಲ್ಲಿ ಯಶಸ್ವಿಯಾಗಿದೆ. ವೆಟೀರಿಯ ಜೆಜನಿಯೆಡಸ್ ಎಂಬ ವೈಜ್ಞಾನಿಕ ಹೆಸರಲ್ಲಿ ಗುರುತಿಸಲಾಗಿರುವ ಲಾವಂಚ ಸಸ್ಯವು ಹುಲ್ಲಿನ ಜಾತಿಗೆ ಸೇರಿದೆ. ಇದರ ಬೇರುಗಳು ಸುಮಾರು ೩ ಮೀಟರ್ ಆಳಕ್ಕೆ ಇಳಿಯುತ್ತದೆ. ಆದ್ದರಿಂದ ಮಣ್ಣಿನ ಸವಕಳಿಯನ್ನು ಇದು ತಪ್ಪಿಸುತ್ತದೆ ಮತ್ತು ಅಂತರ್‌ಜಲದ ಮಟ್ಟವನ್ನು ರಕ್ಷಣೆ ಮಾಡುತ್ತದೆ. ಸರಾಸರಿ ೨೦೦ ಮಿ.ಮೀ.ನಿಂದ ೬೦೦೦ ಮಿ.ಮೀಟರ್ ಮಳೆ ಬೀಳುವ ಪ್ರದೇಶಗಳಲ್ಲಿ ಬೆಳೆಯುವ ಇದು ೪೫ ಡಿಗ್ರಿ ಸೆಲ್ಸಿಯಸ್ ಉಷ್ಣಾಂಶದಲ್ಲಿ ಒಣಗದೆ ಹಸಿರಿನಿಂದ ಕಂಗೊಳಿಸುತ್ತದೆ. ಈ ಹುಲ್ಲಿನಿಂದ ಚಾಪೆ ಬೀಸಣಿಗೆ, ಗ್ರಹಾಲಂಕಾರ ವಸ್ತುಗಳನ್ನು ತಯಾರಿಸುತ್ತಾರೆ. ಈಗ ಕೇರಳದ ಮೂಲೆಗಳಲ್ಲಿ ಈ ತಯಾರಿಕಾ ಘಟಕದಲ್ಲಿ ಮಲೆಕುಡಿಯರು ಕೆಲಸ ಮಾಡುತ್ತಿದ್ದಾರೆ. ಸುಗಂಧ ದ್ರವ್ಯಗಳನ್ನು ತಯಾರಿಸುತ್ತಾರೆ ಎಂಬ ಮಾಹಿತಿಯನ್ನು ರಾಧಾಕೃಷ್ಣ ಭಡ್ತಿರವರು ತಮ್ಮ ನೀರು ನೆರಳು ಲೇಖನದಲ್ಲಿ ವಿಜಯಕರ್ನಾಟಕ ದಿನಪತ್ರಿಕೆ ದಿನಾಂಕ ೨೪.೭.೨೦೦೯ ಪುಟ ೬ರಲ್ಲಿ ವಿವರಿಸಿದ್ದಾರೆ.[೧೩] ಇದು ವಾಸ್ತವವಾಗಿ ಇದು ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದವರಲ್ಲಿ ಈಗಲೂ ಕಂಡುಬರುತ್ತದೆ ಎಂಬುದನ್ನು ಅಧ್ಯಯನದಲ್ಲಿ ಪರಿಶೀಲಿಸಿದಾಗ ಇದು ಕೇರಳದ ಕಾಸರಗೋಡು ಮತ್ತು ಮಡಿಕೇರಿ ಭಾಗದ ಪ್ರದೇಶಗಳಲ್ಲಿ ಬಳಕೆಯಲ್ಲಿರುವುದು ತಿಳಿದುಬರುತ್ತದೆ. ಲಾವಂಚ ಹುಲ್ಲುಮಾತ್ರ ಈ ಪ್ರದೇಶದ ನೆಲೆಗಳಲ್ಲಿ ಕಂಡುಬರುತ್ತದೆ.

**ಆಟಿ ಅಮವಾಸ್ಯೆ**

ದಿನಾಂಕ. ೨೨ ಜುಲೈ ೨೦೦೯ರಂದು ಬುಧವಾರ ಅಮವಾಸ್ಯೆ. ಈ ಅಮವಾಸ್ಯೆಯನ್ನು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯ ತುಳುನಾಡಿನಲ್ಲಿ 'ಆಟಿ' ಅಮವಾಸ್ಯೆ ಎಂದು ಕರೆಯುತ್ತಾರೆ. ತುಳು ಭಾಷೆಯಲ್ಲಿ ಆಟಿ ಎಂದರೆ 'ಆಷಾಡ' ಮಾಸ ಎಂದರ್ಥ. ತುಳುನಾಡಿನ ಮಾಸಗಳನ್ನೂ ಸೌರಮಾನ ಯುಗಾದಿಯ ಲೆಕ್ಕಾಚಾರದ ಪ್ರಕಾರ ಪರಿಗಣಿಸಲಾಗುತ್ತದೆ. ಈ ದಿನ ವಿಶೇಷವೆಂದರೆ ಸೂರ್ಯಗ್ರಹಣ ಸಂಭವಿಸುತ್ತದೆ. ಇದನ್ನು ಖಗ್ರಾಸ ಸೂರ್ಯಗ್ರಹಣ ಎಂದು ಕರೆಯಲಾಗುತ್ತದೆ. ಈ ದಿನವನ್ನು ತುಳುನಾಡಿನಲ್ಲಿ ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಈ ದಿನವನ್ನು ಆಟಿ ಎಂದು ಕರೆಯುತ್ತಾರೆ. ತುಳುವಿನಲ್ಲಿ ಆಟಿ ಎಂದರೆ 'ಆಷಾಡ' ಎಂದರ್ಥ. ಈ ಮಾಸದಲ್ಲಿ ಅತಿ ಹೆಚ್ಚು ಮಳೆಯಾಗುತ್ತದೆ. ರೋಗ ರುಜಿನಗಳು ಜನರನ್ನು ಅದಕ್ಕಾಗಿ ಸಾಂಪ್ರದಾಯಿಕವಾದ ವೈದ್ಯಕೀಯ ಗಿಡ ಮೂಲಿಕೆಗಳ ಸಸ್ಯ ಸಂಪತ್ತನ್ನು ಬಳಸುತ್ತ ರೋಗಗಳನ್ನು ತಡೆಯುವ ವಿಧಾನ ಇಲ್ಲಿದೆ. ತುಳುನಾಡಿನ ಜನತೆಗೆ ಇದು ಮಲೆಕುಡಿಯರಿಗೆ ಒಂದು ನಿಷೇಧ ತಿಂಗಳಾಗಿದೆ. ಈ ಅವಧಿಯಲ್ಲಿ ಯಾವುದೇ ಹಬ್ಬ ಉತ್ಸವಗಳು ನಡೆಯುವುದಿಲ್ಲ. ಈ ತಿಂಗಳ ಅವಧಿ ನಂತರ 'ಅಗೇಲು' ಹರಕೆಯನ್ನು ತೀರಿಸುವ ಕಾರ್ಯಕ್ರಮ ನಡೆಯುತ್ತದೆ. ತಾವು ಆರಾಧಿಸುವ ದೈವ ಭೂತಗಳಿಗೆ ಹರಕೆಯನ್ನು ತೀರಿಸುವ ಪದ್ಧತಿಯನ್ನು 'ಅಗೇಲು' ಎಂದು ಕರೆಯುತ್ತಾರೆ.

## ಹಾಲೆ ಮರದ ಕಷಾಯ

ದಿನಾಂಕ. ೨೨.೭.೨೦೦೯ ಬುಧವಾರ ಅಮವಾಸ್ಯೆ. ಈ ಶತಮಾನದಲ್ಲಿ ಸಂಭವಿಸುವ ಖಗ್ರಾಸ ಸೂರ್ಯಗ್ರಹಣ ಈ ದಿನದಲ್ಲಿ ಸಂಭವಿಸುತ್ತದೆ.ತುಳುನಾಡಿನ ಸಂಸ್ಕೃತಿ ಪರಂಪರೆಯಲ್ಲಿ ಈ ದಿನವನ್ನು ಆಟಿ ಅಮವಾಸ್ಯ ಎಂದು ಕರೆಯುತ್ತಾರೆ. ಈ ದಿನವನ್ನು ವಿಶೇಷವಾಗಿ ಆಚರಿಸುತಾರೆ. ಈ ದಿನದಲ್ಲಿ ಹಾಲೆ ಮರದ ಕಷಾಯವನ್ನು ಕುಡಿಯುವುದು ವಿಶೇಷವಾದ ಪದ್ಧತಿಯಾಗಿದೆ. ವರ್ಷಕ್ಕೆ ಒಮ್ಮೆ ಈ ಕಷಾಯ ವನ್ನು ತಯಾರಿಸಿ ಕುಡಿಯುವ ಆಚರಣೆ ಕಂಡುಬರುತ್ತದೆ. ಈ ಕಹಿಯಾದ ಕಷಾಯವನ್ನು ಕುಡಿದ ನಂತರ ಸಿಹಿ ತಿಂಡಿಗಳ ಸೇವನೆಯಾಗುತ್ತದೆ. ಈ ಸಂಪದಾಯಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಈ ಪದ್ಧತಿ ಮಲೆಕುಡಿಯರಲ್ಲಿ ಆಚರಣೆಯಲ್ಲಿದೆ. ಈ ಆಚರಣೆಯಿಂದ ಪ್ರಕೃತಿಯ ಪರಿಸರದೊಂದಿಗೆ ಇಲ್ಲಿನ ಜೀವನ ವಿಧಾನ ಸಂಬಂದನ್ನು ಹೊಂದಿರುವುದು ಕಂಡುಬರುತ್ತದೆ. ಈ ಆಟಿ ಅಮವಾಸ್ಯೆಯಲ್ಲಿ ಮಾತ್ರ ಹಾಲೆ ಮರದ ಕಷಾಯವನ್ನು ಏಕೆ ಕುಡಿಯ ಬೇಕು? ಎಂಬ ಬಗ್ಗೆ ನಮಗೆ ಸಿಗುವ ಉತ್ತರ, ಈ ಮರದಲ್ಲಿರುವ ಔಷಧೀಯ ಗುಣಗಳು ಸರ್ವರೋಗಕ್ಕೆ ಪರಿಹಾರವನ್ನು ನೀಡುತ್ತವೆ. ಇದಕ್ಕೆ ಆಯುರ್ವೇದದಲ್ಲಿ ಇದಕ್ಕೆ ಹೆಚ್ಚಿನ ಮಹತ್ವವಿದೆ. ಇದು ರಸದಲ್ಲಿ ಲಘು, ಸ್ನಿಗ್ದತಿಕ್ತ, ವಿಷಕಾಯದಲ್ಲಿ ಕಟು, ವೀರ್ಯದಲ್ಲಿ ಉಷ್ಣ ಎಂದು ಹೇಳಲಾಗುತ್ತದೆ. ಇದು ತ್ರಿದೋಷ ನಿವಾರಕಾ ಶಕ್ತಿಯನ್ನು ಹೊಂದಿದೆ. ತ್ರಿದೋಷಗಳಾದ ವಾತ ಪಿತ್ತ, ಕಫಗಳ ಮೇಲೆ ಇದು ಏಕಕಾಲದಲ್ಲಿ ಪರಿಣಾಮವನ್ನು ಬೀರುತ್ತದೆ. ಆದ್ದರಿಂದ ಇದು ಸಯನರೋಗ ಸಂಜೀವಿನಿವಾಗಿದೆ.

## ಹಾಲೆ ಮರದ ಮೂಲ

ಭಾರತ ಮತ್ತು ಇಂಡೊನೇಷ್ಯದ ಅರಣ್ಯ ಪ್ರದೇಶದಲ್ಲಿ ಕಂಡುಬರುವ ಈ ಹಾಲೆ ಮರವು ಅಪೋಸಿಯ ನೇಸಿಯ ಕುಟುಂಬಕ್ಕೆ ಸೇರಿದ ಸಸ್ಯವಾಗಿದೆ. ಆಯುರ್ವೇದದಲ್ಲಿ ಹೇಳುತ್ತಾರೆ. ತ್ರೀದೋಷಕ ನಿವಾರಣಾಶಕ್ತಿಯನ್ನು ಹೊಂದಿರುವ ಇದು ವಾತ, ಪಿತ್ತ, ಕಫಗಳ ಮೇಲೆ ಏಕ ಕಾಲದಲ್ಲಿ ಪರಿಣಾಮವನ್ನು ಬೀರುತ್ತದೆ. ಏಳು ಎಲೆಗಳ ವೃತ್ತಾಕರದ ಜೋಡಣೆಯ, ನಿತ್ಯವು ಹಸಿರಿನಿಂದ ಕಂಗೊಳಿಸುವ ಎಲೆಯ ಗೊಂಚಲನ್ನು ಹೊಂದಿದೆ. ಆದುದರಿದ ಈ ಮರವನ್ನು ಸಂಸ್ಕೃತದಲ್ಲಿ ಸಪ್ತವರ್ಣಿ ಎಂದು ಕರೆಯಾಲಾಗುತ್ತದೆ. ಇತರ ಹೆಸರುಗಳು: ವೃತ್ತಾಕಾರದ ಏಳು ಎಲೆಗಳನ್ನು ಹೊಂದಿರುವುದರಿಂದ ಈ ಮರಕ್ಕೆಸಂಸ್ಕೃತದಲ್ಲಿ ಸಪ್ತವರ್ಣಿ ಎಂದು ಕರೆಯಾಲಾಗುತ್ತದೆ. ವೃತ್ತಾಕಾರದ ಏಳು ಎಲೆಗಳ ಸೌಂದರ್ಯವನ್ನು ಹೊಂದಿರುವ ಇದನ್ನು ಏರುಮಣಿ ಎಂದು ಕರೆಯುತ್ತಾರೆ. ಇತರೆ ಭಾಷೆಗಳಲ್ಲಿ ಬೇರೆ ಬೇರೆ ಹೆಸರುಗಳವೆ. ಕನ್ನಡ ದಲ್ಲಿ ಹಾಲೆಮರ, ಏಳೆಲೆ, ಏರುಮಣಿ, ಬಾಳೆಎಲೆ, ಕೋಡಾತಿಮರ, ತುಳುವಿನಲ್ಲಿ ಪಾಲೆಮರ, ತಮಿಳಿನಲ್ಲಿ ಏಳಿಲೆಪಾಳ್ಯೆ, ಮಲಯಾಲಂನಲ್ಲಿ ಇಳ್ಳೆಲಂಪಾಲ, ತೆಲುಗಿನಲ್ಲಿ ಏಡಾಕುಲಾರಿಟಿಚೆಟ್ಟು, ಮರಾಠಿಯಲ್ಲಿ ಸಾತ್ವಿನಾ, ಕೊಂಕಣಿಯಲ್ಲಿ ಸಾಂತೋಣಿರೂಕ್ ಎಂದು ಕರೆಯಲಾಗುತ್ತದೆ. ಅಲ್ಲದೆ ಈ ಮರದಲ್ಲಿ ಪಿಶಾಚಿಗಳು ವಾಸವಾಗುತ್ತವೆ ಎಂಬ ನಂಬಿಕೆಯಿಂದಾಗಿ ಈ ಮರಕ್ಕೆ 'ಪಿಶಾಚಿಮರ' ಎಂದು ಕರೆಯುತ್ತಾರೆ. ಯಕ್ಷಿಪಾಲ, ಬಿಳಿಗಿಣ್ಣುಮರ, Milky pine ಕರಿಹಲಗೆಮರ, ಪಂಡಿತರ ಮರ, ವೈಜ್ಞಾನಿಕವಾಗಿ ಈ ಮರವನ್ನು Alstonic scholaris ಎಂದು ಕರೆಯುತ್ತಾರೆ.

**ವೈಶಿಷ್ಟತೆ:** ಈ ಮರವು ನವೆಂಬರ್ ತಿಂಗಳಿನಿಂದ ಜನವರಿ ತಿಂಗಳವರೆಗೆ ಮಂಜು ಹೊದ್ದ ನಶೇಯಲ್ಲಿ ಸೌಗಂಧ ಭರಿತವಾದ ಸುವಾಸನೆಯನ್ನು ಬೀರುತ್ತದೆ.ಇದು ಸರಾಸರಿ ೨೦ ಮೀಟರಿನಷ್ಟು ಎತ್ತರಕ್ಕೆ ಬೆಳೆಯಬಲ್ಲದು ಇದರ ರೆಂಬೆ-ಕೊಂಬೆಗಳು ಕೊಡೆಯಂತೆ ಹರಡುತ್ತವೆ. ಇದರಲ್ಲಿ ಬಿಳಿಯ ಶ್ವೇತ ಪುಷ್ಪದ ಗೊಂಚಲುಗಳು ಇರುತ್ತವೆ. ಗ್ರೀಷ್ಮ ಋತುವಿನಲ್ಲಿ ಕಾಯಿ ಬಿಡುತ್ತವೆ. ಈ ಕಾಯಿ ಮಹಿಳೆಯ ಹಣೆದ ಜೆಡೆಯಂತೆ ಕಾಣುತ್ತದೆ.

**ಆಟಿ ಆಚರಣೆಯ ಖಾದ್ಯಗಳು**

ತುಳುನಾಡಿನ ಆಚರಣೆಗಳಲ್ಲಿ ಆಷಾಡ ಮಾಸವನ್ನು "ಆಟಿ" ಎಂದು ಕರೆಯುತ್ತಾರೆ. ಆಟಿ ತಿಂಗಳಲ್ಲಿ ವಿಷೇಶವಾದ ತಿಂಡಿ-ತಿನಸುಗಳನ್ನು ತಯಾರಿಸಲಾಗುತ್ತದೆ. ಈ ದಿನಗಳಲ್ಲಿ ಮಾವಿನ ಮಿಡಿ, ಉಪ್ಪಿನಕಾಯಿ, ತಿಮರೆಚಟ್ನಿ, ತೆಂಗಿನ ಹಾಲು, ರಚ್ಚೆ, ಕುಕ್ಕುಚಟ್ನಿ, ಜೀಗುಜ್ಜೆ ಪದೆಂಗಿ ಗಸೆ, ತಜಂಕ್‌ಬೊಲೆ ಒಗ್ಗರಣೆ, ಚೇವುತೇಟ್ಲ, ಪಾನಕ ಅನ್ನ ಕುಡುಸಾರು ಪದ್ವೆತೇವು ಮೆಂತೆಗಂಜಿ, ಪತ್ರೊಡೆ, ಉಪ್ಪಡ್ ಪಚ್ಚಿಲ್, ಹಪ್ಪಳ, ಕಾಳುಮೆಣಸು ಕಷಾಯ, ಹಲಸಿನಕಾಯಿಗಟ್ಟಿ, ಗೆಣಸು, ಹಾಳೆ ಕಷಾಯ ಮುಂತಾದ ತಿಂಡಿತಿನಿಸುಗಳು ಪ್ರಕೃತಿಯನ್ನು ಆದರಿಸಿದ ಔಷಧೀಯ ಸಸ್ಯಮೂಲದ ಗುಣವುಳ್ಳ ಖಾದ್ಯಗಳಾಗಿವೆ. ಮಲೆಕುಡಿಯ ಬುಡಕಟ್ಟು ಸಮುದಾಯದವರು ವಾಸವಾಗಿರುವ ಪ್ರದೇಶಗಳಲ್ಲಿ ಇವು ಲಭ್ಯವಾಗಿರುತ್ತವೆ. ಇವುಗಳನ್ನು ಇವರು ಬಳಸುವುದಲ್ಲದೆ ಇತರರಿಗೂ ತಂದುಕೊಡುತ್ತಾರೆ. ರೋಗ ನಿರೋಧಕ ಶಕ್ತಿಯನ್ನು ಹೊಂದಿರುವ ಈ ಔಷಧೀಯ ಗಿಡಮೂಲಿಕೆ ಗಳನ್ನು ಬಳಸಿ ರುಚಿಕರವಾದ ತಿಂಡಿ-ತಿನಿಸುಗಳನ್ನು ತಯಾರಿಸಲಾಗುತ್ತದೆ.

**ರೋಗ ನಿವಾರಕ:** ಸರ್ವರೋಗ ಸಂಜೀವಿನಿ ಎಂದು ಕರೆಯಾಲಾಗುವ ಈ ಹಾಲೆ ಮರ ಸಕಲ ರೋಗಗಳಿಗೆಪರಿಹಾರವನ್ನು ನೀಡುತ್ತದೆ.ಎಂದು ಮಲ್ಲಿಕಾಭಟ್ ಪರಪ್ಪಾಡಿರವರು ವಿವರಿಸಿದ್ದಾರೆ. ಇದು ತ್ರಿದೋಷಕ ಗುಣವನ್ನು ಹೊಂದಿದೆ. ಹಾಲೆ ಮರದ ತೊಗಟೆಯನ್ನು ತಂದು ಇದರ ರಸದಿಂದ ಕಷಾಯ ಮಾಡುತ್ತಾರೆ. ಇದರ ಹೂವಿನಿಂದ ಚೂರ್ಣತಯಾರಿಸುತ್ತಾರೆ. ಇದರ ಹಾಲಿನಂತಹ ದ್ರವ್ಯದಲ್ಲಿ ಡೈಟಾಮೈನ್(Ditamine) ಮತ್ತು ಎಕಿಟಾನೈನ್(Echitanine) ಇರುತ್ತದೆ. ಇವು ಬ್ಯಾಕ್ಟೀರಿಯಾ ಬಗ್ಗು ಬಡಿಯುವ ಶಕ್ತಿಯನ್ನು ಹೊಂದಿದೆ. ಇದರಲ್ಲಿರುವ ರೋಗನಿರೋಧಕ ಶಕ್ತಿಯಿಂದ ಶೀತ, ಜ್ವರ, ವಾಂತಿ, ಭೇದಿಗಳ ನಿಯಂತ್ರಣವಾಗುತ್ತದೆ. ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ.

**ಆಟಿ ಕಷಾಯ**

ಈ ಕಷಾಯವನ್ನು ಆಟಿ ಅಮವಾಸ್ಯೆಯ ದಿನವೇ ಕುಡಿಯುತ್ತಾರೆ. ಈ ದಿನವೇ ಕಷಾಯ ಏಕೆ ಕುಡಿಯಬೇಕು ಎಂಬ ಪ್ರಶ್ನೆಗೆ ಮಲ್ಲಿಕಾರವರು ಕೊಡುವ ಉತ್ತರವೆಂದರೆ ಆಟಿ ತಿಂಗಳ ಮಧ್ಯದಲ್ಲಿ ಬರುವ ಅಮವಾಸ್ಯೆಯನ್ನು ಗೊತ್ತು ಮಾಡಲಾಗುತ್ತದೆ. ಅಮವಾಸ್ಯೆಯ ದಿನ ಹಾಲೆಯ ಮರದಲ್ಲಿ ನೀರಿನ ಪ್ರಮಾಣ ಕಡಿಮೆ ಇರುತ್ತದೆ. ಇದರಲ್ಲಿ ಘನ ಶಕ್ತಿ ಹೆಚ್ಚಿರುತ್ತದೆ ಎಂಬುದು ಆಯುರ್ವೇದ ಮತ್ತು ವೈಜ್ಞಾನಿಕ ಸತ್ಯವಾಗಿದೆ. ಅಮವಾಸ್ಯೆಯ ದಿನ ಮುಂಜಾನೆ ಸುರ್ಯೋದಯಕ್ಕೆ ಮೊದಲು ಹಾಲೆಮರದ ಕೆತ್ತೆಯನ್ನು ಮನೆಯ ಯಜಮಾನ ಅಥವಾ ಕೆತ್ತೆಯನ್ನುತರುವವರು ಪುರುಷರು ಮಾತ್ರ ಆಗಿದ್ದು, ಇದರ ತೊಗಟೆಯನ್ನು ತೆಗೆಯಲು ಕತ್ತಲಲ್ಲಿ ಹೋಗಬೇಕು ಕತ್ತಿಯನ್ನು ತಾಗಿಸದೆ ಚೂಪಾದ ಬೆಣಚುಕಲ್ಲನ್ನು

ಮಾತ್ರ ಬಳಸಿ ಕೆತ್ತಬೇಕು. ಯಾರತ್ರವೂ ಮಾತನಾಡಬಾರದು ವಿಶೇಷ ಎಂದರೆ ಕೆತ್ತೆ ತೆಗೆಯುವ ವ್ಯಕ್ತಿ ಬೆತ್ತಲೆಯಲ್ಲಿ ತೆಗೆಯುವ ಪದ್ಧತಿ ಇದೆಯಂತೆ. ಈ ತೊಗಟೆಯನ್ನು ತೆಗೆದು ಮನೆಗೆ ತಂದು ಅದರ ರಸವನ್ನು ತೆಗೆದು ಅದಕ್ಕೆ ಬೆಳ್ಳುಳ್ಳಿ ಮತ್ತು ಕಾಳುಮೆಣಸು ಕೆಲವು ಕಡೆ ಎಣ್ಣೆ ಸೇರಿಸಿ ಪಾಕ ಮಾಡುತ್ತಾರೆ. ಇದನ್ನು ಬೆಂಕಿಯಲ್ಲಿ ಬೆಣಚು ಕಲ್ಲು ಹಾಕಿ ಕೆಂಪು ಕೆಂಪು ಆಗುವ ಹಾಗೆ ಕಾಯಿಸುತ್ತಾರೆ. ಚೆನ್ನಾಗಿ ಕಾದ ಈ ಬೆಣಚುಕಲ್ಲನ್ನು ಈ ಪಾಕಕ್ಕೆ ಹಾಕಿ ಕುದಿಸುತ್ತಾರೆ. ಇದನ್ನುಕಷಾಯ ಮದ್ದು ಎಂದು ಕರೆಯುತ್ತಾರೆ. ಇದು ಬಹಳ ಸಂಪ್ರಾದಯಕ ಪದ್ಧತಿ. ಅರ್ಧಲೋಟದಷ್ಟು ಕಷಾಯವನ್ನು ಸುರ್ಯೋದಯಕ್ಕೆ ಮೊದಲು ಕುಟುಂಬದ ಸದಸ್ಯರೆಲ್ಲರು ಖಾಲಿ ಹೊಟ್ಟೆಗೆ ಸೇವಿಸುತ್ತಾರೆ. ನಂತರ ಮೆಂತೆಗಂಜಿ, ತೆಂಗಿನಗಂಜಿ, ಊಟಮಾಡುವ ಪದ್ಧತಿ ಇದೆ. ಇಲ್ಲಿ ಮೊದಲು ಉಷ್ಣ, ನಂತರ ತಂಪು ಸೇವನೆ ನಡೆಯುತ್ತದೆ.

**ಪತ್ತನಾಜೆ**

ತುಳುನಾಡಿನಲ್ಲಿ ನಡೆಯುವ ಹಬ್ಬ, ಜಾತ್ರೆ, ಉತ್ಸವ, ಆಚರಣೆಗಳು ಆಯಾ ಕಾಲಮಾನದ ಸಂಕೇತಗಳಾಗಿವೆ. ದಕ್ಷಿಣಕನ್ನಡ ಜಿಲ್ಲೆಯ ಜಾನಪದ, ಪಾಡ್ದನ, ಭೂತಾರಾಧನೆ, ನಾಗಾರಾಧನೆ, ಕಂಬಳ, ಬಿಸು, ಯಕ್ಷಗಾನ ಮುಂತಾದವುಗಳು ತುಳುನಾಡಿನ ಸಾಂಸ್ಕತಿಕ ಶ್ರೀಮಂತಿಕೆಯನ್ನು ಸಾರುತ್ತವೆ. ತುಳುನಾಡಿನ ಜನರು ಒಂದು ವರ್ಷವನ್ನು ಎರಡೇ ಕಾಲದಲ್ಲಿ ಕಳೆಯುತ್ತಾರೆ. ೧.ಬೇಸಿಗೆ ಕಾಲ(ಅರೆಗಾಲ) ೨. ಮಳೆಗಾಲ(ಮರೆಯಾಲ) ಚಳಿಗಾಲಕ್ಕೆ ಹೆಚ್ಚು ಪ್ರಾದಾನ್ಯತೆ ಇಲ್ಲ. ಮಳೆಗಾಲ ಪ್ರಾರಂಭಕ್ಕೆ ಮೊದಲು ಮುಂಗಾರಿನ ಮುನ್ನುಡಿಯಾಗಿ ಪತ್ತನಾಜೆ ಆರಂಭವಾಗುತ್ತದೆ ಬೇಸಿಗೆಕಾಲದ ಕೊನೆಯ ದಿನ, ತುಳುವಿನ ಭೇಷ(ವೃಷಭ) ಮಾಸದ ಹತ್ತನೇ ದಿನವನ್ನು ಪತ್ತನಾಜೆ ಎಂದು ಕರೆಯುತ್ತಾರೆ. ತುಳುವಿನಲ್ಲಿ ಪತ್ ಎಂದರೆ ಹತ್ತು ಆಜೆ ಎಂದರೆ ಒದ್ದೆ, ದಿನ ಎಂದರ್ಥ. ಪತ್ತನಾಜೆ ಎಂದರೆ ಹತ್ತನೇ ದಿನ ಎಂಬರ್ಥ ಬರುತ್ತದೆ. 'ಪತ್ತನಾಜೆಗ್ ಪತ್ ಹನಿ ಬರ್ಸ ಬರೋಡು, ಬರೊಂತ್ಂಡ್ ಆಯಿಕ್ ಪತ್ತನಾಜೆ ಆಂಡ್' ಎಂದು ಹಿರಿಯರು ನೆನಪಿಸುತ್ತಾರೆ. ಅಂದರೆ ಪತ್ತನಾಜೆಯ ದಿನ ಹತ್ತು ಹನಿಯಾದರು ಮಳೆ ಬೀಳಲೇ ಬೇಕು. ಬೀಳುತ್ತಿತ್ತು ಸಹ ಎಂಬುದನ್ನು ಇಲ್ಲಿ ಗುರುತಿಸುತ್ತಾರೆ ಅಂತೆಯೇ ತಪ್ಪದೆ ಅಂದು ಮಳೆ ಬಂದೇಬರುತ್ತದೆ ಎಂಬ ಗಟ್ಟಿತನ ಇವರಲ್ಲಿದೆ. ಈ ಮಾಸ ಮೇ ತಿಂಗಳ ೨೪ರಂದು ಪತ್ತನಾಜೆ ಆಚರಣೆ ನಡೆಯಿತು. ಮೊದಲು ಪತ್ತನಾಜೆಯ ನಂತರ ಮುಂಗಾರು ಮಳೆ ಎಡಬಿಡದೆ ಬರುತಿತ್ತು. ಕುಂಭದ್ರೋಣ ಮಳೆಗೆ ಜನರು ಎಲ್ಲಿಯು ಹೋಗಲು ಬರಲು ಸಾಧ್ಯವಾಗಾದ ಸ್ಥಿತಿ ಇತ್ತು. ಇಲ್ಲಿ ಈ ಮೂರು ತಿಂಗಳಲ್ಲಿ ಸುರಿಯುವ ಮಳೆಗೆ ಇಲ್ಲಿನ ಜನರು ತಮ್ಮ ಮನೆಯ ನಿರ್ವಹಣೆಗೆ ಬೇಕಾದ ಆಹಾರ ಪದಾರ್ಥಗಳು, ಕಟ್ಟಿಗೆ, ತೆಂಗಿನಗರಿ, ಮಾವಿನಮಿಡಿ ಎಲ್ಲವನ್ನೂ ಸಂಗ್ರಹಿಸುತ್ತಾರೆ. ಇದು ಎಲ್ಲವೂ ಪತ್ತನಾಜೆ ಒಳಗೆ ಕೂಡಿಡಬೇಕು.

**ಪತ್ತನಾಜೆಯ ವಿಶೇಷತೆಗಳು**

ಪತ್ತನಾಜೆ ಆಚರಣೆಯಲ್ಲಿ ಹಬ್ಬದ ವಾತಾವರಣವಿರುತ್ತದೆ. ಈದಿನದಲ್ಲಿ ಕೃಷಿಕೂಲಿ ಕಾರ್ಮಿಕರಿಗೆ ಇದು ಸಂಬ್ರಮದ ದಿನವಾಗಿರುತ್ತದೆ. ತಾನು ಕಾಯಕ ಮಾಡಿದ ಧಣಿಗಳ ಮನೆಯಿಂದ ಹೊಸ ಬಟ್ಟೆಗಳನ್ನು ಪಡೆಯುತ್ತಾರೆ. ಮಲೆಕುಡಿಯರು ಸೇರಿದಂತೆ ಎಲ್ಲಾ ಸಮುದಾಯದ ಜನರು ಈ ಆಚರಣೆಯಲ್ಲಿ

ಪಾಲ್ಗೊಳ್ಳುತ್ತಾರೆ. ತುಳುನಾಡಿನ ಜಾನಪದ ಕ್ರೀಡೆಗಳು, ಕೋಳಿಯಂಕ, ಚೆನ್ನಮಣಿ ಆಟಗಳು ನಡೆಯುತ್ತವೆ. ಈ ದಿನದಲ್ಲಿ ಯಕ್ಷಗಾನ ಮತ್ತು ಭೂತಾರಾಧನೆಗೆ ವಿರಾಮ ದೊರೆಯುತ್ತದೆ. ಭೂತಗಳು ಗುಡಿಸೇರುತ್ತವೆ. ಯಕ್ಷಗಾನ ಕಲಾವಿದರು ತಮ್ಮ ಪ್ರದರ್ಶನವನ್ನು ಈ ದಿನ ದೇವಾಲಯ ಗಳಲ್ಲಿ ನೀಡಿ, ತಮ್ಮ ಗೆಜ್ಜೆ ಮತ್ತು ಬಣ್ಣಕ್ಕೆ ವಿರಾಮ ನೀಡುತ್ತಾರೆ ಇಲ್ಲಿಂದ ಮಳೆಗಾಲ ಆರಂಭವಾಗುತ್ತದೆ. ಕೃಷಿ ಕಾರ್ಯಗಳು ಆರಂಭವಾಗುತ್ತವೆ. ಜನರಲ್ಲಿ ಹರ್ಷಮೂಡಿ ಗಿಡ ಮರಗಳು ಹಸಿರಾಗುತ್ತವೆ. ಇದು ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಅನುಕರಣೆಯ ಮೂಲಕ ಆಚರಣೆಯಲ್ಲಿ ಇರುತ್ತದೆ.

**ಎಂಡೋಸಲ್ಫಾನ್ ಪೀಡಿತರು**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಗೇರು ಬೆಳೆ ಸಂರಕ್ಷಣೆಗಾಗಿ ಈ ಹಿಂದೆ ಗೇರು ಅಭಿವೃದ್ದಿ ನಿಗಮದವರು ಇಲ್ಲಿನ ಗೇರು ತೋಟಗಳಿಗೆ ಎಂಡೋಸಲ್ಫಾನನ್ನು ಸಿಂಪಡಿಣೆ ಮಾಡಿದ್ದು. ಗೇರು ಹೂ ಬಿಟ್ಟು ಅದು ಕಾಯಿ ಆಗುವ ಸ್ಥಿತಿಗೆ ಬಾದರೆ ಆ ಹೂ ಹಾಗೆಯೇ ಉದುರಿ ಹೋಗುವಂತಹ ಒಂದು ರೋಗವನ್ನು ನಿಯಂತ್ರಣ ಮಾಡುವುದಕ್ಕಾಗಿ ಈ ಔಷಧಿಯನ್ನು ಕೊಕ್ಕಡ ಪ್ರಟ್ರಮೆ ನಿಡ್ಲೆಯ ಪ್ರದೇಶಗಳಲ್ಲಿ ಸಿಂಪಡಿಸಲಾಗಿತ್ತು. ಈ ಸಿಂಪಡನೆಯಿಂದಾಗಿ ಇದು ಗೇರು ತೋಟದ ರೋಗದ ಹತೋಟಿಗಿಂತ ಇಲ್ಲಿನ ಜನರ ಜೀವಕ್ಕೆ ಅಪಾಯಕಾರಿಯಾದ ದುಷ್ಪಾರಿಣಾಮವನ್ನು ಬೀರಿದೆ. ಇದರ ವ್ಯತಿರಿಕ್ತ, ಅಡ್ಡ ಪರಿಣಾಮದಿಂದಾಗಿ ಕಳೆದ ಹಲವಾರು ದಿನಗಳಿಂದ ಇಲ್ಲಿನ ಜನರು ರೋಗ ಗ್ರಸ್ತರಾಗುವುದು, ಅಂಗವಿಕಲತೆಗೆ ಒಳಗಾಗುವುದು. ಸೇರಿದಂತೆ ತುಂಬಾ ಅಪಾಯಕಾರಿಯಾದ ಸ್ಥಿತಿ ನಿರ್ಮಾಣವಾಗಿತ್ತು. ಈ ಕುರಿತು ಇಲ್ಲಿನ ಪತ್ರಕರ್ತರಾದ ಸಿದ್ದಿಕ್ ನೀರಾಜೆರವರು ಮಾಡಿದ ವಿಶೇಷ ವರದಿಯ ಫಲವಾಗಿ ಜನರಲ್ಲಿ ಜಾಗೃತಿ ಮೂಡಿತು, ಅಲ್ಲದೆ ಜನರಿಂದ ಹೋರಾಟ, ಮನವಿ ನೀಡುವುದರ ಮೂಲಕ ಸರ್ಕಾರದ ಮೇಲೆ ಒತ್ತಡವನ್ನು ತರುವ ಪ್ರಯತ್ನಗಳು ನಡೆದವು. ಈ ವಿಶೇಷ ವರದಿಯ ಮೂಲಕ ಜನಜಾಗೃತಿ ಮೂಡಿಸುವಲ್ಲಿ ಶ್ರಮಿಸಿ ಪತ್ರಕರ್ತರಾದ ಸಿದ್ದಿಕ್ ನೀರಾಜೆರವರಿಗೆ "ಪ್ರಶಸ್ತಿ" ಲಭಿಸಿದೆ. ಸರ್ಕಾರ ಇದರ ನಿಯಂತ್ರಣಕ್ಕಾಗಿ ವಿಶೇಷ ಪ್ಯಾಕೇಜ್ ಯೋಜನೆಯನ್ನು ಜಾರಿಗೆ ತಂದಿದೆ. ಅಲ್ಲದೆ ಈ ಹಿಂದೆ ೨೦೦೪ರಲ್ಲಿ ಎಂಡೋಸಲ್ಫಾನ್ ಪೀಡಿತರ ಸಮೀಕ್ಷೆಯನ್ನು ಮಾಡಲಾಗಿದೆ.

ಕಳೆದ ವರ್ಷ ೨೦೦೯ರಲ್ಲಿ ನಡೆದ ಆರೋಗ್ಯ ತಪಾಸಣಾ ಶಿಬಿರದಲ್ಲಿ ೪೨೫ ಜನರಿಗೆ ಈ ಎಂಡೋಸಲ್ಫಾನ್‌ನ ಖಾಯಿಲೆಗೆ ತುತ್ತಾಗಿರುವುದರ ಬಗ್ಗೆ ತಿಳಿದು ಬಂದಿದೆ. ೧೩೭ ಜನರಿಗೆ ಪ್ರಮಾಣ ಪತ್ರ ನೀಡಲಾಗಿದೆ. ೬೫ ಜನರಿಗೆ ಈಗ ಅಂಗವಿಕಲ ವೇತನ ಬರುತ್ತಿದೆ. ಸರ್ಕಾರ ಇದೀಗ ಎಂಡೋಸಲ್ಫಾನ್ ಪೀಡಿತರಿಗಾಗಿಯೇ ವಿಶೇಷ ಪ್ಯಾಕೇಜ್ ನೀಡುವ ಯೋಜನೆಯನ್ನು ಜಾರಿಗೆ ತರಲು ಈಗಾಗಲೇ ಆದೇಶ ನೀಡಿದೆ. ಈ ಯೋಜನೆಯ ಜಾರಿಗೆ ಸಂಬಂಧಿಸಿದಂತೆ ದಿನಾಂಕ. ೧೦.೨.೨೦೧೦ರಂದು ಬುಧವಾರ ಬೆಳಿಗ್ಗೆ ೭ ಗಂಟೆಗೆ ಸರ್ವೆಕಾರ್ಯ ಆರಂಭಿಸಲಾಗಿದೆ. ನಿಡ್ಲೆ, ಪಟ್ರಮೆ, ಕೊಕ್ಕಡ ಪ್ರದೇಶಗಳಲ್ಲಿ ೨೨೦೦ ಮನೆಗಳಿಗೆ ೩೨ ತಂಡಗಳಲ್ಲಿ ಭೇಟಿ ನೀಡಿ ಸಮೀಕ್ಷೆಯನ್ನು ನಡೆಸಲು ಸರ್ಕಾರ ಕ್ರಮ ಕೈಗೊಂಡಿದೆ. ಈ ತಂಡದಲ್ಲಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ಗ್ರಾಮಕರಣಿಕ, ಆರೋಗ್ಯ ಸಹಾಯಕಿ, ಸೇರಿ ಸಾರ್ವಜನಿಕ ಸೇವಾ ನಿರತರ ತಂಡ ರಚಿಸಲಾಗಿದೆ. ಈ ತಂಡ ಮನೆ ಮನೆಗೆ ಭೇಟಿ ನೀಡಿ ಪೀಡಿತರರನ್ನು

ಗುರುತಿಸಿದ್ದಾರೆ. ಅಂಗವಿಕಲತೆಗೆ ಸಂಬಂಧಿಸಿದಂತೆ ಕಂಡುಬಂದ ವ್ಯಕ್ತಿಗಳಿಗೆ ಗುರುತಿನ ಚೀಟಿ ವಿತರಣೆ ಮಾಡಿದ್ದಾರೆ. ಅಲ್ಲದೆ ಫೆಬ್ರವರಿ ೧೮ರಂದು ನಿಡ್ಲೆ ಶಾಲೆಯಲ್ಲಿ, ಫೆಬ್ರವರಿ ೨೦ರಂದು ಪಟ್ರಮೆ ಅನಾರು ಶಾಲೆಯಲ್ಲಿ, ಫೆಬ್ರವರಿ ೨೦ರಂದು ಕೊಕ್ಕಡ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ, ಆರೋಗ್ಯ ಶಿಬಿರವನ್ನು ನಡೆಸಲಾಗಿದೆ. ಈ ಶಿಬಿರದಲ್ಲಿ ಈಗಾಗಲೇ ಸಮೀಕ್ಷೆಯಲ್ಲಿ ಗುರುತಿಸಲಾದ ಸಂತ್ರಸ್ತರಿಗೆ ಸ್ಥಳದಲ್ಲೇ ಅಂಗವಿಕಲ ಪ್ರಮಾಣ ಪತ್ರ ನೀಡುವುದರ ಮೂಲಕ ಮುಂದೆ ಇವರಿಗೆ ಮಾಸಾಶನ ದೊರೆಯಲು ಸಹಾಯ ಮಾಡುವ ಯೋಜನೆಯಾಗಿದೆ. ಈ ಪ್ರದೇಶದ ಜನರು ಈ ಎಂಡೋಸಲ್ಫಾನ್ ಹೆಸರು ಕೇಳಿದಾಕ್ಷಣ ಭಾವುಕರಾಗಿ ಆತಂಕಕ್ಕೆ ಒಳಗಾಗುತ್ತಾರೆ. ಇದುವರೆಗೆ ಆದ ತೊಂದರೆ ಪರಿಹಾರ ನೀಡುವುದರಲ್ಲಿ ಆದ ವಿಳಂಬ ಧೋರಣೆ ಕುರಿತು ಜನರು ಆಕ್ರೋಶ ಭರಿತರಾಗುತ್ತಾರೆ. ಕೆಲವರು ದುಃಖಿತರಾಗಿ ಆತಂಕಕ್ಕೆ ಒಳಗಾಗುತ್ತಾರೆ. ಈ ವರ್ಷದ ಸಮೀಕ್ಷೆ ನಂತರ ಪೀಡಿತರ ಒಟ್ಟು ಸಂಖ್ಯೆಯಲ್ಲಿ ಮಲೆಕುಡಿಯ ಕುಟುಂಬಗಳ ಪೀಡಿತರ ಸಂಖ್ಯೆ ಇಬ್ಬರು ಮಾತ್ರ ಇದ್ದಾರೆ.

**ಎಂಡೋಸಲ್ಫಾನ್‌ನಿಂದ ಪೀಡಿತರಾದ ಇಬ್ಬರು ಮಲೆಕುಡಿಯರು**

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮಂಗಳೂರು ಆದೇಶ ಸಂಖ್ಯೆ ಎಂ.ಆರ್. ೮೮ ಮತ್ತು ೮೯.೯.೨೦೧೦, ದಿನಾಂಕ. ೨೭.೮.೨೦೦೯ರ ಪ್ರಕಾರ ಕೊಕ್ಕಡದ ಪ್ರಾಥಮಿಕ ಆರೀಗ್ಯ ಕೇಂದ್ರದ ವ್ಯಾಪ್ತಿಯಲ್ಲಿನ ಕೊಕ್ಕಡ ಪಟ್ರಮೆ, ನಿಡ್ಲೆ ಗ್ರಾಮಗಳ ವ್ಯಾಪ್ತಿಯ ಸಾರ್ವಜನಿಕರಿಗಾಗಿ ದಿನಾಂಕ ೩೧.೮.೨೦೦೯ ಮತ್ತು ೦೧.೯.೨೦೦೯ರಂದು ವೈದ್ಯಕೀಯ ತಪಾಸಣಾ ಶಿಬಿರವನ್ನು ನಡೆಸಲಾಗಿದೆ. ಈ ಶಿಬಿರದಲ್ಲಿ ಎಂಡೋಸಲ್ಫಾನ್‌ನಿಂದ ಪೀಡಿತರಾದ ರೋಗಿಗಳನ್ನು ಗುರುತಿಸಿ, ಇವರ ಅಂಗವಿಕಲತೆಯ ಪ್ರಮಾಣವನ್ನು ಗುರುತಿಸಲಾಗಿದೆ. ಈ ಶಿಬಿರದ ವರದಿಯ ಪ್ರಕಾರ ಈ ಪ್ರದೇಶದ ಗ್ರಾಮಗಳ ಒಟ್ಟು ೧೩೭ ರೋಗಿಗಳನ್ನು ಪತ್ತೆ ಮಾಡಲಾಗಿದೆ. ಇದರಲ್ಲಿ ೨ ಮಲೆಕುಡಿಯರು ಇದ್ದಾರೆ.

೧. ಕ್ರ.ಸಂ. ೧೧೭ರಲ್ಲಿ ಮೋನಿಕಾ ತಂದೆ ಮೋಹನ ಮಲೆಕುಡಿಯ ನಡುಗದ್ದೆ, ನಿಡ್ಲೆಯ ೬ ವರ್ಷದ ಹೆಣ್ಣು ಮಗು ಸೀನಯರ್ ಎಂ. ಆರ್.ನಿಂದ ಬಳಲುತ್ತಿದ್ದಾಳೆ. ಈ ಮಗುವಿಗೆ ಶೇ.೯೦ ಪ್ರಮಾಣದ ಪೀಡಿತರಾಗಿ ಬಳಲುತ್ತಿರುವುದು ಈ ಶಿಬಿರದಿಂದ ಪತ್ತೆಯಾಗಿದೆ.

೨. ಕ್ರ.ಸಂ. ೧೦೧ರ ಚಂದ್ರ, ೨೨ ವರ್ಷ ತಂದೆ ತಿಮ್ಮಪ್ಪ ಮಲೆಕುಡಿಯ, ಒಟೆಕಜೆ ಮನೆ ಪಟ್ರಮೆ. ಇವರಿಗೆ ಶೇ. ೪೦ರಷ್ಟು ಲೋವರ್ ಲಿಂಬ್ ಎಟ್ರೋಪಿ ತೊಂದರೆಯಿಂದ ಬಳಲುತ್ತಿರುವುದು ಶಿಬಿರದ ತಪಾಸಣೆಯಿಂದ ತಿಳಿದುಬರುತ್ತದೆ ಎಂಬ ವರದಿಯನ್ನು ಕೊಕ್ಕಡದ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ಜಿಲ್ಲಾ ವೈದ್ಯಾಧಿಕಾರಿಗಳಿಗೆ ವರದಿ ಮಾಡಿದ್ದಾರೆ. ಇದನ್ನು ಪರಿಶೀಲಿಸಿದಾಗ ನಾನು ಕುಟುಂಬವಾರು ಸಮೀಕ್ಷೆಯಲ್ಲಿ ಇವರು ರೋಗಪೀಡಿತರಾಗಿರುವುದು ಅಧ್ಯಯನದಲ್ಲಿ ತಿಳಿದುಬರುತ್ತದೆ.

**೩.೫. ಕುಟುಂಬ ಮತ್ತು ಆರ್ಥಿಕತೆ**

ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಹಿಂದೆ ಅವಿಭಕ್ತ ಕುಟುಂಬ ಪದ್ಧತಿ ಜಾರಿಯಲ್ಲಿದ್ದು ಈಗ ವಿಭಕ್ತ ಕುಟುಂಬ ಪದ್ಧತಿ ಮಾತ್ರ ಜಾರಿಯಲ್ಲಿರುವುದು ಹೆಚ್ಚು ಕಂಡುಬರುತ್ತದೆ. ಇವರ ಕುಟುಂಬ ಪದ್ದತ್ತಿಯಲ್ಲಿ ಪ್ರಮುಖವಾಗಿ ಮಕ್ಕಳ ಕಟ್ಟು, ಅಳಿಯಕಟ್ಟು ಎಂಬ ಎರಡು ವಿಧಗಳು ಕಂಡುಬರುತ್ತವೆ

**ಮಕ್ಕಳ ಕಟ್ಟು:** ಮಲೆಕುಡಿಯ ಸಮುದಾಯದ ಮೂಲನೆಲೆಗಳಾದ ಬಾರಿಮಲೆ, ಬಾಂಜಾರುಮಲೆ, ಅಂಬಟೆಮಲೆ ಮತ್ತು ಇಳಿಮಲೆ ಈ ನಾಲ್ಕು ಮಲೆಗಳಲ್ಲಿ ವಾಸವಾಗಿರುವ ಕುಟುಂಬಗಳಲ್ಲಿ ಮಕ್ಕಳ ಕಟ್ಟು ಸಂತಾನ ಕಂಡುಬರುತ್ತದೆ. ಪಿತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಮಕ್ಕಳ ಕಟ್ಟು ಪುರುಷಪ್ರಧಾನ್ಯತೆಯನ್ನು ಸೂಚಿಸುತ್ತದೆ. ಕುಟುಂಬದ ಜವಾಬ್ದಾರಿ ಭೂ ಒಡೆತನ ಮತ್ತು ನಿರ್ವಹಣೆ, ಆರ್ಥಿಕ ವಹಿವಾಟು ಇಲ್ಲಿ ಪುರುಷರಿಂದಾಗಿದೆ. ಆದರೂ ಮನೆ ಕೆಲಸ ಕೃಷಿ ಹೊಲ ಗದ್ದೆಗಳಲ್ಲಿ ಮೇಲುಸ್ತುವಾರಿ ಮಹಿಳೆಯರದಾಗಿದೆ. ಇಲ್ಲಿಯ ಕುಟುಂಬದ ಯಜಮಾನ ತಂದೆಯಾಗಿದ್ದು, ಕುಟುಂಬದ ಆಸ್ತಿಗೆ ವಾರಸುದಾರ, ವಂಶಾವಳಿ ಗುರುತಿಸುವುದು ತಂದೆಯ ಮೂಲಕವಾಗಿರುತ್ತದೆ. ವಿವಾಹದ ನಂತರ ಸೊಸೆಯಾಗಿ ಬಂದವಳು ಗಂಡನ ಮನೆಯಲ್ಲಿ ವಾಸಮಾಡಬೇಕು. ಇವರು ಭೂತ, ನೇಮ, ಕೋಲಗಳನ್ನು ಆಚರಣೆಮಾಡುವುದಿಲ್ಲ ಮತ್ತು ಇವರಿಗೆ ಇದರಲ್ಲಿ ನಂಬಿಕೆಯಿಲ್ಲ. ಆಧುನಿಕತೆಯ ಬದಲಾವಣೆಗನುಗುಣವಾಗಿ ಕೌಟುಂಬಿಕ ನಿರ್ವಹಣೆ ಮತ್ತು ಆರ್ಥಿಕ ಸಮಾನತೆ ಸಮನಾಗಿ ಹಂಚಿಕೆಯಾಗಿರುವುದು ಕಂಡುಬರುತ್ತದೆ.

**ಅಳಿಯಕಟ್ಟು:** ತುಳುನಾಡಿನ ಕಟುಂಬ ಪದ್ಧತಿಯಲ್ಲಿ ಅಳಿಯ ಸಂತಾನ ಪ್ರಧಾನವಾದ ಕುಟುಂಬ ಪದ್ಧತಿಯಾಗಿದೆ ಈ ಹಿನ್ನೆಲೆಯಲ್ಲಿ ಕಾಸರುಗೋಡು ಗಡಿಭಾಗದ ಪ್ರದೇಶಗಳು ಸೇರಿದಂತೆ ಬಂಟ್ವಾಳ, ಬೆಳ್ತಂಗಡಿ, ಸೂಳ್ಯ, ಸುಬ್ರಹ್ಮಣ್ಯ, ಧರ್ಮಸ್ಥಳ, ಗುಂಡ್ಯ ವ್ಯಾಪ್ತಿಯ ಪ್ರದೇಶಗಳಲ್ಲಿ ವಾಸವಾಗಿರುವ ಕುಟುಂಬಗಳು ಅಳಿಯ ಸಂತಾನಕ್ಕೆ ಸೇರಿವೆ. ಇದು ಮಾತೃಪ್ರಧಾನ ಕುಟುಂಬದ ಹಿನ್ನೆಲೆಯ ಸ್ವರೂಪವನ್ನು ಹೊಂದಿರುವ ಅಳಿಯ ಕಟ್ಟು ಮಹಿಳಾಪ್ರಧಾನ್ಯತೆಯನ್ನು ಸೂಚಿಸುತ್ತದೆ. ಇಲ್ಲಿಯ ಕುಟುಂಬದ ಹೊಣೆಗಾರಿಕೆ ತಾಯಿಯಾಗಿದ್ದರೂ ಸಹ ಪುರುಷರು ಹಕ್ಕು ಬಾಧ್ಯತೆಗಳಲ್ಲಿ ಮೇಲುಸ್ತುವಾರಿಯನ್ನು ಹೊಂದಿರುತ್ತಾರೆ. ಕುಟುಂಬದ ಆಸ್ತಿಗೆ ತಾಯಿ ಹಕ್ಕುದಾರಳಾಗಿರುತ್ತಾಳೆ ಇವರ ವಂಶಾವಳಿಯನ್ನು ತಾಯಿಯ ಮೂಲಕ ಗುರುತಿಸಲಾಗುತ್ತದೆ. ವಿವಾಹದ ನಂತರ ಅಳಿಯ ತನ್ನ ಹೆಂಡತಿ ಮನೆಯಲ್ಲಿ ವಾಸಮಾಡಬೇಕು. ಹಬ್ಬ, ಜಾತ್ರೆ, ಉತ್ಸವ, ನೇಮ ಎಲ್ಲವೂ ಆ ಕಟುಂಬದ ಹೆಣ್ಣುಮಕ್ಕಳದ್ದಾಗಿರುತ್ತದೆ. ಇಲ್ಲಿ ಗಂಡುಮಕ್ಕಳಿಗೆ ಸಹಾ ಹೊಣೆಗಾರಿಕೆ ಇರುತ್ತದೆ. ಇವರು ಭೂತ, ನೇಮ, ನಾಗಾರಾಧನೆ, ಕೋಲಗಳನ್ನು ಆಚರಣೆ ಮಾಡುತ್ತಾರೆ ಮತ್ತು ಇವರಿಗೆ ಇವುಗಳಲ್ಲಿ ನಂಬಿಕೆಯಿದೆ. ಈ ಎರಡೂ ಪಂಗಡಗಳ ವಿಶಿಷ್ಟತೆ, ಆಚರಣೆ, ಭಿನ್ನತೆಯನ್ನು ಕುರಿತು ಅಧ್ಯಯನದಲ್ಲಿ ಪರಿಗಣಿಸಲಾಗಿದೆ. ಅಳಿಯಕಟ್ಟುನವರು ಮದುವೆಗಳಿಗೆ ಬ್ರಾಹ್ಮಣ ಪುರೋಹಿತರನ್ನು ಕರೆಸುವುದಿಲ್ಲ. ಕುಟುಂಬದ ನಿರ್ವಹಣೆಗೆ ಬೇಕಾದ ಆರ್ಥಿಕ ಮೂಲವು ಕೃಷಿ ಮತ್ತು ಕೃಷಿಗೆ ಪೂರಕವಾದ ಕೂಲಿ ಕಾರ್ಮಿಕ, ದುಡಿಮೆ ಸಂಪಾದನೆಯನ್ನು ಅವಲಂಬಿಸಿದೆ. ಕುಟುಂಬದ ಪ್ರತಿಯೊಬ್ಬರು ತಮ್ಮ ತಮ್ಮ ಕೃಷಿ ತೋಟಗಳಲ್ಲಿ ದುಡಿಯುತ್ತಾರೆ. ಅಲ್ಲದೇ ಕುಟುಂಬದ ಹೊರಗೆ ತನಗೆ ಅನುಕೂಲಕರವಾದ ಉದ್ಯೋಗವನ್ನ ಮಾಡುತ್ತಾ ಜೀವನ ನಿರ್ವಹಣೆಗೆ ನೆರವಾಗುತ್ತಿದ್ದಾರೆ. ಮಹಿಳೆಯರು ಕೃಷಿ ಮತ್ತು ಪಶು ಸಂಗೋಪನೆ, ಕಾಡುತ್ಪತ್ತಿ ಸಂಗ್ರಹ ಮಾಡುತ್ತಾ ತಮ್ಮ ಆರ್ಥಿಕ ದುಡಿಮೆಯ ಮೂಲಗಳನ್ನು ಹೊಂದಿದ್ದಾರೆ. ಅಲ್ಲದೆ ಬೀಡಿ ತಯಾರಿಕೆಯಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದ ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದರಿಂದ ಬೀಡಿ ಕಾರ್ಮಿಕರಿಗೆ ಸಿಗುವ ಆರ್ಥಿಕ ಸಹಾಯ ಸಾಲ ಸೌಲಭ್ಯಗಳು ಮಕ್ಕಳಿಗೆ ವಿದ್ಯಾರ್ಥಿ ವೇತನ ಮತ್ತು ವೈದ್ಯಕೀಯ ಸೌಲಭ್ಯಗಳು ದೊರೆಯಲು ಸಾಧ್ಯವಾಗಿದೆ.

ಮಲೆಕುಡಿಯ ಕುಟುಂಬದ ಸಮುದಾಯದ ಆರ್ಥಿಕ ಮೂಲವು ಹಿಂದೆ ಕುಮರಿ ಬೇಸಾಯ ಪದ್ಧತಿಯನ್ನು ಅವಲಂಬಿಸಿದೆ. ಬದಲಾದ ಕಾಲಘಟ್ಟಕನುಗುಣವಾಗಿ ಕುಮರಿ ಬೇಸಾಯದ ಪದ್ಧತಿಯ ಬದಲಾಗಿ ಏಲಕ್ಕಿ ಕಣಗಳ ನಿರ್ಮಾಣವಾಗಿದೆ. ಅಲ್ಲದೆ ಇವರು ವಾಸವಾಗಿರುವ ಮತ್ತು ಕುಮರಿ ಬೆಳೆ ಮಾಡಿಕೊಂಡಿದ್ದ ಪ್ರದೇಶವು ಭೂಮಾಲೀಕರ ಹಿಡಿತಕ್ಕೆ ಸಿಕ್ಕ ನಂತರ ಮಲೆಕುಡಿಯರು ವಿಧಿಯಿಲ್ಲದೆ ಜಮೀನ್ದಾರರ ಅಧೀನದಲ್ಲಿ ಜೀತಕ್ಕೆ ದುಡಿಯುವ ಸ್ಥಿತಿ ನಿರ್ಮಾಣವಾಯಿತು. ಬಂಜಾರುಮಲೆ, ಅಂಬಟಮಲೆ, ಕೋಲೋಡಿ, ಇಳಿಮಲೆ, ಹಾಲಂಗಾಯ್, ಶಿಶಿಲ, ಗುಂಡ್ಯ, ಸುಬ್ರಮಣ್ಯದ ಕುಲಕುಂದ ಕಾಲೋನಿ ಮತ್ತು ನೆರಿಯಾಗಳಲ್ಲಿ ಮಲೆಕುಡಿಯರಿಗೆ ಭೂ ಸುಧಾರಣೆ ಕಾಯ್ದೆ ಪ್ರಕಾರ ಭೂಮಿ ಹಕ್ಕು ದೊರೆಯಿತು. ಇದರಿಂದಾಗಿ ಇವರು ಇಲ್ಲಿ ಭೂ ಒಡೆಯರಾದರು. ನಂತರ ಇವರು ಆರ್ಥಿಕವಾಗಿ ಸ್ವಾವಲಂಬಿಗಳಾಗಲು ಸಾಧ್ಯವಾಯಿತು.

ಈ ಸಮುದಾಯದ ಕುಟುಂಬದ ಆರ್ಥಿಕ ಮೂಲಗಳಲ್ಲಿ ಪ್ರಮುಖವಾಗಿ ನಮಗೆ ಕಂಡುಬರುವುದು ಇವರು ವಾಸವಾಗಿರುವ ಪ್ರದೇಶಗಳಲ್ಲಿನ ಶೈವ ದೇವಾಲಯಗಳು. ಇಲ್ಲಿನ ದೇವಾಲಯಗಳಿಗೆ ಇವರು ಬದ್ಧತೆ ನಿಷ್ಠೆಯನ್ನು ಹೊಂದಿದ್ದು, ತಮ್ಮ ಸೇವೆಯನ್ನು ನಿರಂತರವಾಗಿ ಸಲ್ಲಿಸುತ್ತಾ ಬಂದಿದ್ದಾರೆ. ವಾರ್ಷಿಕ ಜಾತ್ರೆ ಉತ್ಸವಗಳಲ್ಲಿ ರಥ ಕಟ್ಟುವ, ಅಲಂಕರಿಸುವ ಮೆರವಣಿಗೆ ಗಳಲ್ಲಿ ಬಾವುಟ ಪತಾಕೆ ಛತ್ರಿ ಚಾಮರಗಳನ್ನು ಹಿಡಿದು ಸಾಗುವ ಇವರ ಸೇವೆಗೆ ಪ್ರತಿಫಲವಾಗಿ ಆ ಕಾಲದಲ್ಲಿ ಇವರಿಗೆ ದೇವಸ್ಥಾನಕ್ಕೆ ಸಂಬಂಧಿಸಿದ ಭೂಮಿಯನ್ನು ಉಂಬಳಿಯಾಗಿ ಅಂದಿನ ಜಹಾಗೀರ್ದಾರ್ ಪದ್ಧತಿಯಂತೆ ನೀಡಿರುವುದು ಇಂದಿಗೂ ಕಂಡುಬರುತ್ತದೆ. ಗೇಣಿದಾರರಾಗಿ ದುಡಿದ ಇವರು ನಂತರ ಭೂ ಮಾಲೀಕರಾಗಿ ಭೂ ಒಡೆತನವನ್ನು ಹೊಂದಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ.ಇದನ್ನು ಹೊರತು ಪಡಿಸಿ ಈ ಸಮುದಾಯದ ಕುಟುಂಬಗಳು ಇಂದಿನ ಆಧುನಿಕ ದುಡಿಮೆ ಮೂಲಗಳಿಗೆ ಒಗ್ಗಿಕೊಂಡಿದ್ದಾರೆ. ಅಂಗಡಿ ವ್ಯಾಪಾರ, ಖಾಸಗಿ ದುಡಿಮೆ, ಕೊಬರಿ, ರೈಸ್‌ಮಿಲ್, ಗೋಡಂಬಿ, ಕಾರ್ಖಾನೆಗಳಲ್ಲಿ ದುಡಿಯುವುದು, ಧರ್ಮಸ್ಥಳ ಸುಬ್ರಮಣ್ಯ ದೇವಸ್ಥಾನಗಳ ಭೋಜನಾ ಶಾಲೆ, ಅತಿಥಿ ಗೃಹಗಳಲ್ಲಿ ಸಹಾಯಕರಾಗಿ ಕೆಲಸ ಮಾಡುವುದು ಕಂಡುಬರುತ್ತದೆ. ಧಾರ್ಮಿಕ ದತ್ತಿ ಇಲಾಖೆಗೆ ಒಳಪಟ್ಟ ಸುಬ್ರಮಣ್ಯ ದೇವಸ್ಥಾನದಲ್ಲಿ ಖಾಯಂ ಉದ್ಯೋಗ ಪಡೆದ ಮಲೆಕುಡಿಯ ಕುಟುಂಬಗಳಲ್ಲಿ ಸುಮಾರು ೨೦ ಜನ ನೌಕರರಿದ್ದಾರೆ. ಖಾಯಂ ಆಗುತ್ತದೆ ಎಂಬ ಭರವಸೆಗಾಗಿ ದುಡಿಯುತ್ತಿರುವವರೂ ಇಂಕ್ಕೂ ಹೆಚ್ಚು ಇದ್ದಾರೆ. ಧರ್ಮಸ್ಥಳದ ದೇವಸ್ಥಾನ, ಅತಿಥಿ ಗೃಹ, ಆಸ್ಪತ್ರೆಗಳಲ್ಲಿ, ಭೋಜನಾ ಶಾಲೆಗಳಲ್ಲಿ ದುಡಿಯುತ್ತಿದ್ದಾರೆ. ವಿಶೇಷ ಎಂದರೆ ಇವರು ವಾಸಿಸುವ ಮನೆ ಜಾಗ ಮತ್ತು ಇವರ ಕೃಷಿ ಭೂಮಿಗೆ ಒಡೆಯರು ಇಲ್ಲಿನ ಹೆಗಡೆ ಮನೆತನದವರಾಗಿದ್ದಾರೆ. ಇದು ಇವರಿಗೆ ಕೊಟ್ಟ ಉಂಬಳಿಯಾಗಿದೆ. ಇದನ್ನು ಹೊರತು ಪಡಿಸಿದರೆ ಆರ್ಥಿಕ ಅಭದ್ರತೆಯ ಕರಿನೆರಳು ಈ ಸಮುದಾಯದ ಮೇಲಾಗಿರುವುದು ಕಂಡು ಬರುತ್ತದೆ. ಕಾಡಿನಿಂದ ನಾಡಿಗೆ ಬಂದ ಈ ಸಮುದಾಯಕ್ಕೆ ಇದುವರೆಗೂ ಭೂ ಒಡೆತನದ ಹಕ್ಕು ದಾಖಲೆಗಳು ದೊರೆಯದಿರುವುದು ಒಂದು ದುರಂತವಾಗಿದೆ. ಇದರಿಂದ ಇವರು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿ ಅತಂತ್ರ ಬದುಕನ್ನು ಸಾಗಿಸುವ ಸ್ಥಿತಿ ಒದಗಿದೆ. ಇದುವರೆಗೂ ಬಂದ ಸರ್ಕಾರದ ಯೋಜನೆಗಳು ಇವರಿಗೆ ನೆಪ ಮಾತ್ರವಾಗಿದ್ದು, ಇವರ

ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಲು ಸಾಧ್ಯವಾಗಿಲ್ಲ. ಬ್ಯಾಂಕ್ ಮೂಲಕ ದೊರೆಯುವ ಸಾಲ ಸೌಲಭ್ಯಗಳಿಗೆ ಇವರ ವಾಸದ ಸ್ಥಳದ ಮತ್ತು ಭೂಮಿಯ ಪಹಣಿ ದಾಖಲೆಗಳು ಕಡ್ಡಾಯವಾಗಿ ಬೇಕು. ಆದರೆ ಇವರಿಗೆ ಈ ದಾಖಲೆಗಳೇ ಇಲ್ಲದಿದ್ದಾಗ ಇವರು ಈ ಯೋಜನೆಗಳು ಇವರಿಗೆ ದೊರೆಯುವುದಾದರೂ ಹೇಗೆ? ಆದ್ದರಿಂದ ಇವರ ಪಾಲಿಗೆ ಈ ಯೋಜನೆಗಳು ಗಗನ ಕುಸುಮಗಳಾಗಿವೆ.

ಇವರ ಈ ಅತಂತ್ರ ಆರ್ಥಿಕ ಅಭದ್ರತೆಗೆ ಸ್ವಲ್ಪ ನೆಮ್ಮದಿ ನೀಡಿದ ಮತ್ತು ಆಶಾದಾಯಕವಾದ ಯೋಜನೆ ಎಂದರೆ ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಬೆಳ್ತಂಗಡಿಯ ನಾಗರೀಕ ಸೇವಾ ಟ್ರಸ್ಟ್‌ನ ವತಿಯಿಂದ ಜಾರಿಗೆ ಬಂದ ಯೋಜನೆಗಳಾಗಿವೆ. ಇವರು ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕವಾಗಿ ಸ್ವ ಸಹಾಯ ಗುಂಪುಗಳನ್ನು ರಚಿಸಿ ಆ ಮೂಲಕ ಆರ್ಥಿಕ ಸಹಾಯ ಸಾಲ ಸೌಲಭ್ಯ ನೀಡಿದ್ದಾರೆ. ವಿಶೇಷ ಎಂದರೆ ರೂ.೪೦,೦೦೦/-ಗಳನ್ನು ಮನೆ ನಿರ್ಮಾಣಕ್ಕೆ ಶ್ರೀಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆ ನೆರವು ನೀಡಿದೆ. ಇದರ ಜೊತೆಗೆ ಕಿರು ಜಲವಿದ್ಯುತ್ ಯೋಜನೆಗೆ ಇವರು ಸಹಾಯ ಮಾಡಿದ್ದಾರೆ. ಇದರಿಂದಾಗಿ ಇವರಿಗೆ ಒಂದಿಷ್ಟು ಸ್ವಾವಲಂಬನೆಯ ಬದುಕು, ಆಸರೆ ದೊರೆತಿದೆ.

**ಮಲೆಕುಡಿಯರ ವಾಸದ ಮನೆಗಳ ಸ್ಥಿತಿ**

ಮಲೆಕುಡಿಯ ಸಮುದಾಯದ ವಾಸದ ಮನೆಗಳನ್ನು ಇವರು ಮೂಲ ಪರಂಪರೆಯಲ್ಲಿ ನಿರ್ಮಿಸಿಕೊಂಡಿದ್ದಾರೆ. ಮಲೆಕುಡಿಯರು ವಾಸಿಸುವ ಪ್ರದೇಶ ಸದಾ ನೀರು, ಹರಿಯುವ, ಫಲವತ್ತಾದ ಭೂಮಿ ಇರುವ, ಬೆಟ್ಟದ ಇಳಿಜಾರಿನ ಪ್ರದೇಶವಾಗಿದ್ದು, ಇಲ್ಲಿ ಇವರ ವಾಸದ ಮನೆಗಳು ನಿರ್ಮಾಣವಾಗುತ್ತದೆ. ಇವರು ವಾಸದ ಮನೆಗಳನ್ನು ಎಲ್ಲೆಂದರಲ್ಲೆ ನಿರ್ಮಾಣ ಮಾಡುವುದಿಲ್ಲ. ಬೆಟ್ಟಗುಡ್ಡಗಳ ಇಳಿಜಾರಿನ ಕಡೆ ಇಲ್ಲವೆ ಒಂದು ಸಮತಟ್ಟಾದ ಜಾಗದಲ್ಲಿ ನಾಲ್ಕು ಕಂಬಗಳನ್ನು ನೆಟ್ಟು ಅದರ ಮೇಲೆ ತಮ್ಮ ಪೂರ್ವಿಕರ ಕಾಲದಿಂದಲೂ ಉಪಯೋಗಿಸುತ್ತಾ ಬಂದ ಹುಲ್ಲನ್ನು ಹೊದಿಸುವರು, ನಂತರ ತಮ್ಮ ನಾಲ್ಕು ಕಡೆ ಕಂಬಗಳ ಸುತ್ತಲೂ ಒಂದೇ ಆಯಾಕಟ್ಟಿನಲ್ಲಿ ಹದ ಮಾಡಿದ ಮಣ್ಣಿನ ಗೋಡೆ ನಿರ್ಮಿಸಿ ಪೂರ್ವಾಭಿಮುಖವಾಗಿ ಒಂದು ಬಾಗಿಲು, ಎರಡು ಕಿಟಕಿ ಗಳನ್ನು ಇಡುವರು. ನಂತರ ಗೋಡೆಗಳಿಗೆ ಹದವಾಗಿ ಕಲಸಿದ ಮಣ್ಣಿನ್ನು ಬಳಿಯುವರು. ಗುಡಿಸಲಿನ ಮುಂದೆ ಅಗಲವಾಗಿ ನಯಗೊಳಿಸಿದ ಇದರ ಬಲಬದಿಗೆ ಹೊಂದು ಚಿಕ್ಕ ಗುಡಿಸಲು ಇರುತ್ತದೆ ಹಿಂಭಾಗದಲ್ಲಿನ ಬಯಲು ಜಾಗದಲ್ಲಿ ಕೈ ತೋಟವಿರುತ್ತದೆ. ಪೂಜೆಗಾಗಿ ಒಂದು ತುಳಸಿಕೊಟ್ಟೆಯು ಇರುತ್ತದೆ. ನೆಲ್ಲು ಹುಲ್ಲಿನ ಹೊದಿಕೆಯನ್ನು ಹೊಂದಿದ ಇವರ ಗುಡಿಸಲಿನ ಒಳಭಾಗ ಸ್ವಲ್ಪ ವಿಸ್ತಾರವಾಗಿದ್ದು, ಇವರೊಳಗೆ ಅಡಿಗೆ ಮನೆ, ನಡುಮನೆ, ಭೂತದ ಮನೆ, ಸಾಮಾನುಗಳನ್ನು ಇಡುವ ಮನೆ ಕೋಣೆ ಇರುತ್ತದೆ. ಈಗ ಮನೆಯ ನಿರ್ಮಾಣದ ಸ್ವರೂಪ ಬದಲಾವಣೆಯಾಗಿರುತ್ತದೆ. ಹಿಂದೆ ಮುಳಿ ಹುಲ್ಲಿನ ಮನೆಗಳನ್ನು ನಿರ್ಮಿಸಿಕೊಂಡಿದ್ದರು. ಇಲ್ಲಿಯ ಮಳೆಗಾಲದ ವಾತಾವರಣಕ್ಕೆ ಅನುಗುಣವಾಗಿ ಹೆಂಚಿನ ಹೊದಿಕೆಗಳನ್ನು ಹಾಕಿ ಮನೆ ಕಟ್ಟಿ ಕೊಂಡಿದ್ದಾರೆ. ಬಹುತೇಕವಾಗಿ ಈಗ ಇವರ ಮನೆಗಳೆಲ್ಲವೂ ಶೇ.೮೦ಕ್ಕಿಂತ ಹೆಚ್ಚು ಹೆಂಚಿನ ಮನೆಗಳಾಗಿವೆ. ವಾಸದ ಮನೆಗಳ ಪ್ರಮಾಣವನ್ನು ಪುಟ ೧೪೪ರ ವೃತ್ತ ಚಿತ್ರದ ಮೂಲಕ ತೋರಿಸಲಾಗಿದೆ. ಉತ್ತಮ ಸ್ಥಿತಿಯಲ್ಲಿರುವವರು ಮಾತ್ರ ಆರ್.ಸಿ.ಸಿ. ಮನೆಗಳನ್ನು ಹೊಂದಿ ಆರ್ಥಿಕವಾಗಿ

ಅಭಿವೃದ್ಧಿ ಹೊಂದಿದ್ದಾರೆ. ಧರ್ಮಸ್ಥಳದ ಮುಳಿಕ್ಕಾರ್ ಬಯಲಿನ ದರಖಾಸ್ತು ಭೂಮಿಯಲ್ಲಿ ಮತ್ತು ಗೋಳಿತೊಟ್ಟು ಸಮೀಪದ ಆಲಂತ್ತಾಯದಲ್ಲಿ ಎರಡು ಮುಳಿಹುಲ್ಲಿನ ಗುಡಿಸಲುಗಳಲ್ಲಿ ವಾಸಿಸುತ್ತಿರುವ ಸ್ಥಿತಿ ಅಧ್ಯಯನದಲ್ಲಿ ಕಂಡುಬಂದಿದೆ. ಇದನ್ನು ಹೊರತು ಪಡಿಸಿದಂತೆ ಬಹುತೇಕವಾಗಿ ಹೆಂಚಿನಮನೆ ವಾಸ ಇಲ್ಲಿನ ಸಾಮಾನ್ಯ ಮನೆಗಳ ಸ್ಥಿತಿಯಾಗಿದೆ. ಸುಬ್ರಮಣ್ಯ ಐತ್ತಪ್ಪ ಮಲೆಕುಡಿಯವರ ಮನೆ ಹೆಂಚಿನ ಮಾಡು ಸೋರುತ್ತಿದ್ದು, ಮಳೆಗಾಲದಲ್ಲಿ ಅದರ ರಕ್ಷಣೆಗಾಗಿ ಪ್ಲಾಸ್ಟಿಕ್ ಚೀಲಗಳನ್ನು ಹಾಕಿ ಜೀವನ ಸಾಗಿಸುವ ದುಸ್ಥಿತಿ ಕಂಡುಬರುತ್ತದೆ. ಇಲ್ಲಿನ ಬಹುತೇಕ ಹೆಂಚಿನ ಮನೆಗಳ ನಿರ್ಮಾಣಕ್ಕೆ ಸರ್ಕಾರದಿಂದ ವಸತಿ ಸೌಲಭ್ಯಗಳು ದೊರೆಯದೇ ಇರುವುದು ದುರಂತವಾಗಿದೆ. ಒಂದು ವೇಳೆ ವಸತಿ ಮಂಜೂರಾತಿಗೆ ಅರ್ಜಿ ಸಲ್ಲಿಸಬೇಕಾದರೆ ಇವರು ಬಡತನ ರೇಖೆಯಲ್ಲಿರಬೇಕು, ಬಿ.ಪಿ.ಎಲ್. ಕಾರ್ಡ್ ಇರಬೇಕು ಮತ್ತು ಜಾಗದ ದಾಖಲೆಗಳಿರಬೇಕು. ಹಾಗಾದಲ್ಲಿ ಮಾತ್ರ ಸರ್ಕಾರದ ವಸತಿ ಯೋಜನೆಗೆ ಇವರು ಅರ್ಹರಾಗುತ್ತಾರೆ. ಇವರಿಗೆ ಓಟಿನಕಾರ್ಡೊಂದನ್ನು ಹೊರತುಪಡಿಸಿದರೆ ಬೇರ್‍ಯಾವುದೇ ಸೌಲಭ್ಯಗಳಿಲ್ಲದಿರುವಾಗ ಇನ್ನೂ ವಸತಿ ಸೌಲಭ್ಯವನ್ನು ಪಡೆಯುವುದಾದರೂ ಹೇಗೆ? ಸ್ವಂತ ಖರ್ಚಿನಿಂದ ಮನೆಕಟ್ಟಿಕೊಳ್ಳಲು ಹಣದ ತೊಂದರೆ ಇನ್ನು ಇರುವುದನ್ನೇ ರಿಪೇರಿ ಮಾಡಿಕೊಳ್ಳಲು ಇವರು ವಾಸವಾಗಿರುವ ಮನೆಗಳ ಹತ್ತಿರ ಮನೆ ಸಾಮಗ್ರಿಗಳನ್ನು ಸಾಗಿಸಲು ದಾರಿಯೇ ಇರುವುದಿಲ್ಲ. ಇಂತಹ ದುಸ್ಥಿತಿಯಲ್ಲಿ ಇವರು ಮನೆಗಳನ್ನು ಕಟ್ಟಿಕೊಳ್ಳುವುದು ಇವರ ಪಾಲಿಗೆ ಒಂದು ಸವಾಲಾಗಿದೆ. ಈ ಕೆಳಗಿನ ಕೋಷ್ಟದಲ್ಲಿ ಮಲೆಕುಡಿಯ ಸಮುದಾಯದ ವಾಸದ ಮನೆಗಳ ಸ್ಥಿತಿಯನ್ನು ಕುಟುಂಬ ಮಾದರಿ ಸಮೀಕ್ಷೆ ಆಧಾರದ ಮೇಲೆ ಪರಿಗಣಿಸಲಾಗಿದೆ. ಅಧ್ಯಯನಕ್ಕೊಳಪಡಿಸಿದ ಕುಟುಂಬಗಳಲ್ಲಿ ಶೇಕಡ ೮೫ರಷ್ಟು ಹೆಂಚಿನಮನೆ ವಾಸದಲ್ಲಿದ್ದು, ಶೇ. ೮ರಷ್ಟು ಆಶ್ರಯ ಮನೆ ಸೌಲಭ್ಯವನ್ನು ಪಡೆದವರಿದ್ದಾರೆ. ಶೇ. ೧ರಷ್ಟು ಬಾಡಿಗೆ ಇದ್ದು ಇವರು ನಗರ ಪ್ರದೇಶದ ನಿವಾಸಿಗಳಾಗಿದ್ದಾರೆ. ಶೇ. ೨ರಷ್ಟು ಗುಡಿಸಲು ವಾಸಿಗಳಾಗಿದ್ದಾರೆ. ಶೇ. ೪ರಷ್ಟು ಪ್ರಮಾಣ ಆರ್.ಸಿ.ಸಿ. ಮನೆಯನ್ನು ಹೊಂದಿದ್ದಾರೆ.

**ವೃತ್ತ ಚಿತ್ರ: ೩.೫(೪)**

**ವಾಸದ ಮನೆಗಳ ಪ್ರಮಾಣ**



## ೧. ಕೃಷಿಕೂಲಿ ಮತ್ತು ಪಶುಸಂಗೋಪನೆ

ಮಲೆಕುಡಿಯ ಸಮುದಾಯದ ಪ್ರಧಾನವಾದ ಆರ್ಥಿಕ ಮೂಲವೆಂದರೆ ಕೃಷಿಯಾಗಿದೆ. ಕೃಷಿಯೇ ಇವರ ಜೀವನಾಧಾರ. ಸಾವಯವ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡು ತಮಗಿರುವ ಅಲ್ಪ ಸ್ವಲ್ಪ ಭೂಮಿಯಲ್ಲಿ ಭತ್ತ, ಅಡಿಕೆ, ತೆಂಗು ಬೆಳೆಯನ್ನು ಬೆಳೆಯುತ್ತಾರೆ. ಅಲ್ಲದೆ ಕರಿಮೆಣಸು, ಅನಾನಸ್, ಗೋಡಂಬಿ, ರಬ್ಬರ್ ಕೃಷಿ ಇವರು ಬೆಳೆಯುವ ವಾಣಿಜ್ಯ ಬೆಳೆಗಳಾಗಿವೆ. ಕೃಷಿಗೆ ಬೇಕಾದ ನೀರಾವರಿ ಮೂಲಗಳು ಪ್ರಕೃತಿ ದತ್ತವಾಗಿದ್ದು, ಮಳೆ ಆಧಾರಿತ ನದಿ, ಹೊಳೆ ಕಾಲುವೆಗಳ ಮೂಲಕ ನೀರನ್ನು ಪಡೆಯುತ್ತಿದ್ದಾರೆ. ತಮ್ಮತಮ್ಮ ಕೃಷಿ ತೋಟಗಳಲ್ಲಿ ಬಾವಿಗಳ ಮೂಲಕ ಹೊಂಡ ತೋಡಿಕೊಂಡು ತೋಡನ್ನು ನಿರ್ಮಿಸಿಕೊಂಡಿದ್ದಾರೆ. ಮದಕಗಳ ಮೂಲಕ ನೀರನ್ನು ಸಂಗ್ರಹಿಸಿಕೊಂಡು ಡೀಸೆಲ್ ಪಂಪ್ ಬಳಸಿ ಬೇಸಿಗೆಯಲ್ಲಿ ನೀರು ಹಾಯಿಸುತ್ತಾರೆ. ಹನಿ ನೀರಾವರಿ ಮತ್ತು ತುಂತುರು ನೀರಾವರಿ ಪದ್ಧತಿಯನ್ನು ಸಹ ಇವರು ಅಳವಡಿಸಿಕೊಂಡಿದ್ದಾರೆ. ಈ ಭಾಗದ ಬೇಸಿಗೆ ದಿನಗಳ ನೀರಿನ ಬವಣೆಯನ್ನು ಇವರು ಸುರಂಗದ ಮೂಲಕ ಪಡೆಯುತ್ತಿದ್ದಾರೆ. ಸುರಂಗದಿಂದ ಕೊರೆದ ರಂಧ್ರಗಳಲ್ಲಿ ಬರುವ ನೀರಿನ ಜಲ ಮೂಲದಿಂದ ಪೈಪ್‌ಗಳನ್ನು ಅಳವಡಿಸಿ ತಮಗೆ ಬೇಕಾದ ಕುಡಿಯುವ ನೀರನ್ನು ಪಡೆಯುತ್ತಿದ್ದಾರೆ. ಮತ್ತು ಇಲ್ಲಿ ಬರುವ ನೀರನ್ನು ತಮ್ಮ ಹೊಂಡಗಳಿಗೆ ಸಂಗ್ರಹಿಸಿ ಕೃಷಿಗೆ ಬಳಸುತ್ತಿದ್ದಾರೆ.

ಮಲೆಕುಡಿಯರ ಪ್ರಧಾನ ಉದ್ಯೋಗ ಕೃಷಿಯಾಗಿದೆ. ಇವರು ನೆಲೆಸಿರುವ ಭೂಮಿಗೆ ಭೂ ಮಂಜೂರಾತಿ ದಾಖಲೆಗಳು ದೊರೆಯದೇ ಇದ್ದರೂ ಇವರು ಇಲ್ಲಿ ೩೦-೪೦ ವರ್ಷಗಳಿಂದ ವಾಸವಾಗಿದ್ದಾರೆ. ಇವರ ಮನೆ ಕಟ್ಟಿ ಉಳಿದ ಜಾಗದಲ್ಲಿ ಅಡಿಕೆ, ತೆಂಗು, ಭತ್ತ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಇವರು ಸಾಂಪ್ರದಾಯಿಕ, ಸಾವಯವ ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಇವರು ತಮ್ಮ ಭೂಮಿಯಲ್ಲಿ ಅಡಿಕೆ, ತೆಂಗು ಬಾಳೆ, ಕಾಳುಮೆಣಸು, ರಬ್ಬರ್ ಬೆಳೆಯನ್ನು ಬೆಳೆಯುತ್ತಿದ್ದಾರೆ. ಭತ್ತಕ್ಕೆ ನೀರಿನ ತೊಂದರೆ ಇದ್ದರೂ ಸಹ ಇವರು ಭತ್ತದ ಬೆಳೆಯನ್ನು ಬೆಳೆಯುತ್ತಿದ್ದಾರೆ. ಇದು ಇವರು ಅನಾದಿಕಾಲದಿಂದ ಮಾಡಿಕೊಂಡು ಬಂದ ಕುಮರಿ ಬೇಸಾಯ ಪದ್ದತಿಯ ಪರಂಪರೆಯಾಗಿದೆ. ಗುಡ್ಡದಿಂದ ಬರುವ ಒರತೆ ನೀರು ಇವರ ನೀರಿನ ಮುಖ್ಯ ಮೂಲವಾಗಿದೆ. ಈ ನೀರು ಕೃಷಿಗೆ ಮತ್ತು ಕುಡಿಯಲು ಸಹ ಬಳಕೆಯಾಗುತ್ತದೆ. ಇಲ್ಲಿ ಹರಿಯುವ ತೊರೆ ಹಳ್ಳಗಳ ಮೂಲದಿಂದಲೂ ಇವರು ಕೃಷಿ ಮಾಡಿಕೊಂಡು ಬರುತ್ತಿದ್ದಾರೆ. ಇಲ್ಲಿ ಹರಿಯುವ ಹೊಳೆ ನೀರು ಕೃಷಿಗೆ ಮೂಲ ಆಧಾರವಾಗಿದೆ. ಕುಡಿಯುವ ನೀರಿಗೆ ಇವರು ಗುಡ್ಡದ ಒರತೆ ನೀರನ್ನು ಪೈಪ್ ಮೂಲಕ ಅಳವಡಿಸಿಕೊಂಡು ಬಳಸುತ್ತಿದ್ದಾರೆ. ಮಳೆಗಾಲದಲ್ಲಿ ಆದರೆ ನೀರಿನ ಒರತೆ ಸೌಲಭ್ಯ ಹೆಚ್ಚು ಇರುತ್ತದೆ. ಬೇಸಿಗೆಯಲ್ಲಿ ನೀರಿನ ತೊಂದರೆಯಾಗುತ್ತದೆ.

**ಕುಮ್ಕಿ ಭೂಮಿ:** ದಕ್ಷಿಣ ಕನ್ನಡ ಜಿಲ್ಲೆಯ ಭೂಮಿ ಸಾಗುವಳಿಯಲ್ಲಿ ಪಟ್ಟಾ ಭೂಮಿಯನ್ನು ವರ್ಗ ಭೂಮಿ ಎಂತಲೂ, ಸರಕಾರದ ಮಂಜೂರಾತಿ ಭೂಮಿಯನ್ನು ದರಕಾಸ್ತು ಭೂಮಿ ಎಂದು, ಅರಣ್ಯ ಭೂಮಿಗೆ ಹೊಂದಿಕೊಂಡಿರುವ ಸರಕಾರದ ಭೂಮಿಗೆ 'ಕುಮ್ಕಿ' ಭೂಮಿ ಎಂದು ಕರೆಯುತ್ತಾರೆ.ಹಿಂದೆ ಸರಕಾರಿ ಜಮೀನಿನ ಸುತ್ತಲೂ ಇರುವ ಸರಕಾರಿ ಜಮೀನನ್ನು 'ಕುಮ್ಕಿ' ಎಂದು ಕರೆಯುತ್ತಾರೆ. ಸರಕಾರಿ ಭೂಮಿ ಮತ್ತು ಕೃಷಿ ಜಮೀನುಗಳಿಗೆ ಹೊಂದಿಕೊಂಡು ಈ ಕುಮ್ಕಿ ಜಮೀನು ಇರುತ್ತಿತ್ತು. ಭೂ ಸುಧಾರಣೆ ಕಾಯಿದೆ ಜಾರಿಗೆ ಬಂದ ನಂತರ ಈ ಕುಮ್ಕಿ ಮೇಲಿನ ಹಕ್ಕನ್ನು ಸರಕಾರ ರದ್ದುಪಡಿಸಿದೆ.

ಇಲ್ಲಿ ಬೆಳೆಯುವ ಕಾಡು, ಗಿಡ ಮರಗಳನ್ನು ಕುಮ್ಕಿ ಕಾಡು ಎಂದು ಕರೆಯಲಾಗುತ್ತದೆ. ಇಲ್ಲಿ ಬೆಳೆಯುವ ಗಿಡ ಮರಗಳನ್ನು ಸೊಪ್ಪಿನ ಬೆಟ್ಟ ಎಂದು ಕರೆಯಲಾಗುತ್ತದೆ. ಇದರಲ್ಲಿ ಬಿದ್ದ ಒಣ ಎಲೆ ಸೊಪ್ಪು, ಒಣ ಕಟ್ಟಿಗೆ ಸಂಗ್ರಹಿಸಿದ ಸಾವಯವ ಗೊಬ್ಬರವನ್ನು ಮಾಡಿ ಕೃಷಿ ಚಟುವಟಿಕೆಗೆ ಬಳಸಲು ರೈತರಿಗೆ ಹಕ್ಕು ಇತ್ತು. ಇದಕ್ಕೆ ಕುಮ್ಕಿ ಹಕ್ಕು ಎಂದು ಕರೆಯಲಾಗುತ್ತಿತ್ತು. ಭೂ ಸುಧಾರಣೆ ಕಾನೂನು ಜಾರಿಗೆ ಬಂದ ನಂತರ ಈ ಕುಮ್ಕಿ ಹಕ್ಕನ್ನು ಸರಕಾರ ರದ್ದುಪಡಿಸಿತು. ನಂತರ ರೈತರಿಗೆ ಇದರ ಉಸ್ತುವಾರಿ ಹೊಣೆ ಕೈ ತಪ್ಪಿ ಹೋಗಿ ಈಗ ಕುಮ್ಕಿ ಕಾಡು ಕಾಣದಂತಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಅಕ್ರಮ ಸಕ್ರಮ ಭೂಮಿ ಸಾಗುವಳಿ ಪದ್ಧತಿ ಜಾರಿಗೆ ಬಂದ ನಂತರ ರೈತರು ಈ ಕುಮ್ಕಿ ಭೂಮಿಯನ್ನು ಸಹ ಅಕ್ರಮ ಸಕ್ರಮ ಕಾನೂನು ಅಡಿಯಲ್ಲಿ ಬಳಸಲು ಮುಂದಾದ ಪರಿಣಾಮವಾಗಿ ಈ ಕುಮ್ಕಿ ಕಾಡನ್ನು ಕತ್ತರಿಸಿ, ಇಲ್ಲಿ ಕೃಷಿ ಮಾಡಿ ಸಾಗುವಳಿ ಮಾಡಲು ಆರಂಭಿಸಿದರು. ಈ ಕುಮ್ಕಿ ಭಾಗದಲ್ಲಿರುವ ಗಿಡ ಮರಗಳನ್ನು ಕಡಿದು ಬರಿದು ಮಾಡಿ ಇಲ್ಲಿ ಅಡಿಕೆ, ತೆಂಗು, ಬಾಳೆ, ಗೇರು, ರಬ್ಬರ್ ನೆಟ್ಟು ಹಕ್ಕು ಪತ್ರ ಪಡೆಯುವ ಪ್ರಯತ್ನ ನಡೆಯಿತು.ಅರಣ್ಯ ಇಲಾಖೆ ಈ ಕುಮ್ಕಿ ಭೂಮಿಯಲ್ಲಿ ಅರಣ್ಯ ಬೆಳೆಸುವುದಕ್ಕೆ ಮುಂದಾಯಿತು. ನಂತರ ಇಲ್ಲಿನ ಪರಿಸರದ ರೈತರು ಈ ಪ್ರದೇಶದಲ್ಲಿ ಸೊಪ್ಪು, ತರಗಲು, ಒಣಕಟ್ಟಿಗೆ ಸಂಗ್ರಹಕ್ಕೆ ನಿಷೇಧ ಹೇರಿತು. ಇದರಿಂದ ಕೃಷಿಗೆ ಬೇಕಾದ ಸಾವಯವ ಗೊಬ್ಬರ, ಸೊಪ್ಪು, ದರಗು ಎಲೆಗೆ ತೊಂದರೆ ಆಗಿರುತ್ತದೆ. ಈಗ ಕುಮ್ಕಿ ಹಕ್ಕು ಕುರಿತು ಹಲವಾರು ವಿವಾದಗಳಿವೆ.

**೨. ಭೂ ಹಿಡುವಳಿ**

ಮಲೆಕುಡಿಯ ಸಮುದಾಯದ ಭೂ ಹಿಡುವಳಿ ಪದ್ಧತಿಯು ಪ್ರಾದೇಶಿಕವಾಗಿ ವೈವಿಧ್ಯಮಯವಾಗಿದೆ. ಮಳೆಯಾಧಾರಿತ ಕೃಷಿ ಪದ್ಧತಿಯನ್ನು ಅವಲಂಬಿಸಿರುವ ಇವರು ನೀರಾವರಿ ಮೂಲದಿಂದ ಬೇಸಾಯ ಮಾಡುತ್ತಾರೆ. ನೀರಿನ ಅಭಾವ ಇರುವ ಒಣ ಭೂ ಪ್ರದೇಶಗಳಲ್ಲಿ ಒಣ ಬೇಸಾಯ ಪದ್ಧತಿ ಇವರಲ್ಲಿ ಕಂಡುಬರುತ್ತದೆ. ಭೂದಾಖಲೆಗಳನ್ನು ಹೊಂದಿರುವ ಕುಟುಂಬಗಳು ಮತ್ತು ಹೊಂದಿಲ್ಲದಿರುವ ಕುಟುಂಬಗಳು ಕಂಡುಬರುತ್ತವೆ. ಪುಟ ೧೩೪ರಲ್ಲಿನ ಕೋಷ್ಟಕವು ಮಲೆಕುಡಿಯ ಭೂ ಹಿಡುವಳಿ ಮತ್ತು ಭೂ ವಿಸ್ತೀರ್ಣದ ಪ್ರಮಾಣವನ್ನು ಸೂಚಿಸುತ್ತದೆ ಹಾಗೂ ಪುಟ ೧೩೫ರಲ್ಲಿನ ವೃತ್ತ ಚಿತ್ರವು ಭೂಶ್ರೇಣಿ ಮತ್ತು ಶೇಕಡವಾರು ಪ್ರಮಾಣವನ್ನು ಸೂಚಿಸುತ್ತದೆ. ಈ ಕೋಷ್ಟಕದಲ್ಲಿ ಮಲೆಕುಡಿಯ ಸಮುದಾಯದ ಕುಟುಂಬವಾರು ಮಾದರಿ ಸಮೀಕ್ಷೆಯಲ್ಲಿ ಪರಿಗಣಿಸಲಾದ ಒಟ್ಟು ೫೨೧ ಕುಟುಂಬಗಳಲ್ಲಿನ ಭೂಹಿಡುವಳಿ, ಭೂಶ್ರೇಣಿಗಳ ಪ್ರಮಾಣವನ್ನು ಪರಿಗಣಿಸಲಾಗಿದೆ. ವೃತ್ತಚಿತ್ರ ೩.೫(೬)ರಲ್ಲಿ ಈ ಸಮುದಾಯದ ಭೂಶ್ರೇಣಿ ಮತ್ತು ಶೇಕಡಾವಾರು ಪ್ರಮಾಣವನ್ನು ವಿಂಗಡಿಸಲಾಗಿದೆ. ಭೂಹಿಡುವಳಿಯ ಪ್ರಮಾಣ ಮತ್ತು ಭೂಶ್ರೇಣಿಗಳನ್ನು ಇಲ್ಲಿ ನಮೂದಿಸಲಾಗಿದೆ.

## ಕೋಷ್ಟಕ ೩.೫(೫)
## ಮಲೆಕುಡಿಯರ ಭೂ ಹಿಡುವಳಿ ಮತ್ತು ಭೂ ವಿಸ್ತೀರ್ಣ ಪ್ರಮಾಣ(ಎಕರೆಗಳಲ್ಲಿ)

| ಕ್ರ. ಸಂ. | ತಾಲ್ಲೂಕು | ಕುಟುಂಬಗಳ ಸಂಖ್ಯೆ | ಭೂ ಹಿಡುವಳಿ | | | ಭೂ ಶ್ರೇಣಿಗಳು (ಎಕರೆಗಳಲ್ಲಿ) | | | | |
|---|---|---|---|---|---|---|---|---|---|---|
| | | | | | | ಬಿ | ಸಿ | ಡಿ | ಇ | ಎಫ್ |
| | | | ಒಣ | ನೀರಾವರಿ | ಒಟ್ಟು | ೧೦.೧–೨೫ | ೫.೧–೧೦ | ೨.೫–೫ | ೨.೫ | ಭೂರಹಿತರು |
| | | | ಗಂಡು | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು | ಹೆಣ್ಣು | ಒಟ್ಟು | ಗಂಡು |
| ೧ | ಬೆಳ್ತಂಗಡಿ | ೩೮೯ | ೪೧೫.೩ | ೨೮೩.೫ | ೬೯೮.೮ | ೧ | ೧೫ | ೮೩ | ೧೫೧ | ೭೬ |
| ೨ | ಸುಳ್ಯ | ೫೧ | ೪೭ | ೨೩.೫ | ೭೦.೫ | – | – | ೭ | ೩೮ | ೩ |
| ೩ | ಬಂಟ್ವಾಳ | ೩೫ | ೨೨.೪ | ೪೩.೫೬ | ೫೫.೯೬ | – | ೧ | ೮ | ೨೨ | ೧೦ |
| ೪ | ಪುತ್ತೂರು | ೪೬ | ೩೫.೭ | ೩೩.೬೬ | ೬೦.೩೬ | – | – | ೬ | ೩೧ | ೩ |
| | ಒಟ್ಟು | ೫೨೧ | ೫೨೦.೪ | ೩೮೪.೨೨ | ೮೮೫.೬೨ | ೧ | ೧೬ | ೧೦೪ | ೨೪೨ | ೯೨ |

ವೃತ್ತ ಚಿತ್ರ: ೩.೫(೬)

ಭೂಶ್ರೇಣಿ ಮತ್ತು ಶೇಕಡವಾರು ಪ್ರಮಾಣ




## ನೀರಾವರಿ ಮೂಲಗಳು

ಕೃಷಿಗೆ ಬೇಕಾದ ನೀರು ೧. ಮಳೆ ೨. ಬಾವಿ ೩. ತೋಡುಗಳ ಮೂಲಕ ದೊರೆಯುತ್ತದೆ. ವಾರ್ಷಿಕ ೬ ತಿಂಗಳವರೆಗೆ ಇಲ್ಲಿ ಮಳೆ ಬೀಳುತ್ತದೆ. ಮೇ, ಜೂನ್, ಜುಲೈ, ಆಗಸ್ಟ್, ಸೆಪ್ಟೆಂಬರ್, ಅಕ್ಟೋಬರ್ ತಿಂಗಳಲ್ಲಿ ಮಳೆ ಬೀಳುತ್ತದೆ. ಜೂನ್, ಜುಲೈ, ಆಗಸ್ಟ್ ತಿಂಗಳಲ್ಲಿ ಅತಿ ಹೆಚ್ಚು ಮಳೆ ಬೀಳುತ್ತದೆ. ಹೀಗಾಗಿ ಇಲ್ಲಿನ ಇವರ ಕೃಷಿಯು ಮಳೆಯನ್ನೇ ಆಧರಿಸಿದೆ. ಈ ಸಮಯದಲ್ಲಿ ಇವರ ಕೃಷಿ ತೋಟಗಳಲ್ಲಿ ಬಾವಿಗಳನ್ನು ಇಲ್ಲವೇ ಹೊಂಡಗಳನ್ನು ಮಾಡಿಕೊಂಡಿರುತ್ತಾರೆ. ಇಲ್ಲಿಂದ ಡೀಸಲ್ ಪಂಪ್ ಬಳಸಿ ತಮ್ಮ ಕೃಷಿಗೆ ನೀರು ಹರಿಸುತ್ತಾರೆ. ಬೇಸಿಗೆಯ ದಿನಗಳಲ್ಲಿ ತೋಡು ಸುರಂಗಗಳ ಮೂಲಕ ಒರತೆ ನೀರನ್ನು ಬಳಸಿ ಕೃಷಿ ಮಾಡುತ್ತಾರೆ. ಗುಡ್ಡದ ಎತ್ತರದ ಪ್ರದೇಶದಿಂದ ಕೊರೆದ ಸುರಂಗ ಮಾರ್ಗದ ಮೂಲಕ ಅಂತರ್ಜಲ ಬಸಿದು ಬರುವ ನೀರನ್ನು ಸಂಗ್ರಹಿಸಿ ಕೃಷಿಗೆ ಬಳಸುವ ಪದ್ಧತಿ ಇವರಲ್ಲಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದ ಕೃಷಿ ಪದ್ಧತಿಯಲ್ಲಿ ಕಂಡುಬರುವ ನೀರಾವರಿ ಮೂಲಗಳೆಂದರೆ; ೧. ನದಿ, ಹೊಳೆ ಮೂಲ, ೨. ಸುರಂಗ, ಮದಕಗಳು, ೩. ತೋಡು, ಬಾವಿಗಳು, ೪. ಕಿಂಡಿ ಅಣೆಕಟ್ಟುಗಳು, ೫. ರಿಂಗ್ ಬಾವಿಗಳ ನಿರ್ಮಾಣಗಳ ಮೂಲಕ ನೀರಾವರಿ ಸೌಲಭ್ಯವನ್ನು ಪಡೆಯುತ್ತಿದ್ದಾರೆ.

### ೧. ನದಿ, ಹೊಳೆ ಮೂಲ

ಪಶ್ಚಿಮಘಟ್ಟದ ಪ್ರದೇಶದ ವ್ಯಾಪ್ತಿಯಲ್ಲಿ ಹಲವಾರು ನದಿ, ಹೊಳೆಗಳು ಹುಟ್ಟಿ ಹರಿಯುತ್ತವೆ. ಮಳೆಗಾಲದಲ್ಲಿ ನಿರಂತರವಾಗಿ ಸುರಿಯುವ ಮಳೆಯಿಂದ ಈ ನದಿ ಹೊಳೆಗಳು ತುಂಬಿ ಹರಿಯುತ್ತವೆ. ಈ ಕಾಲವಧಿಯಲ್ಲಿ ಕೃಷಿಗೆ ಬೇಕಾಗಿರುವ ನೀರು ಪ್ರಕೃತಿದತ್ತವಾಗಿ ಯಾವುದೇ ಅಡ್ಡಿ ಆತಂಕಗಳಿಲ್ಲದೇ ಸಮೃದ್ಧವಾಗಿ ದೊರೆಯುತ್ತವೆ.

**೨. ಸುರಂಗ, ಮದಕಗಳು**

ಮಳೆಗಾಲ ಮುಗಿದ ನಂತರ ಬೇಸಿಗೆ ಕಾಲ ಪ್ರಾರಂಭವಾದರೆ ನೀರಿನ ಮೂಲದ ಅಭಾವ ನೀಗಿಸಲು ಗುಡ್ಡದಲ್ಲಿ ಸುರಂಗಗಳನ್ನು ಕೊರೆದು ಅದರ ಮೂಲಕ ಬರುವ ಅಂತರ್ಜಲ, ಬಸಿತದಿಂದ ಬರುವ ನೀರನ್ನು ಕೆಳಗಡೆ ಒಂದು ಹೊಂಡ ಅಥವಾ ತೋಡಿನಲ್ಲಿ ಸಂಗ್ರಹಿಸಿ ಕೃಷಿಗೆ ಬಳಸುವ ಪದ್ಧತಿಯನ್ನು ಮದಕಗಳೆಂದು ಕರೆಯಲಾಗುವುದು. ಇಲ್ಲಿ ಸಂಗ್ರಹವಾದ ನೀರನ್ನು ಡೀಜಲ್ ಪಂಪ್ ಮೂಲಕ ಕೃಷಿಗೆ ಬಳಸಿಕೊಳ್ಳುವ ಪದ್ಧತಿ ಇದೆ. ಇಲ್ಲಿ ಹನಿ ನೀರಾವರಿ ಪದ್ಧತಿಯನ್ನು ಸಹ ಅಳವಡಿಸಿಕೊಂಡಿರುವುದು ಕ್ಷೇತ್ರಕಾರ್ಯ ಅಧ್ಯಯನದಿಂದ ಕಂಡುಬರುತ್ತದೆ.

**೩. ತೋಡು, ಬಾವಿಗಳು**

ತಮ್ಮ ತಮ್ಮ ಕೃಷಿ ತೋಟಗಳಲ್ಲಿ ಮತ್ತು ಮನೆಗಳ ಮುಂದೆ ತಾವೇ ತೋಡಿಕೊಂಡ ಬಾವಿಗಳನ್ನು ತೋಡು, ಬಾವಿಗಳೆಂದು ಕರೆಯಲಾಗುವುದು. ಇಲ್ಲಿ ಸಂಗ್ರಹವಾದ ನೀರನ್ನು ಪಂಪ್ ಮೂಲಕ ಕೃಷಿಗೆ ಬಳಸಿಕೊಳ್ಳುತ್ತಾರೆ.

**ಚಿಲುಮೆಗಳು**: ದುಬಾರಿ ವೆಚ್ಚದಲ್ಲಿ ರಿಂಗ್ ಬಾವಿಗಳನ್ನು ನಿರ್ಮಿಸಲು ಆಗದೇ ಇರುವ ಕೃಷಿಕರು ಅಲ್ಲಲ್ಲಿ ಚಿಲುಮೆಗಳನ್ನು ತೋಡುತ್ತಾರೆ. ಇಲ್ಲಿ ಸಂಗ್ರಹವಾಗುವ ಅಂತರ್ಜಲವನ್ನು ಡೀಸೆಲ್ ಪಂಪ್ ಮೂಲಕ ತಮ್ಮ ತಮ್ಮ ಕೃಷಿಗೆ ಬಳಸುತ್ತಾರೆ. ಇಲ್ಲಿಂದ ನೀರನ್ನು ಬೇರೆ ಕಡೆ ಎತ್ತರದಲ್ಲಿ ಮಾಡಿರುವ ಅಗಲವಾದ ತೊಟ್ಟಿಗಳಿಗೆ ಹರಿಸಿ ಅಲ್ಲಿಂದ ತಮ್ಮತಮ್ಮ ತೋಟಗಳಿಗೆ ಪೈಪ್ ಲೈನ್ ಮೂಲಕ ಹರಿಸುತ್ತಾರೆ. ಇದಕ್ಕೆ ಸ್ಪ್ರಿಂಕ್ಲರ್ ವ್ಯವಸ್ಥೆ ಸಹ ಅಳವಡಿಸಲಾಗಿದೆ.

ಪುತ್ತೂರು ತಾಲೂಕಿನ ಇರ್ದೆ ಬೆಟ್ಟಂಪಾಡಿ ಗ್ರಾಮ ಪಂಚಾಯತಿ ವ್ಯಾಪ್ತಿಯ ಇರ್ದೆ ಗ್ರಾಮಕ್ಕೆ ಸೇರಿದ ಪೈಂತಿ ಮೋಗೇರಿನಲ್ಲಿ ಸೀರೆಹೊಳೆ ನದಿ ದಡದಲ್ಲಿ ಬೆಂದ್ರ್ ತೀರ್ಥವಿದೆ. ಇಲ್ಲಿ ಕಿಂಡಿ ಅಣೆಕಟ್ಟು ಇದೆ. ಇದರಲ್ಲಿ ಚಿಲುಮೆ, ಸುರಂಗ ಬಾವಿ ಮಾಡಿಕೊಂಡು ಮಲೆಕುಡಿಯರು ಮತ್ತು ಇತರರು ತಮ್ಮ ಕೃಷಿಗೆ ನೀರನ್ನು ಪಡೆಯುತ್ತಿದ್ದಾರೆ.

**೪. ಕಿಂಡಿ ಅಣೆಕಟ್ಟು**

ಪ್ರಕೃತಿದತ್ತವಾದ ನೀರನ್ನು ಬಳಸಲು ಮಾನವನು ಬಳಸುವ ವಿಧಾನ, ತಂತ್ರಜ್ಞಾನ ಕೌಶಲ್ಯಗಳ ಪ್ರತೀಕವಾಗಿ ಈ ಕಿಂಡಿ ಅಣೆಕಟ್ಟುಗಳು ಕಂಡುಬರುತ್ತವೆ. ಈ ನದಿ ತೀರದ ಎರಡೂ ಕಡೆಯ ರೈತರು ತಮ್ಮ ಕೃಷಿಗೆ ಬೇಕಾದ ನೀರನ್ನು ಇಲ್ಲಿಂದಲೇ ಪಡೆಯುತ್ತಾರೆ. ಬೇಸಿಗೆಯಲ್ಲಿ ಈ ನದಿ ಬರಿದಾದಾಗ ಅಂತರ್ಜಲದ ಮಟ್ಟ ಕಡಿಮೆಯಾಗಿ ನೀರಿನ ಅಭಾವ ಕಂಡುಬರುತ್ತದೆ. ರೈತರು ತಮ್ಮ ಅಂತರ್ಜಲ ಪೂರೈಕೆಯ ಮಟ್ಟ ಹೆಚ್ಚಿಸಿಕೊಳ್ಳಲು ಮತ್ತು ಕೃಷಿಗೆ ನೀರು ಸರಬರಾಜು ಮಾಡಿಕೊಳ್ಳಲು ಈ ಕಿಂಡಿ ಅಣೆಕಟ್ಟುಗಳನ್ನು ನಿರ್ಮಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇಲ್ಲಿ ಹರಿಯುವ ನದಿಗೆ ತಡೆಗೋಡೆ ನಿರ್ಮಿಸುವ ವ್ಯವಸ್ಥೆಯೇ ಕಿಂಡಿ ಅಣೆಕಟ್ಟು. ನದಿಗೆ ಅಡ್ಡವಾಗಿ, ಉದ್ದವಾಗಿ ಎತ್ತರದಲ್ಲಿ ಕಿಂಡಿಗಳನ್ನು ಹೊಂದಿದ ಸೇತುವೆ ನಿರ್ಮಾಣವಾಗುತ್ತದೆ. ಇದಕ್ಕೆ ಅಡ್ಡಲಾಗಿ ಎರಡೂ ಕಡೆ ಮರದ ಹಲಗೆಗಳನ್ನು ಜೋಡಿಸಿ ಇದರ ಮಧ್ಯದಲ್ಲಿ ಉಸುಕು ತುಂಬಿಸಲಾಗುತ್ತದೆ. ಇಲ್ಲಿ ಹರಿದು ಬರುವ ನೀರು ನಿಲ್ಲುವುದಕ್ಕೆ

ವ್ಯವಸ್ಥೆಯಾಗುತ್ತದೆ. ಇಲ್ಲಿನ ಕಿಂಡಿಗಳ ಮೂಲಕ ನೀರು ಹರಿದು ಮುಂದೆ ಸಾಗುತ್ತದೆ. ಅಲ್ಲದೆ, ಈ ಅಣೆಕಟ್ಟು ತುಂಬಿ ನೀರು ನಿಲ್ಲುತ್ತದೆ. ಈ ಭಾಗದಲ್ಲಿ ಅಂತರ್ಜಲದ ಪ್ರಮಾಣವು ಹೇರಳವಾಗಿರುತ್ತದೆ. ಇದು ತುಂಬಿ ಭರ್ತಿಯಾಗಿ ಹರಿದು ಮುಂದೆ ಸಾಗುತ್ತದೆ. ಅಲ್ಲದೆ ಇದು ಇಲ್ಲಿನ ಜನರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಲು ಮೆಲುಸೇತುವೆಯಾಗುತ್ತದೆ. ಈ ಕಿಂಡಿ ಅಣೆಕಟ್ಟಿಗೆ ಸರ್ಕಾರ ನೆರವು ನೀಡುತ್ತದೆ. ಇದರ ನಿರ್ಮಾಣ, ದುರಸ್ಥಿ ವೆಚ್ಚ, ಉಸ್ತುವಾರಿಯನ್ನು ಈ ಪ್ರದೇಶದ ಕೃಷಿಕರೇ ಭರಿಸುತ್ತಾರೆ. ಇದು ಇಲ್ಲಿನ ಕೃಷಿಕರ ಅಂತರ್ಜಲದ ವೃದ್ಧಿಯ ಒಂದು ವಿಧಾನವಾಗಿದೆ. ಈ ಕಿಂಡಿ ಅಣೆಕಟ್ಟುಗಳ ನಿರ್ಮಾಣದ ವಿಧಿ ವಿಧಾನ, ಕೌಶಲ್ಯ, ತಂತ್ರಜ್ಞಾನವು ನಮಗೆ ಒಂದು ಸವಾಲು ಅನಿಸುತ್ತದೆ.

ಇರ್ದೆ ಬೆಟ್ಟಂಪಾಡಿ ಪರಿಸರದಯಲ್ಲಿ ಹರಿಯುವ ಹರಿಯುವ ಹೊಲಗಳಲ್ಲಿ ಅಲ್ಲಲ್ಲಿ ಕಿಂಡಿ ಅಣೆಕಟ್ಟುಗಳು ಕಂಡುಬರುತ್ತವೆ. ಇದು ಇಲ್ಲಿನ ಜನರ ಸಂಘಟಿತ ಪ್ರಯತ್ನದ ಫಲವಾಗಿ ನಿರ್ಮಾಣವಾಗುತ್ತದೆ ಮತ್ತು ಪ್ರಯೋಜನವಾಗುತ್ತದೆ. ಕೆಲವು ಕಡೆಗಳಲ್ಲಿನ ಗುಂಪುಗಾರಿಕೆಯಿಂದಾಗಿ ಇದಕ್ಕೆ ಸಹ ತೊಂದರೆಯಾಗುತ್ತಿರುವುದು ಕಂಡುಬರುತ್ತದೆ. ಈಗ ಈ ಕಿಂಡಿ ಅಣೆಕಟ್ಟು ಪ್ರದೇಶದ ಫಲಾನುಭವಿಗಳಲ್ಲಿನ ಹೊಂದಾಣಿಕೆ ಅಭಾವದಿಂದ ವಿವಾದಗಳು ಉಂಟಾಗಿವೆ.

**೫. ರಿಂಗ್ ಬಾವಿಗಳ ನಿರ್ಮಾಣ:** ಜನಸಮುದಾಯದ ಸಂಘಟಿತ ಪ್ರಯತ್ನದ ಫಲವಾಗಿ ಕಿಂಡಿ ಅಣೆಕಟ್ಟುಗಳು ನಿರ್ಮಾಣವಾಗುತ್ತಾ ಬಂದಿವೆ. ಇದರಿಂದಾಗಿ ಬೇಸಿಗೆಯಲ್ಲಿ ಅಂತರ್ಜಲ ರಕ್ಷಣೆಯಾಗಿ ಕೃಷಿಗೆ ಬೇಕಾದ ನೀರು ಲಭ್ಯವಾಗುತ್ತದೆ. ಇದಲ್ಲದೆ ಇಲ್ಲಿನ ನದಿ-ಸರೋವರಗಳ ಎರಡು ಬದಿಗಳಲ್ಲಿ ಅಲ್ಲಲ್ಲಿ ರಿಂಗ್ ಬಾವಿಗಳನ್ನು ತೋಡಲಾಗಿದೆ. ಆಳವಾಗಿ ರಿಂಗ್ ಬಾವಿಗಳನ್ನು ತೋಡಿ ಸಿಮೆಂಟ್ ಹಾಕಿ ಮುಚ್ಚಲಾಗಿದೆ. ಇಲ್ಲಿಂದ ಪಂಪ್ ಮೂಲಕ ನೀರನ್ನು ಹಾಯಿಸುವ ಪದ್ಧತಿಯಿದೆ. ಇಲ್ಲಿಂದ ನೀರನ್ನು ಬೇರೆ ಕಡೆಗೆ ಪಂಪ್ ಹಾಕಿ ಸಂಗ್ರಹಿಸಲಾಗುತ್ತದೆ. ನಂತರ ಕೃಷಿಗೆ ಬಳಕೆಯಾಗುತ್ತದೆ. ಶ್ರೀಮಂತ ಕೃಷಿಕರು ದುಬಾರಿ ವೆಚ್ಚದಲ್ಲಿ ಈ ರಿಂಗ್ ಬಾವಿಗಳನ್ನು ನಿರ್ಮಿಸಿಕೊಂಡಿದ್ದಾರೆ.

**ಪಶುಸಂಗೋಪನೆ**

ಈ ಸಮುದಾಯದ ಕೃಷಿಗೆ ಪೂರಕವಾದ ಪಶು ಪಾಲನೆ ಇವರಲ್ಲಿ ಕಂಡುಬರುತ್ತದೆ. ಕ್ಷೇತ್ರಕಾರ್ಯಕ್ಕೆ ಹೋದಾಗ ಪ್ರತಿಯೊಂದು ಕುಟುಂಬದಲ್ಲಿ ಹಸು ಮತ್ತು ನಾಯಿ, ಬೆಕ್ಕು ಕೋಳಿ ಸಾಕಾಣಿಕೆ ಕಂಡುಬರುತ್ತದೆ. ಇವರ ಪಶುಸಂಗೋಪನೆಯಿಂದ ಹಾಲನ್ನು ಪಡೆಯುತ್ತಾರೆ. ಕೊಟ್ಟಿಗೆ ಗೊಬ್ಬರ ಮತ್ತು ಗಂಜಿಯನ್ನು ಅಡಿಕೆ ತೋಟಕ್ಕೆ ಸಾವಯವ ಗೊಬ್ಬರವನ್ನಾಗಿ ಬಳಸುತ್ತಿರುವುದು ಅಧ್ಯಯನದಿಂದ ಕಂಡುಬಂದಿರುತ್ತದೆ. ಕ್ಷೇತ್ರಕಾರ್ಯಕ್ಕೆ ಹೋದಲೆಲ್ಲಾ ನಮ್ಮನ್ನು ಮೊದಲು ಸ್ವಾಗತಿಸುವುದು ಮಾತ್ರವಲ್ಲ, ಅಡ್ಡಗಟ್ಟಿ ನಿಲ್ಲಿಸುತ್ತಿದ್ದ ಇವರ ನಾಯಿಗಳನ್ನಂತು ಮರೆಯುವಂತಿಲ್ಲ.

**೩. ಜೀತ**

ಮಲೆಕುಡಿಯ ಸಮುದಾಯವು ತಮ್ಮ ಮೂಲ ನೆಲೆಗಳಾದ ಬಾಂಜಾರುಮಲೆ, ನೆರಿಯಾಗಳಲ್ಲಿನ ಎಸ್ಟೇಟ್ ಭೂಮಾಲೀಕರ ಅಧೀನದಲ್ಲಿ ಜೀತಕ್ಕಿದ್ದು, ತಮ್ಮ ಜೀವನ ನಡೆಸಿರುವುದು ತಿಳಿದುಬರುತ್ತದೆ. ಇಲ್ಲಿನ ಧಣಿಗಳು ಇವರಿಗೆ ಬೇಕಾದ ದವಸಧಾನ್ಯ, ಉಪ್ಪುಮೆಣಸು ಮತ್ತು ಬಟ್ಟೆ ನೀಡಿ ದುಡಿಸಿಕೊಂಡಿರುವ ಅಂಶ ಅಧ್ಯಯನದಲ್ಲಿ ತಿಳಿದುಬರುತ್ತದೆ. ಇದರ ಪ್ರತೀಕವಾಗಿ ಈಗಲೂ ಇವರ ಹೆಣ್ಣುಮಕ್ಕಳು ಸೀರೆ

ಉಡುವ ಸಂಪ್ರದಾಯದ ಹಿನ್ನೆಲೆಯಲ್ಲಿ ಇದು ಗೋಚರವಾಗುತ್ತದೆ. ಇವರು ಓಡಾಡಲು ದಾರಿಗೆ ಅನುಮತಿ ಮತ್ತು ಇವರ ಎಸ್ಟೇಟ್‌ನಲ್ಲೇ ದುಡಿಯುತ್ತಾ ಬಂದಿರುವುದು ಹಿಂದಿನ ಜೀತ ಪದ್ಧತಿಯ ಕುರುಹುಗಳನ್ನು ಸಂಕೇತಿಸುತ್ತದೆ. ಭೂಸುಧಾರಣೆ ಕಾಯ್ದೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೇಲೆ ದೌರ್ಜನ್ಯ ಕಾಯ್ದೆ ಜಾರಿಗೆ ಬಂದ ನಂತರ ಇವರು ಜೀತ ಪದ್ಧತಿಯಿಂದ ದೂರವಾದರೂ ಸಹ ಈಗಲೂ ಬಾಂಜಾರುಮಲೆಯಿಂದ ಹೊರಬರಬೇಕಾದರೆ ಹಿಂದಿನ ನಿರ್ಬಂಧ, ನಿಯಮಗಳನ್ನು ಸ್ಮರಿಸುತ್ತಾರೆ.

**೪. ಊಳಿಗ**

ಮಲೆಕುಡಿಯ ಸಮುದಾಯವು ತಾವು ಆರಾಧಿಸುವ ದೇವಸ್ಥಾನಗಳಿಗೆ ಊಳಿಗರಾಗಿ ದುಡಿಯುತ್ತಾ ಬಂದಿದ್ದಾರೆ. ತಮ್ಮ ಸಮೀಪದ ಜಾತ್ರೆ, ಉತ್ಸವಗಳಲ್ಲಿ ರಥ ಕಟ್ಟುವ, ಉತ್ಸವಗಳಲ್ಲಿ ಮಾಡುವ ಇವರ ಕೆಲಸವು ಊಳಿಗವನ್ನಾಧರಿಸಿದೆ. ಇದನ್ನು ನಾವು ದೇವಸ್ಥಾನದ ಊಳಿಗ ಕಲ್ಪನೆಯಲ್ಲಿ ಅಧ್ಯಯನ ಮಾಡಿದ್ದೇವೆ.

**೩.೬. ಸಮುದಾಯ ಮತ್ತು ಆರ್ಥಿಕತೆ**

ಮಲೆಕುಡಿಯ ಸಮುದಾಯದ ಆರ್ಥಿಕ ವ್ಯವಸ್ಥೆಯು ಇವರು ಆಚರಣೆ ಮಾಡಿಕೊಂಡು ಬಂದಿರುವ,

೧. ಕುಮರಿ ಬೇಸಾಯ ಪದ್ಧತಿ, ೨. ಜೀತ ಪದ್ಧತಿ, ೩. ಗೇಣಿ ಪದ್ಧತಿ, ೪. ಧಣಿ ಒಕ್ಕಲು, ೫.ಭೂಸುಧಾರಣೆ ನೀತಿಗಳು ಈ ಸಮುದಾಯದ ಆರ್ಥಿಕತೆಯನ್ನು ಪ್ರತಿನಿಧಿಸುತ್ತವೆ.

**೧. ಕುಮರಿ ಬೇಸಾಯ ಪದ್ದತಿ:** ಮಲೆಕುಡಿಯ ಬುಡಕಟ್ಟು ಸಮುದಾಯದ ಪ್ರಧಾನವಾದ ಮೂಲ ವೃತ್ತಿ ಕೃಷಿಯಾಗಿರುತ್ತದೆ. ಹಿಂದೆ ಇವರು ಕುಮರಿ ಬೇಸಾಯ ಪದ್ದತಿಯನ್ನು ಅಳವಡಿಸಿಕೊಂಡು ಕೃಷಿ ಮಾಡುತ್ತಿದ್ದರು. ಇದು ಅಂದಿನ ಕಾಲದ ಅವಧಿಯ ಕೃಷಿ ಪದ್ದತಿಯನ್ನು ಸೂಚಿಸುತ್ತದೆ. ಇವರು ವಾಸಮಾಡುತ್ತಿದ್ದ ಇಳಿಜಾರಾದ ಗುಡ್ಡದ ಕಾಡನ್ನು ಕಡಿದು ಬಯಲುಮಾಡಿ ಆ ಬಯಲುಜಾಗದಲ್ಲಿ ನೆಲವನ್ನು ಹದಮಾಡಿ ಬತ್ತದ ಬೆಳೆಯನ್ನು ಬೆಳೆಯುವ ಪದ್ದತಿಯನ್ನು ಕುಮರಿ ಬೇಸಾಯ ಪದ್ದತಿ ಎಂದು ಕರೆಯಲಾಗುವುದು.ಆ ಕಾಲದ ಅವಧಿಯಲ್ಲಿ ಕೃಷಿಗೆ ಇವರು ಎತ್ತು ಕೋಣಗಳನ್ನು ಬಳಸದೆ ತಮ್ಮ ಮಾನವ ಶಕ್ತಿಯನ್ನು ಬಳಸಿ ಭೂಮಿಯನ್ನು ಅಗೆತ ಮಾಡುವ ಪದ್ದತಿಯಾಗಿದೆ. ಇಲ್ಲಿನ ಜೋಗು ನೀರಿನ ಬಸಿತದಿಂದ ಗದ್ದೆ ಕೃಷಿ ಮಾಡುವ ಪರಂಪರೆ ಇವರದ್ದಾಗಿದೆ. ಈ ಹಿಂದೆ ಜಾರಿಯಲ್ಲಿದ್ದ ಈ ಪದ್ಧತಿಯು ಈಗ ಇವರಲ್ಲಿ ಕಂಡುಬರುವುದಿಲ್ಲ. ಆದರೆ ಇದರ ಪರಂಪರೆ ಆಚರಣೆಗಳು ಮಾತ್ರ ಈಗಲೂ ಇವರಲ್ಲಿ ಜೀವಂತವಾಗಿವೆ. ಇದನ್ನಾಧರಿಸಿದ ಕೃಷಿ ವಿಧಾನ ಈಗಲೂ ಇವರಲ್ಲಿ ಕಂಡುಬರುತ್ತದೆ.

**ಕುಮರಿ ಬೇಸಾಯ ಪದ್ಧತಿಯ ವೈಶಿಷ್ಟ್ಯತೆಗಳು**

೧. ಗುಡ್ಡದ ಇಳಿಜಾರು ಮತ್ತು ಜೋಗು ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಇಲ್ಲಿನ ಗಿಡಮರಗಳನ್ನು ಕಡಿದು ಕೃಷಿ ಯೋಗ್ಯ ಭೂಮಿಯನ್ನಾಗಿ ಮಾಡಿಕೊಳ್ಳುತ್ತಾರೆ.

೨. ಈ ನೆಲವನ್ನು ಹದ ಮಾಡಲು ಎತ್ತು ಎಮ್ಮೆ ಕೋಣಗಳನ್ನು ಬಳಸದೇ ತಮ್ಮ ಕೈಯಿಂದಲೇ ಚೂಪಾದ ಗಟ್ಟಿ ಮರದ ಕೋಲುಗಳನ್ನು ಬಳಸಿ ನೆಲವನ್ನು ಹಗೆತ ಮಾಡುತ್ತಾರೆ.

೩. ಇಲ್ಲಿ ಇವರು ಮಾನವ ಶಕ್ತಿಯನ್ನು ಬಳಸಿಕೊಳ್ಳುತ್ತಾರೆ.

೪. ಕೃಷಿಗೆ ಬೇಕಾದ ಬಯಲು ಜಾಗದಲ್ಲಿ ಹಗೆತ ಮಾಡಿದ ಭೂಮಿ ಸಿದ್ಧವಾದಾಗ ಆ ಜಾಗಕ್ಕೆ ಭತ್ತವನ್ನು ಚೆಲ್ಲುತ್ತಾರೆ.

೫. ಒಂದು ಸಾರಿ ಈ ಪ್ರದೇಶದಲ್ಲಿ ಬೆಳೆ ತೆಗೆದರೆಂದರೆ ಮತ್ತೆ ಆ ಪ್ರದೇಶವನ್ನು ಬಿಟ್ಟು ಬೇರೆ ಪ್ರದೇಶಕ್ಕೆ ಸ್ಥಳಾಂತರಗೊಳ್ಳುತ್ತಾರೆ.

೬. ಈ ಸ್ಥಳಾಂತರದಿಂದ ಭೂಮಿಯ ಸಾರ ಸಂರಕ್ಷಣೆಯಾಗುತ್ತದೆ ಎಂಬ ಭಾವನೆ ಇವರದ್ದಾಗಿರುತ್ತದೆ.

೭. ಕೃಷಿ ಭೂಮಿಯಲ್ಲಿ ಬೆಳೆ ರಕ್ಷಣೆಗೆ ಅಲ್ಲಿಯೇ ಗುಡಿಸಲುಗಳನ್ನು ಹಾಕಿರುತ್ತಾರೆ.

೮. ಎತ್ತರದ ಗುಡಿಸಲುಗಳಲ್ಲಿದ್ದು ಜಿಗಳೆ ಮತ್ತು ಕಾಡು ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರು.

೯. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸ್ಥಳಾಂತರ ಮಾಡುತ್ತಾ ಕಾಡುಕಡಿದು ಬರಿದು ಮಾಡಿ ಕೃಷಿ ಯೋಗ್ಯ ಭೂಮಿಯನ್ನು ಮಾಡುವ ಪರಿಣಿತಿ ಇವರಲ್ಲಿದೆ.

ಈಗ ಈ ಕುಮರಿ ಬೇಸಾಯ ಪದ್ಧತಿ ಮಾಯವಾಗಿದೆ. ಆದರೆ ಇಂದಿಗೂ ಈ ಸಮುದಾಯದವರು ತಮ್ಮ ಹಿಂದಿನ ಕುಮರಿ ಬೇಸಾಯದ ನೆಲೆಗಳನ್ನು ತೋರಿಸುತ್ತಾ ಅದೆಲ್ಲಾ ಈಗ ನಮ್ಮ ಕೈ ತಪ್ಪಿ ಹೋಗಿದೆ. ಅದು ಅಗೋ ನಾವು ಕೂತು ಇದ್ದ ಜಾಗ ಎಂದೆಷ್ಟೇ ತಮ್ಮ ಹಿಂದಿನ ದಿನಗಳನ್ನು ನೆನಪು ಮಾಡಿಕೊಳ್ಳುತ್ತಾರೆ.

**೨. ಜೀತ ಪದ್ಧತಿ**

ಕುಮರಿ ಬೇಸಾಯ ಪದ್ಧತಿ ಮಾಯವಾದ ನಂತರ ಇವರು ವಾಸವಾಗಿರುವ ನೆರೆಯ ಭೂಪ್ರದೇಶವು ಭೂ ಮಾಲೀಕರ ಒಡೆತನಕ್ಕೆ ಸೇರಿದ ನಂತರ ಇವರ ಅಧೀನದಲ್ಲಿ ಮಲೆಕುಡಿಯರು ಜೀತದಾಳುಗಳಾಗಿ ದುಡಿಯಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು ಎಂಬುದು ತಿಳಿದು ಬರುತ್ತದೆ. ಆಧುನಕ ಬದಲಾವಣೆಗಳು ಮತ್ತು ಜೀತ ಮತ್ತು ಕಾಯ್ದೆಗಳ ಪರಿಣಾಮವಾಗಿ ಜೀತ ಪದ್ಧತಿಯಿಂದ ಇವರು ಕೃಷಿ ಕೂಲಿ ಕಾರ್ಮಿಕರಾಗಿ ದುಡಿಯಲು ಆರಂಭಿಸಿದರು. ಇದರ ಸೂಚಕವಾಗಿ ಬಾಂಜಾರು ಮಲೆಯ ಮಲೆಕುಡಿಯ ಸಮುದಾಯದವರು ವೈ.ಎಂ.ಕೆ ಎಸ್ಟೇಟ್‌ನಲ್ಲಿ ಇಂದಿಗೂ ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಅವರು ಬಂಜಾರು ಮಲೆಯಿಂದ ಹೊರಗೆ ಬರಬೇಕಾದರೆ ಈ ವೈ.ಎಂ.ಕೆ. ಎಸ್ಟೇಟ್‌ನ್ನು ದಾಟಿಯೇ ಬರಬೇಕು. ಈ ವೈ.ಎಂ.ಕೆ. ಎಸ್ಟೇಟ್‌ನ ಬಿಗಿಭದ್ರತೆಗಳು ಇವರನ್ನು ಈಗಲೂ ನಿರ್ಬಂಧ ಕ್ಕೊಳಪಡಿಸಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಪ್ರತಿ ಸೋಮವಾರ ಇವರಿಗೆ ದುಡಿಯುಮೆಯಿಂದ ಬಿಡುವು ದೊರೆಯುತ್ತದೆ. ಸೋಮವಾರದ ದಿನ ಇವರಿಗೆ ವಾರದ ಸಂತೆಯಾಗಿರುತ್ತದೆ. ಕಿಕ್ಕಿಂಜಕ್ಕೆ ಬಂದು ಇಡೀ ದಿನ ಸಂತೆಯಲ್ಲಿ ಖರೀದಿಸಿಕೊಂಡು ಸಂಜೆ ಹಿಂದಿರುಗಿ ಹೋಗುತ್ತಾರೆ. ಮತ್ತೇ ಇವರು ನಾಡಿನ ಕಡೆಗೆ ತಿರುಗಿ ಬರಬೇಕಾದರೆ ಒಂದು ವಾರ ಕಳೆಯಬೇಕು. ಅಪರಿಚಿತರಿಗೆ ಈಗಲೂ ಇಲ್ಲಿ ಪ್ರವೇಶ ನಿರ್ಬಂಧವಿದೆ. ಇದು ಹಿಂದಿನ ಜೀತ ಪದ್ಧತಿಯ ಕಾಲದಿಂದ ಜಾರಿಗೆ ಬಂದ ನೀತಿ ಎಂಬುದು ಗೋಚರವಾಗುತ್ತದೆ.

ಇವರದೇ ಆದ ಎರಡು ಜೀಪುಗಳಲ್ಲಿ ಸಮೀಪದ ಕಿಕ್ಕಿಂಜಕ್ಕೆ ಹೋಗಿಬರುತ್ತಿದ್ದಾರೆ. ಇದು ಇವರಿಗೆ ತುಂಬಾ ದುಬಾರಿಯಾಗುತ್ತದೆ. ಆದರೂ ಇದು ಅನಿವಾರ್ಯವಾಗಿದೆ. ನೆರಿಯಾದ ಅಂಬಟೆಮಲೆ.

ಬಾಂಜಾರು ಮಲೆ, ಪ್ರದೇಶಗಳಲ್ಲಿ ಡಿಕ್ಲರೇಷನ್ ಮೂಲಕ ಭೂಮಿ ಹಂಚಿಕೆ ಹೋರಾಟ ಮಾಡಿದ್ದಾರೆ. ನೆರಿಯಾದ ಹೆಬ್ಬಾರಿಂದ ಆಗುವ ತೊಂದರೆಯ ವಿರುದ್ದ ಮಲೆಕುಡಿಯ ಸಮುದಾಯದಲ್ಲಿ ಜಾಗೃತಿಯನ್ನುಂಟುಮಾಡಿ ಈ ಸಮುದಾಯಕ್ಕೆ ಇಲ್ಲಿ ಆಗುವ ಅನ್ಯಾಯವನ್ನು ಹೋಗಲಾಡಿಸುವಲ್ಲಿ ಶ್ರಮಿಸಿದ್ದಾರೆ. ಹೆಬ್ಬಾರರ ಗೇಟಿನ ಬಾಗಿಲು ತೆಗೆಸುವಲ್ಲಿನ ಹೋರಾಟ ಒಂದು ಮೈಲುಗಲ್ಲಾಗಿದೆ. ಸಮುದಾಯದ ಸಂಘಟಿತ ಹೋರಾಟದ ಫಲವಾಗಿ ಅಲ್ಲಿನ ಜೀತಪದ್ದತಿ ಹೋಗಲಾಡಿಸಲು ಸಾಧ್ಯವಾಗಿದೆ. ಆಗ ನೆರಿಯಾದ ಹೆಬ್ಬಾರರ ಮನೆಯಲ್ಲಿ ಕೂಲಿ ಕೆಲಸ ಮಾಡಿಕೊಂಡು, ಕಾಡುತ್ಪತ್ತಿ ಮೂಲಕ ಜೀವನ ಮಾಡುತ್ತಿದ್ದ ಮಲೆಕುಡಿಯರಿಗೆ ಸ್ವತಂತ್ರವಾದ ಜೀವನಕ್ಕೆ ಅಚಕಾಶವಿರಲಿಲ್ಲ. ನೆರಿಯಾದ ಹೆಬ್ಬಾರ ಮನೆಯಲ್ಲಿ ಜೀತದಾಳುಗಳಾಗಿ ಇವರು ಹೆಬ್ಬಾರ ಆಶ್ರಯದಲ್ಲಿ ಶೋಷಣೆಗೆ ಒಳಗಾಗಿದ್ದರು. ಈ ವಿಷಯ ಆಗಿನ Director of social welfare Board ನಲ್ಲಿ ಚರ್ಚೆಯಾಯಿತು. ಇದರ ಪರಿಣಾಮದಿಂದಾಗಿ ಕೇಂದ್ರ ಸರ್ಕಾರದಿಂದ 'NCRB Project' ಮಂಜೂರಾಯಿತು. ಇದರ ಜೊತೆಗೆ ಒಟ್ಟು ೧೨ ಯೋಜನೆಗಳು ಮೈಸೂರು ರಾಜ್ಯಕ್ಕೆ ಆಗ ಮಂಜೂರಾದವು ಅವುಗಳಲ್ಲಿ ಬಿಳಿಗಿರಿ ರಂಗನ ಬೆಟ್ಟ ನಾಗರಹೊಳೆ, ಯಳಂದೂರು, ಕೊಳ್ಳೆಗಾಲ ಸೇರಿದಂತೆ ಬೆಳ್ತಂಗಡಿ ಎಲ್ಲಾ ಪ್ರದೇಶಕ್ಕೆ ಸಹ ಈ ಯೋಜನೆಗಳು ಜಾರಿಗೆ ಬಂದಿದ್ದವು. ಅಲ್ಲದೆ ಪಕ್ಕ ಕೃಷಿ ಪರಿವರ್ತನೆಗೆ ಅನುಕೂಲವಾಗುವ ಯೋಜನೆ ಇದಾಗಿತ್ತು ಎಂಬುದನ್ನು ಕೆ. ನಾರಾಯಣರವರು ಹೇಳಿದ್ದಾರೆ.

ಕರ್ನಾಟಕದ ಬುಡಕಟ್ಟು ಸಮುದಾಯದವರಲ್ಲಿ ಜೀತಪದ್ಧತಿ ಹೆಚ್ಚು ಕಂಡುಬರುತ್ತದೆ. ಇವರಲ್ಲಿ ಬಹುಸಂಖ್ಯಾತರು ಜೀತದಾಳುಗಳಾಗಿದ್ದಾರೆ. ತುರ್ತು ಪರಿಸ್ಥಿತಿಯ ಕಾಲದವಧಿಯಲ್ಲಿ ಕರ್ನಾಟಕದಲ್ಲಿ ಅತಿ ಹೆಚ್ಚು ಜೀತ ಪದ್ಧತಿ ಪ್ರಕರಣಗಳು ಕಂಡುಬಂದಿವೆ. ೧೯೭೫ರ ಜೀತ ಪದ್ಧತಿ ನಿಷೇಧ ಕಾಯಿದೆ ಪರಿಣಾಮವಾಗಿ ಹಲವಾರು ಜೀತದಾರರಿಗೆ ವಿಮುಕ್ತಿ ದೊರೆಯಿತು. ಬಾಂಜಾರುಮಲೆಯಲ್ಲಿ ಜೀತಗಾರರಾಗಿದ್ದ, ಮಲೆಕುಡಿಯರು ಸಹ ಈ ಕಾಯಿದೆಯಿಂದ ಪ್ರಯೋಜನವನ್ನು ಪಡೆದು ಜೀತ ವಿಮುಕ್ತರಾದರು. ಆದರೂ ಈ ಪ್ರದೇಶವನ್ನು ಬಿಟ್ಟು ಹೊರಗೆ ಬರದೆ ಇರುವಂತಹ ಸ್ಥಿತಿಯಲ್ಲಿದ್ದ ಇವರು ಆ ಕಾಲದ ಧಣಿಗಳು ಕೊಡುತ್ತಿದ್ದ ಉಪ್ಪು ಮೆಣಸಿನಕಾಯಿ ಹೊಗೆ ಸೊಪ್ಪು ಒಂದಿಷ್ಟು ಕಾಳು ಪಡೆದೇ ಜೀತಕ್ಕೆ ದುಡಿಯುವ ಸ್ಥಿತಿಯಲ್ಲಿದ್ದು, ಹೊರ ಜಗತ್ತನ್ನ ಕಾಣದೆ ಕಾಡಿನಲ್ಲಿ ಕತ್ತಲೆ ಬದುಕನ್ನು ಸಾಗಿಸುತ್ತಿದ್ದರು. ಬಾಂಜಾರುಮಲೆಯಿಂದ ಇವರು ಹೊರಬರಬೇಕಾದರೆ ಇಲ್ಲಿನ ಹೆಬ್ಬಾರರ ಅಪ್ಪಣೆ ಬೇಕಾಗಿತ್ತು. ಇವರ ಎಸ್ಟೇಟ್‌ನ ಗೇಟ್ ತೆಗೆದಾಗ ಮಾತ್ರ ಇವರು ಹೊರ ಬರಬೇಕಾಗಿತ್ತು. ಅಂತಹ ಸ್ಥಿತಿಯಲ್ಲಿ ಹೊರಗಿನವರ ಅವಕಾಶವಾದರೂ ಎಲ್ಲಿ ಬರಬೇಕು. ಸಂಶೋಧನೆಗಾಗಿಯೂ ಅಧ್ಯಯನಕ್ಕಾಗಿಯೂ ಇಲ್ಲಿಗೆ ಹೊರಟವರ ಗತಿ ದೇವರಿಗೆ ಗೊತ್ತು. ಹಲವಾರು ಸಂಶೋಧಕರು ಇಂತಹ ವ್ಯವಸ್ಥೆಯನ್ನು ಕಂಡು ಹೊರಜಗತ್ತಿಗೆ ಬೆಳಕು ತೋರಿಸಿದರ ಫಲವಾಗಿ ಇವರ ಬದುಕಿಗೆ ಒಂದಿಷ್ಟು ಮುಕ್ತಿ ದೊರೆಯುವಂತಾಯಿತು. ಸಂಶೋಧಕರಾದ ಹಿ.ಚಿ.ಬೋರಲಿಂಗಯ್ಯನವರು ಅವರ ತಂಡದೊಂದಿಗೆ ಬಾಂಜಾರುಮಲೆಗೆ ಹೋಗಿ ಬರುವಷ್ಟರ ಒಳಗೆ ಬರುತ್ತಿದ್ದ ದಾರಿಗೆ ನಾಟಾದ ಲಾರಿ ಅಡ್ಡ ನಿಂತು ಸತಾಯಿಸಿದ ಕ್ಷಣಗಳು ಪತ್ರಿಕೆಗಳಲ್ಲಿ ಮತ್ತು ಮಂಗಳೂರು ಜಿಲ್ಲಾ ಪರಿಷತ್‌ನಲ್ಲಿ ಪ್ರತಿಭಟನೆಯಾಗಿ ಈಗ ಇವರಿಗೆ ಹೋಗಿಬರಲು ಅವಕಾಶವಾಗಿದೆ. ಆದರೆ ಒಂದು ನಿರ್ಬಂಧ ಇವರಲ್ಲಿ ಈಗಲೂ ಇದೆ ಪ್ರತಿ

ಸೋಮವಾರ ಮಾತ್ರ ಇವರು ವಾರದ ರಜೆಯನ್ನು ಪಡೆದು ಹೊರಗೆ ಬಂದು ಹೋಗುವುದಕ್ಕೆ ಅವಕಾಶವಿದೆ. 'ಮಂಗಳೂರಿನಲ್ಲಿರುವ ಅವರ ಧಣಿಯ ಅಪ್ಪಣೆ ಪಡೆದು ಆ ಪ್ರದೇಶಕ್ಕೆ ಹೋಗಬೇಕಂತೆ. ಹೊಳೆನೀರಿಗೆ ದೋಣೆನಾಯಕನ ಅಪ್ಪಣೆ ಎಂಬಂತೆ ಸಾವಿರಾರು ವರ್ಷಗಳಿಂದ ಆ ಮಣ್ಣಿನಲ್ಲಿ ಬದುಕುತ್ತಿರುವ ಮಲೆಕುಡಿಯರನ್ನು ನೋಡಲು ಕೇರಳದ ಬಂಡವಾಳಶಾಹಿಯ ಅಪ್ಪಣೆ ಪಡೆಯಬೇಕಂತೆ? ಇದು ನಮ್ಮ ಪ್ರಜಾಪ್ರಭುತ್ವ'[೧೪] ಎಂದು ಹಿ.ಚಿ. ಬೋರಲಿಂಗಯ್ಯರವರು ಚಾರ್ಮಾಡಿಯ ಪಾತಾಳ ಲೋಕದ ಪುಟ ೫೭ರಲ್ಲಿ ಹೇಳಿರುವುದು ಜೀತ ಪದ್ಧತಿಯ ಮತ್ತೊಂದು ಮುಖವೇ ಆಗಿದೆ.

### ೩. ಗೇಣಿ ಪದ್ಧತಿ

ಜೀತ ಪದ್ಧತಿಯ ನಂತರ ಅಸ್ತಿತ್ವಕ್ಕೆ ಬಂದ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನಾಧರಿಸಿದ ಪದ್ಧತಿ ಎಂದರೆ ಗೇಣಿ ಪದ್ಧತಿ. ಭೂಮಾಲೀಕರಲ್ಲಿ ಗೇಣಿಗೆ ದುಡಿಯುವ ಮಲೆಕುಡಿಯ ಸಮುದಾಯವು ಇಲ್ಲಿನ ಜಮೀನ್ದಾರರ ಅಧೀನದಲ್ಲಿ ಗೇಣಿದಾರರಾಗಿಯೇ ಇರಬೇಕಾಯಿತು. ಅಂದು ಗೇಣಿದಾರಿಕೆಯಿಂದ ಪಡೆದ ಭೂಮಿಗಳು ಇಂದಿಗೂ ಇದರ ಇತಿಹಾಸವನ್ನು ಸಾರುತ್ತವೆ. ಗೇಣಿಯಿಂದ ಪಡೆದ ಭೂಮಿಯಂತಲೇ ಹೆಮ್ಮೆಯಿಂದ ಹೇಳಿಕೊಳ್ಳುವ ಮಲೆಕುಡಿಯ ಸಮುದಾಯ ಗೇಣಿ ಪದ್ಧತಿಯ ಬದ್ಧತೆ ಮತ್ತು ವ್ಯವಸ್ಥೆ ಇತಿಹಾಸವನ್ನು ಬಿಚ್ಚಿಡುತ್ತಾರೆ.

### ೪. ಧಣಿ ಒಕ್ಕಲು

ಜಮೀನ್ದಾರರ ಅಧೀನದಲ್ಲಿ ಗೇಣಿ ದುಡಿದು ಬೆಳೆಯ ಒಂದಿಷ್ಟು ಪಾಲನ್ನು ಕರಾರಿನ ಪ್ರಕಾರ ತಮ್ಮ ಧಣಿಗಳಿಗೆ ಒಪ್ಪಿಸುವ ಪರಂಪರೆ ಇಲ್ಲಿ ಕಂಡುಬರುತ್ತದೆ. ಧಣಿ ಮತ್ತು ಆಳು ನಡುವಿನ ಸಾಮಾಜಿಕ ಆರ್ಥಿಕ ವ್ಯವಸ್ಥೆಯನ್ನಾಧರಿಸಿದ ಸಂಬಂಧಗಳು ಧಣಿ ಒಕ್ಕಲು ಪದ್ಧತಿಯಲ್ಲಿ ಕಂಡುಬರುತ್ತವೆ. ಸೌರಮಾನ ಯುಗಾದಿಯ ದಿನ ಆಚರಿಸುವ ಬಿಸು ಪರ್ಬದಲ್ಲಿ ಧಣಿ ಮತ್ತು ಗೇಣಿದಾರನ ಸಂಬಂಧಗಳು ನಿರ್ಣಯವಾಗುತ್ತವೆ. ಹಿಂದೆ ಗೇಣಿದಾರರ ಅವಧಿ ಪಾಲು ನೀಡುವಿಕೆ ಪ್ರಮಾಣ ಹಣಕಾಸಿನ ಲೆಕ್ಕಾಚಾರಗಳನ್ನು ಚುಕ್ತಾ ಮಾಡಿ ಹೊಸ ಲೆಕ್ಕಾಚಾರಗಳನ್ನು ಮತ್ತು ಕರಾರುಗಳನ್ನು ನಿಗದಿಪಡಿಸುವ ಪದ್ಧತಿ ಕಂಡುಬರುತ್ತದೆ. ಅಷ್ಟೇ ಅಲ್ಲ ಗೇಣಿದಾರರು ತಮ್ಮ ಒಡೆಯರಿಗೆ ವಸ್ತ್ರ, ಗೌರವ ನೀಡಿ ನಮಸ್ಕರಿಸಿ ಆಶೀರ್ವಾದ ಪಡೆಯುವ ಪದ್ಧತಿ ಆಚರಣೆಯಲ್ಲಿದೆ.

ಈ ಹಿಂದೆ ಆಚರಣೆಯಲ್ಲಿದ್ದ ಗೇಣಿ ಪದ್ಧತಿಯಲ್ಲಿ ಈ ಹಬ್ಬದ ದಿನ ಭೂ ಮಾಲೀಕರಿಗೆ ಭೂಒಕ್ಕಲು ಮಾಡುತ್ತಿದ್ದ ಗೇಣಿದಾರರು ಭೂ ಮಾಲೀಕರಾದ ತಮ್ಮ ಧಣಿಗಳಿಗೆ ತರಕಾರಿ, ಕೃಷಿ ಸಾಮಾಗ್ರಿಗಳನ್ನು ಒಯ್ಯಲು ಬಳಸುವ ಬುಟ್ಟಿ, ಚಾಪೆ, ಸೌಟು ಹಾಗೂ ಕೃಷಿಗೆ ಬೇಕಾದ ನೇಗಿಲು, ನೊಗ, ಕತ್ತಿ, ಗುದ್ದಲಿ ಮುಂತಾದ ವಸ್ತುಗಳನ್ನು ತಂದು ತಮ್ಮ ಧಣಿಗಳಿಗೆ ಒಪ್ಪಿಸುವ ಪದತಿಯನ್ನು 'ಧಣಿ ಒಕ್ಕಲು' ಎಂದು ಕರೆಯಲಾಗುತ್ತದೆ. ಈ ಹಬ್ಬದ ದಿನ ತಮ್ಮ ಗೇಣಿದಾರರು ತಮ್ಮ ಭೂಮಾಲೀಕರಿಗೆ ತಮ್ಮ ಒಕ್ಕಲು ಅಥವಾ ಗೇಣಿಯ ಫಸಲಿನಲ್ಲಿ ನಿಗದಿಪಡಿಸಿದ ಪಾಲು ಭಾಗವನ್ನು ತಂದು ಒಪ್ಪಿಸುವುದು, ಜಮೀನಿನ ಗೇಣಿ ಉಳುಮೆಯ ಅವಧಿಯನ್ನು ನವೀಕರಿಸಿಕೊಳ್ಳುವ ಮತ್ತೊಂದು ಅವಧಿಗೆ ನಿಗಧಿಪಡಿಸಿಕೊಂಡು ಮುಂದುವರೆಯುವುದು ಸೇರಿದಂತೆ ತಮ್ಮ ಕೃಷಿ ಕಾರ್ಯಚಟುವಟಿಕೆಗಳನ್ನು ಆರಂಭಿಸುವುದು, ಭೂಮಿಯನ್ನು

ನೇಗಿಲಿನಿಂದ ಉಳುವ, ಬಿತ್ತನೆ ಬೀಜ ಸಿದ್ಧಪಡಿಸುವ, ಭತ್ತದ ಗದ್ದೆ ಸಿದ್ಧಪಡಿಸುವುದು ಸೇರಿದಂತೆ ತಮ್ಮ ಎಲ್ಲಾ ಕೃಷಿ ಕಾರ್ಯಗಳಿಗೆ ಶುಭ ಘಳಿಗೆ ಬಿಸು ಪರ್ಬವಾಗಿದೆ. ವರ್ಷ ವರ್ಷದ ಆರಂಭದ ಮೊದಲ ದಿನವನ್ನು 'ಪಗ್ಗು' ಎಂದು ಕರೆಯಲಾಗುತ್ತದೆ. ಈ ಪಗ್ಗುವಿನಿಂದ ಸುಗ್ಗಿಯವರೆಗೆ ತುಳುನಾಡಿನ ವಾರ್ಷಿಕ ಕ್ಯಾಲೆಂಡರ್ ಆರಂಭವಾಗುತ್ತದೆ. ಭೂ ಸುಧಾರಣೆ ಕಾಯಿದೆ ಜಾರಿಗೆ ಬಂದ ನಂತರ ಈ ಗೇಣಿ ಪದ್ಧತಿ ತನ್ನ ಪ್ರಧಾನ್ಯತೆ ಕಳೆದುಕೊಂಡಿತು. "ಉಳುವವನೇ ಭೂಮಿಯ ಒಡೆಯ" ನೆಂಬ ಘೋಷಣೆಯಿಂದಾಗಿ ಈ ಗೇಣಿ ಭೂ ಒಕ್ಕಲು ಪದ್ಧತಿ ಅವನತಿಯ ಹಾದಿ ಹಿಡಿಯಿತು. ಆದರೂ ಸಹ ಇಂದಿನ ಆಧುನಿಕ ಯುಗದಲ್ಲಿ ಆಚರಿಸುವ ಈ ಬಿಸು ಪರ್ಬ ಸೌರಮಾನ ಯುಗಾದಿಯ ಆಚರಣೆಯಿಂದಾಗಿ ಈ ಪ್ರದೇಶದಲ್ಲಿನ ಭೂಮಾಲೀಕರು ಮತ್ತು ಗೇಣಿದಾರರ ಸಾಮಾಜಿಕ ಆರ್ಥಿಕ ಸಂಬಂಧಗಳು ಇಂದಿಗೂ ಅಸ್ಥಿತ್ವದಲ್ಲಿರುವುದು ಕಂಡುಬರುತ್ತದೆ. ಈ ಬಿಸು ಪರ್ಬದ ದಿನ ಮುಂಜಾನೆ ಸೂರ್ಯನ ಉದಯಕ್ಕಿಂತ ಮೊದಲೇ ತಮ್ಮ ಮನೆಯ ಅಂಗಳದಲ್ಲಿ ರಂಗೋಲಿಯಿಂದ ಸಿಂಗರಿಸಿದ ಇಲ್ಲವೇ ಅಂಗಳದ ಮುಂದಿನ ಜಗಲಿಯ ಮೇಲೆ ಮಂಚದಲ್ಲಿ ತಾವು ಬೆಳೆದ ತರಕಾರಿ, ಹಣ್ಣು ಹಂಪಲು, ವೀಳ್ಯ, ಅಡಿಕೆ, ತೆಂಗು, ಇದರ ಮಧ್ಯದಲ್ಲಿ ದೀಪ, ಕನ್ನಡಿಯನ್ನು ಇಟ್ಟು ಸಿದ್ಧಪಡಿಸಿರುತ್ತಾರೆ. ಕುಟುಂದ ಮಂದಿ ಬೆಳಿಗ್ಗೆ ಎದ್ದು ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿ ಬಂದು ಸೂರ್ಯನಿಗೆ ನಮಸ್ಕರಿಸುತ್ತಾರೆ. ಆ ಬಳಿಕ ಕಣಿಯ ಕನ್ನಡಿಯಲ್ಲಿ ತಮ್ಮ ಮುಖವನ್ನು ನೋಡಿ ನಂತರ ಕುಟುಂಬದ ಹಿರಿಯರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆಯುತ್ತಾರೆ. ಇದು ಹೊಸ ವರ್ಷದ ಆರಂಭದ ದಿನವಾಗಿದ್ದು ಪ್ರೀತಿ, ಗೌರವ ಸೌಹಾರ್ದತೆಗಳಿಂದ ಪ್ರಾರಂಭವಾಗುತ್ತದೆ. ನಂತರ ತಮ್ಮ ಆರಾಧ್ಯ ದೇವರ ದರ್ಶನ, ಪೂಜೆ ನಡೆಯುತ್ತದೆ. ಮಧ್ಯಾಹ್ನದ ಹೊತ್ತಿಗೆ ಗೇರು ಬೀಜ ಹಾಕಿ ತಯಾರಿಸಿದ ಪಾಯಸ, ತಮ್ಮ ಮನೆ ತರಕಾರಿಗಳಿಂದ ಮಾಡಿದ ಸಾಂಬಾರು ಈ ದಿನದ ಹಬ್ಬದ ವಿಶೇಷತೆಯಾಗಿರುತ್ತದೆ. ಕೃಷಿಕರು ತಮ್ಮ ಗದ್ದೆಗೆ ಹೋಗಿ ಕೃಷಿ ಕೆಲಸ ಕಾರ್ಯಗಳ ಆರಂಭದ ಸಂಕೇತವಾದ 'ಕೃಷಿ ಮುಹೂರ್ತ' ಮಾಡುತ್ತಾರೆ. ಮಧ್ಯಾಹ್ನದ ಬಳಿಕ ಗ್ರಾಮೀಣ ಮನರಂಜನೆಯ ಚಟುವಟಿಕೆಗಳು ಆರಂಭವಾಗುತ್ತವೆ. ಮನೆ ಮಕ್ಕಳಿಗೆ ಚೆನ್ನೆ ಮಣೆ, ಜಿಬಿಲಿ, ಕಲ್ಲಾಟ, ಕಣ್ಣಾಮುಚ್ಚಾಲೆ, ಆಟಗಳು ನಡೆಯುತ್ತವೆ. ಹಿರಿಯರು ತಮ್ಮ ಗ್ರಾಮೀಣ ಪಂದ್ಯಾಟಗಳಾದ ತೆಂಗಿನಕಾಯಿ ಕುಟ್ಟುವುದು, ಕೋಳಿ ಅಂಕ, ಕಬಡ್ಡಿ ಆಟಗಳ ಮೋಜುಗಳಲ್ಲಿ ಭಾಗವಹಿಸುತ್ತಾರೆ. ಇದು ತುಳುನಾಡಿನ ಸಂಸ್ಕೃತಿಯ ಆಚರಣೆಗಳಲ್ಲಿ ಪ್ರಧಾನವಾಗಿದೆ. ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿಯೂ ಸಹ ಈ ಪತ್ತನಾಜೆ ಆಚರಣೆಯಲ್ಲಿರುತ್ತದೆ.

**೫. ಭೂಸುಧಾರಣೆ ನೀತಿ**

ಸ್ವಾತಂತ್ರ ನಂತರದಲ್ಲಿ ಜಾರಿಗೆ ಬಂದ ಭೂ ಸುಧಾರಣೆ ಕಾಯ್ದೆ ೧೯೭೪ ಪರಿಣಾಮವಾಗಿ ಗೇಣಿದಾರರು ಭೂ ಮಾಲೀಕರಾದರು. ಉಳುವವನೇ ಭೂಮಿಯ ಒಡೆಯ ಎಂಬ ನೀತಿಯಿಂದಾಗಿ ಮಲೆಕುಡಿಯ ಸಮುದಾಯದವರಿಗೆ ಭೂಮಿ ಹಂಚಿಕೆಯಾಯಿತು. ಬಂಜಾರುಮಲೆ, ಅಂಬಟಮಲೆ, ಕೋಲೋಡಿ, ಇಳಿಮಲೆ, ಹಾಲಂಗಾಯ್, ಶಿಶಿಲ, ಗುಂಡ್ಯ, ಸುಬ್ರಮಣ್ಯದ ಕುಲಕುಂದ ಕಾಲೋನಿಗಳಲ್ಲಿ ಮಲೆಕುಡಿಯರಿಗೆ ೨ರಿಂದ ೪ ಎಕರೆಯವರೆಗೆ ಭೂಮಿ ಹಂಚಿಕೆಯಾಯಿತು. ಇದನ್ನು ಹೊರತುಪಡಿಸಿದರೆ ಅಂದಿನಿಂದ ಇಂದಿನವರೆಗೆ ಈ ಸಮುದಾಯಕ್ಕೆ ಭೂಮಿ ಹಕ್ಕು ದೊರೆತಿಲ್ಲ. ಇದಕ್ಕಾಗಿ ಇವರು ನಿರಂತರವಾದ

ಪ್ರಯತ್ನ ಮತ್ತು ಹೋರಾಟವನ್ನು ಮಾಡಿದರೂ ಏನು ಪ್ರಯೋಜನವಾಗಿಲ್ಲ. ಕಾಡಿನಿಂದ ನಾಡಿಗೆ ಬಂದ ನಮಗೆ ಏನು ಪ್ರಯೋಜನವಾಗಿದೆ? ಭೂಮಿ ಕೊಡುತ್ತೀರಾ? ಈಗ ಇರುವ ನಮ್ಮ ಜಾಗಕ್ಕೆ ದಾಖಲೆ ಕೊಡಲು ಸಾಧ್ಯವೇ? ಎಂದೆಲ್ಲಾ ಪ್ರಶ್ನೆಗಳು ಕ್ಷೇತ್ರ ಕಾರ್ಯದಲ್ಲಿ ನಮಗೆ ಮಲೆಕುಡಿಯ ಸಮುದಾಯದವರಿಂದ ಎದುರಾದವು. ಇವು ಇವರ ಕೇವಲ ಪ್ರಶ್ನೆಗಳಲ್ಲ ಇವರ ಬದುಕಿನ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ಸವಾಲುಗಳಾಗಿವೆ. ಇವು ಈ ಸಮುದಾಯದ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ದಿಕ್ಸೂಚಿಗಳಾಗಿವೆ. ಮತ್ತು ಈ ಸಮುದಾಯದ ಸ್ಥಿತ್ಯಂತರವನ್ನು ಸೂಚಿಸುತ್ತವೆ.

**೧. ಪಾರಂಪರಿಕ ಆರಾಧನೆಗಳು ಮತ್ತು ಮಲೆಕುಡಿಯರ ಆರ್ಥಿಕತೆ**

ಡಾ. ಶಿವರಾಮಕಾರಂತರು ತಮ್ಮ ಕುಡಿಯರ ಕೂಸು ಮಲೆಕುಡಿಯರು ವಾಸಿಸುವ ನೆಲೆ, ಪ್ರದೇಶಗಳನ್ನು ಕರಿಮಲೆ ಮತ್ತು ಹಿರಿಮಲೆ ಎಂದು ಗುರುತಿಸಿದ್ದಾರೆ. ೧೦-೩೦ ಕುಟುಂಬಗಳನ್ನು ಹೊಂದಿದ 'ಕಿರಿಮಲೆ' ಕುಡಿಯರಿಗೆ ಕೆಂಚನೋ ಗುರಿಕಾರನಾಗಿರುತ್ತಾನೆ. ಇವರ ಆರಾಧ್ಯ ದೈವ ಕಲ್ಕುಡವಾಗಿದೆ. ಕಾಡಿನ ಕೆಳಗಿನ ಈ ದೈವ ಕಲ್ಕುಡವಾಗಿದೆ. ಕೆಳಗಿನ ಈ ದೈವ ಬಲು ಸಿಡುಕಿನ ಪ್ರತಾಪಶಾಲಿ ದೈವವಾಗಿದ್ದು, ಶಾಂತ ಸ್ವಭಾವದ ದೈವ ಅಲ್ಲವೇ ಅಲ್ಲ- ಇದರ ೪ ಕೋಲ, ನೇಮ ೪ ದಿನಗಳವರೆಗೆ ನಡೆಯುತ್ತದೆ. ಸರಕಾರ ಬರುವ ಮೊದಲು ಕೋಳಿಗಳನ್ನು ಕಾಣಿಕೆ(ಬಲಿ) ಪಡೆದು ತೃಪ್ತಿ ಪಡುವ ದೈವ ಇದಲ್ಲ. ಐದು ವರ್ಷಗಳಿಗೆ ಒಮ್ಮೆಯಾದರೂ ನರ ಮನುಷ್ಯನ ತಲೆಯನ್ನೇ ಕೊಂಡ ದೈವ ಅದು(ಪುಟ-೨)[೧೫] ಎಂಬ ವಿಚಾರವು ಇಲ್ಲಿ ಕಂಡುಬರುತ್ತದೆ. ಇಲ್ಲಿ ಈ ದೈವಕ್ಕೆ ಸಲ್ಲಿಸುವ ಬಲಿಯಲ್ಲಿ ಕೋಳಿಯಲ್ಲದೆ ನರಬಲಿಗೆ ಸಹ ಪ್ರಾಧ್ಯಾನ್ಯತೆ ನೀಡಿರುವುದು ಉಲ್ಲೇಖವಿದೆ. ಮಲೆಕುಡಿಯರು ಆರಾಧ್ಯ ದೈವ 'ಕಲ್ಕುಡ'ದ ಮೇಲೆ ಮಲೆಕುಡಿಯರು ತೋರಿಸುವ ಭಕ್ತಿ, ಉತ್ಸವ, ಸೇವೆ, ಆಚಾರ-ವಿಚಾರ ನಂಬಿಕೆಗಳ ವಿವರಣೆಯಲ್ಲಿ ಇವರು ನಂಬಿದ ದೇವರ ಆರಾಧನೆಯ, ಬಾದ್ಯೆ, ಮತ್ತು ಆಚರಣೆಯಲ್ಲಿನ ಭಕ್ತಿ ಪ್ರಧಾನವಾಗಿದೆ. ಶಿವರಾಮ ಕಾರಂತರ ಪ್ರಕಾರ ಕಿರಿಮಲೆ, ಹಿರಿಮಲೆ, ಹತ್ತಿಯಡ್ಕ, ಬಿಸಿಲೆ, ಸುಬ್ರಮಣ್ಯಗಳಲ್ಲಿ ನಾಲ್ಕಾರು ಕುಡಿಯರ ಕಟ್ಟುಗಳಿವೆ(ಪುಟ.೩, ೯ನೇ ಸಾಲು).[೧೬] ಈಗ ಇವು ಬೇರೆಬೇರೆ ಬಣಗಳಾಗಿವೆ. ಈ ಎಲ್ಲಾ ಬಣಗಳಿಗೆ ಒಬ್ಬನೇ ಗುರಿಕಾರನಿರುವ ಪ್ರಸ್ತಾಪ ಬರುತ್ತದೆ. ಇವರೆಲ್ಲರಿಗೂ ಕಿರಿಮಲೆಯ ಕಲ್ಕುಡನೇ ಆರಾಧ್ಯ ದೈವವಾಗಿದೆ. ಕಿರಿಮಲೆ ಇದರ ಎದುರು ಬೆಟ್ಟದಲ್ಲಿ ವಾಸಿಸುವರೇ 'ಹಿರಿಮಲೆ' ಈ ಕಲ್ಕುಡ' ದೈವದ ಮಾತಿನ ಪ್ರಕಾರವೇ ಎಲ್ಲೆಲ್ಲೋ ನಡೆಯುತ್ತದೆ ಎಂಬುದು ಒಂದು ಆಧಾರವಾಗಿದೆ. ಹಿರಿಮಲೆ ಕುಡಿಯರನ್ನು ಹೊರತುಪಡಿಸಿ ಉಳಿದವರು ತಮ್ಮ ತಮ್ಮ ಗುಡಿಗಳನ್ನು ಬೇರೆಬೇರೆಯಾಗಿ ಮಾಡಿಕೊಂಡು ಪೂಜಿಸುತ್ತಾ ಬಂದಿರುವುದು ಇಲ್ಲಿ ಕಂಡುಬರುತ್ತದೆ. ಗುರಿಕಾರ ಕೆಂಚನು ಈ ದೈವದ ಮೇಲೆ ಹೊಂದಿರುವ ಭಕ್ತಿ ನಂಬಿಕೆ, ಸಂಪ್ರದಾಯ ಮತ್ತು ದೈವದ ಬದ್ಧತೆ ಕುರಿತು ವಿವರಿಸಿದ್ದಾರೆ. ಈಗಿನ ಕುಡಿಯರ ಜನರಲ್ಲಿ ಬೆಟ್ಟದ ಮೇಲೆ ಭಕ್ತಿ ಕಡಿಮೆಯಾಗಿದೆ. ಕಟ್ಟು ನಿಟ್ಟು, ಆಚಾರ ವಿಚಾರಗಳಲ್ಲಿ ನಂಬಿಕೆಗಳಲ್ಲಿ ಸಡಿಲತೆ ಕಂಡುಬಂದಿದೆ. ಉದಾಸೀನತೆ, ಒಗ್ಗಟ್ಟು ಸಡಿಲವಾಗಿದೆ.

ಮಲೆಕುಡಿಯ ಸಮುದಾಯದ ಆರಾಧನೆ ಪರಂಪರೆಗಳು ಆ ಸಮುದಾಯದ ಊಳಿಗ ಪದ್ಧತಿಯನ್ನು ಸೂಚಿಸುತ್ತವೆ. ಇವರು ಮಲರಾಯ, ಕಲ್ಕುಡ ಮತ್ತು ಕಲ್ಲುಟಿ ದೈವಗಳ ಆರಾಧಕರಾಗಿದ್ದಾರೆ. ಮತ್ತು ಕುಕ್ಕೆ ಸುಬ್ರಹ್ಮಣ್ಯ, ಧರ್ಮಸ್ಥಳದ ಮಂಜುನಾಥೇಶ್ವರ ಈ ದೇವರ ಆರಾಧನೆಗೂ ಇವರು ಬದ್ಧರಾಗಿದ್ದಾರೆ.

ಬಂಜಾರು ಮಲೆಯಲ್ಲಿ ಕಲ್ಕುಡ, ಕಲ್ಲುಟಿ ಮತ್ತು ಮಲರಾಯ ಇವು ಇವರ ಕುಲ ದೈವಗಳಾಗಿವೆ. ಕಲ್ಕುಡ ಇವರ ಮುಖ್ಯ ಕುಲ ದೈವ. ತುಳು ನಾಡಿನ ಭೂತಗಳಲ್ಲಿ ಕುಟುಂಬ ಮಟ್ಟದಲ್ಲಿ ಆರಾಧನೆ ಮಾಡುವ ಭೂತಗಳಲ್ಲಿ ಒಂದಾಗಿದೆ. ಆತ್ಮ ಹತ್ಯೆ, ಕೊಲೆ ಅಥವಾ ಅಕಾಲ ಮರಣ ಹೊಂದಿರುವ ಭೂತಗಳಲ್ಲಿ ಕಲ್ಕುಡ ಒಂದು.

ಕಲ್ಕುಡ ಹಿರಿಯಮಲೆ ಮತ್ತು ಕಿರಿಯಮಲೆಗೆ ಸಂಬಂಧಪಟ್ಟ ದೈವ ದೂರದ ಬೆಟ್ಟಗಳಿಗೆ ಅಧಿನಾಯಕನಾಗಿದ್ದು, ತನ್ನವರಿಂದ ಕಪ್ಪಕಾಣಿಕೆ ತರಿಸಿಕೊಳ್ಳುವಷ್ಟು ಶಕ್ತಿ ಅದಕ್ಕಿರುವುದು ಅಸಾಧ್ಯದ ಮಾತು ಅಲ್ಲದೇ ಕಂಪನಿ ಸರ್ಕಾರ ಬರುವ ಮುಂಚೆ ಆ ಕಲ್ಕುಡ ಹಿಂದೆಂದೂ ಕೋಳಿಗಳ ಕಾಣಿಕೆ ಪಡೆದು ತೃಪ್ತಿ ಪಟ್ಟ ದೈವವೇ ಅಲ್ಲ. ಐದು ವರ್ಷಗಳಿಗಾದರೂ ಒಂದು ಮನುಷ್ಯನ ತಲೆಯನ್ನೇ ಕೊಂಡ ದೈವವದು. ಅಲ್ಲದೇ ಹತ್ತು ಹನ್ನೆರಡು ವರ್ಷಗಳಿಗೊಮ್ಮೆ ತನ್ನ ಅಪೂರ್ವ ಉತ್ಸವದಲ್ಲಿ ಜನಹಿಡಿ ಚುಚ್ಚಿಸಿಕೊಳ್ಳುವ ಉತ್ಸವ ಜರುಗಿಸಿ ಭಕ್ತರು ಕೇಳಿದಂತಹ ವರಗಳನ್ನು ಸಲ್ಲಿಸಿದ ಹಿರಿಯ ದೈವ ಕಲ್ಕುಡ(ಕುಡಿಯರ ಕೂಸು ಕಾದಂಬರಿ ಪುಟ ೧೬೨). ಆದರೆ ಕಲ್ಕುಡನನ್ನು ಮೀರಲು ಕೆಂಚ ಸುಬ್ರಮಣ್ಯ ದೇವರನ್ನು ಆಚರಿಸುತ್ತಾನೆ. ಅವನು ಕಲ್ಕುಡನಂತಹ ಗಣಗಳಿಗೆ ಕುಮಾರಸ್ವಾಮಿಯೇ ಒಡೆಯನು ಎಂಬ ಕಥೆಯನ್ನು ಕೇಳಿಯಾದರೂ ಬಲ್ಲ. ಹಿರಿಮಲೆ ಕಿರಿಮಲೆಗೆ ಕಲ್ಕುಡ ದೈವದ ಆರಾಧನೆಗೆ ಎರಡು ಮಲೆಯವರು ಸೇರುತ್ತಾರೆ. ಕಲ್ಕುಡ ಕುಡಿಯರ ಪ್ರಮುಖ ದೈವ ಅದು ಕುಲದ ಆಗು ಹೋಗುಗಳನ್ನು ವಿಚಾರಿಸುತ್ತದೆ ಮತ್ತು ನಿರ್ಣಯಿಸುತ್ತದೆ. ನ್ಯಾಯ ಪಂಚಾಯಿತಿ ಮಾಡುತ್ತದೆ. ದೈವವಾಗಿ ಅದರ ಅಧಿಕಾರ ದೊಡ್ಡದು ಅದರ ವಿಷಯದಲ್ಲಿ ಬ್ರಾಹ್ಮಣನಾದ ತಿರುಮಲ ಭಟ್ಟನಿಗೂ ಮಾತನಾಡುವ ಹಕ್ಕಿಲ್ಲ. ಮತ್ತೊಂದು ದೈವ ಮಲರಾಯ ಇದು ಗಂಡು ದೈವವಲ್ಲ ಕೆಂಚ ಸಾಯುವ ಹೊತ್ತಿಗೆ ಹೇಳುವ ಮಾತಿದು ನನ್ನ ಮಲರಾಯನಿಗೆ ಒಂದು ಕಾಯಿಯನ್ನು ಸುಲಿದಿಡು ಸುಬ್ರಮಣ್ಯ ದೇವರಿಗೊಂದು ತೆಗೆದಿರಿಸು ಅವನ್ನಷ್ಟು ಮುಟ್ಟಿಸು ಪುಟ.೨೪೭.[೧೭]

ಈ ಸಮುದಾಯದ ದೇವಾಲಯದ ಊಳಿಗವು ಇವರ ಶಿಷ್ಯದೈವ ಸುಬ್ರಹ್ಮಣ್ಯ ಮತ್ತು ಮಂಜುನಾಥೇಶ್ವರ ಸುಬ್ರಹ್ಮಣ್ಯ ದೇವರಿಗೆ ಮತ್ತು ಮಂಜುನಾಥ ದೇವರ ಒಕ್ಕಲುಗಳು ಈಗಲೂ ಇವೆ. ಅದಕ್ಕಾಗಿ ಇವರು ಸೇವೆ ಮಾಡುತ್ತಾ ಬರುತ್ತಿದ್ದಾರೆ. ಉತ್ಸವಕ್ಕೆ ಚಪ್ಪರ ಹಾಕುವುದು ರಥ ಕಟ್ಟುವುದು ಹಣತೆ ಇಟ್ಟು ಎಣ್ಣೆ ಸುರಿಯುವುದು ಉತ್ಸವದ ಮುಂದೆ ಬಿರುದು ಬಾವಳಿಗಳನ್ನು ಹಿಡಿದು ಸಾಗುವುದು ಇವರ ಆರಾಧನಾ ವೃತ್ತಿಗಳಾಗಿವೆ. ಮಲರಾಯ ಕಲ್ಕುಡ ಸುಬ್ರಮಣ್ಯ ಜೊತೆಗೆ ನಾಗರಾಧಾಕರೂ ಆಗಿದ್ದಾರೆ. ಇವಲ್ಲದೇ ಕೋಲನೇಮ ಅಗೇಲು ಆಚರಣೆಗಳು ಇವರಲ್ಲಿ ಕಂಡುಬರುತ್ತವೆ. ಸುಬ್ರಹ್ಮಣ್ಯ ಧರ್ಮಸ್ಥಳ ಬ್ರಹ್ಮ ರಥದ ನಿರ್ಮಾಣ, ಕೃಷ್ಣ ಜನ್ಮಾಷ್ಟಮಿ, ಮಕರ ಸಂಕ್ರಾಂತಿ, ಆಚರಣೆಗಳು ಸೇರಿದಂತೆ ಹಲವಾರು ಪಾರಂಪರಿಕ ದೈವಾರಾಧನೆಗಳು ಇವರಲ್ಲಿ ಆಚರಣೆಯಲ್ಲಿವೆ. ಈ ಸಮುದಾಯದ ನಾಲ್ಕಲೆಗಳ ಮೂಲ ಆರಾಧ್ಯ ದೇವರು ಬಾರಿ ಮಲೆಯ ಕಾಲ ಭೈರವೇಶ್ವರ ಇಲ್ಲಿ ಈಗಲೂ ಪ್ರತಿವರ್ಷ ತಪ್ಪದೇ ಪೂಜೆ ಸಲ್ಲಿಸಿ ಬರುತ್ತಿದ್ದಾರೆ. ಹಿಂದೆ ನಡೆದುಕೊಂಡು ಹೋಗುತ್ತಿದ್ದರು. ಈಗ ಜೀಪಿನಲ್ಲಿ ಹೋಗಿ ಬರುವಂತಹ ಪರಂಪರೆ ಇದೆ. ಬಾಂಜಾರುಮಲೆಯ ಮಾರಿ ಹಬ್ಬ, ಕೊಕ್ಕಡದ ಪುರುಷ ಪೂಜೆ ಮತ್ತು ಕೊಕ್ಕಡದ ಕೋರಿ ಜಾತ್ರೆಗಳು ಆರ್ಥಿಕ ಅವಲಂಭಿತವಾಗಿವೆ.

### ದೇವಸ್ಥಾನದ ಊಳಿಗ

ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ಅನಾದಿಕಾಲದಿಂದಲೂ ಆಚರಣೆಯಲ್ಲಿರುವ ಪಾರಂಪರಿಕ ಆರಾಧನೆಗಳು ಈ ಸಮುದಾಯದ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿವೆ. ಇಲ್ಲಿ ಇವರು ಮಾಡುವ ಕೆಲಸಕಾರ್ಯಗಳು ಮತ್ತು ಇದಕ್ಕೆ ಇವರು ಪಡೆಯುವ ಪ್ರತಿಫಲವು ಊಳಿಗವನ್ನು ಪ್ರತಿನಿಧಿಸುತ್ತವೆ. ಈ ಸಮುದಾಯದಲ್ಲಿ ಆಚರಣೆಯಲ್ಲಿರುವ ಪ್ರಮುಖ ಆಚರಣೆಗಳಲ್ಲಿ ಇವರ ಊಳಿಗ ಪರಂಪರೆ ಕಂಡುಬರುತ್ತದೆ.

೧. ಬಾಂಜಾರು ಮಲೆಯ ಮಾರಿ/ಗಿಂಡಿ ಪೂಜೆ, ೨. ನೆರಿಯಾದ ಉತ್ಸವ, ೩. ಕುಕ್ಕೆ ಸುಬ್ರಹ್ಮಣ್ಯ ಬ್ರಹ್ಮರಥೋತ್ಸವ, ೪. ಧರ್ಮಸ್ಥಳ ರಥೋತ್ಸವ, ೫. ಕೊಕ್ಕಡ ರಥೋತ್ಸವ, ೬. ಪುರುಷ ಪೂಜೆ, ೭.ಶಿಶಿಲದ ರಥೋತ್ಸವ, ೮. ನೇಮ, ದೈವ ಕೋಲ, ೯. ಗುಂಡ್ಯ ತೋಟದ ಉತ್ಸವ ಇವು ಈ ಸಮುದಾಯದ ಪರಂಪರೆಯೊಂದಿಗೆ ಆರ್ಥಿಕ ವ್ಯವಸ್ಥೆಯ ಮೂಲ ಆಧಾರಗಳಾಗಿವೆ.

### ೧. ಬಾಂಜಾರುಮಲೆಯ ಮಾರಿ(ಗಿಂಡಿ) ಪೂಜೆ

ಬಾಂಜಾರು ಮಲೆಯ ವಾರ್ಷಿಕ ಆಚರಣೆಗಳಲ್ಲಿ ಮಾರಿ ಪೂಜೆ ವಿಶಿಷ್ಟವಾಗಿದೆ. ಇದನ್ನು ಇವರು ಗಿಂಡಿ ಪೂಜೆ ಎಂತಲೂ ಕರೆಯುತ್ತಾರೆ. ಪ್ರತಿ ವರ್ಷ ಕುಮರಿ ಬೆಳೆ ಬೇಸಾಯ ಆರಂಭಿಸುವ ಮುನ್ನ ಇವರ ಆರಾಧ್ಯ ದೇವತೆ ಮಾರಿಯನ್ನು ಪೂಜಿಸುವ ಪದ್ಧತಿಯನ್ನು ಮಾರಿ ಪೂಜೆ ಎಂದು ಕರೆಯುತ್ತಾರೆ. ಒಂದು ದಿನ ಇವರು ವಾರದ ಸಂತೆ ಸೋಮವಾರದ ನಂತರ ಇವರು ಈ ಪೂಜೆ ಕಾರ್ಯಕ್ರಮವನ್ನು ನಗದಿಪಡಿಸಿಕೊಂಡಿರುತ್ತಾರೆ. ವಾರದ ಸಂತೆಯಲ್ಲಿ ಪೂಜೆಗೆ ಬೇಕಾಗುವ ಸಾಮಗ್ರಿಗಳನ್ನು ಪೇಟೆಯಲ್ಲಿ ಖರೀದಿಸಿದ ನಂತರ ಇಡೀ ರಾತ್ರಿ ಮಾರಿ ಪೂಜೆ ಉತ್ಸವ ೨ ದಿನಗಳ ಕಾಲ ನಡೆಯುತ್ತದೆ. ಪ್ರಕೃತಿಯ ಆರಾಧನೆ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಒಂದು ಎತ್ತರದ ಮರದ ಬುಡದಲ್ಲಿ ರಾತ್ರಿ ನೆಲವನ್ನು ಸಗಣಿ ಸಾರಣೆ ಮಾಡಿ ಅಲ್ಲಿ ಒಂದು ತಾಮ್ರದ ಗಿಂಡಿಗೆ ಮಾರಿ ದೇವಿಯ ಅಲಂಕಾರ ಮಾಡಿ ಪೂಜಿಸುವ ಪದ್ಧತಿ ಇಲ್ಲಿ ಕಂಡುಬರುತ್ತದೆ. ಹಿರಿಯ ಗುರಿಕಾರ ಲಕ್ಷ್ಮಣರವರ ನಿರ್ದೇಶನ ಮತ್ತು ಅಪ್ಪಣೆ ಮೇರೆಗೆ ಇವರ ಎಲ್ಲಾ ಪೂಜಾ ಕಾರ್ಯಗಳು ಆರಂಭವಾಗುತ್ತವೆ. ಪೂಜಾ ಸಿದ್ಧತೆ ನಡೆದಾಗ ಎಲ್ಲರೂ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. ನಮ್ಮ ಮುಂದಿನ ದಿನಗಳಲ್ಲಿ ಮಳೆ ಬೆಳೆ ಸರಿಯಾಗಿ ಆಗಲಿ ನಮ್ಮ ಬೆಳೆಗೆ ಯಾವುದೇ ರೀತಿಯ ತೊಂದರೆಯಾಗಬಾರದು ಕೀಟ ಬಾಧೆ ಪ್ರಾಣಿ ಬಾಧೆಯಿಂದ ಮತ್ತು ರೋಗಗಳಿಂದ ನಮ್ಮನ್ನು ರಕ್ಷಿಸಬೇಕೆಂದು ಅರಿಕೆ ಮಾಡಿಕೊಳ್ಳುವುದರ ಮೂಲಕ ಗುರಿಕಾರ ಲಕ್ಷ್ಮಣ ಮಾರಿದೇವಿಯನ್ನು ಕೇಳಿಕೊಳ್ಳುತ್ತಾನೆ. ಇದಕ್ಕೆ ದೇವಿಯ ಒಪ್ಪಿಗೆ ಮತ್ತು ಹೇಳಿಕೆ ಬಂದ ನಂತರ ಇವರ ಮುಂದಿನ ಕಾರ್ಯಗಳು ಮುಂದುವರೆಯುತ್ತವೆ. ದೇವಿಯನ್ನು ಪೂಜಿಸಿದ ನಂತರ ಎಲ್ಲರೂ ಕುಣಿಯುವ ಅವರ ವಾದ್ಯಗಳಿಗೆ ಹೆಜ್ಜೆ ಹಾಕುವುದರ ಮೂಲಕ ಸಂಭ್ರಮಿಸುತ್ತಾರೆ. ಗಿಂಡಿಯನ್ನು ಹೊತ್ತ ಪೂಜಾರಿ ಲಕ್ಷ್ಮಣ ಎಲ್ಲಾ ಮನೆಗಳಿಗೆ ಇಡೀ ರಾತ್ರಿ ಉತ್ಸವದ ಮೂಲಕ ಹೋಗಿ ಬರುತ್ತಾರೆ. ದೇವಿಗೆ ಪೂಜೆ ಸಲ್ಲಿಸಿ ಮನೆಯವರು ತಮ್ಮ ಭಕ್ತಿ ಭಾವವನ್ನ ಸೂಚಿಸುತ್ತಾರೆ. ಬಾಂಜಾರು ಮಲೆಯ ಎಲ್ಲಾ ಮನೆಗಳು ಮುಗಿದ ನಂತರ ಗುಡ್ಡದ ಬದಿಯಲ್ಲಿರುವ ಗುಡಿಗೆ ಮಾರಿದೇವಿಯನ್ನು ತಂದು ಕೂರಿಸುತ್ತಾರೆ. ಮರುದಿನ ಮತ್ತೆ ಪೂಜೆ ಆಚರಣೆಗಳೊಂದಿಗೆ ಸಾಮೂಹಿಕ ವನಭೋಜನೆ ಮಾಡುತ್ತಾರೆ. ಇದು

ಇವರು ಮುಂದುವರೆಸಿಕೊಂಡು ಬಂದ ಆಚರಣೆಯಾಗಿದೆ. ಇದರಲ್ಲಿ ಇವರ ಆರ್ಥಿಕ ಅವಲಂಬಿತ ಪರಂಪರೆ ಕಂಡುಬರುತ್ತದೆ.

**೨. ನೆರಿಯಾದ ಉತ್ಸವ**

ನೆರಿಯಾದ ವ್ಯಾಪ್ತಿಯಲ್ಲಿ ವಾಸವಾಗಿರುವ ಬಾಂಜಾರುಮಲೆ, ಬಾರಿಮಲೆ, ಅಂಬಟಮಲೆ ಮತ್ತು ಇಳಿಮಲೆಗಳಲ್ಲಿನ ಮಲೆಕುಡಿಯ ಸಮುದಾಯದವರು ವರ್ಷಕ್ಕೊಮ್ಮೆ ನೆರಿಯಾ ಮನೆತನದವದಿಂದ ಕೋಲ್ನ ಎಂಬಲ್ಲಿ ನಡೆಯುವ ಹಳ್ಳತ್ತೇರು(ಹಳ್ಳದ ತಾಯಿ) ಉತ್ಸವದಲ್ಲಿ ಎಲ್ಲರೂ ಪಾಲ್ಗೊಳ್ಳುತ್ತಾರೆ. ನೆರಿಯಾದ ಹಳ್ಳದಲ್ಲಿ ಹರಿಯುವ ನದಿಯನ್ನು ಪೂಜಿಸಿ ನಂತರ ಇಲ್ಲಿರುವ ಇವರ ದೈವದ ಆರಾಧನೆ ಮಾಡುತ್ತಾರೆ. ಇಡೀ ರಾತ್ರಿ ಈ ಆರಾಧನೆಯಲ್ಲಿ ನೆರಿಯಾ ಮನೆತನದ ವಂಶದವರು ಪಾಲ್ಗೊಳ್ಳುತ್ತಾರೆ. ಅಂತೆಯೇ ಈ ನಾಲ್ಕು ಮಲೆಗಳ ಮಲೆಕುಡಿಯರು ಸಹ ಭಾಗವಹಿಸಿ ತಮ್ಮ ಸೇವೆ ಸಲ್ಲಿಸುತ್ತಾರೆ. ಇದು ಅನಾದಿಕಾಲದಿಂದಲೂ ನೆರಿಯಾ ಮನೆತನ ಮತ್ತು ಮಲೆಕುಡಿಯ ಸಮುದಾಯಗಳ ನಡುವಿನ ಸಂಬಂಧವನ್ನು ಸೂಚಿಸುತ್ತದೆ. ಉತ್ಸವಕ್ಕೆ ಬಂದ ಎಲ್ಲಾರಿಗೂ ಅಡಿಗೆಯನ್ನು ತಯಾರಿಸಿ ಹಾಕುವ ಜವಾಬ್ದಾರಿ ಮಲೆಕುಡಿಯರದ್ದೇ ಆಗಿರುತ್ತದೆ. ಇದರ ಖರ್ಚು ವೆಚ್ಚಗಳನ್ನು ನೆರಿಯಾದ ಹೆಬ್ಬಾರ್ ಮನೆತನದವರು ಭರಿಸುತ್ತಾರೆ. ಇಲ್ಲಿ ಭಾಗವಹಿಸುವವರಿಗೆ ರಾತ್ರಿ ಇಡೀ ಮನರಂಜನೆಗೆ ಚಲನಚಿತ್ರ ವ್ಯವಸ್ಥೆಯನ್ನು ಸಹ ಮಾಡುತ್ತಾರೆ.

**೩. ಕುಕ್ಕೆ ಸುಬ್ರಹ್ಮಣ್ಯ ಬ್ರಹ್ಮರಥೋತ್ಸವ**

ಕುಕ್ಕೆ ಸುಬ್ರಹ್ಮಣ್ಯದ ಬ್ರಹ್ಮರಥೋತ್ಸವದಲ್ಲಿ ಮಲೆಕುಡಿಯ ಸಮುದಾಯದವರು ತಪ್ಪದೇ ಭಾಗವಹಿಸುತ್ತಾರೆ. ಜಾತ್ರೆ ಆರಂಭವಾದಾಗಿನಂದ ಮುಗಿಯುವವರೆಗೆ ಇವರು ತಮ್ಮ ಸೇವಾ ಕಾರ್ಯಗಳನ್ನು ನಿರ್ವಹಿಸುತ್ತಾರೆ. ಪ್ರತಿ ಮನೆಗೊಬ್ಬರಂತೆ ತಪ್ಪದೇ ಜಾತ್ರೆಯ ದೈವ ಕಾರ್ಯಗಳಲ್ಲಿ ಭಾಗವಹಿಸುವ ಇವರಿಗೆ ಮೂರು ಸೇರು ಅಕ್ಕಿ ಮತ್ತು ಒಂದು ರೂಪಾಯಿ ಮಾತ್ರ ಸಂಭಾವನೆ ಪಡೆಯುತ್ತಾರೆ. ಬೇರೆ ದಿನಗಳಲ್ಲಿ ದಿನಗೂಲಿಯಂತೆ ಗಂಡು ಹೆಣ್ಣಿಗೆ ಪ್ರತ್ಯೇಕ ದಿನಗೂಲಿ ನಿಗದಿಯಾಗಿರುತ್ತದೆ. ಸುಬ್ರಹ್ಮಣ್ಯ ದೇವಸ್ಥಾನದ ಸೇವೆಯ ಜೊತೆಗೆ ಇವರ ಜೀವನ ನಿರ್ವಹಣೆಯ ಆಧಾರ ಮತ್ತು ಅವಲಂಬನೆ ಇರುವುದು ಕಂಡು ಬರುತ್ತದೆ. ಇದು ಇವರ ಆರ್ಥಿಕ ಅವಲಂಬನೆಯನ್ನು ಸೂಚಿಸುತ್ತದೆ.

**೪. ಧರ್ಮಸ್ಥಳ ರಥೋತ್ಸವ**

ಧರ್ಮಸ್ಥಳದಲ್ಲಿ ನಡೆಯುವ ನಡವಳಿ ಲಕ್ಷದೀಪೋತ್ಸವದಲ್ಲಿ ಮಲೆಕುಡಿಯ ಸಮುದಾಯದ ಜನರು ಸಕ್ರಿಯವಾಗಿ ಭಾಗವಹಿಸುತ್ತಾರೆ. ಇಲ್ಲಿನ ಮಲೆಕುಡಿಯರು ರಥವನ್ನು ಸಿದ್ಧಗೊಳಿಸುವ ಅಲಂಕರಿಸುವ ಪಲ್ಲಕ್ಕಿಯನ್ನು ಅಲಂಕರಿಸುವ ಪೂಜೆಗೆ ಬೇಕಾಗಿರುವ ಹೂವು ಪೂಜೆ ಸಾಮಗ್ರಿಗಳನ್ನು ಒದಗಿಸುವುದು, ಚಪ್ಪರ ಹಾಕುವುದು, ಉತ್ಸವದಲ್ಲಿ ಛತ್ರಿ, ಚಾಮರ, ಪತಾಕೆ ಬಿರುದು, ಬಾವಳಿಗಳನ್ನು ಹಿಡಿದು ಸಾಗುತ್ತಾರೆ. ಪ್ರತಿಫಲವಾಗಿ ಇವರು ಸಂಭಾವನೆಯನ್ನು ಪಡೆಯುತ್ತಾರೆ. ಇದು ಇವರ ಜೀವನದ ಆರ್ಥಿಕ ಅವಲಂಬನೆಯನ್ನು ಸೂಚಿಸುತ್ತದೆ.

## ೫. ಕೊಕ್ಕಡ ರಥೋತ್ಸವ

ಕೊಕ್ಕಡದ ವಿಷ್ಣುಮೂರ್ತಿ ದೇವರ ರಥೋತ್ಸವಕ್ಕೆ ಬೇಕಾದ ಮರವನ್ನು ತಂದು ರಥವನ್ನು ಸಿದ್ಧಗೊಳಿಸಿ ಅಲಂಕರಿಸುತ್ತಾರೆ. ಚಪ್ಪರ ಹಾಕುವುದು, ಗದ್ದೆ ಕೋರಿ ಉತ್ಸವಕ್ಕೆ ಸಿದ್ಧತೆಗೊಳಿಸುವವರು ಮಲೆಕುಡಿಯರಾಗಿದ್ದಾರೆ. ಇಲ್ಲಿಯೂ ಸಹ ಇವರು ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಇದು ಇವರ ವಾರ್ಷಿಕ ಆರ್ಥಿಕ ಅವಲಂಬನೆಯ ಪರಂಪರೆಯಾಗಿದೆ. ಇದಕ್ಕೆ ಪ್ರತಿ ಫಲವಾಗಿ ದೇವರ ಉಂಬಳಿ ಭೂಮಿಯನ್ನು ಇವರು ಸಾಗುವಳಿ ಮಾಡುತ್ತಾ ಬಂದಿದ್ದಾರೆ.

ಕೊಕ್ಕಡ ಎಂಬ ಹೆಸರು ತುಳುವಿನ ಕೆಕ್ಕೆಕಾಯಿ ಮರದಿಂದ ಬಂದಿದೆ. ಕುಕ್ಕುಟಾಪುರದಿಂದ 'ಕೊಕ್ಕಡ' ಎಂಬ ಹೆಸರು ಬಂದಿದೆ. ಈ ಪ್ರದೇಶದಲ್ಲಿ ಗೆಡ್ಡೆಗಡಣಸುಗಳು ಹೇರಳವಾಗಿದ್ದು, ಈ ಗೆಡ್ಡೆಗಡಣಸುಗಳನ್ನು ತೆಗೆಯುವಾಗ ತುಳುವಿನಲ್ಲಿ ಒಕ್ಕಡ(ಕೆದಕಬೇಡ) ಎಂಬ ಹೆಸರು ಬಳಕೆ ಬಂದಿತು. ಹಿಂದೆ ಇದಕ್ಕೆ ಕೊಕ್ಕಡಾಪುರ ಎಂದು ಕರೆಯಲಾಗುತ್ತಿತ್ತು ಎಂಬ ಅಭಿಪ್ರಾಯವಿದೆ. ಕೋರಿಜಾತ್ರೆಇಲ್ಲಿ ಪ್ರಸಿದ್ಧವಾಗಿದೆ. ಶ್ರೀ ವೈದ್ಯನಾಥೇಶ್ವರ ವಿಷ್ಣುಮೂರ್ತಿ ದೇವರು ಇಲ್ಲಿನ ಜನರ, ಮಲೆಕುಡಿಯರ ಆರಾಧ್ಯ ದೈವವಾಗಿದೆ. ಈ ದೇವಸ್ಥಾನವು ವಿಶಾಲವಾದ ಪುಷ್ಕರಣಿಯ ಮಧ್ಯದಲ್ಲಿ ನೀಲಕಂಠನ ಗುಡಿ, ಹರಿ-ಹರರು ಒಂದಾಗಿರುವ ಅತಿ ಅಪರೂಪದ ದೇಗುಲ ಇದಾಗಿದೆ. ಈ ಜಾತ್ರೆಯಲ್ಲಿ ಗದ್ದೆಗೆ ಮರ ಕಡಿದು ತಂದು ಪೋಕರೆ ಹಾಕುವ, ಅಲಂಕಾರ ಮಾಡುವ, ರಥ ಕಟ್ಟುವ, ಮೆರವಣಿಗೆಯಲ್ಲಿ ಛತ್ರಿ, ಚಾಮರ, ಬಿರುದು, ಬಾವಳಿ, ಪತಾಕಿ ಹಿಡಿದು ಸಾಗುವವರು ಮಲೆಕುಡಿಯರಾಗಿದ್ದಾರೆ.

## ೬. ಪುರುಷ ಪೂಜೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಕೃತಿ ಆರಾಧನೆಗೆ ಸಂಬಂಧಿಸಿದಂತೆ ಹಲವಾರು ವಿಶಿಷ್ಟವಾದ ಜನಪದ ಕಲೆಗಳು ಅನಾದಿಕಾಲದಿಂದಲೂ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಪ್ರಕೃತಿ ಆರಾಧನೆಯ ಪ್ರತೀಕವಾಗಿ ಸುಗ್ಗಿಯ ಸಮಯದಲ್ಲಿ ಆಚರಿಸುವ ಆಚರಣೆನ್ನು ಪುರುಷವೇಷ ಕಟ್ಟುವುದು ಎಂದು ಕರೆಯಲಾಗುತ್ತದೆ. ಪುರುಷರಕೂಟ ಎಂತಲೂ ಕರೆಯುತ್ತಾರೆ. ಈ ಪುರುಷ ಕೂಟ, ಕೊಕ್ಕಡ, ಮುಂಟ್ರುಪಳಿಕೆ ಮತ್ತು ಧರ್ಮಸ್ಥಳದಲ್ಲಿದೆ. ಪುರುಷರುವೇಷ ಹಾಕುವುದರಿಂದ ಇದಕ್ಕೆ ಪುರುಷವೇಷ ಎಂದು ಕರೆಯುತ್ತಾರೆ.ಮಂಗಳೂರಿನ ಕದ್ರಿ ಶ್ರೀ ಮಂಜುನಾಥ ಸ್ವಾಮಿ ದೇವರ ಆರಾಧನೆಯೊಂದಿಗೆ ಪ್ರತಿವರ್ಷ ಸುಗ್ಗಿಯ ಹುಣ್ಣಿಮೆಗೆ ಮೊದಲು ೫ ದಿನ ಬೆಳದಿಂಗಳ ಬೆಳಕಿನಲ್ಲಿ ಆಚರಿಸುವ ಆಚರಣೆ ಇದಾಗಿದೆ. ಧರ್ಮಸ್ಥಳ, ಕೊಕ್ಕಡ ಮುಂಟ್ರುಪಳಿಕೆ ಪರಿಸರದಲ್ಲಿ ಅನಾದಿಕಾಲದಿಂದಲೂ ಆಚರಿಸಿಕೊಂಡು ಬರಲಾಗುತ್ತಿದೆ. ತುಳುನಾಡಿನಲ್ಲಿ ಆಚರಿಸುವ ಸುಗ್ಗಿ ಕುಣಿತಗಳಲ್ಲಿ ಪುರುಷವೇಷವು ಒಂದಾಗಿದೆ. ಇದನ್ನು ಪ್ರತಿ ವರ್ಷ ಸುಗ್ಗಿ ಹುಣ್ಣಿಮೆಯ ದಿನಕ್ಕೆ ೫ ದಿನ ಸಂಘಟಿಸುವುದಕ್ಕಾಗಿ 'ಪುರುಷರ ಕೂಟ' ಕೊಕ್ಕಡದ ಮುಂಟ್ರುಪಳಿಕೆಯಲ್ಲಿದೆ. ಸುಗ್ಗಿಯ ತಿಂಗಳಿನ ೫ ದಿನದಲ್ಲಿ ಮನೆಮನೆಗೆ ಹೋಗಿ ಪುರುಷಪೂಜೆ ಮಾಡುವುದು ಇಲ್ಲಿನ ಆಚರಣೆಯಾಗಿದೆ. ಕೊಕ್ಕಡ, ಪಟ್ರಮೆ ಧರ್ಮಸ್ಥಳದ ಪರಿಸರದಲ್ಲಿ ಇದು ಈಗಲೂ ಆಚರಣೆಯಲ್ಲಿದೆ. ಮುಂಡೂರು ಪಳಿಕೆಯ ಪುರುಷ ಕೂಟ ಪ್ರತಿ ವರ್ಷ ಇದನ್ನು ನಡೆಸುತ್ತಾ ಬಂದಿದೆ. ಅನಾದಿಕಾಲದಿಂದ ಸುಮಾರು ೩೦-೪೦ ವರ್ಷಗಳಿಂದಲೂ ಇದು ಆಚರಣೆಯಲ್ಲಿದೆ. ಪುರುಷಪೂಜೆ ನೆರವೇರಿಸಿದ ರೈತರು

ಹರಿಕೆ ಮಾಡಿಕೊಂಡು ಹಣ, ಬೆಳ್ಳಿ, ದವಸ ಧಾನ್ಯ, ನೀಡುತ್ತಾರೆ. ಗೌಡ, ಪೂಜಾರಿ, ಮಲೆಕುಡಿಯ, ಕೃಷಿಕರು ಸೇರಿ ಇದನ್ನು ಆಚರಿಸುತ್ತಾರೆ. ಪುರುಷಪೂಜೆಯ ಸಮಯದಲ್ಲಿ ದಾನ-ಧರ್ಮ ಮಾಡಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇಲ್ಲಿನ ಜನರಲ್ಲಿದೆ ಎಂಬುದನ್ನು ಮುಂಡೂರುಪಳಿಕೆಯ ದುಗ್ಗಮ್ಮ ಹೇಳುತ್ತಾರೆ. ಅಲಂಕೃತ ದೇವರ ಉತ್ಸವ ಪುರುಷ ವೇಷದೊಂದಿಗೆ ವಾದ್ಯ ಮೇಳದೊಂದಿಗೆ ಮನೆಮನೆಗೆ ತೆರಳಿ ಪೂಜೆ ಮಾಡುವುದಕ್ಕೆ ಪುರುಷ ಪೂಜೆ ಎಂದು ಕರೆಯಲಾಗುವುದು.

**೭. ಶಿಶಿಲದ ರಥೋತ್ಸವ**

ಶಿಶಿಲದ ಶ್ರೀ ಶಿಶಿಲೇಶ್ವರ ಶೈವ ದೇವಾಲಯದ ವಾರ್ಷಿಕ ಜಾತ್ರೆಯಲ್ಲಿ ಮಲೆಕುಡಿಯ ಸಮುದಾಯದ ಜನರು ಚಪ್ಪರ ಸಿದ್ಧಗೊಳಿಸುವ, ಉತ್ಸವಕ್ಕೆ ಅಲಂಕಾರ ಮಾಡುವುದರ ಮೂಲಕ ತಮ್ಮ ಸೇವೆಯನ್ನು ಸಲ್ಲಿಸುತ್ತಾರೆ. ಇದು ಇವರ ಧಾರ್ಮಿಕ ಮತ್ತು ಆರ್ಥಿಕ ಸಂಬಂಧವನ್ನು ಅವಲಂಬಿಸಿದೆ.

**೮. ನೇಮ, ದೈವ ಕೋಲ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವ ಭೂತ ಕೋಲ ನೇಮ ದೈವಾರಾಧನೆಗಳನ್ನು ಮಲೆಕುಡಿಯ ಸಮುದಾಯದವರು ಸಹ ಆಚರಣೆ ಮಾಡುತ್ತಾರೆ. ತುಳುನಾಡಿನ ಸಂಸ್ಕೃತಿ ಪರಂಪರೆಯ ಒಂದು ಭಾಗವಾಗಿರುವ ಅಳಿಯ ಸಂತಾನಕ್ಕೆ ಸೇರಿದ ಮಲೆಕುಡಿಯರು ಮಾತ್ರ ಈ ನೇಮ ಕೋಲ ಉತ್ಸವಗಳನ್ನು ಆಚರಣೆ ಮಾಡುತ್ತಾರೆ. ಬಂಟ್ವಾಳ ತಾಲ್ಲೂಕಿನ ಕನ್ಯಾನದ ಅಕ್ಕರೆ ಕೋಡಿ, ಹಾಲಂಗಾಯ್ ಮತ್ತು ಬೆಳ್ತಂಗಡಿ ತಾಲ್ಲೂಕಿನ ಮಲೆಕುಡಿಯರು ವಾಸವಾಗಿರುವ ಗ್ರಾಮಗಳಲ್ಲಿ ಈ ದೈವ ನೇಮ ಕೋಲಗಳನ್ನು ಆಚರಣೆ ಮಾಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ತುಳುನಾಡಿನ ಪರಂಪರೆ, ಸಂಸ್ಕೃತಿಯ ಪ್ರತೀಕವಾಗಿದೆ. ತುಳುನಾಡಿನಲ್ಲಿ ಆಚರಿಸುವ ವಿವಿಧ ಆರಾಧನೆಗಳಲ್ಲಿ ಭೂತಾರಾಧನೆಯೂ ಒಂದು. ಈ ಭೂತಾರಾಧನೆಯು ತುಳುನಾಡಿನ ಒಂದು ವಿಶಿಷ್ಟ ಆರಾಧನೆಯಾಗಿದ್ದು, ಗೌಡ, ಶೆಟ್ಟಿ, ಬಂಟರು ಸೇರಿದಂತೆ ಮಲೆಕುಡಿಯ ಸಮುದಾಯದವರೂ ಸಹ ತಮ್ಮ ತಮ್ಮ ಮನೆಗಳಲ್ಲಿ ಭೂತಗಳನ್ನು ಆರಾಧಿಸುತ್ತಾರೆ. ಈ ಕುಟುಂಬಗಳಲ್ಲಿ ದೈವಗಳ ಪೂಜೆಗಾಗಿ ಪ್ರತ್ಯೇಕವಾದ ಒಂದು ಗುಡಿಯಿದ್ದು ಅದನ್ನು ದೈವಗಳ ಗುಡಿಯೆಂದು ಕರೆಯುತ್ತಾರೆ ಈ ದೈವಗಳಿಗೆ ಇವರು ಪ್ರತಿ ವರ್ಷ ಆರಾಧನೆ ಮಾಡುತ್ತಾರೆ. ಇದು, ನೇಮ, ಕೋಲ ಎಂದು ಈ ಭಾಗದಲ್ಲಿ ಪ್ರಸಿದ್ಧವಾಗಿದೆ. ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಸಂಶೋಧಕರಾದ ಡಾ.ಕೆ. ಚಿನ್ನಪ್ಪ ಗೌಡರವರು ೧೯೯೦ರಲ್ಲಿ 'ಭೂತಾರಾಧನೆ'ಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಭೂತಾರಾಧನೆ ಕುರಿತು ನಮಗೆ ವಿವರಣೆ ದೊರೆಯುತ್ತದೆ. ಭೂತಾರಾಧನೆ 'ಭೂತ' ಪದದ ಪರಿಕಲ್ಪನೆ. ವಿವಿಧ ಪ್ರಕಾರಗಳ ಭೂತಾರಾಧನೆಯ ಇತಿಹಾಸ ಭೂತಾರಾಧನೆಯ ಕಲಾವಿದರು, ವೇಷದಾರಿಗಳು ನಲಿಕೆ ಜಾತಿ ಇಲ್ಲಿ ಬಳಸುವ ತುಳು ಪಾಡ್ದನಗಳು, ಭೂತಗಳ ವರ್ಗೀಕರಣ, ಭೂತಗಳ ಉಗಮ, ಆರಾಧನೆಯ ಸಾಂಸ್ಕೃತಿಕ ವಿವರಗಳನ್ನು ನೀಡಿದ್ದಾರೆ. ಭೂತಾರಾಧನೆಯಲ್ಲಿ ಇರುವ ಬಣ್ಣಗಾರಿಕೆ, ಇಲ್ಲಿ ಬಳಸುವ ವಿವಿಧ ರೀತಿಯ ಮುಖವಾಡಗಳನ್ನು ಇಲ್ಲಿ ಬಳಸುವ ಆಯುಧಗಳು, ಶಿರೋಭೂಷನಗಳು, ವಾದ್ಯ ಕುಣಿತಗಳು, ಈ ಕಲೆಯಲ್ಲಿರುವ ಸಂಬಂಧಗಳು, ಇಲ್ಲಿನ ಸಾಮಾಜಿಕ ಅಂಶಗಳು, ನ್ಯಾಯ ತೀರ್ಮಾನ ಪದ್ಧತಿ, ಚಿಕಿತ್ಸಾ ಪದ್ಧತಿ ಕುರಿತಾದ ವಿವರಣೆಯಿದೆ.

ದಿನಾಂಕ. ೨೧.೪.೨೦೦೯ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಕನ್ಯಾನ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ನೆಲೆಸಿರುವ ಅಕ್ಕರೆಕೋಡಿ, ಪಾದೆಕಲ್ಲು, ಶಿರಂಕಲ್ಲು ಪ್ರದೇಶಗಳಲ್ಲಿ ವಾಸವಾಗಿರುವ ಮಲೆಕುಡಿಯರು ತಮ್ಮ ತಮ್ಮ ಮನೆಗಳಲ್ಲಿ ಭೂತಗಳನ್ನು ಆರಾಧಿಸುತ್ತಾರೆ. ಇವರ ಮನೆಗಳಲ್ಲಿ ಭೂತಗಳಿಗಾಗಿ ಪ್ರತ್ಯೇಕವಾದ ಒಂದು ಕೋಣೆಯಿದ್ದು ಅದನ್ನು ದೈವಗಳ ಮನೆಯೆಂದು ಕರೆಯುತ್ತಾರೆ. ಈ ದೈವದ ಕೋಣೆಯಲ್ಲಿರುವ ದೈವದ ಆರಾಧನೆಯ ಪ್ರತೀಕವಾದ ಕತ್ತಿ, ತ್ರಿಶೂಲ, ದೇವರ ವಿವಿಧ ಮುಖವಾಡಗಳ ಫೋಟೋ ತೆಗೆದುಕೊಂಡು ಬರಲಾಗಿದೆ. ದಿನಾಕ ೨೧.೪.೨೦೦೯ರಂದು ಮಂಗಳವಾರ ರಾತ್ರಿ ಅಕ್ಕರೆಕೋಡಿಯ ಕೃಷ್ಣ ಮಲೆತ್ತಾಯ ಕುಟುಂಬ ದವರು ನೇಮದ ಆರಾಧನೆಯನ್ನು ವ್ಯವಸ್ಥೆ ಮಾಡಡದ್ದರು. ಮಲೆಕುಡಿಯರ ಸಮುದಾಯದವರು ಅಣ್ಣಪ್ಪ ಸ್ವಾಮಿ, ಗುಳಿಗ, ಪಂಜುರ್ಲಿ, ಮೂಕಾಂಬಿಕಾ ದೈವಗಳ ಆರಾಧನೆಯನ್ನು ಮಾಡುತ್ತಾರೆ. ಈ ದೈವಗಳನ್ನು ತೃಪ್ತಿಗೊಳಿಸುವ ಸಲುವಾಗಿ ಕುಟುಂಬದ ರಕ್ಷಣೆ, ಆರೋಗ್ಯ, ಒಳಿತಿಗಾಗಿ, ಮಳೆ, ಬೆಳೆ ಚೆನ್ನಾಗಿ ಆಗಲು, ಕುಟುಂಬಕ್ಕೆ ಯಾವುದೇ ರೀತಿಯ ತೊಂದರೆ ಕಾಟಗಳು ಬರಬಾರದು ಎಂಬ ನಂಬಿಕೆಯಿಂದಾಗಿ ಇವರು ಈ ಭೂತಗಳಿಗೆ ನೇಮದ ಉತ್ಸವ ಮಾಡುತ್ತಾರೆ. ಭೂತಾರಾಧನೆ ಯಲ್ಲಿ ನೇಮ, ಕೋಲ, ಬಂಡಿ ಜಾತ್ರ, ಮಜ್ಜೆ, ಜಾಲಾಟ ಎಂಬ ಪ್ರಕಾರಗಳಿವೆ. ತುಳುನಾಡಿನಲ್ಲಿ ಬಹುತೇಕವಾಗಿ ಆಚರಣೆಯಲ್ಲಿರುವಂತೆ ಕನ್ಯಾನದ ಅಕ್ಕರೆಕೋಡಿಯ ಕೃಷ್ಣಪ್ಪ ಮಲತ್ತಾಯರವರು ತಮ್ಮ ಮನೆಯಲ್ಲಿ ನೇಮ ಆಚರಣೆ ಮಾಡುವುದರ ಮೂಲಕ ತಮ್ಮ ಆರಾಧನೆಯ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ.

### ೯. ಗುಂಡ್ಯ ತೋಟದ ಉತ್ಸವ

ಗುಂಡ್ಯ ತೋಟದಲ್ಲಿ **ಲಕ್ಷ್ಮೀ ವೆಂಕಟರಮಣ ದೇವರ ಆರಾಧನೆ:** ಇಲ್ಲಿ ಶ್ರೀ ಲಕ್ಷ್ಮೀ ವೆಂಕಟರಮಣ ದೇವಸ್ಥಾನವಿದೆ. ಇದು ಈ ಗ್ರಾಮದ ಆರಾಧ್ಯ ದೇವರು ಇದು ಮಲೆಕುಡಿಯರ ಮನೆ ದೇವರು ಆಗಿದೆ. ಪ್ರತಿ ವರ್ಷದಲ್ಲಿ ನಡೆಯುವ ಜಾತ್ರೆಗೆ ಮಲೆಕುಡಿಯರು ಹರಿಕೆ ಮಾಡಿಕೊಂಡು ಮುಡಿಪು ಸಲ್ಲಿಸುತ್ತಾರೆ. ಜಾತ್ರೆ ಉತ್ಸವಕ್ಕೆ ಹೊರೆಕಾಣಿಕೆ, ವಂತಿಕೆ ಸಲ್ಲಿಸಿ ದೇವರ ಕೆಲಸ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ. ಈ ವರ್ಷ ೨೦೧೦ರ ಮಾರ್ಚ ೨೭ರಿಂದ ಎಪ್ರಿಲ್ ೬ರ ವರೆಗೆ ಇಲ್ಲಿ ವೆಂಕಟರಮಣನ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಸಮಿತಿ ಇದೆ. ಭಟ್ಟರು ಪೂಜಾರಿಗಳಾಗಿದ್ದಾರೆ. ನಾವು ಸಹ ವಂತಿಕೆ ಕೊಡುತ್ತೇನೆ ಎಂದು ಹೊನ್ನಪ್ಪ ಮಲೆಕುಡಿಯ ವಿವರಿಸಿದ್ದಾರೆ.

**ದೈವಗಳು:** ಗುಂಡ್ಯ ತೋಟದಲ್ಲಿನ ಗ್ರಾಮದಲ್ಲಿ ದೈವಗಳ ಆರಾಧನೆ ಇದೆ. ಹಿಂದೆ ಖಾಲಿ ಜಾಗವಿದ್ದ ಸ್ಥಳದಲ್ಲಿ ದೈವಗಳನ್ನು ಪ್ರತಿಷ್ಠಾಪನೆ ಮಾಡಿದ್ದಾರೆ.

೧. ನಾಗನ ಕಟ್ಟೆ, ೨. ಚಾಮುಂಡೇಶ್ವರಿ, ೩. ಉಲ್ಲಾಕ್ಲು, ೪. ಬಚ್ಚನಾಯ್ಕ

ಈ ದೈವಗಳನ್ನು ಇಲ್ಲಿ ಆರಾಧಿಸಲಾಗುತ್ತದೆ. ನಾಗನಕಟ್ಟೆಯಲ್ಲಿ ನಾಗಾರಾಧನೆ ನಡೆಯುತ್ತದೆ. ಇದಕ್ಕೆ ಭಟ್ಟರು ಪೂಜೆ ಮಾಡುತ್ತಾರೆ. ಚಾಮುಂಡೇಶ್ವರಿ ದೈವಕ್ಕೂ ಸಹ ಭಟ್ಟರು ಪೂಜೆ ಮಡುತ್ತಾರೆ. ಉಲ್ಲಾಕ್ಲು ಮತ್ತು ಬಚ್ಚ ನಾಯ್ಕ ದೈವಗಳಿಗೆ ಇಲ್ಲಿನ ಗೌಡರು ಪೂಜೆ ಮಾಡುತ್ತಾರೆ. ಇವು ಇಲ್ಲಿನ ಸ್ಥಳದ ದೈವಗಳಾಗಿವೆ. ಪ್ರತಿವರ್ಷ ಮಾರ್ಚ್ ೮ರಿಂದ ೧೧ ರವರೆಗೆ ಉಲ್ಲಾಕ್ಲು ದೈವದ ನೇಮ ಉತ್ಸವವೂ

ಗ್ರಾಮದ ಲೆಕ್ಕದಲ್ಲಿ ಮಾಡುತ್ತಾರೆ. ಇದರಲ್ಲಿ ಮಲೆಕುಡಿಯರ ಕುಟುಂಬಗಳು ಸಹ ಭಾಗವಹಿಸುತ್ತಾರೆ. ಈ ಗ್ರಾಮದ ವೆಂಕಟರಮಣ ಮತ್ತೆ ಇಲ್ಲಿನ ದೈವಗಳನ್ನು ಹೊರತು ಪಡಿಸಿ ಬೇರೆ ದೇವರ ಉತ್ಸವದಲ್ಲಿ ನೀವು ಭಾಗವಹಿಸುತ್ತೀರಾ, ನಿಮ್ಮದೇನಾದರು ಸೇವೆ ಇದೆಯೇ ಎಂದು ಹೊನ್ನಪ್ಪ ಮಲೆಕುಡಿಯನಗೆ ಕೇಳಿದಾಗ, ಕೊಂಬಾರುನಲ್ಲಿರುವ ಉಲ್ಲಾಕ್ಕು ದೈವಕ್ಕೆ ಇಲ್ಲಿಂದ ಹೋಗಿ ನಾವು ಸೇವೆ ಮಾಡುತ್ತೇವೆ. ಉತ್ಸವದಲ್ಲಿ ದೀಪ ಇಡುತ್ತೇವೆ. ಉತ್ಸವಕ್ಕೆ ಬೇಕಾದ ಬೆತ್ತವನ್ನು ಕಡಿದು ಕೊಡುತ್ತೇವೆ. ಇಲ್ಲಿ ಮರದ ಕುದುರೆ ಇದೆ. ರಥ ಇಲ್ಲ, ಈ ಮರದ ಕುದುರೆಯನ್ನು ಉತ್ಸವದಲ್ಲಿ ಎಳೆಯುತ್ತೇವೆ. ಇದು ನಾವು ಪ್ರತಿವರ್ಷದಿಂದ ಮಾಡಿಕೊಂಡು ಬಂದಿದ್ದೇವೆ ಎನ್ನುತ್ತಾರೆ ಇದು ಏಕೆ, ಹೇಗೆ ಎಂದು ಕೇಳಿದಾಗ, ನನ್ನ ಮೂಲ ಕೊಂಬಾರುನ ಉಲ್ಲಾಕ್ಲು ದೈವ ಆಗಿದೆ. ಹೀಗಾಗಿ ಹಿಂದಿನ ಕಾಲದಿಂದಲೂ ಈ ಆಚರಣೆ ನಡೆದುಕೊಂಡು ಬಂದಿದೆ ಎನ್ನುತ್ತಾರೆ. ಇದರ ಜ್ಯೋತಿ ಜೊತೆಗೆ ಪ್ರತಿ ವರ್ಷ ಬೇಸ ಪತ್ತನಾಜೆ, ಬಲೀಂದ್ರ ಪೂಜೆ, ಸೌತಡ್ಕದ ಗಣಪತಿ ಪೂಜೆ ಅಲ್ಲದೆ ಸೋಣ ಶನಿವಾರದ ಆಚರಣೆಯನ್ನು ಮಾಡುತ್ತೇವೆಂದು ತಿಳಿಸಿದ್ದಾರೆ.

**ಕೊಂಬಾರು ಜಾತ್ರೆ**

ಕೊಂಬಾರುನಲ್ಲಿ ಪ್ರತಿವರ್ಷ ಯುಗಾದಿಯ ಪಾಡ್ಯದಲ್ಲಿ ಇಲ್ಲಿ ಉಲ್ಲಾಕ್ಕು ಮತ್ತು ಶ್ರೀ ದುರ್ಗಾ ಪರಮೇಶ್ವರಿ, ಬಚ್ಚಾನಾಯ್ಕ ದೈವಗಳ ಉತ್ಸವ ನಡೆಯುತ್ತದೆ. ಈ ಉತ್ಸವದ ರಥಕ್ಕೆ ಇವರು ಬೆತ್ತವನ್ನು ಕಡಿದು ಅಲಂಕಾರ ಮಾಡುತ್ತಾರೆ. ಆದರೆ ರಥ ಎಳೆಯುವುದಿಲ್ಲ. ಇಲ್ಲಿ ಮರದ ಕುದುರೆಗೆ ಬೆತ್ತ ಹಾಕುವವರು ಇವರೇ ಆಗಿದ್ದಾರೆ. ಯುಗಾದಿ ಪಾಡ್ಯದಲ್ಲಿ ತುದಿವರಿ ಬರುವ ಹುಣ್ಣಿಮೆಗೆ ಮರದ ಕುದುರೆ ಉತ್ಸವ ನಡೆಯುತ್ತದೆ. ಎಂಬ ಮಾಹಿತಿಯನ್ನು ಹೊನ್ನಪ್ಪ ಮಲೆಕುಡಿಯ ನೀಡಿದ್ದಾರೆ. ಗುಂಡ್ಯದ ಸಮೀಪದ ಕೊಂಬಾರು ಜಾತ್ರೆ ಆರಂಭವಾದ ನಂತರ ದೇವಸ್ಥಾನ ಸಮಿತಿಯಿಂದ ಪಡಿಅಕ್ಕಿಯನ್ನು ಪಡೆದು ಕಾಡಿಗೆ ಹೋಗಿ ಅವರ ಆರಾಧ್ಯ ದೈವವನ್ನು ಪೂಜೆ ಮಾಡಿ ತಂದ ನಂತರ ಇಲ್ಲಿನ ಜಾತ್ರೆಯ ಪೂಜೆ ವಿಧಿ-ವಿಧಾನಗಳು ರಥ ನಿರ್ಮಾಣ ಕಾರ್ಯಕ್ರಮಗಳು ಆರಂಭವಾಗುತ್ತವೆ. ಉಲ್ಲಾಕ್ಲು ಬಚ್ಚಾನಾಯ್ಕ ಇವರ ಆರಾಧ್ಯ ದೈವ ಈ ಎಲ್ಲಾ ದೈವ ಕಾರ್ಯಗಳನ್ನು ನಡೆಸಿಕೊಡುವವರು ಇಲ್ಲಿನ ಮಲೆಕುಡಿಯರಾಗಿದ್ದಾರೆ. ಇದು ಇವರ ಸಾಮಾಜಿಕ ಆರ್ಥಿಕ ಧಾರ್ಮಿಕ ಅವಲಂಬನೆಯನ್ನು ಸೂಚಿಸುತ್ತದೆ ಮತ್ತು ಇದು ಇವರ ಮೂಲಕ ಪರಂಪರೆಯಾಗಿದೆ.

ಗುಂಡ್ಯಾ ಸಮೀಪದ ಕೊಂಬಾರುವಿನಲ್ಲಿ ಪ್ರತಿ ವರ್ಷ ಉಳ್ಳಾಕುಲು ದೈವಗಳ ಜಾತ್ರೆ ನಡೆಯುತ್ತದೆ. ಈ ಜಾತ್ರೆಯಲ್ಲಿ ಗುಡ್ಯಾ ತೊಟದ ಮಲೆಕುಡಿಯರು ಭಾಗವಹಿಸಿ ಎಲ್ಲಾ ದೈವ ಕಾರ್ಯಗಳಿಗೆ ಚಾಲನೆ ನೀಡುತ್ತಾರೆ. ಗುಂಡ್ಯಾ ತೋಟದ ಹೊನ್ನಪ್ಪ ಮಲೆ ಕುಡಿಯರು ಹೇಳುವ ಪ್ರಕಾರೆ ಈ ಜಾತ್ರೆಯ ಆಚರಣೆಯ ಹಿನ್ನೆಲೆಯಲ್ಲಿ ದೈವ ಸೃಷ್ಠಿಯ ಐತಿಹ್ಯವಿದೆ. ಇವರ ಪ್ರಕಾರ ಕಂಚಿನಗಿರಿ ಕಾಂಚನಪುರದಿಂದ ಬರುವ ಉಳ್ಳಾಕುಲು ದೈವಗಳು ತುಳು ನಾಡಿಗೆ ಬರುವಾಗ ದಾರಿಯನ್ನು ಕೇಳುತ್ತಾ ಬಂದ್ಧರಂತೆ. ಆ ಹೊತ್ತಿಗೆ ಶಾರ್ಮಣಿ ಅಡ್ಕ ಎಂಬಲ್ಲಿ ಮಲೆಕುಡಿಯರ ಮಕ್ಕಳು ದನ ಮೇಯಿಸುತ್ತಾ ಇದ್ದರಂತೆ. ಆಗ ಆ ಮಕ್ಕಳನ್ನು ಈ ಊಳ್ಳಾಕುಲು ದೈವಗಳು ನೀವು ಯಾರೆಂದು ವಿಚಾರಿಸಿ, ಕೇಳಿದಾಗ ಆಗ ಆ ಮಕ್ಕಳು ಹೆದರುತ್ತಾ, ಸತ್ಯ ವಿಷಯಗಳನ್ನು ಹೇಳಿದರಂತೆ. ನಾವು ಮಲೆ ಕುಡಿಯರು. ನಮ್ಮ ಮನೆ ಕುಂಡೇವು.

೩೦ ಮನೆಯವರು ಇದ್ದೇವೆ. ನನ್ನ ಹೆಸರು ಚೋಮ ಎಂದು ಹೇಳಿದರಂತೆ. ಅದಕ್ಕೆ ಉಳ್ಳಾಕುಲುದ ದೈವ, ನಾವು ಗುಂಡ್ಯಾಕ್ಕೆ ಹೋಗಬೇಕು. ನಮಗೆ ದಾರಿ ತೋರಿಸಿ ಎಂದು ಕೇಳಿದರಂತೆ. ಅದಕ್ಕೆ ಚೋಮ ಇಷ್ಟು ಜನ ಬರಲು ಸಾಧ್ಯವಿಲ್ಲ. ನಮಗೆ ಇಷ್ಟು ಜನರಿಗೆ ತಿನ್ನಲು ಅನ್ನ ಇಲ್ಲ, ಉಡಲು ಬಟ್ಟೆಯಿಲ್ಲವೆಂದು ಚೋಮ ಹೇಳಿದಾಗ, ಆಗ ಉಳ್ಳಾಕುಲುದ ದೈವಗಳು ಇವೆಲ್ಲವನ್ನು ಕೊಟ್ಟು ನಾವು ನಿಮ್ಮನ್ನು ಸಲುಹುತ್ತೇವೆನ್ನುವ ಭರವಸೆಯನ್ನಿತ್ತರಂತೆ. ನಂತರ ಮಲೆಕುಡಿಯರು ದೈವಗಳ ಜೊತೆಗೆ ಸೇರಿಕೊಂಡು ಗುಂಡ್ಯಾಕ್ಕೆ ಬಂದರಂತೆ. ಆಗ ಹೆಬ್ಬಾರರ ಮನೆತನ ಇತ್ತಂತೆ. ಉಳ್ಳಾಕುಲು ದೈವಗಳು ರಾತ್ರಿ ಹೊತ್ತಿನಲ್ಲಿ ಹೆಬ್ಬಾರರನ್ನು ಹೆದರಿಸಿದಾಗ, ಹೆದರಿಕೊಂಡ ಹೆಬ್ಬಾರರು, ಕವಡೆ ಪ್ರಶ್ನೆಯನ್ನು ಕೇಳಿದರಂತೆ. ಆಗ ಉಳ್ಳಾಕುಲದ ದೈವಗಳು ಗುಂಡ್ಯಾ ತಲುಪಿದ್ದಾರೆ. ಆಗ ಆ ದೈವಕ್ಕೊಂದು ನೆಲೆಬೇಕು ಎಂಬ ಪ್ರಶ್ನೆ ಬಂದಿತಂತೆ. ಆ ಕೂಡಲೇ ಹೆಬ್ಬಾರ ಮನೆತನದವರು ಆ ದೈವಗಳಿಗೆ ನೆಲೆ ಊರಲು ಸ್ಥಳ ಕೊಟ್ಟು ಭಕ್ತಿಯಿಂದ ಪೂಜಿಸಿದರಂತೆ. ಆ ಉಳ್ಳಾಕುಲುದ ಜೊತೆಯಲ್ಲಿ ೫ ಸೇರು ರಾಗಿಯಷ್ಟು ಜನವಿದ್ದರಂತೆ. ಇವರ ಜೊತೆ ದಿನಾ ಬೇಟೆಯಾಡುತ್ತಾ ಕಾಡನ್ನು ಸುತ್ತುತ್ತಿದ್ದರಂತೆ. ಒಂದು ದಿನ ಗುಂಡ್ಯಾದ ಸಿರಿ ಬಾಗಿಲು ಕಾಡನ್ನು ಬಿಟ್ಟು ಕೊಂಬಾರು ಬೇಟಯಾಡೋಣವೆಂದು ಇವರು ಕೊಂಬಾರು ಮಲೆಗೆ ಹೋದರಂತೆ. ಆ ಮಲೆ ತಲುಪಿದಾಗ ಸಾಯಂಕಾಲವಾಗಿ ತಿನ್ನಲು ಏನೂ ಇಲ್ಲದೆ ಕಾಡಿನಲ್ಲಿ ಸಿಗುವ ಹಣ್ಣು ಹಂಪಲನ್ನು ತಿಂದು ಹಸಿವನ್ನು ನೀಗಿಸಿಕೊಂಡ ನಂತರ, ರಾತ್ರಿಯಾಗುತ್ತಿದ್ದಂತೆ ಉಳ್ಳಾಕುಲುದ ದೈವಗಳು ಈ ಕತ್ತಲಲ್ಲಿ ಗುಂಡ್ಯಾಕ್ಕೆ ಹೋಗಲು ಆಗುವುದಿಲ್ಲ. ನೀವು ಬೆಳಕು ಮಾಡಿ ಹತ್ತಿರದ ಯಾವುದಾದರೂ ಊರಿಗೆ ಸೇರಿಸಬೇಕು ಎಂದು ಕೇಳಿದಾಗ, ಜೊತೆಗೆ ಇದ್ದು, ಕಾಡಿನಲ್ಲಿ ಒಣಗಿದ್ದ ವಾಟೆಗಳನ್ನು ಕಡಿದು ಒಂತೆ ಕಟ್ಟಿ ಬೆಂಕಿ ಮಾಡಿ, ಒಬ್ಬೊಬ್ಬರ ಕೈಯಲ್ಲಿ ಎರಡೆರಡು ಒಂತೆಗಳನ್ನು ಬೀಸುತ್ತಾ, ಕೂ ಕೂ ಎಂದು ಕೂಗುತ್ತಾ, ಹಿಂದೆ ಮುಂದೆ ಓಡಾಡುತ್ತಾ, ಕೊಂಬಾರ ಮಲೆಯಿಂದ ಅಮ್ಮೂರು, ಪೆರೆಂತೋಡಿ, ಕಟ್ಟೆ, ಮುಗೇರು, ಗುತ್ತು ಮನೆ, ಸರಪಾಡಿ, ಕೂತೂರು, ಪಟ್ಲೆಮಾರು, ಪೊರಂದೇಲು, ಗುಂಡಿ, ಮಜಲು, ಸೇರಿ ಅಲ್ಲಿಂದ ಬೂಡು ಎಂಬಲ್ಲಿ ನೆಲೆಯಾದರಂತೆ. ಈ ಊರಲ್ಲಿ ವರ್ಷ ಕೂತೂರು ಮನೆತನದವರು ಉಳ್ಳಾಕುಲುದ ದೈವವನು ಪೂಜಿಸುತ್ತಾ, ವರ್ಷಾವದಿ ಪೂಜೆ ಉತ್ಸವಗಳನ್ನು ನಡೆಸುತ್ತಾ ಬಂದಿದ್ದಾರೆ. ಪ್ರತಿ ವರ್ಷ ಯುಗಾದಿ ಪಾಡ್ಯದಂದು ಜಾತ್ರೆ ಕೊಡೆಯೇರುತ್ತದೆ. ಕೊಡೆಯೇರಿದ ನಂತರ ಮಲೆ ಕುಡಿಯರು ತುಂಬಾ ಶುದ್ಧವಾಗಿರುತ್ತಾರೆ. ಇವರು ಕೊಂಬಾರು ಮಲೆಗೆ ನಡೆದುಕೊಂಡು ಹೊಗಿ, ಉಳ್ಳಾಕುಲುದ ದೈವವನ್ನು ಕರೆ ತರುತ್ತಾರೆ. ಕತ್ತಲಲ್ಲಿ ಕೈಯಲ್ಲಿ ಬೆಂಕಿಯನ್ನು ಹಿಡಿದು ಕಾಡಿನಿಂದ ದೈವವನ್ನು ತರುವ ಜವಾಬ್ದಾರಿ ಇವರದ್ದಾಗಿದೆ. ದೈವವನ್ನು ಕರೆತಂದ ದಿನ ಅಲ್ಲಿ ಕಾಡಿನಲ್ಲಿ ಪಂಚಮಿ ಎಂಬ ಸ್ಥಳದಲ್ಲಿ ಹಣ್ಣು ಕಾಯಿ, ಹಲಸಿನ ಕಾಯಿ ಇತ್ಯಾದಿಗಳನ್ನು ಇಟ್ಟು ಪೂಜಿಸುತ್ತಾರೆ. ನಂತರ ಒಣ ಅಡಿಕೆಯ ಮರವನ್ನು ಸೀಳಿ, ಒಂತೆಗಳನ್ನು ಕಟ್ಟಿ, ಸಾಯಂಕಾಲದ ನಂತರ ಕೂ, ಕೂ, ಎಂದು ಕೂಗುತ್ತಾ, ಪೆರೆಂದೋಡಿ, ಅಮೆಚೂರುನಲ್ಲಿ ಅವರ ಸ್ಥಾನಗಳಲ್ಲಿ ದೀಪ ಹಚ್ಚಿ, ಹಣ್ಣು ಕಾಯಿ ಹೊಡೆಯುತ್ತಾರೆ. ಮಾರನೆಯ ದಿನ ಬೈಲುಹೊಳೆ ಸ್ಥಾನದಲ್ಲಿ ಉಳಿದು ಒಂತೆಯೊಂದಿಗೆ(ಬೆಂಕಿ) ಕೋಲ್ಪೆ, ಪರಪ್ಪಾಡಿ, ಗುತ್ತುಮನೆ, ಪೊರ್ದೇಲು, ಕೂತೂರು, ಮುಗೇರಿಗೆ ಬಂದು ಪಟ್ಲತ್ತಿಮಾರು ಎಂಬ ದೊಡ್ಡ ಗದ್ದೆಯಲ್ಲಿ ಪೈಯೋಳಿ ಆಡುತ್ತಾರೆ. ಕೈಯಲ್ಲಿ ಬೆಂಕಿಯನ್ನು ಹಿಡಿದು(ಒಂತೆ) ಕೂ ಕೂ ಎಂದು ಕೂಗುತ್ತಾ ಹಿಂದೆ

ಮುಂದೆ ಓಡಾಡುವುದನ್ನು ಪೈಯೋಳಿ ಎಂದು ಕರೆಯುತ್ತಾರೆ. ನಂತರ ಬೀಡು ಸ್ಥಾನಕ್ಕೆ ಬಂದು ಬೀಡು ಭಾವಡಿಯಲ್ಲಿ ಈ ಒಂತೆಯಿಂದ ಭಾವಡಿಯೊಳಗಿಟ್ಟಿರುವ ದೀಪವನ್ನು ಹಚ್ಚುವ ಕ್ರಮವನ್ನು ಮಲೆಕುಡಿಯರು ನೆರವೇರಿಸಿಕೊಡುತ್ತಾರೆ. ಪೂಜಾರಿಗಳು ಅಲ್ಲಿ ಪೂಜೆ ಮಾಡುತ್ತಾರೆ. ಬೆಳಿಗ್ಗೆ ಬೀಡು ಸ್ಥಾನದಿಂದ ಉಳ್ಳಾಕುಲು ಬಚ್ಚಾನಾಯಕ ಮುಂತಾದ ದೈವಗಳ ಭಂಡಾರವನ್ನು ತೆಗೆದುಕೊಂಡು ಬೋಳ್ನಡ್ಕ ದುರ್ಗಾ ಪರಮೇಶ್ವರಿ ದೇವಸ್ಥಾನಕ್ಕೆ ಹೋಗಿ ನಂತರ ಕೆಳಗಿನ ಮಾಡ ಎಂಬ ಸ್ಥಳಕ್ಕೆ ಭಂಡಾರವನ್ನು ಕಳುಹಿಸುವ ಕ್ರಮ ನಡೆಯುತ್ತದೆ. ಬೆಳಗಿನ ಜಾವ ಕೊಡೆ ಇಳಿಸುವ ಹೊತ್ತಿಗೆ ಈ ಉಳಿದ ಒಂತೆಗಳನ್ನು ಹಿಡಿದು ಎಲ್ಲರೂ ಓಡುತ್ತಾ ಬಂದು ಕಾಯರ್ ಮರದ ಮೇಲೆ ಎಸೆಯುತ್ತಾರೆ. ಇದರ ನಂತರ ಹೋರಿ ಬರುವ ಪದ್ದತಿ ಇದೆ. ಮಲೆ ಕುಡಿಯರು ಕೊಂಬಾರು ಮಲೆಯಿಂದ ಬರುವಾಗ ಉದ್ದದ ಬೆತ್ತವನ್ನು ತಂದಿರುತ್ತಾರೆ. ಅದನ್ನು ಭೂತ ಕಟ್ಟುವ ಪರವರಲ್ಲಿ ಕೊಟ್ಟಿರುತ್ತಾರೆ. ಆ ಪರವ ಬೆತ್ತವನ್ನು ತುಂಡು ಮಾಡಿ, ಒಂದನ್ನು ಪೂಜಾರಿಗಳಿಗೆ ಇನ್ನೊಂದನ್ನು ಮಲೆಕುಡಿಯರಿಗೆ ಕೊಡುತ್ತಾರೆ. ಹೋರಿಯ ಕುತ್ತಿಗೆಗೆ ಹೂ ಮಾಲೆಯನ್ನು ಹಾಕಿ ಅಲೆಯೋ ಅಲೆಯೋ ಎನ್ನುತ್ತಾ, ಕಾಯರ ಮರಕ್ಕೆ ಐದು ಸುತ್ತು ಪ್ರದಕ್ಷಣಿ ಹಾಕುತ್ತಾರೆ. ಅಲ್ಲಿಂದ ಮುಂದೆ ಹೋಗಿ ಅಲ್ಲಿನ ಅಶ್ವತ್ಥ ಕಟ್ಟೆಗೆ ಐದು ಸುತ್ತು ಪ್ರದಕ್ಷಿಣೆ ಹಾಕುತ್ತಾರೆ. ಆ ಹೊತ್ತಿಲ್ಲಿ ಊರಿನವರು ತಂದಿರುವ ಕೋಳಿ ಮರಿಗಳನ್ನು ಮೇಲೆ ಹಾರಿ ಬಿಡುತ್ತಾರೆ. ಆ ಕೋಳಿ ಮರಿಗಳನ್ನು ಹಿಡಿಯಲು ಹೋದವರಿಗೆ ಬೆತ್ತದಿಂದ ಹೊಡೆಯುತ್ತಾರೆ. ನಂತರ ಭೂತ ವೇಷ ಹಾಕುವ ಪೊರವರ ಕೈಗೆ ಈ ಹೋರಿಯನ್ನ ಮಲೆ ಕುಡಿಯರು ಒಪ್ಪಿಸುತ್ತಾರೆ. ಇಲ್ಲಿಗೆ ಮಲೆ ಕುಡಿಯರ ಒಂದು ಹಂತದ ಸೇವಾಕಾರ್ಯ ಮುಗಿಯುತ್ತದೆ.

ಹಿಂದಿನ ಕಾಲದಲ್ಲಿ ಈ ಹೋರಿಯನ್ನ ಕಡಿಯುತ್ತಿದ್ದರಂತೆ. ಆದರೆ ಈಗ ಈ ರೀತಿ ಮಾಡುವುದಿಲ್ಲ. ಈ ಹೋರಿಯ ಕಿವಿಯನ್ನು ಮಾತ್ರ ಕತ್ತರಿಸಿ ಬಿಡುತ್ತಾರೆ. ಆಗ ಕೋಳಿ ಮರಿಗಳನ್ನು ಹಾರಿಸುವ ಪದ್ದತಿ ಇದೆ. ಮದ್ಯಾಹ್ನದ ವೇಳೆಗೆ ರತೋತ್ಸವ ನಡೆಯುತ್ತದೆ. ರಥೋತ್ಸವದಲ್ಲಿ ಮಲೆ ಕುಡಿಯರು ಭಾಗವಸಹಿಸುತ್ತಾರೆ. ಸಾಯಂಕಾಲ ಉಳ್ಳಾಕುಲುದ ದೈವದ ಕುದುರೆ ಸವಾರಿ ನಡೆಯುತ್ತದೆ. ಕುದುರೆಗೆ ಬೆತ್ತವನ್ನು ಹಾಕುತ್ತಾರೆ. ಊಳ್ಳಾಕುಲು ದೈವದ ನೇಮ ನಡೆಯಿಸುವವರು ದೇವಸ್ಥಾನಕ್ಕೆ ವಾದ್ಯ ಮೇಳದೊಂದಿಗೆ ಹೋಗಿ, ಕುದುರೆ ಏರುತ್ತಾರೆ. ಆಗ ಮಲೆಕುಡಿಯರು ಕುದುರೆಯನ್ನು ಕೆಳಗಿನ ಮಾಡ ಎಂಬಲ್ಲಿಗೆ ಎಳೆದು ತರುತ್ತಾರೆ. ನಂತರ ನೇಮದ ವೇಷದಾರಿ ಕುದುರೆಯಿಂದ ಇಳಿದು ಎಲ್ಲಾ ಮಲೆಕುಡಿಯರಿಗೂ ಆಶೀರ್ವಾದ ಮಾಡುತ್ತಾರೆ. ನಂತರ ನೇಮ ಮಾಡು ಎಂಬಲ್ಲಿಗೆ ಹೋಗುತ್ತಾರೆ. ಮಲೆಕುಡಿಯರು ಕುದುರೆಯನ್ನು ಎಳೆದು ಮೊದಲಿನ ಸ್ಥಳಕ್ಕೆ ತರುತ್ತಾರೆ. ಇಲ್ಲಿಗೆ ಮಲೆಕುಡಿಯರ ಸೇವಾಕಾರ್ಯ ಮುಗಿಯುತ್ತದೆ. ಮಲೆಕುಡಿಯರು ಜಾತ್ರಯಲ್ಲಿ ಮಾಡಿದ ಸೇವಾಕಾರ್ಯಕ್ಕೆ ಪ್ರತಿಫಲವಾಗಿ ಒಂದುವರೆ ಕ್ವಿಂಟಲ್ ಅಕ್ಕಿ ಮತ್ತು ಒಂದಿಷ್ಟು ಹಣ ಕೊಡುತ್ತಾರೆ. ಇದನ್ನು ಬಂದವರೆಲ್ಲರೂ ಸಮನಾಗಿ ಹಂಚಿಕೊಳ್ಳುತ್ತಾರೆ. ಹಿಂದೆಲ್ಲಾ ಕಡಿಮೆ ಕೊಡುತ್ತಿದ್ದರು. ಈಗ ಹೆಚ್ಚಿಗೆ ಕೊಡುತ್ತಾರೆಂಬುದನ್ನು ಗುಂಡ್ಯಾದ ರವಿ ತಿಳಿಸಿದ್ದಾರೆ. ಈ ಎಲ್ಲಾ ಸೇವಾಕಾರ್ಯಗಳು ಮಲೆ ಪೂಜಾರಿಯಾದ ಬಾಲಪ್ಪ ಮಲೆ ಇವರ ನೇತೃತ್ವದಲ್ಲಿ ನಡೆಯುತ್ತದೆ. ರಾತ್ರಿಯಲ್ಲಿ ಉಳ್ಳಾಕುಲುದ ಬಚ್ಚಾನಾಯಕ ನೇಮೋತ್ಸವ ಇರುತ್ತದೆ. ಎಲ್ಲರೂ ಈ ನೇಮೋತ್ಸವದಲ್ಲಿ ಬಾಗವಹಿಸುತ್ತಾರೆ. ಇದು ಈ ಭಾಗದ ಕೊಂಬಾರು ಜಾತ್ರೆಯಂತಲೇ ಪ್ರಸಿದ್ಧವಾಗಿದೆ.

### ೩.೭. ಆಧುನಿಕ ವೃತ್ತಿಗಳು

ಮಲೆಕುಡಿಯ ಸಮುದಾಯದ ಆರ್ಥಿಕ ಅವಲಂಬನೆಯ ಮೂಲಗಳಲ್ಲಿ ಆಧುನಿಕ ವೃತ್ತಿಗಳು ಪ್ರಧಾನವಾಗಿವೆ. ೧. ಬೀಡಿ ಕಾರ್ಮಿಕರು, ೨. ಕಾರ್ಖಾನೆಗಳಲ್ಲಿ ದುಡಿಮೆ, ೩. ಸರಕಾರಿ- ಖಾಸಗಿ ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ.

#### ೧. ಬೀಡಿ ಕಾರ್ಮಿಕರು

ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ಬೀಡಿ ಉದ್ಯಮ ಒಂದು ಜೀವನ ನಿರ್ವಹಣೆಗೆ ಮೂಲವಾಗಿದೆ ಇದರ ಪ್ರಯೋಜನವನ್ನು ಈ ಜಿಲ್ಲೆ ವ್ಯಾಪ್ತಿಯಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯದವರು ಸಹ ಪಡೆಯುತ್ತಿದ್ದಾರೆ. ಮಲೆಕುಡಿಯ ಸಮುದಾಯ ಕುಟುಂಬಗಳ ಮಹಿಳೆಯರು ಬೀಡಿ ತಯಾರಿಕೆಯಲ್ಲಿ ತೊಡಗಿಕೊಂಡಿದ್ದಾರೆ.

#### ೨. ಕಾರ್ಖಾನೆಗಳಲ್ಲಿ ದುಡಿಮೆ

ಭತ್ತ, ಕೊಬ್ಬರಿ ಎಣ್ಣೆ ತಯಾರಿಕೆ ಮಿಲ್‌ಗಳು, ಗೋಡಂಬಿ ಸಂಸ್ಕರಣೆ ಮಿಲ್‌ಗಳಲ್ಲಿ ಕಾರ್ಮಿಕರಾಗಿ ಮಲೆಕುಡಿಯರು ದುಡಿಯುತ್ತಿದ್ದಾರೆ. ಆಧುನಿಕ ಬದುಕಿಗೆ ಒಗ್ಗಿಕೊಂಡಿರುವ ಕಾಡಿನಿಂದ ನಾಡಿಗೆ ಬಂದು ಗ್ರಾಮ ನಗರ ಜೀವನಕ್ಕೆ ಹೊಂದಿಕೊಂಡಿರುವ ಮಲೆಕುಡಿಯ ಸಮುದಾಯದವರು ಆಧುನಕ ದುಡಿಮೆಗೆ ಹೊಂದಿಕೊಂಡಿದ್ದಾರೆ.

#### ೩. ಸರಕಾರಿ-ಖಾಸಗಿ ಉದ್ಯೋಗ

ಮಲೆಕುಡಿಯ ಸಮುದಾಯದವರಲ್ಲಿ ಶಿಕ್ಷಣವನ್ನು ಪಡೆದು ಸರ್ಕಾರಿ ಮತ್ತು ಖಾಸಗಿಯಲ್ಲಿ ಉದ್ಯೋಗ ಅವಕಾಶಗಳನ್ನು ಪಡೆದವರಿದ್ದಾರೆ. ಮಾದರಿ ಸಮೀಕ್ಷೆಯಲ್ಲಿ ಪರಿಗಣಿಸಲಾದ ಬೆಳ್ತಂಗಡಿ ತಾಲೂಕಿನ ಮಲೆಕುಡಿಯ ಸಮುದಾಯದ ಅಧಿಕಾರಿಗಳ ವಿವರವನ್ನು ಅನುಬಂಧದಲ್ಲಿ ಕೋಷ್ಟಕ ೩.೭(೩-೧)ವನ್ನು ಕಾಣಬಹುದು.

### ೩.೮. ಶೈಕ್ಷಣಿಕ ಸ್ಥಿತಿ

ದಕ್ಷಿಣ ಕನ್ನಡ ಜಿಲ್ಲೆಯ ಸರ್ವ ಶಿಕ್ಷಣ ಅಭಿಯಾನ ಯೋಜನೆಯಲ್ಲಿ ೨೦೦೯-೧೦ನೇ ಸಾಲಿನಲ್ಲಿ ಶಿಕ್ಷಣ ಇಲಾಖೆಯವರಿಂದ ೯ನೇ ಡಿಸೆಂಬರ್, ೨೦೦೯ರಂದು ನಡೆದ 'ಸಮಗ್ರ ಮಕ್ಕಳ ಗಣತಿ' ನಡೆದಿರುತ್ತದೆ. ಈ ಗಣತಿಯಲ್ಲಿ ೬ ವರ್ಷದಿಂದ ೧೮ ವರ್ಷದವರೆಗೆ ಮಕ್ಕಳು ಶಾಲಾ ಕಾಲೇಜುಗಳಿಂದ ಹೊರಗೆ ಉಳಿಯದಿರುತ್ತಾರೆ. ಜಿಲ್ಲೆಯಲ್ಲಿನ ಗಣತಿಯ ಪ್ರಕಾರ ೨೦೦೯-೧೦ನೇ ಸಾಲಿನಲ್ಲಿ ೬ರಿಂದ ೧೮ ವರ್ಷದ ವರೆಗಿನ ೧೭೩೮೦ ಮಕ್ಕಳು ಶಾಲೆ- ಕಾಲೇಜು ಮುಂದುವರೆಸಲು ಆಗದೆ ಅರ್ಧಕ್ಕೆ ಬಿಟ್ಟು ಶಾಲೆಯಿಂದ ಹೊರಗೆ ಉಳಿದಿರುವುದರ ಬಗ್ಗೆ ಮಾಹಿತಿ ಇದೆ. ಈ ಪೈಕಿ ೬ರಿಂದ ೧೪ ವರ್ಷದವರೆಗಿನ ೬೯೨ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಈ ಸಾಲಿನ ಗಣತಿಯಲ್ಲಿ ಶಾಲೆಗೆ ಸೇರಿದ ಬಳಿಕ ೩ ತಿಂಗಳಿಗಿಂತ ಹೆಚ್ಚು ಸಮಯ ರಜೆ ಹಾಕಿದ ಮಕ್ಕಳನ್ನು ಶಾಲೆ ಬಿಟ್ಟವರು ಎಂದು ಗುರುತಿಸಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೪.೧೭ ಶೇ. ಕುಟುಂಬಗಳಲ್ಲಿ ಗಣತಿಯನ್ನು ನಡೆಸಲಾಗಿದೆ. ೯ರಿಂದ ಪಿ.ಯು.ಸಿ. ವರೆಗಿನ ೧೫ರಿಂದ ೧೮ ವರ್ಷ ವಯಸ್ಸಿನ ವರೆಗೆ ಶಿಕ್ಷಣ ಮುಂದುವರೆಸಲಾಗದೆ ಅರ್ಧಕ್ಕೆ ಬಿಟ್ಟವರ

ಸಂಖ್ಯೆ ೧೬೬೪೮ ಆಗಿದೆ. ಕಳೆದ ವರ್ಷ ೨೦೦೮ ಡಿಸೆಂಬರ್‌ನಲ್ಲಿ ೬ರಿಂದ ೧೪ ವರ್ಷದ ಮಕ್ಕಳ ಸಮೀಕ್ಷೆ ಮಾತ್ರ ಮಾಡಲಾಗಿತ್ತು. ಆಗ ಕೇವಲ ೧೪೯ ಮಕ್ಕಳು ಮಾತ್ರ ಶಾಲೆಯಿಂದ ಹೊರಗೆ ಉಳಿದ ಮಾಹಿತಿ ಇತ್ತು ಎಂಬ ವಿವರ ಇಲ್ಲಿ ಲಭ್ಯವಾಗುತ್ತದೆ. ದ.ಕ. ಜಿಲ್ಲೆಯಲ್ಲಿ ಒಟ್ಟು ೪.೧೭ ಲಕ್ಷ ಕುಟುಂಬಗಳ ಗಣತಿಯಲ್ಲಿ ಸಮೀಕ್ಷೆ ನಡೆಸಲಾಗಿದೆ. ಇದರಲ್ಲಿ ಒಟ್ಟು ೧೭೩೪೦ ಮಕ್ಕಳು ಶಾಲೆ ಬಿಟ್ಟಿದ್ದಾರೆ. ಇದರಲ್ಲಿ ೮೯೩೪ ಗಂಡು ಮತ್ತು ೮೪೦೬ ಹೆಣ್ಣು ಮಕ್ಕಳು. ೧೫ರಿಂದ ೧೮ ವಯಸ್ಸಿನ ವರೆಗೆ ೯ರಿಂದ ಪಿ.ಯು.ಸಿ. ವರೆಗೆ ಶಾಲೆ ಬಿಟ್ಟವರ ಸಂಖ್ಯೆ ೧೬೬೪೮ ಆಗಿದೆ. ಕಾಲೇಜು ವಿದ್ಯಾರ್ಥಿಗಳ ಗಣತಿಯನ್ನು ಈ ಯೋಜನೆಯಲ್ಲಿ ಮಾಡಲಾಗಿಲ್ಲ. ಈ ವರ್ಷದ ೨೦೦೯ ಡಿಸೆಂಬರ್ ಗಣತಿಯಲ್ಲಿ ಕಾಲೇಜು ವ್ಯಾಸಂಗದ ಮಕ್ಕಳ ಗಣತಿಯನ್ನು ಸಹ ಮಾಡಿರುವುದು ವಿಶೇಷವಾಗಿದೆ.[೧೧]

**ಕೋಷ್ಟಕ ೩.೮(೧):**

**೨೦೦೯-೧೦ನೇ ಸಾಲಿನಲ್ಲಿ ನಡೆದ ದ.ಕ. ಜಿಲ್ಲಾ ಸಮಗ್ರ ಮಕ್ಕಳ ಗಣತಿ(ಡಿಸೆಂಬರ್ ೦೯ರ ಪ್ರಕಾರ ಸಂಖ್ಯಾ ವಿವರ ಒಟ್ಟು ಕುಟುಂಬಗಳ ಸಂಖ್ಯೆ)**

| ಕ್ರ.ಸಂ. | ವಯಸ್ಸು | ತರಗತಿ | ಶಾಲೆ ಬಿಟ್ಟ ಮಕ್ಕಳ ಸಂಖ್ಯೆ |
|---|---|---|---|
| ೧ | ೬ - ೧೪ | ೧ - ೯ | ೬೯೨ |
| ೨ | ೧೫ - ೧೮ | ೯-ಪಿ.ಯು.ಸಿ | ೧೬೬೪೮ |
| ೩ | ೬ - ೧೮ | ೧ - ೧೦ | ೧೭೩೪೦ |
| ೪ | ೦೧-೦೮ | - | ಡಿಸೆಂಬರ್ ೨೦೦೮ರಲ್ಲಿ ೧೪೯ |
| ೫ | ೬ - ೧೪ | - | ೧೪೯ |

**ಮಲೆಕುಡಿಯರ ಶೈಕ್ಷಣಿಕ ಸ್ಥಿತಿ**

೧೯೫೩-೫೪ರ ಕಾಲದ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಬುಡಕಟ್ಟು ಸಮುದಾಯದ ಕುರಿತು ಕ್ಷೇತ್ರಕಾರ್ಯ ಮಾಡಿ ಇವರ ನೆಲೆಗಳನ್ನು ಸುತ್ತಾಡಿ ಅಧ್ಯಯನ ಮಾಡಿದ ಲಾರೆನ್ಸ್ ಡಿಸೋಜ ಎಸ್.ಜೆ, ರವರು Make MALEKUDIYAS A primitive Tribe OF South India. ಪುಸ್ತಕವನ್ನು UNESCO, CO-ACTION LEARNING CENTRE , MANGALORE ಮೂಲಕ ಪ್ರಕಟಿಸಿದ್ದಾರೆ. ಕರ್ನಾಟಕದ ಮಂಗಳೂರು ಸಮೀಪದ ಮುಲ್ಕಿ ಕೃಷಿಕರ ಕ್ರೈಸ್ತ ಕುಟುಂಬದಲ್ಲಿ ಆಗಸ್ಟ್ ೯-೧೯೩೨ರಲ್ಲಿ ಜನಿಸಿದ ಲಾರೆನ್ಸ್ ಡಿ'ಸೋಜ ರವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಮುಲ್ಕಿ ಪಟ್ಟಣದಲ್ಲಿ ಮಾಡಿದ್ದಾರೆ. ಹೈಸ್ಕೂಲ್ ನಂತರ ಇವರ ಶಿಕ್ಕಣ ಅರ್ಧಕ್ಕೆ ನಿಲ್ಲುತ್ತದೆ. ನಂತರ ತಮ್ಮ ಇಂಟರ್ ಮೀಡಿಯಟ್ ಶಿಕ್ಷಣವನ್ನು

ಬೆಂಗಳೂರಿನ ಸೇಂಟ್, ಜೋಸೆಫ್ ಕಾಲೇಜ್‌ನಲ್ಲಿ ಪೂರೈಸಿ, ತನ್ನ ಪದವಿ ಶಿಕ್ಷಣವನ್ನು ಮಂಗಳೂರಿನ ಸೇಂಟ್ ಅಲೋಷಿಯನ್ ಕಾಲೇಜಿನಲ್ಲಿ ಮಾಡಿದ್ದಾರೆ. ೧೯೫೩ರಲ್ಲಿ ಕಲ್ಕತ್ತಾದ "Society of Jesus" ಸೇರುತ್ತಾರೆ. ನಂತರ ತಮಿಳುನಾಡಿನ ಶಂಬಗನೂರುನಲ್ಲಿ ತತ್ವಶಾಸ್ತ್ರದಲ್ಲಿ ಅಧ್ಯಯನ ಮಾಡುತ್ತಾರೆ. ೧೯೬೪ರಲ್ಲಿ ಪಶ್ಚಿಮ ಬಂಗಾಳದ Kuseongನಲ್ಲಿ Theology ಕುರಿತು ಅಧ್ಯಯನ ಮಾಡಿದ್ದಾರೆ. ಮಂಗಳೂರಿನಲ್ಲಿ ಬಿ.ಎಡ್ ಪದವಿ ಪಡೆಯುತ್ತಾರೆ. ಅನಂತರ ಮಂಗಳೂರಿನ ಸೇಂಟ್ ಅಲೋಷಿಯನ್ ಹೈಸ್ಕೂಲ್‌ನಲ್ಲಿ ೧೯ ವರ್ಷಗಳ ಕಾಲ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಾರೆ. ೧೯೭೦ರಲ್ಲಿ The School UNESCO Clubನ್ನು ಆರಂಭಿಸಿರುತ್ತಾರೆ. ಹಳ್ಳಿಗಳನ್ನು ದತ್ತು ತೆಗೆದುಕೊಂಡು ನಡೆಸುವುದು. ಇದರ ಮುಖ್ಯ ಉದ್ದೇಶವಾಗಿತ್ತು. ಯುನೆಸ್ಕೋ ದ ಸಹಯೋಗದೊಂದಿಗೆ ಗ್ರಾಮಗಳನ್ನು ದತ್ತು ತೆಗೆದುಕೊಳ್ಳುವ CA ೧೪ ಯೋಜನೆ ಇದಾಗಿತ್ತು. ಈ ದತ್ತು ಪ್ರದೇಶಗಳು ಗಿರಿಜನ ಪ್ರದೇಶಗಳಾಗಿದ್ದು, ಆಧಿವಾಸಿಗಳು ಅಭಿವೃದ್ದಿಗಾಗಿ ೨೪ ಪ್ರದೇಶಗಳು ೧೮ ಆಶ್ರಮ ಶಾಲೆಗಳನ್ನು ಆದಿವಾಸಿಗಳ ಕಲ್ಯಾಣಕ್ಕಾಗಿ ಆರಂಭಿಸಲಾಯಿತು. ೧೯೮೨ರಲ್ಲಿ National Fedaration of UNESCO Association in Japan ವತಿಯಿಂದ ಟೋಕಿಯೋಗೆ ಇವರನ್ನು ಆಹ್ವಾನಿಸಲಾಯಿತು. ಇಲ್ಲಿ ಇವರು Unesco-co –action ಯೋಜನೆಯಲ್ಲಿ ಪ್ರತಿನಿದಿಸಿರುತ್ತಾರೆ. ೧೯೮೪ರಲ್ಲಿ 'The World Congress of UNESCO Clubs' ವತಿಯಿಂದ Sandaiನಲ್ಲಿ ನಡೆಲಿರುವ ಅಧಿವೇಶನಕ್ಕೆ ವಿಶೇಷ ಆಹ್ವಾನಿತರಾಗಿ ಭಾಗವಹಿಸುತ್ತಾರೆ. ಇದು UNESCO clubs ಜನ್ಮ ತಾಳಿದ ಸ್ಥಳವಾಗಿತ್ತು. ಏಷ್ಯಾ ರಾಷ್ಟ್ರಗಳ ವತಿಯಿಂದ ವಿಶೇಷವಾಗಿ ಆಹ್ವಾನಿಸಲಾದ ಪ್ರತಿನಿಧಿಗಳಲ್ಲಿ ಇವರು ಭಾರತದಿಂದ ಪ್ರತಿನಿಧಿಸಿದ್ದರು. ಇವರು ಉಪನ್ಯಾಸವನ್ನು ನೀಡಿದ್ದಾರೆ. ೧೯೮೫ ನವ್ಹೆಂಬರ್ ೨೫ರಂದು ಹಲವಾರು UNESCO ಕ್ಲಬ್‌ಗಳನ್ನು ಆರಂಭಿಸಿದ್ದಾರೆ. ಇವರು "Indian National Federation of UNESCO and associations" ಕೇಂದ್ರಗಳನ್ನು ಆರಂಭಿಸಿದ್ದಾರೆ. ೧೯೮೫ರಲ್ಲಿ CCIVS- Coordination Committee for International Voluntary Serviceನ ಕಾರ್ಯಾಗಾರವು ದೆಹಲಿಯಲ್ಲಿ ನಡೆಯುತ್ತದೆ. ಇದನ್ನು ಇವರು ಪ್ರತಿನಿಧಿಸಿದ್ದಾರೆ. ೧೯೮೬ರ ನವೆಂಬರ್ The world Federation of Unesco clubs centries and associations resolved 'INFUCA'ನಲ್ಲಿನ್ನು ಆರಂಭಿಸಿದ್ದಾರೆ. ೧೯೯೩ರಲ್ಲಿ INFUCA Received the International literacy Award ಹೆಸರಿನಲ್ಲಿ NOMA PRIZE ಪಡೆಯುತ್ತಾರೆ. ೧೯೮೭ರಲ್ಲಿ Madridನಲ್ಲಿ ನಡೆದ The world congress of UNESCO clubsನಲ್ಲಿ ಭಾಗವಹಿಸಿದ್ದಾರೆ. ನಂತರ ಇವರು UNESCO ಪ್ರದ್ರಾನ ಕಛೇರಿಗೆ ಭೇಟಿ ಕೊಡುತ್ತಾರೆ. ಅಲ್ಲೆ ಬೆಲ್ಜಿಯಂ, ಹಾಲೆಂಡ್, ಜರ್ಮನಿ, ಇಟಲಿ ಯುನೆಸ್ಕೊ ಕ್ಲಬ್ ಸದಸ್ಯರನ್ನು ಭೇಟಿ ಮಾಡಿದ್ದಾರೆ. ಕೆನಡಾದಲ್ಲಿ ಕೆಲವು ದಿನಗಳ ವರೆಗೆ ಇದ್ದು ಯುನೆಸ್ಕೋ ಕ್ಲಬ್ ಗಳಲ್ಲಿ ಕೆಲಸಮಾಡುತ್ತಾರೆ. ಈ ಅವಧಿಯಲ್ಲಿ ಇವರು ತುಂಬಾ ಪ್ರಸಿದ್ದಿ ಪಡೆದು ಚಿರಪರಿಚಿತರಾಗುತ್ತಾರೆ. ಇವರನ್ನು Renverಗೆ ವಿಶೇಷವಾಗಿ. ಆಹ್ವಾನಿಸುತ್ತಾರೆ. ಇಲ್ಲಿ ನಡೆದ ಯುನೆಸ್ಕೋದ ೪೦ನೇ ವಾರ್ಷಿಕೋತ್ಸವ "UNESCO Association of colorada"ದಲ್ಲಿ ಭಾಗವಹಿಸುತ್ತಾರೆ. ಇದು ಜಗತ್ತಿನ ೩ನೇ Unesco ಕ್ಲಬ್ ಆಗಿತ್ತು. ಹತ್ತು ವರ್ಷಗಳ ಕಾಲ ಕಾರ್ಮಿಕರ ಸಂಘದ, ಜವಬ್ದಾರಿ ವಹಿಸಿ ಕೆಲಸ ಮಾಡಿರುತ್ತಾರೆ.

**ಬೆಳ್ತಂಗಡಿಯ ಯುನೆಸ್ಕೋ(UNESCO) ಕಲಿಕಾಕೇಂದ್ರ**

(UNESCO Learning Centre of Belthangadi)

ಬೆಳ್ತಂಗಡಿಯ ಪ್ರದೇಶಗಳಲ್ಲಿ ನೆಲೆಸಿರುವ ಮಲೆಕುಡಿಯರಿಗಾಗಿ Jesuitರವರು ಬೆಳ್ತಂಗಡಿಯಲ್ಲಿ UNESCO Learning Centre ಅನ್ನು ಆರಂಭಿಸಿದ್ದಾರೆ ಇದರ ಮೂಲಕ ಇಲ್ಲಿನ ಮಲೆಕುಡಿಯ ಸಮುದಾಯ ಜನರನ್ನು ಮುಖ್ಯವಾಹಿನಿಗೆ ತರುವುದು ಉದ್ದೇಶವಾಗಿತ್ತು ೧೯೯೬ ರಲ್ಲಿ Jesuit ವರ್ಗಾವಣೆಯೊಂದಿಗೆ ಇದರ ಕಾರ್ಯ- ಉದ್ದೇಶಗಳು ಸಹ ಸ್ಥಗಿತವಾಗುತ್ತವೆ ಇವರ ನಂತರ ಇವರಿಂದ ಪ್ರೇರಿತರಾದ ಯುವಕ/ಯುವತಿಯರ ತಂಡ ಮಲೆಕುಡಿಯರ ನೆಲೆಗಳಿಗೆ ಹೋಗಿ ಇವರೊಂದಿಗೆ ಅರಣ್ಯದಲ್ಲಿ ನೆಲೆಸಿ, ಇವರ ತುಳು ಭಾಷೆ ಕಲಿಯುತ್ತಾರೆ, ಇವರ ದೈನಂದಿನ ಕೆಲಸ ಕಾರ್ಯಗಳಲ್ಲಿ ಸಹಭಾಗಿಗಳಾಗುತ್ತಾರೆ. ಅರಣ್ಯದ ಉತ್ಪನ್ನಗಳ ಸಂಗ್ರಹ,ಬುಟ್ಟಿ ತಯಾರಿಕೆ ಸೇರಿದಂತೆ ಇವರ ಆಹಾರ ಪದ್ಧತಿ, ಆಚರಣೆಗಲಲ್ಲಿ ಭಾಗವಹಿಸುತ್ತಾರೆ. ಆದರೆ ಇವರಿಗೆ ಶಾಲೆ, ಶಿಕ್ಷಣ ಅರೋಗ್ಯ ಸವಲಭ್ಯಕ್ಕಾಗಿ ಬೇಕಾದ ಆಸ್ಪತ್ರೆ, ದಿನನಿತ್ಯದ ಆಹಾರ ಪದಾರ್ಥಗಳ ಖರೀದಿಗೆ ಇವರ ಪ್ರದೇಶದಿಂದ ೧೫ ಕಿ.ಮೀ. ದೂರದ ಪಟ್ಟಣಕ್ಕೆ ಹೋಗ ಬೇಕಾಗುತ್ತದೆ. ಇದನ್ನು ಹೊರತಾಗಿ ಇವರಿಗೆ ಜೀವನಕ್ಕೆ ಪರ್ಯಾಯ ವ್ಯವಸ್ಥೆಯೇ ಇಲ್ಲದೆ ತೊಂದರೆ ಪಡುತ್ತಾರೆಂಬುದನ್ನು ಲಾರೆನ್ಸ್ ಡಿಸೋಜರವರು ಹೇಳುತ್ತಾರೆ. ಅರಣ್ಯವಾಸಿಗಳಾದ ಮಲೆಕುಡಿಯರು ತಮ್ಮ ಜೀವನದ ಆಧಾರವನ್ನು ಅರಣ್ಯದಲ್ಲಿ ಸಿಗುವ ಅರಣ್ಯಉತ್ಪನ್ನಗಳ ಸಂಗ್ರಹಣೆ, ಬೆತ್ತ, ಬಿದಿರು, ಬುಟ್ಟಿ, ತಯಾರಿಕೆಯನ್ನು ತಮ್ಮ ಮೂಲ ವೃತ್ತಿಯನ್ನಾಗಿ ಹೊಂದಿದ್ದಾರೆ, ಆದರೆ ಇವರಿಗೆ ಅರಣ್ಯ ಇಲಾಖೆಯ ಮತ್ತು ಪೋಲೀಸರಿಂದ ತೊಂದರೆ ಆಗುತ್ತಿರುವುದನ್ನು ಇಲ್ಲಿ ಕಾಣುತ್ತೇವೆ ಎಂದು ಹೇಳಿದ್ದಾರೆ.

**ಮಲೆಕುಡಿಯರ ಬುಡಕಟ್ಟು ಸಮುದಾಯಗಳ ಕಲಿಕಾ ಕೇಂದ್ರಗಳು**

ಜಪಾನಿನ National Federation of UNESCO Association ವತಿಯಿಂದ ದಕ್ಷಿಣ ಕನ್ನಡದ ಪ್ರದೇಶಗಳಲ್ಲಿ ಸಾಕ್ಷರತಾ ಶಿಕ್ಷಣಕ್ಕಾಗಿ ಕಲಿಕಾ ಕೇಂದ್ರಗಳನ್ನು "UNESCO Co-action Learning Centese for the education of Koraga Tribses" ಹೀಗೆ ಸಾಕ್ಷರತಾ ಕಲಿಕಾ ಕೇಂದ್ರಗಳನ್ನು ಬುಡಕಟ್ಟು ಸಮುದಾಯಗಳ ಅಭಿವೃದ್ದಿಗೆ ಆರಂಭಿಸುತ್ತಾರೆ. ಕೊರಗರಿಗಾಗಿ ೪ ಕೇಂದ್ರಗಳು, ಕುಡುಬಿಗಳಿಗೆ ೧ ಕೇಂದ್ರ, ಗೊಲ್ಲರಿಗೆ ೧ ಕೇಂದ್ರ, ಮಲೆಕುಡಿಯರಿಗೆ ೧ ಕೇಂದ್ರವನ್ನು ಆರಂಭಿಸಿದ್ದಾರೆ.

ಜಪಾನ್‌ನ The International conference on literacy in Aomoriಗೆ ಭೇಟಿ ನೀಡುತ್ತಾರೆ. ಇವರು Unesco co-action learning centerನ ಸಂಪಾದಕ ಮಂಡಳಿ ಸದಸ್ಯರಾಗಿರುತ್ತಾರೆ. ಇವರನ್ನು ಮತ್ತೆ ಜಪಾನ್‌ನ NFUAS ವತಿಯಿಂದ International NGO Formನ ವತಿಯಿಂದ 'literacy for All' ಕುರಿತು Negoyaದ ಸಂಪನ್ಮೂಲ ವ್ಯಕ್ತಿಯಾಗಿ ದಿನಾಂಕ ಜೂನ್ ೨೪,೨೫,೨೬, ೧೯೯೦ರಲ್ಲಿ ಭಾಗವಹಿಸುತ್ತಾರೆ, ೧೯೯೩ರಲ್ಲಿ ಮತ್ತುದಲ್ಲಿ ನಡೆಯಲಿರುವ ಕಾರ್ಯಾಗಾರದಲ್ಲಿ ಭಾಗವಹಿಸುತ್ತಾರೆ.

೧೯೯೧ರ ಜನವರಿಯಲ್ಲಿ 'The Unesco clubs week' ಕಾರ್ಯಾಗಾರ ಮಾಸ್ಕೋದಲ್ಲಿ ನಡೆಯುತ್ತದೆ. ಈ ಕಾರ್ಯಾಗಾರರನ್ನು The world Federation of Unesco clubs centers and Associations

ವತಿಯಿಂದ ಜನರಲ್ ಸೆಕ್ರೆಟರಿಯವರು ಆಹ್ವಾನಿಸುತ್ತಾರೆ. ಇವರು ಏಷ್ಯಾದ ರಾಷ್ಟ್ರಗಳ ವತಿಯಿಂದ ಭಾಗವಹಿಸುವ ಏಕೈಕ ಪ್ರತಿನಿಧಿಯಾಗಿದ್ದಾರೆ. ಯುನೆಸ್ಕೋ ವತಿಯಿಂದ ಲಾರೆನ್ಸ್‌ರವರಿಂದ ಬಂದ ಪತ್ರಗಳು(ಪುಟ. ೮೮,೮೯,೯೦,೯೧). ೨೭ ಹೀಗೆ ಕೊರಗ ಸಮುದಾಯದವರಿಗೆ ಒಟ್ಟು ನಾಲ್ಕು ಕೇಂದ್ರಗಳನ್ನು ಇವರು ಆರಂಭಿಸುತ್ತಾರೆ. ನಂತರ ಇದರ ವತಿಯಿಂದ ದೊರೆತ ಪ್ರೋತ್ಸಾಹ ಬೆಂಬಲದಿಂದಾಗಿ ಇಲ್ಲಿ ಹೆಚ್ಚಿನ ಕಲಿಕ ಕೇಂದ್ರಗಳನ್ನು ಪ್ರಾರಂಭಿಸಲು ಅವಕಾಶ ದೊರೆಯುತ್ತದೆ. ಇದರ ಪ್ರಕಾರ ಇವರು ಮತ್ತೊಂದು ಕಲಿಕಾ ಕೇಂದ್ರದ ಆರಂಭಕ್ಕೆ ಮನವಿ ಸಲ್ಲಿಸುತ್ತಾರೆ. ಅದೇ ವೇಳೆಗೆ ವಿಶ್ವಸಂಸ್ಥೆಯು ೧೯೯೩ರ ವರ್ಷವನ್ನು "International year of the Indigeous people" ಎಂದು ಘೋಷಣೆ ಮಾಡುತ್ತದೆ. ಇದರಿಂದಾಗಿ ಈ ಕಲಿಕಾ ಕೇಂದ್ರಗಳ ಸೌಲಭ್ಯವನ್ನು ಇತರ ಆದಿವಾಸಿ ಸಮುದಾಯಗಳಿಗೆ ವಿಸ್ತರಿಸಲು ಇವರು ಮುಂದಾಗುತ್ತಾರೆ.

೧೯೮೯ರಲ್ಲಿ ಜಪಾನ್‌ನ The National Federation of UNESCO Association ವತಿಯಿಂದ ಲಾರೆನ್ಸ್ ಡಿಸೋಜರವರಿಗೆ ಮಂಗಳೂರಿನಲ್ಲಿ ಯುನೆಸ್ಕೋ ಕಲಿಕಾ ಕೇಂದ್ರ(The UNESCO co activity learning centre)ಗಳನ್ನು ಪ್ರಾರಂಭಿಸುವಂತೆ ಆಹ್ವಾನ ಬರುತ್ತದೆ. ಇದಕ್ಕಾಗಿ ಇವರು ಮಂಗಳೂರಿನಲ್ಲಿ ಪ್ರಪ್ರಥಮವಾಗಿ ಕೊರಗ ಸಮುದಾಯದವರಿಗೆ ಕಲಿಕಾ ಕೇಂದ್ರವನ್ನು ಪ್ರಾರಂಭಿಸುತ್ತಾರೆ. ನಂತರ ಜಿಲ್ಲೆಯ ಇತರ ಕಡೆಗಳಲ್ಲಿ ಈ ಕೇಂದ್ರಗಳನ್ನು ಆರಂಬಿಸಲು ಪ್ರಯತ್ನ ಮಾಡುತ್ತಾರೆ. ಇವರ ಪ್ರಯತ್ನದ ಫಲವಾಗಿ ಕಿನ್ನಿಕಂಬಳ(Kinnikambala) ಸುಳ್ಯ, ಕಾಸರಗೋಡುಗಳಲ್ಲಿ ಕಲಿಕಾ ಕೇಂದ್ರಗಳನ್ನು ಆರಂಭಿಸುತ್ತಾರೆ. ನಂತರ ಲಾರೆನ್ಸ್ ಡಿಸೋಜರವರು ಕೊರಗರಿಗೆ ಸ್ಥಾಪಿಸಿದ ಕಲಿಕಾ ಕೇಂದ್ರಗಳ ಯೋಜನೆಯ ಸೌಲಭ್ಯವನ್ನು ಮಲೆಕುಡಿಯರಿಗೆ ವಿಸ್ತರಿಸುದಕ್ಕೆ ಮುಂದಾಗುತ್ತಾರೆ.[೨೮] ಈ ಸಮುದಾಯಗಳಿಗೆ ಈ ಗೋಜನೆಯನ್ನು ತಲುಪಿಸುವುದಕ್ಕಾಗಿ ಮಾಹಿತಿ ಕೈಪಿಡಿಯನ್ನು ತಯಾರಿಸುತ್ತಾರೆ.ಇವರ ಪ್ರಯತ್ನದ ಫಲವಾಗಿ ಜಿಲ್ಲಾಡಳಿತ ಮಲೆಕುಡಿಯರ ಸಮುದಾಯಕ್ಕಾಗಿ ಬೆಳ್ತಂಗಡಿ, ನೆರಿಯಾ, ಧರ್ಮಸ್ಥಳ, ಸುಬ್ರಹ್ಮಣ್ಯ, ನಾರಾವಿ, ಶಿಶಿಲ, ಮುಂಡಾಜಿಗಳಲ್ಲಿ ಮಲೆಕುಡಿಯ ವೆಲ್ಫೇರ್ ಸೆಂಟರ್‌ಗಳನ್ನು ಆರಂಭಿಸಿದ್ದಾರೆ. ೨೫ ನಂತರ ಇವು ಗಿರಿಜನ ಆಶ್ರಮ ಶಾಲೆಗಳಾಗಿ ಪರಿವರ್ತನೆಯಾಗಿವೆ. ಈಗ ಈ ಶಾಲೆಗಳು ಪರಿಶಿಷ್ಠ ಪಂಗಡಗಳ ವಿದ್ಯಾರ್ಥಿನಿಲಯಗಳಾಗಿ ಅಸ್ತಿತ್ವದಲ್ಲಿವೆ. ಒಂದಾನೊಂದು ಕಾಲದಲ್ಲಿ ಮಲೆಕುಡಿಯರಿಗಾಗಿ ಪ್ರತ್ಯೇಕವಾಗಿ ಮಲೆಕುಡಿಯ ಗಿರಿಜನ ಕಲ್ಯಾಣ ಕೇಂದ್ರಗಳನ್ನು ಆರಂಭಿಸಿದ್ದು, ಈಗ ಇವು ಅಸ್ತಿತ್ವದಲ್ಲಿದಿರುವುದು ನಮ್ಮ ಕ್ಷೇತ್ರ ಕಾರ್ಯ ಅಧ್ಯಯನದಿಂದ ತಿಳಿದು ಬಂದಿರುತ್ತದೆ. ದುರಂತವೆಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗ ಅಸ್ತಿತ್ವದಲ್ಲಿರುವ ಗಿರಿಜನ ಆಶ್ರಮ ಶಾಲೆ ಮತ್ತು ಪರಿಶಿಷ್ಟ ಪಂಗಡ ವಿದ್ಯಾರ್ಥಿ ನಿಲಯಗಳಿಗೆ ಅಕ್ಕಪಕ್ಕದ ಜಿಲ್ಲೆಗಳಾದ ಚಿಕ್ಕಮಗಳೂರು, ಮಡಿಕೇರಿ, ಹಾಸನ, ಉಡುಪಿ ಭಾಗಗಳಿಂದ ಮಲೆಕುಡಿಯರಲ್ಲದ ವಿದ್ಯಾರ್ಥಿಗಳನ್ನು ತಂದು ಸೇರಿಸಿಕೊಂಡು ಗರಿಷ್ಠ ಸಂಖ್ಯೆಯ ಗುರಿಯನ್ನು ಸಾಧಿಸುವ ಪ್ರಯತ್ನಗಳಾಗಿರುತ್ತವೆ. ಈಗ ಕಾರ್ಯನಿರ್ವಹಿಸುತ್ತಿರುವ ಈ ಆಶ್ರಮ ಶಾಲೆ ಮತ್ತು ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಶೌಚಾಲಯ ಸೌಲಭ್ಯ ಕುಡಿಯುವ ನೀರಿನ ಸೌಲಭ್ಯಗಳ ಕೊರತೆ ಇರುವುದು ಕಂಡು ಬರುತ್ತದೆ. ಮತ್ತು ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಬೋಧನಾ ಸಿಬ್ಬಂದಿ ವರ್ಗ ಹುದ್ದೆಗಳು ಖಾಲಿ ಇರುವುದು ತಿಳಿದುಬರುತ್ತದೆ. ಅತ್ಯಂತ ಹಿಂದುಳಿದ ಮೂಲ ನಿವಾಸಿಗಳ ಸ್ಥಳವಾದ ಬಂಜಾರುಮಲೆಯಲ್ಲಿ ಅಂಗನವಾಡಿ

ಕೇಂದ್ರ ಮತ್ತು ಪ್ರಾಥಮಿಕ ಶಾಲೆ ಇದುವರೆಗೂ ಸ್ಥಾಪನೆಯಾಗಿಲ್ಲ. ಈ ಶಾಲೆಗಳನ್ನು ಸ್ಥಾಪಿಸಲು ಅಗತ್ಯವಾಗಿ ಬೇಕಾಗಿರುವ ವಿದ್ಯಾರ್ಥಿಗಳ ಸಂಖ್ಯೆ ಇಲ್ಲದೇ ಇರುವುದು ಇದಕ್ಕೆ ಕಾರಣ ಎಂಬುದು ಇಲಾಖೆಗಳಿಂದ ಸಿಗುವ ಉತ್ತರವಾಗಿದೆ. ಸುಬ್ರಮಣ್ಯ ಒಂದು ಧಾರ್ಮಿಕ ಯಾತ್ರಾ ಸ್ಥಳ ಮತ್ತು ಒಂದು ಶಿಕ್ಷಣ ಕೇಂದ್ರವಾಗಿದೆ. ಇಲ್ಲಿ ಪ್ರಾಥಮಿಕ ಶಿಕ್ಷಣದಿಂದ ಪದವಿವರೆಗೆ ಕಲಿಯಲು ಅವಕಾಶಗಳಿಗೆ ಸೌಲಭ್ಯಗಳಿವೆ. ಆದರೆ ಮಲೆಕುಡಿಯ ಸಮುದಾಯದಲ್ಲಿ ಪ್ರೌಢ ಹಾಗೂ ಪಿಯುಸಿ ವರೆಗೆ ಶಿಕ್ಷಣವನ್ನು ಮುಂದುವರೆಸಿ ನಂತರ ಅರ್ಧಕ್ಕೆ ಬಿಟ್ಟವರ ಸಂಖ್ಯೆ ಹೆಚ್ಚು ಕಂಡುಬರುತ್ತದೆ. ಶಾಲೆ ಕಾಲೇಜು ಅವಧಿಯನ್ನು ಹೊರತು ಪಡಿಸಿದಂತೆ ಉಳಿದ ದಿನಗಳಲ್ಲಿ ಎಲ್ಲರೂ ದೇವಸ್ಥಾನದ ಕೆಲಸಕ್ಕೆ ಹಾಜರಾಗುತ್ತಾರೆ. ಇಲ್ಲಿ ಈಗಿನಿಂದಲೇ ಕೆಲಸ ಮಾಡುತ್ತಾ ಬಂದರೆ ಮುಂದೆ ನಮಗೆ ಇಲ್ಲಿ ಈ ಕೆಲಸ ಖಾಯಂ ಆಗುತ್ತದೆ ಎಂಬ ಆಕಾಂಕ್ಷೆ ಇವರದ್ದಾಗಿದೆ. ಮಡಪ್ಪಾಡಿಯ ಹಾಡಿಕಲ್ಲು ಗುಡ್ಡೆ ಮನೆಯ ವಸಂತಕುಮರ್ ಎಂ.ಎ ಸ್ನಾತಕೋತರ ಪದವಿ ಪಡೆದು ಅತಿಥಿ ಉಪನ್ಯಾಸಕರಾಗಿದ್ದಾರೆ. ನುಚ್ಚಿಲದ ಸುಂದರ ಎ.ವಿ. ಇವರ ಮಗ ಪದ್ಮನಾಭ ಈಗ ಕಾಲೇಜು ವ್ಯಾಸಂಗ ಮಾಡುತ್ತಿದ್ದಾನೆ, ಗಿರಿಯಪ್ಪನ ಮಗಳು ಜಯಲಕ್ಷಿ-ಪಿ.ಯು.ಸಿ, ಹರಿಗುಡಿಯ ಚಿನ್ನಪ್ಪನ ಮಗಳು ಎ.ಪಾರ್ವತಿ ಹೊಲಿಗೆ ಕಸೂತಿಯಲ್ಲಿ JOC ಮುಗಿಸಿ ಈಗ ಸ್ವಂತಕ್ಕೆ ಟೈಲರ್ ಆಗಿದ್ದಾಳೆ. ಇವರ ಮನೆಯಲ್ಲಿ ಲಲಿತ, ತಿಮ್ಮಪ್ಪ, PUCವರೆಗೆ ಕಲಿತಿದ್ದಾರೆ. ಚಂದ್ರಾವತಿ ಈಗ ಚನ್ನರಾಯ ಪಟ್ಟಣದಲ್ಲಿ ಜನರಲ್ ನರ್ಸಿಂಗ್ ಮಾಡುತ್ತಿದ್ದಾಳೆ. ಅರಗುಡಿಯ ಶೀನಪ್ಪನ ಮಗಳು ಕಮಲಾಕ್ಷಿ ಬಿ.ಎ. ಕಲಿಯುತ್ತಿದ್ದಾಳೆ. ಜಾನಪ್ಪನ ಮಗಳು ತಿಂಕನ್ನ ಪಿ.ಯು.ಸಿ ವರೆಗೆ, ಕಲ್ಲುಗುಡ್ಡೆಯ ರಾಘವನ ಮಗಳು ತಾರ ಜನರಲ್ ನರ್ಸಿಂಗ್ ಮಾಡುತ್ತಿದ್ದಾಳೆ. ಕಲ್ಲುಗುಡ್ಡೆಯ ರಾಮಣ್ಣ ಬಿ.ಎ.ವರೆಗೆ ಕಲಿತು ಈಗ ಪಂಚಾಯಿತಿಯಲ್ಲಿ ಬಿಲ್ಕಲೆಕ್ಟರ್ ಆಗಿದ್ದಾನೆ. ಶಿವಕುಮಾರ್ ಇಲ್ಲಿನ ಖಾಸಗಿ ಶಾಲೆಯಲ್ಲಿ ಅಟೆಂಡರ್ ಆಗಿದ್ದಾನೆ. ಉಳಿದಂತೆ ಇಲ್ಲಿ ಉನ್ನತ ಶಿಕ್ಷಣಕ್ಕೆ ಹೋದವರ ಸಂಖ್ಯೆ ಸಿಗುವುದಿಲ್ಲ ಅರ್ಧಕ್ಕೆ ಶಾಲೆಬಿಟ್ಟ ಮಕ್ಕಳ ಸಂಖ್ಯೆ ಪ್ರಮಾಣ ಈ ಸಮುದಾಯದಲ್ಲಿ ಹೆಚ್ಚು ಇದೆ.

ಸುಳ್ಯ ತಾಲ್ಲೂಕಿನ ಮಡಪಾಡಿಯ **ಹಾಡಿಕಲ್ಲಿನ ಕಲ್ಲುಗುಡ್ಡೆಯಲ್ಲಿ** ೧ದಿಂದ ೫ನೇ ತರಗತಿಯವರೆಗೆ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಹಾಡಿಕಲ್ಲಿನಲ್ಲಿ ಇದೆ. ಈ ಶಾಲೆಯಲ್ಲಿ ಕುಲಿತು ಎಂ.ಎ ಪದವೀಧರರಾಗಿ ಸರ್ಕಾರಿ ಪದವಿ ಕಾಲೇಜು ಅತಿಥಿ ಉಪನ್ಯಾಸಕನಾಗಿ ಕಾರ್ಯ ನಿರ್ವಹಿಸುತ್ತಿರುವ ವಸಂತ ಕುಮಾರ್ ಹೇಳುವಂತೆ "ನಮ್ಮೂರಿನ ಈ ಶಾಲೆಯಲ್ಲಿ ೧ರಿಂದ ೫ನೇ ತರಗತಿ ವರೆಗೆ ಪಾಠಮಾಡಲು ಒಬ್ಬ ಶಿಕ್ಷಕ ಮಾತ್ರ ಇದ್ದಾನೆ. ಅವರ ಹೆಸರು ಪ್ರಕಾಶ್ ಅಂತ, ವಿಶೇಷ ಎಂದರೆ ೧ರಿಂದ ೫ನೇ ತರಗತಿವರೆಗೆ ಇರುವ ಮಕ್ಕಳ ಸಂಖ್ಯೆ ಮಾತ್ರ ೧೨ ಆಗಿದೆ. ಇಲ್ಲಿ ಸಹ ಮಧ್ಯಾಹ್ನದ ಬಿಸಿಯೂಟದ ವ್ಯವಸ್ಥೆ ಇದೆ. ೬ನೇ ತರಗತಿಗೆ ಬೇರೆ ಕಡೆಗೆ ಹೋಗಬೇಕಷ್ಟೆ ಎನ್ನುತ್ತಾರೆ.ಆರೋಗ್ಯಕ್ಕೆ ಸಂಬಂಧಿಸಿದಂತೆ ಸಣ್ಣ ಪುಟ್ಟ ಕಾಯಿಲೆಗಳಿಗೆ ಮನೆ ಮದ್ದು ತೆಗೆದುಕೊಳ್ಳುತ್ತೇವೆ. ಇಲ್ಲದೇ ಹೋದರೆ ೧೨ ಕಿ.ಮೀ. ದೂರದ ಗುತ್ತಿಗಾರುಗೆ ಬರುತ್ತೇವೆ. ಇಲ್ಲಿಗೆ ಬರಬೇಕಾದರೆ ಅಲ್ಲಿ ಒಂದು ಹೊಳೆ ಬರುತ್ತದೆ. ಇದನ್ನು ದಾಟಲು ಸೇತುವೆ ಇಲ್ಲ, ನಾವೇ ಸೇರಿಕೊಂಡು ಮರದಿಂದ ಅಡ್ಡ ಹಾಕಿ ಸೇತುವೆ ಮಾಡಿಕೊಳ್ಳುತ್ತೇವೆ. ಮಳೆಗಾಳದಲ್ಲಿ ಹೆಚ್ಚು ನೆರೆ ಬಂದಾಗ ಇದು ಸಹ ನಿಲ್ಲುವುದಿಲ್ಲ ಹಾಳಾಗುತ್ತದೆ. ಆಗ ನಮಗೆ ಬರುವುದಕ್ಕೆ ಆಗುವುದೇ ಇಲ್ಲ. ತುಂಬಾ ಕಷ್ಟವಾಗುತ್ತದೆ. ಎಂದು ವಸಂತಕುಮಾರ್ ಹೇಳುತ್ತಾರೆ. ಇಲ್ಲಿ ಇವರಿಗೆ ದುಡಿಮೆ ಎಂದರೆ ಕೃಷಿ

ಮತ್ತು ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಹಿಂದೆಲ್ಲಾ ಕಾಡುತ್ಪನ್ನಗಳನ್ನೂ ಸಂಗ್ರಹಿಸುವುದು, ಜೇನು ತೆಗೆಯುವುದು, ಬೇಟೆ ಆಡುವುದು ಇತ್ತು. ಈಗ ಕಾಡುತ್ಪನ್ನಗಳ ಗುತ್ತಿಗೆ ಬಂದಿದ್ದರಿಂದ ಅವರ ಹತ್ತಿರ ಕೆಲಸ ಮಾಡಬೇಕಾಗಿದೆ. ಅತಿ ಎತ್ತರದಲ್ಲಿರುವ ಜೇನು ತೆಗೆಯುವುದರಲ್ಲಿ ಇವರು ಪರಿಣಿತರಾಗಿದ್ದಾರೆ ಎಂಬ ಮಾಹಿತಿ ವಸಂತ ಕುಮಾರ್ ರವರ ಸಂದರ್ಶನದಿಂದ ತಿಳಿದುಬರುತ್ತದೆ.

ಸಿರಿಬಾಗಿಲಿನ ಗುಂಡ್ಯ ತೋಟಕ್ಕೆ ಹತ್ತಿರದಲ್ಲಿರುವ ಪಿಲಿಕಜೆಯ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಇಲ್ಲಿನ ಮಲೆಕುಡಿಯ ಕುಟುಂಬದ ಮಕ್ಕಳು ಕಲಿಯಲು ಬರುತ್ತಾರೆ. ಈ ಶಾಲೆಗೆ ಬೇಟಿ ನೀಡಿ ಇಲ್ಲಿನ ಸಹಶಿಕ್ಷಕಿ ಶ್ರೀಮತಿ ಉಷಾ ಮತ್ತು ಪ್ರೀತಿಯವರಲ್ಲಿ ಸಂದರ್ಶಿಸಿ ಶಾಲಾ ದಾಖಲಾತಿ ಪ್ರಕಾರ ಇಲ್ಲಿನ ಮಕ್ಕಳ ಸಂಖ್ಯಾ ವಿವರವನ್ನು ಪಡೆದುಕೊಂಡು ಬಂದೆ. ೧ನೇ ತರಗತಿಯಿಂದ ೫ ನೇ ತರಗತಿಯವರೆಗೆ ಆ ಶಾಲೆಯಲ್ಲಿ ಒಟ್ಟು ಮಕ್ಕಳ ಸಂಖ್ಯೆ ಕೇವಲ ೨೧ ಮಾತ್ರ ಇದೆ. ಇದರಲ್ಲಿ ೪ನೇ ತರಗತಿಯಲ್ಲಿ ಕಲಿಯುವ ಕೀರ್ತನ ತಂದೆ ಲಿಂಗಪ್ಪ ಮಲೆಕುಡಿಯ ಒಂದು ಹೆಣ್ಣು ಮಗು ಮಾತ್ರ ಕಲಿಯುತ್ತಿರುವುದರ ಬಗ್ಗೆ ಮಾಹಿತಿ ದೊರೆಯಿತು. ಉಳಿದು ಮಕ್ಕಳು ಯಾಕೆ ಶಾಲೆಗೆ ಬರುತ್ತಿಲ್ಲ. ಕೇವಲ ಒಂದೇ ಒಂದು ಹೆಣ್ಣುಮಗು ಮಾತ್ರ ಈ ಶಾಲೆಯಲ್ಲಿ ಕಲೆಯುತ್ತಿದ್ದಾಳೆ ಎಂಬ ಪ್ರಶ್ನೆಗೆ ಶಿಕ್ಷಕಿ ಕೊಡುವ ಉತ್ತರ ತಿಳಿದರೆ ಇಲ್ಲಿನ ಮಲೆಕುಡಿಯ ಕುಟುಂಬಗಳು ಗುಂಡ್ಯದ ಡ್ಯಾಂ ನಲ್ಲಿ ಕೋಲಿ ಕೆಲಸಕ್ಕೆ ಹೋಗುತ್ತಾರೆ. ಹೀಗಾಗಿ ಇವರ ಮಕ್ಕಳು ಶಾಲೆಗೆ ಬರುವುದರಲ್ಲಿ ಸಾಧ್ಯವಾಗುದಿಲ್ಲ. ಇವರ ಮಕ್ಕಳು ಸಹ ಇವರೊಟ್ಟಿಗೆ ಹೋಗುತ್ತಾರೆ. ಅದರಲ್ಲಿ ಅರ್ಧಕ್ಕೆ ಶಾಲೆ ಬಿಟ್ಟ ಮಕ್ಕಳ ಸಂಖ್ಯೆ ಹೆಚ್ಚಿದೆ. ಇವರ ಮಕ್ಕಳ ಬಗ್ಗೆ ಗಮನಹರಿಸಲು ಸಾದ್ಯವಾಗದೆ ಸುಬ್ರಮಣ್ಯದಲ್ಲಿರುವ ವಸತಿ ನಿಲಯ ಆಶ್ರಮ ಶಾಲೆಗಳಿಗೆ ಇವರ ಮಕ್ಕಳನ್ನು ಸೇರಿಸುವುದರಿಂದ ಈ ಶಾಲೆಗೆ ಮಕ್ಕಳು ಬರಲಾಗುತ್ತಿಲ್ಲ. ಶಾಲೆಗೆ ಬರುವ ಮಕ್ಕಳಲ್ಲಿ ಗೈರು ಹಾಜರಿ ಇಲ್ಲವೇ ಡ್ರಾಪ್ ಔಟ್ ಮಕ್ಕಳ ಸಂಖ್ಯೆ ಪ್ರಮಾಣದಲ್ಲಿ ಹೆಚ್ಚಳವಿದೆ. ಈ ಶಾಲೆ ಮತ್ತೊಬ್ಬ ಸಹಶಿಕ್ಷಕ ಕಡಬದ ಪ್ರೀತಿಯರವರಲ್ಲಿ ಮಾತನಾಡಿಸಿದರೆ ನೀವು ಯಾರು? ನಮ್ಮ ಗುರುತು ಎಲ್ಲಿ? ಅಂತೆಲ್ಲ ಪ್ರಶ್ನಸಿದ , ನನ್ನ ಗುರುತು ಪತ್ರ ತೋರಿಸಿದ ನಂತರ ಸುಮ್ಮನಾದ, ಈ ಶಿಕ್ಷಕ ಮುಂದೆ ತನ್ನ ಮಾತನಾಡದೆ ಸುಮ್ಮನೆ ತನ್ನ ಪಾಡಿನ ಕೆಲಸದಲ್ಲಿ ತೊಡಗಿದೆ. ೨೦೧೧ರ ಮಕ್ಕಳ ಗಣತಿಯ ಪ್ರಕಾರ ಗುಂಡ್ಯ ತೋಟದ ೧೧ ಮಲೆಕುಡಿಯರ ಕುಟುಂಬಗಳ ಸಂಖ್ಯೆ ಮತ್ತು ಮಕ್ಕಳ ಗಣತಿ ಮಾಹಿತಿಯನ್ನು ಕೋಷ್ಟಕ ೩.೮(೩)ರಲ್ಲಿ ಕಾಣುತ್ತೇವೆ.

**ಕೋಷ್ಟಕ ೩.೮(೨)**

**೨೦೧೧ರ ಜನಗಣತಿ ಪ್ರಕಾರ ದ.ಕ ಜಿಲ್ಲೆಯ ಪ.ಪಂಗಡದ ಸಾಕ್ಷರತೆ ವಿವರ.**

| ತಾಲೂಕು | ಒಟ್ಟು | ಗಂಡು | ಹೆಣ್ಣು |
|---|---|---|---|
| ಮಂಗಳೂರು | ೫೪೪೮ | ೨೮೪೮ | ೨೬೦೦ |
| ಪುತ್ತೂರು | ೧೪೫೫೫ | ೭೫೭ | ೬೯೮ |
| ಬಂಟ್ವಾಳ | ೪೪೬ | ೨೨೮ | ೨೨೧ |
| ಬೆಳ್ತಂಗಡಿ | ೨೩೮ | ೧೦೮ | ೧೨೦ |
| ಸುಳ್ಯ | ೬೦೩ | ೪೫೭ | ೪೪೯ |
| **ಒಟ್ಟು** | **೮,೪೯೬** | ೪೪೦೮ | ೪೦೮೮ |

**ಕೋಷ್ಟಕ ೩.೮(೩)**

**೨೦೧೦ರ ಮಕ್ಕಳ ಗಣತಿ ಪ್ರಕಾರ ಗುಂಡ್ಯ ತೋಟದ ಮಲೆಕುಡಿಯ ಮಕ್ಕಳ ಗಣತಿ ವಿವರ.**

| ಕ್ರ ಸಂ | ಕುಟುಂಬದ ಹೆಸರು | ಗಂಡು ಮಕ್ಕಳ ಸಂಖ್ಯೆ | ಹೆಣ್ಣು ಮಕ್ಕಳ ಸಂಖ್ಯೆ | ಒಟ್ಟು |
|---|---|---|---|---|
| ೧ | ತಿಮ್ಮಪ್ಪ ಮಲೆಕುಡಿಯ | ೦೩ | ೦೧ | ೦೪ |
| ೨ | ಬಾಬು ಮಲೆಕುಡಿಯ | ೦೩ | ೦೩ | ೦೬ |
| ೩ | ಲಿಂಗಪ್ಪ ಮಲೆಕುಡಿಯ | ೦೪ | ೦೧ | ೦೫ |
| ೪ | ದೇವಪ್ಪ ಮಲೆಕುಡಿಯ | ೦೩ | ೦೨ | ೦೫ |
| ೫ | ಬಾಲಪ್ಪ ಮಲೆಕುಡಿಯ | ೦೩ | ೦೨ | ೦೫ |
| ೬ | ವೀರಪ್ಪ ಮಲೆಕುಡಿಯ | ೦೩ | ೦೩ | ೦೬ |
| ೭ | ಹೊನ್ನಪ್ಪ ಮಲೆಕುಡಿಯ | ೦೩ | ೦೨ | ೦೫ |
| ೮ | ವಾಸಮ್ಮ ಮಲೆಕುಡಿಯ | ೦೩ | ೦೨ | ೦೫ |
| ೯ | ಲಕ್ಷ್ಮಣ ಮಲೆಕುಡಿಯ | ೦೨ | ೦೧ | ೦೩ |
| ೧೦ | ಲಿಂಗಮ್ಮ ಮಲೆಕುಡಿಯ | ೦೧ | ೦೧ | ೦೨ |
| ೧೧ | ತನಿಯಪ್ಪ ಮಲೆಕುಡಿಯ | ೦೨ | ೦೨ | ೦೪ |
| ೧೨ | ವೆಂಕಪ್ಪ ಮಲೆಕುಡಿಯ | ೦೨ | ೦೩ | ೦೫ |
| | **ಒಟ್ಟು** | ೩೨ | ೨೬ | ೫೮ |

ಈ ಶಾಲೆಯ ಮುಂದೆ ಬರುವ ೧. ಕಿ.ಮೀ ದೂರದ ರಸ್ತೆಯಲ್ಲಿ ಲಕ್ಷ್ಮೀವೆಂಕಟರಮಣ ದೇವಸ್ಥಾನಕ್ಕೆ ದಾರಿ, ಗುಂಡ್ಯತೋಟ ಸಿರಿಬಾಗಿಲು ಗ್ರಾಮ ಎಂಬ ನಾಮಫಲಕವಿದೆ. ಸಾಗಿದರೆ ಸಿರಿಬಾಗಿಲು ಗ್ರಾಮಕ್ಕೆ ಸೇರಿದ ಗುಂಡ್ಯತೋಟ ಬರುತ್ತದೆ. ಈಗ ತಾನೆ ಈ ರಸ್ತೆಗೆ ಡಾಂಬರ್ ಹಾಕುವ ಕಾಮಗಾರಿ ಕೆಲಸ ಆರಂಭವಾಗಿತ್ತು. ಸ್ವಲ್ಪ ದೂರದ ನಂತರ ಮಣ್ಣಿನ ರಸ್ತೆ ಬರುತ್ತದೆ. ೧ ಕಿ.ಮೀ ದೂರ ಸಾಗಿದರೆ ರಸ್ತೆಯ ಬಾಗಕ್ಕೆ ಹೊದಿಕೊಂಡಂತೆ ಸುಬ್ರಹ್ಮಣ್ಯದ ಅರಣ್ಯ ವಲಯಕ್ಕೆ ಸೇರಿದ ಕಾದಿಟ್ಟ ಅರಣ್ಯ ಪ್ರದೇಶವಿದೆ. ಎಡಕ್ಕೆ ಗುಂಡ್ಯದ ಹೊಳೆ ಹರಿಯುತ್ತದೆ. ಮುಂದೆ ನೋಡಿದರೆ ಶಿರಾಡಿ ಗುಂಡ್ಯಕ್ಕೆ ಹೊಂದಿಕೊಂಡ ಎತ್ತರದ ಗಿರಿಶಿಖರ ಪರ್ವತ ಶ್ರೇಣಿಗಳು ನೈಸರ್ಗಿಕ ಸಂಪತ್ತನ್ನು ನಾಚುವಂತೆ ಹಚ್ಚು ಹಸರಾಗಿ ಮಂಜು ಕವಿದ ವಾತಾವರಣದಲ್ಲಿ ನಮ್ಮನ್ನು ಪ್ರಕೃತಿಯ ಲೋಕಕ್ಕೆ ಕೊಂಡೊಯ್ಯುತ್ತದೆ.

ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿನ ಮಲೆಕುಡಿಯ ಸಮುದಾಯದವರು ಹಿಂದೆ ಇಲ್ಲಿನ ವಸತಿ ನಿಲಯಗಳಲ್ಲಿ ವ್ಯಾಸಂಗ ಮಾಡಿ ಈಗ ಬೇರೆ ಬೇರೆ ಉದ್ಯೋಗಗಳಿಗೆ ಹೋಗಿದ್ದಾರೆ. ಧರ್ಮಸ್ಥಳದ ನಿಡ್ಲೆಯ ಆರ್. ವೀರಪ್ಪ ಈಗ ಮಂಗಳೂರಿನ ಪಣಂಬೂರುನಲ್ಲಿ ಸಹಾಯಕ ಸಾರಿಗೆ ನೌಕರರಾಗಿದ್ದಾರೆ. ಇವರನ್ನೂ ಸಂದರ್ಶನ ಮಾಡಿ ನೀವು ಹಿಂದೆ ಕಲಿತದ್ದು ಎಲ್ಲಿ MRS ಎಂದು ಕೇಳಿದಾಗ ನಾವು ಧರ್ಮಸ್ಥಳದ 'Malekudiyas Residencial School'ನಲ್ಲಿ ಕಲಿತಿದ್ದೇವೆ. ಈಗ ಇದು ಗಿರಿಜನ ವಸತಿ ಶಾಲೆ ಅಂತ ಆಗಿದೆ. ಇದು ಧರ್ಮಸ್ಥಳದ ದೇವಸ್ಥಾನದ ಎದುರು ಇರುವ ವಸಂತ ಮಹಲ್ ಹರಿಜನ ಕಾಲೋನಿ ಹತ್ತಿರ ಈ MRS ಇತ್ತು. ಈಗ ಇದು ಆಶ್ರಮ ಶಾಲೆ ಆಗಿದೆ ಎನ್ನುತ್ತಾರೆ. ಈಗ ಇರುವ ಗಿರಿಜನ ಆಶ್ರಮ ಶಾಲೆಗಳಲ್ಲಿ ಹಿಂದೆ ಮಲೆಕುಡಿಯರ ವಸತಿ ಶಾಲೆಗಳಾಗಿದ್ದವು ಎಂಬುದನ್ನು ಇವರು ಹೇಳುತ್ತಾರೆ.

**ಕೋಷ್ಟಕ ೩.೮(೪)**

**ಮೆಟ್ರಿಕ್ ಪೂರ್ವ ವಿಧ್ಯಾರ್ಥಿನಿಲಯದ ಗಿರಿಜನ ವಸತಿ ಶಾಲೆ, ಬೆಳ್ತಂಗಡಿ. ವ್ಯಾಸಾಂಗ ಮಾಡಿದ ಮಲೆಕುಡಿಯರ ವಿದ್ಯಾರ್ಥಿಗಳ ವಿವರ(ಮಾದರಿ ಸಮೀಕ್ಷೆ).**

| ಕ್ರ. ಸಂ | ವರ್ಷ | ಒಟ್ಟು ಸಂಖ್ಯೆ | ಮಲೆಕುಡಿಯರ ಸಂಖ್ಯೆ |
|---|---|---|---|
| ೧ | ೧೯೯೫-೯೬ | ೨೪ | ೦೨ |
| ೨ | ೧೯೯೬-೯೭ | ೨೩ | ೦೨ |
| ೩ | ೧೯೯೭-೯೮ | ೧೯ | ೦೧ |
| ೪ | ೧೯೯೮-೯೯ | ೧೨ | ೦೧ |
| ೫ | ೧೯೯೯-೨೦೦೦ | ೧೭ | ೦೧ |
| ೬ | ೨೦೦೦-೨೦೦೧ | ೨೦ | - |
| ೭ | ೨೦೦೧-೨೦೦೨ | ೨೦ | - |
| ೮ | ೨೦೦೨-೨೦೦೩ | ೨೦ | - |
| ೯ | ೨೦೦೩-೨೦೦೪ | ೧೪ | - |
| ೧೦ | ೨೦೦೪-೨೦೦೫ | ೨೪ | ೦೫ |
| ೧೧ | ೨೦೦೫-೨೦೦೬ | ೩೧ | ೦೪ |
| ೧೨ | ೨೦೦೬-೨೦೦೭ | ೩೧ | ೦೨ |
| ೧೩ | ೨೦೦೭-೨೦೦೮ | ೨೭ | ೦೮ |
| ೧೪ | ೨೦೦೮-೨೦೦೯ | ೨೯ | ೦೭ |
| ೧೫ | ೨೦೦೯-೨೦೧೦ | ೨೭ | ೦೪ |

**೨೦೦೯-೧೦ನೇ ಸಾಲಿನಲ್ಲಿ ವಸತಿ ಶಾಲೆಯಲ್ಲಿ ಒಟ್ಟು ೪ ಮಲೆಕುಡಿಯ ವಿದ್ಯಾರ್ಥಿಗಳಿದ್ದಾರೆ.**

೧. ಸುಮತ್. ಬಂದಡ್ಕ ಮನೆ- ನೆರಿಯಾ- ೮ನೇ ತರಗತಿ. ೨. ಸಂದೇಶ. ಕೆ. ಕೋರೋಡಿ ಮನೆ- ೯ನೇ ತರಗತಿ. ೩. ಉದಯ ಗಿರಿಜನ ಕಾಲೋನಿ ಅರಸಿನಕಟ್ಟೆ ಕುತ್ಲೂರು-೮ನೇ ತರಗತಿ. ೪. ರಂಜಿತ್ ಅಲಂಬ ಮನೆ, ಕುತ್ಲೂರು, ೬ನೇ ತರಗತಿ.

**೨೦೦೮-೦೯ನೇ ಸಾಲಿನಲ್ಲಿ ವಸತಿ ಶಾಲೆಯಲ್ಲಿ ಒಟ್ಟು ೬ ಮಲೆಕುಡಿಯ ವಿದ್ಯಾರ್ಥಿಗಳಿದ್ದಾರೆ.**

೧. ಸುದರ್ಶನ, ಬಾದಡ್ಕ ಮನೆ, ನೆರಿಯಾ, ೯ನೇ ತರಗತಿ. ೨. ದಯಾನಂದ, ಕಾಟಾಟೆ ಮನೆ, ನೆರಿಯಾ, ೮ನೇ ತರಗತಿ. ೩. ಹರೀಶ, ಮಲವಂತಿಕೆ ಬಡ್ಡಿಮನೆ, ೮ನೇ ತರಗತಿ. ೪. ಸಂತೋಷ, ಕೊಡಂಬೋಡಿ ನಾರಾವಿ, ೮ನೇ ತರಗತಿ. ೫. ಜಗದೀಶ, ಪೇಲಮನೆ, ಸವಣಾಲು ಗ್ರಾಮ, ಬೆಳ್ತಂಗಡಿ, ೮ನೇ ತರಗತಿ. ೬. ರಾಜೇಶ್‌ಕುದ್ಮನ್, ಮಲವಂತಿಕೆ, ಬೆಳ್ತಂಗಡಿ, ೮ನೇ ತರಗತಿ.

ಸುಳ್ಯ ತಾಲ್ಲೂಕಿನಲ್ಲಿ ೧. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ, ಸುಳ್ಯ., ೨. ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ, ಸುಳ್ಯ., ೩. ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯ, ಸುಳ್ಯ., ೪. ಆಶ್ರಮ ಶಾಲೆ, ಸುಬ್ರಮಣ್ಯ., ೫. ಆಶ್ರಮ ಶಾಲೆ, ಅಲೆಟ್ಟಿ, ಗಾಂಧಿ ನಗರ, ಸುಳ್ಯ, ೬. ಆಶ್ರಮ ಶಾಲೆ, ಸುಳ್ಯ. ಈ ಶಾಲೆಗಳಿಂದ ಸುಳ್ಯ ತಾಲ್ಲೂಕಿನಲ್ಲಿರುವ ಮಲೆಕುಡಿಯ ವಿದ್ಯಾರ್ಥಿಗಳ ವಿವರ. ೧.೨೦೦೮-೦೯ರಲ್ಲಿ ೧ರಿಂದ ೭ನೇ ತರಗತಿವರೆಗೆ ೧೦೧ ಮಲೆಕುಡಿಯ ವಿದ್ಯಾರ್ಥಿಗಳಿದ್ದಾರೆ. ೨. ೨೦೦೮-೦೯ರಲ್ಲಿ ೮ರಿಂದ ೧೦ನೇ ತರಗತಿವರೆಗೆ ೩೮ ಮಲೆಕುಡಿಯ ವಿದ್ಯಾರ್ಥಿಗಳಿದ್ದಾರೆ. ಇಲ್ಲಿ ೧ರಿಂದ ೭ನೇ ತರಗತಿವರೆಗೆ ೧೦೧ ಮಲೆಕುಡಿಯ ವಿದ್ಯಾರ್ಥಿಗಳಿದ್ದು, ಇವರ ಸಂಖ್ಯೆ ಪ್ರೌಢಶಾಲಾ ಹಂತದಲ್ಲಿ ಕಡಿಮೆ ಇರುವುದು ಇಲ್ಲಿ ಕಂಡುಬರುತ್ತದೆ.

ಕುಟುಂಬವಾರು ಮಾದರಿ ಸಮೀಕ್ಷೆಯಲ್ಲಿ ಕಂಡುಬಂದ ಮಲೆಕುಡಿಯ ಸಮುದಾಯದಲ್ಲಿ ಉನ್ನತ ವ್ಯಾಸಂಗ ಮಾಡಿರುವವರೆಂದರೆ: ಶಿವಪ್ರಸಾದ್ ತಂದೆ ಸಿ ಶ್ರೀನಿವಾಸ್-ಉಜಿರೆ -ಬಿ.ಇ. ೧ಸೆಮ್(ಎ.ಪಿ.ಓ. ಮೂಡಬಿದಿರೆ), ಹರಿಪ್ರಸಾದ್ ತಂದೆ ಸಿ ಶ್ರೀನಿವಾಸ್- ಉಜಿರೆ- ಡಿಪ್ಲೋಮ ಇಂಜಿನಿಯರಿಂಗ್ ೨ ಸೆಮ್, ಸುಧಾ ತಂದೆ ಸಿ ಶ್ರೀನಿವಾಸ್- ಉಜಿರೆ- ಬಿ. ಕಾಮ್, ಶಕುಂತಲಾ ತಂದೆ ಶಾಮಣ್ಣ- ಕಾಟಿಹಳ್ಳ- ಎಂ.ಎಸ್.ಡಬ್ಲ್ಯೂ, ಪುಷ್ಪಲತಾ ತಂದೆ ಶಾಮಣ್ಣ- ಕಾಟಿಹಳ್ಳ- ಎಂ.ಎ, ಸಂಜೀವ ತಂದೆ ಕೃಷ್ಣಪ್ಪ- ಎಂ.ಎ, ವಸಂತಕುಮಾರ್ ಎಂ.ಎ, ಗೀತಾ ಕುಮಾರಿ- ಬಿ.ಎಸ್.ಸಿ.ಅಗ್ರಿ, ಉಷಾಲತಾ- ಬಿ.ಎಸ್.ಡಬ್ಲ್ಯೂ ವ್ಯಾಸಂಗ ಮಾಡಿದ್ದಾರೆ. ಪುಟ ೧೬೩ರಲ್ಲಿ ಕಾಣಿಸಿರುವ ವೃತ್ತಚಿತ್ರವು ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಲಿಂಗಾವಾರು ಶೇಕಡ ಪ್ರಮಾಣವನ್ನು ಸೂಚಿಸುತ್ತದೆ. ಪುಟ ೧೬೩ರಲ್ಲಿನ ಲಂಬಚಿತ್ರವು ದಕ್ಷಿಣ ಕನ್ನಡ ಜಿಲ್ಲೆಯ ಶೈಕ್ಷಣಿಕ ಪ್ರಮಾಣವನ್ನು ಸೂಚಿಸುತ್ತದೆ.

ವೃತ್ತ ಚಿತ್ರ ೩.೮(೫)

**ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಲಿಂಗವಾರು ಶೇಕಡ ಶಿಕ್ಷಣ ಪ್ರಮಾಣ(ಮಾದರಿ ಸಮೀಕ್ಷೆ).**




ಲಂಬಚಿತ್ರ ೩.೮(೬)

**ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಶೈಕ್ಷಣಿಕ ಪ್ರಮಾಣ(ಮಾದರಿ ಸಮೀಕ್ಷೆ).**



**ಆಶ್ರಮ ಶಾಲೆ:** ೧೯೬೪ ರಲ್ಲಿ ಸರ್ಕಾರಿ ಗಿರಿಜನ ಆಶ್ರಮ ಶಾಲೆ ಈ ಹಾಲಾಂಗಾಯ್ ನಲ್ಲಿ ಆರಂಭವಾಗಿದೆ. ೧ರಿಂದ ೭ನೇಯತರಗತಿಯವರೆಗೆ ಇಲ್ಲಿ ಶಿಕ್ಷಣಕ್ಕೆ ಅವಕಾಶವಿದೆ. ೨೦೧೦-೧೧ನೇ ಸಾಲಿನಲ್ಲಿ ೧ರಿಂದ ೭ನೇಯತರಗತಿಯವರೆಗೆ ಒಟ್ಟು ೮೩ ಮಕ್ಕಳಿದ್ದಾರೆ. ಒಬ್ಬ ನಿಲಯ ಪಾಲಕರು ಇದ್ದಾರೆ. ೪ ಜನ ಶಿಕ್ಷಕರ ಹುದ್ದೆಗಳು ಮಂಜೂರಾಗಿದ್ದರೂ ಸಹ ಖಾಲಿ ಇವೆ. ಗೌರವ ಇಲ್ಲವೇ ಎರವಲು ಸೇವೆಯಲ್ಲಿ ಶಿಕ್ಷಸಕರನ್ನು ಕರೆಸಿಕೊಮಡು ಪಾಠ ಮಾಡುತ್ತಾರೆ. ೩ ಅಡಿಗೆಯವರು ಇದ್ದಾರೆ. ಬಾಲಕ ಮತ್ತು ಬಾಲಕಿಯರಿಗೆ ಇಲ್ಲಿ ಕಲಿಯಲು ಅವಕಾಶವಿದೆ. ೪ ಹಾಲ್ ಗಳು ೨ ಶೌಚಾಲಯ ಸೇರಿದಂತೆ ಟಿ.ವಿ. ಸೌಲಭ್ಯವಿದೆ. ನೆರಿಯಾದ ಹಾಲಾಂಗಾಯ್ ನಲ್ಲಿರುವ ಆಶ್ರಮ ಶಾಲೆಯು ೧೯೬೪ರಲ್ಲಿ ಸ್ಥಾಪನೆಯಾಗಿದೆ. ಇಲ್ಲಿ ೧ರಿಂದ ೭ನೇ ತರಗತಿವರೆಗೆ ಬಾಲಕ ಮತ್ತು ಬಾಲಕಿಯರಿಗೆ ಸೇರಿ ಶಿಕ್ಷಣಕ್ಕೆ ಅವಕಾಶವಿದೆ. ೨೦೧೦-೧೧ನೇ ಸಾಲಿನಲ್ಲಿ ಒಟ್ಟು ದಾಖಾಲಾತಿ: ೮೩ರಲ್ಲಿ ಬಾಲಕರು-೧೮, ಬಾಲಕಿಯರು-೨೩, ಒಟ್ಟು- ೪೧ ಆಗಿರುತ್ತದೆ. ಇಲ್ಲಿನ ಗರಿಷ್ಟ ದಾಖಾಲಾತಿ ಸಂಖ್ಯೆ-೧೦೦ ಆಗಿದೆ. ಇದರಲ್ಲಿ ಮಲೆಕುಡಿಯರ ವಿದ್ಯಾರ್ಥಿಗಳ ಸಂಖ್ಯೆ- ಬಾಲಕರು ೧೬, ಬಾಲಕಿಯರು ೧೮ ಒಟ್ಟು ೩೪ ಇರುತ್ತದೆ. ಒಟ್ಟು ಶಿಕ್ಷಕ ಹುದ್ದೆಗಳ ಸಂಖ್ಯೆ-೦೪ ಇದರಲ್ಲಿ ಖಾಲಿ ಹುದ್ದೆಗಳು-೦೪, ವಾರ್ಡನ್ ಹುದ್ದೆ-೦೧, ಅಡಿಗೆ ಸಿಬ್ಬಂದಿ-೦೪ ಹುದ್ದೆಗಳು ಖಾಲಿ ಇರುತ್ತವೆ. ೨೦೧೦-೧೧ನೇ ಸಾಲಿನ ಫಲಿತಾಂಶದಲ್ಲಿ ೭ನೇ ತರಗತಿಯ ವಿಧ್ಯಾರ್ಥಿಗಳು ಅನುತ್ತೀರ್ಣರಾಗಿರುವುದಿಲ್ಲ. ವಿದ್ಯಾರ್ಥೀಗಳು ಇಲ್ಲಿನ ಸ್ಥಳಿಯರಿಗಿಂತ ಹೊರ ಜಿಲ್ಲೆಗಳಿಂದ ಬಂದ ವಿದ್ಯಾರ್ಥೀಗಳು ಹೆಚ್ಚು ಇದ್ದಾರೆ.ಇಲ್ಲಿಂದ ಅರ್ಧ ಕೀ ಮಿ ದೂರ ಸಾಗಿದರೆ ಗಂಡಿಬಾಗಿಲು ಬರುತ್ತದೆ. ನೆರಿಯಾ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮಲೆಕುಡಿಯರು ವಾಸವಾಗಿದ್ದಾರೆ. ಈ ಎಲ್ಲಾ ಪ್ರದೇಶವನ್ನು ಒಟ್ಟಿಗೆ ಸೇರಿಸಿ ನೆರಿಯಾ ಎಮದು ಗುರುತಿಸಲಾಗಿದೆ.

### ೩.೯. ಮಲೆಕುಡಿಯರ ಸಂಘಟನೆ ಮತ್ತು ನಾಯಕತ್ವ

ಸುಬ್ರಮಣ್ಯ ಮಲೆಕುಡಿಯರಲ್ಲಿ ಹಿಂದೆ ಹಳೆಯ ಕುಲ ಪದ್ಧತಿಯ ನಾತಕತ್ವ ಈಗ ತನ್ನ ಪ್ರಧಾನತೆಯನ್ನು ಕಳೆದುಕೊಂಡಿದೆ. ದೇವರ ಗದ್ದೆಯ ಕೋಚಮಲೆ ಈ ಜನಾಂಗದ ಯಜಮಾನ ಆಗಿದ್ದಾನೆ. ದೇವರ ಕೆಲಸ ಕಾರ್ಯಗಳು ಇವರ ನೇತೃತ್ವದಲ್ಲಿ ನಡೆಯುತ್ತದೆ. ಇದನ್ನು ಹೊರತುಪಡಿಸಿದರೆ ದೇವರ ಗದ್ದೆಯ ಪೊಡಿಯ ಸುಳ್ಯದ ಲ್ಯಾಂಪ್ಸ್‌ನ ಅಧ್ಯಕ್ಷರಾಗಿದ್ದರು. ಈಗ ಸದಸ್ಯರಾಗಿ ಚಂದ್ರಿಕಾ ಸುಬ್ರಹ್ಮಣ್ಯ ಗ್ರಾಮ ಪಂಚಾಯಿತಿಯ ಸದಸ್ಯರಾಗಿದ್ದಾರೆ. ಸುಬ್ರಹ್ಮಣ್ಯ ಈಗ ದೇವಸ್ಥಾನ ಸಮಿತಿಯಲ್ಲಿ ಟ್ರಸ್ಟಿಯಾಗಿದ್ದಾನೆ.

### ೧. ಮಲೆಕುಡಿಯರ ಸಂಘ

ದಕ್ಷಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ಉಜಿರೆ ರಸ್ತೆಯಲ್ಲಿರುವ ನೇತ್ರಾವತಿ ಸೇತುವೆಯನ್ನು ದಾಟಿ ಸ್ವಲ್ಪ ಮುಂದೆ ಸಾಗಿ ಅಲ್ಲಿಂದ ಬಲಕ್ಕೆ ೧ಕಿ.ಮೀ. ದೂರದಲ್ಲಿ ಡಾಂಬರ್ ರಸ್ತೆಯಲ್ಲಿ ಸಾಗಿದರೆ ಬಲಗಡೆ ಗುಡ್ಡೆಗೆ ದಾರಿಯಲ್ಲಿ ಮಲೆಕುಡಿಯರ ಸಂಘ(ರಿ), ಶಿವಗಿರಿ ಕೊಯ್ಯೂರು ಅಂಚೆ ಎಂಬ ಹೆಸರಿನ ನಾಮಫಲಕ ಕಾಣುತ್ತದೆ. ಇಲ್ಲಿ ದಿನಾಂಕ. ೧೩.೨.೨೦೧೧ರಂದು ಶನಿವಾರ ಹಬ್ಬದ ವಾತಾವರಣ. ಈ ಗುಡ್ಡೆಯ ಸಮತಟ್ಟಾದ ಜಾಗದಲ್ಲಿ ಅಲಂಕೃತವಾದ ವೇದಿಕೆಯಲ್ಲಿ ಒಂದು ಸಾವಿರಕ್ಕೂ ಹೆಚ್ಚು ಜನರು

ಸೇರುವಷ್ಟು ಆಸನದ ವ್ಯವಸ್ಥೆ ಇದೆ. ಆಧುನಿಕವಾದ ಭವ್ಯ ವಿದ್ಯುತ್ ದೀಪಗಳ ಅಲಂಕಾರದೊಂದಿಗೆ ವೇದಿಕೆ ರಂಗಮಂಟಪ ನಿರ್ಮಾಣವಾಗಿದೆ. ಇದರ ಪಕ್ಕದಲ್ಲಿ ಸಂಘದ ಕಛೇರಿಯಿದೆ. ಈ ದಿನದಲ್ಲಿ ಇಲ್ಲಿ ವಿವಿಧ ಪ್ರದೇಶಗಳ ಮಲೆಗಳಲ್ಲಿ ವಾಸವಾಗಿರುವ ಮಲೆಹುಡಿಯ ಸಮುದಾಯದ ಬಾಂಧವರು ಸೇರಿದ್ದಾರೆ. ವರ್ಷಕ್ಕೊಮ್ಮೆ ಶಿವರಾತ್ರಿಯ ಮರುದಿನ ಇಲ್ಲಿ ಸಮಾವೇಶಗೊಳ್ಳುವುದು ಒಂದು ವಾಡಿಕೆಯಾಗಿದೆ. ಈ ವರ್ಷ ದಿನಾಂಕ. ೧೩.೨.೨೦೦೦ದಂದು ಮಲೆಕುಡಿಯರ ಸಂಘದ ೧೫ನೇ ವಾರ್ಷಿಕ ಸಮಾವೇಶ ಏರ್ಪಡಿಸಲಾಗಿತ್ತು. ಒಟ್ಟು ೪೫೮ ಸದಸ್ಯರು ಹಾಜರಾಗಿದ್ದರು.

ಶಿವನ ಆರಾಧನೆಯ ಪ್ರತೀಕವಾದ ಶಿವರಾತ್ರಿಯಲ್ಲಿ ಶಿವ ಪಾರ್ವತಿಯ ಸೇವೆ ಮಾಡುತ್ತಿರುವ ಇವರು ಈ ಪ್ರದೇಶಕ್ಕೆ ಶಿವಗಿರಿ ಎಂದು ಹೆಸರು ಇಟ್ಟಿದ್ದಾರೆ. ಕೊಯ್ಯೂರು ಗ್ರಾಮದ ವ್ಯಾಪ್ತಿಗೆ ಸೇರಿದ ಈ ಪ್ರದೇಶದ ಗುಡ್ಡೆಯನ್ನು ಸಮತಟ್ಟು ಮಾಡಲಾಗಿದೆ. ಇಲ್ಲಿನ ಸರ್ವೆ ನಂ. ೩/೧೦ ಹಾಗೂ ೧೮೯/೨೦೨ರಲ್ಲಿ ಒಟ್ಟು ೪೬ ಸೆಂಟ್ಸ್ ಜಮೀನು ಇವರ ಸ್ವಾಧೀನದಲ್ಲಿದೆ. ಇವರು ದೇಣಿಗೆ ಮೂಲಕ ೨ಲಕ್ಷ ರೂ. ಮೌಲ್ಯದ ಸ್ವಂತ ಕಟ್ಟಡದಲ್ಲಿ ಬೆಳಿಗ್ಗೆ ೯ ಗಂಟೆಗೆ ಗಣಹೋಮದ ನಂತರ ಸಾರ್ವಜನಿಕ ಸತ್ಯನಾರಾಯಣ ಪೂಜೆ, ಪ್ರಸಾದ ವಿತರಣೆಯ ನಂತರ ಮದ್ಯಾಹ್ನ ಊಟದ ವೇಳೆಗೆ ಅನ್ನ ಸಂತರ್ಪಣೆಯ ವ್ಯವಸ್ಥೆಯನ್ನು ಏರ್ಪಡಿಸುತ್ತಾರೆ. ಊಟದ ೨ ಗಂಟೆಯ ನಂತರ ಈ ಸಮುದಾಯದ ಮಕ್ಕಳಿಗೆ, ಮಹಿಳೆಯರಿಗೆ ಹಾಗೂ ಪುರುಷರಿಗೆ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸುತ್ತಾರೆ. ಭಕ್ತಿಗೀತೆ, ಭಾವಗೀತೆ, ಜನಪದಗೀತೆ, ಛದ್ಮವೇಷ, ಮಡಿಕೆ ಹೊಡೆಯುವುದು, ಸಂಗೀತ ಕುರ್ಚಿ, ಗುಂಡು ಎಸೆತ, ಅಲ್ಲದೆ ಲಕ್ಕಿಡಿಪ್‌ಗಳಂತಹ ಆಟಗಳ ಸ್ಪರ್ದೆಗಳಲ್ಲಿ ಭಾಗವಹಿಸುವುದಕ್ಕೆ ಸಿದ್ಧರಾಗಿ ಕುಳಿತವರು ಒಬ್ಬೊಬ್ಬರೇ ತಮ್ಮ ಸರದಿಯಂತೆ ಭಾಗವಹಿಸುತ್ತಾರೆ. ಇದಕ್ಕೆ ಭೂಷಣವೆಂಬಂತೆ ಮಡಿಕೇರಿಯಿಂದ ಬಂದ ಕುಡಿಯರ ಪುರುಷರು ಮತ್ತು ತಮ್ಮ ಕೊಡಗಿನ ಸಾಂಪ್ರದಾಯಿಕ ಸೀರೆ ತೊಟ್ಟ ಕುಡಿಯರ ಮಹಿಳೆಯರು ಸಹ ಈ ಸ್ಪರ್ದೆಗಳಲ್ಲಿ ಭಾಗವಹಿಸಲು ಬರುತ್ತಾರೆ. ಈ ಸ್ಪರ್ಧೆಗಳನ್ನು ನಡೆಸಲು ತೀರ್ಪುಗಾರರು, ನಿರ್ವಾಹಕರು ಕೂಡಾ ಆಗಮಿಸುತ್ತಾರೆ

**ಮಲೆಕುಡಿಯ ಸಂಘದ ಹುಟ್ಟು– ಬೆಳವಣಿಗೆ**

ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಂಘಟನೆಯ ಅಭಿವೃದ್ದಿಗಾಗಿ ಬೆಳ್ತಂಗಡಿಯ ಸಮೀಪದ ಕೊಯ್ಯೂರಿನ ಶಿವಗಿರಿಯಲ್ಲಿ ಮಲೆಕುಡಿಯರ ಸಂಘ ಕಾರ್ಯನಿರ್ವಹಿಸುತ್ತಿದೆ. ಈ ಸಂಘಕ್ಕೆ ಸಂಜೀವ.ಕೆ ಅಧ್ಯಕ್ಷರಾಗಿ ಉಪಾದ್ಯಕ್ಷರಾಗಿ ಶ್ರೀಮತಿ ಗಿರಿಜ ಕಾರ್ಯಂದರ್ಶಿಯಾಗಿ ಜಯರಾಮ.ಎಂ. ಜೊತೆಕಾರ್ಯದರ್ಶಿಯಾಗಿ ನೋಣಯ್ಯ, ಖಜಾಂಜಿಯಾಗಿ ಶ್ರೀಮತಿ ಕೆ.ವಸಂತಿ ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಎಲ್ಯಣ್ಣ.ಕೆ, ಶಿವರಾಮ, ದೇವಪ್ಪಯ್ಯ, ಅಣ್ಣಪ್ಪಯ್ಯಮ್, ನಾರಾಯಣ.ಡಿ.ಕೆ, ಕೃಷ್ಣಪ್ಪ. ಮುಂತಾದವರು ಇದ್ದಾರೆ. ಈ ಸಮುದಾಯದ ಹಿರಿಯರು ಮತ್ತು ಎಸ್.ಬಿ.ಎಂ ಬ್ಯಾಂಕ್ ಮ್ಯಾನೇಜರ್ ಆಗಿರುವ ಪರಮೇಶ್ವರಪ್ಪ ಮತ್ತು ಬೆಂಗಳೂರಿನಲ್ಲಿ ವಕೀಲ ರಾಗಿರುವ ವೆಂಕಟೇಶ್ ರವರು ಈ ಸಮುದಾಯದ ಸಂಘಟನೆಯ ಅಭಿವೃದ್ಧಿಗಾಗಿ ನಿರಂತರವಾಗಿ ಶ್ರಮಿಸುತ್ತಿದ್ದಾರೆ.

ಸಂಘದ ಪದಾಧಿಕಾರಿಯಾದ ಎಲ್ಯಣ್ಣ ಹೇಳುವ ಪ್ರಕಾರ ೧೯೯೫ರಲ್ಲಿ ಈ ಒಂದು ಸಂಘಟನೆ UNESCO ಕೇಂದ್ರದಲ್ಲಿ ಸ್ಥಾಪನೆಯಾಯಿತು. ಕೊಯ್ಯೂರು ಗ್ರಾಮದಲ್ಲಿ ಸಂಘದ ಕಛೇರಿ ಆರಂಭವಾಯಿತು.

ಈ ಸಂಘದ ಉದ್ದೇಶ: ಈ ಸಮುದಾಯ ಗುಡ್ಡಗಾಡು ಪ್ರದೇಶದಲ್ಲಿ ವಾಸವಾಗಿದೆ. ಈ ಸಮುದಾಯಕ್ಕೆ ಸಾಮಾಜಿಕ ಸೌಲಭ್ಯಗಳು ದೊರೆಯಬೇಕು. ಸಮುದಾಯದ ಅಧ್ಯಯನದ ಅಭಿವೃದ್ಧಿಗೆ ಒತ್ತು ನೀಡಬೇಕಾಗಿದೆ. ಸಂಪರ್ಕದ ಕೊರತೆಯಿಂದಾಗಿ ಹೆಚ್ಚು ಜನರಿಗೆ ಮಾಹಿತಿ ದೊರೆತಿಲ್ಲ. ಆಧುನೀಕರಣ ನಗರೀಕರಣಕ್ಕೆ ಒಳಪಟ್ಟ ನಮ್ಮ ಜನಂಗದ ಮೂಲ ಸಂಸ್ಕೃತಿ ಮತ್ತು ಮಾತೃ ಸಂಬಂಧ ಬೆಳೆಯಬೇಕು ಎಂಬ ಉದ್ದೇಶ ಈ ಸಂಘದ್ದಾಗಿದೆ. ಭವಿಷ್ಯದಲ್ಲಿ ಈ ಸಂಘ ಸಂಘಟನಾತ್ಮಾಕವಾದ ಬೆಳೆದು ರಾಜಕೀಯವಾಗಿ ಬೆಳೆಯಬೇಕಾಗಿದೆ. ಈ ಸಮಾವೇಶದ ಮೂಲ ಉದ್ದೇಶ ಸಂವಿದಾನಾತ್ಮಕ ಸೌಲಭ್ಯ ಪಡೆತುವುದು. ಸಂಘದ ಈಗಿನ ಜಾಗಕ್ಕೆ ಹಕ್ಕು ಪತ್ರ ಸಿಗಬೇಕು. ಇದಕ್ಕೆ ಆಗಬೇಕು. ೧೫ನೇ ವರ್ಷದ ಈ ಸಮಾವೇಶದಲ್ಲಿ ೧ ಲಕ್ಷರೂ.ಗಳ ಸಂಗ್ರಹದ ಉದ್ದೇಶವಿತ್ತು. ಮುಂದಿನ ವರ್ಷದಲ್ಲಿ ಹೆಚ್ಚು ಜನರದ್ದು ಸಂಪರ್ಕಿಸುವ ಉದ್ದೇಶವಿದೆ ಎಂದು ಪ್ರಾಸ್ತವಿಕವಾಗಿ ಮಾತನಾಡಿದರು.

ಲಾರೆನ್ಸ್ ಡಿ.ಸೋಜಾರವರು ದಕ್ಷಿಣ ಕನ್ನಡ ಜಿಲ್ಲೆಯ ಆದಿವಾಸಿ ಸಮುದಾಯಗಳ ಕಲ್ಯಾಣಕ್ಕಾಗಿ ಯುನೆಸ್ಕೋ ನೆರವಿನ ಯೋಜನೆಯಡಿಯಲ್ಲಿ ಕಲಿಕಾ ಕೇಂದ್ರಗಳನ್ನು ಸ್ಥಾಪಿಸಿದರು. ಆಗ ೧೯೬೨ ಮಲೆಕುಡಿಯ ಅಭಿವೃದ್ಧಿ ಸಂಘದ ಹೆಸರಿನಲ್ಲಿ ಬೆಳ್ತಂಗಡಿ ಕಿಕ್ಕಂಜ ಮತ್ತು ಸುಬ್ರಮಣ್ಯಗಳಲ್ಲಿ ಕಲಿಕಾ ಕೇಂದ್ರಗಳನ್ನು ಆರಂಭಿಸಿದರು. ಆರಂಭದಲ್ಲಿ ಪ್ರಾರಂಭವಾದ ಈ ಸಂಘ ಹಂತ ಹಂತವಾಗಿ ತನ್ನ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿತು. ಈ ಸಂಘದ ಕಚೇರಿ ನಡೆಸಲು ಸಹ ಸರಿಯಾದ ಜಾಗವಿಲ್ಲದೆ ಶಾಲೆ, ಹಾಸ್ಟೆಲ್, ಮನೆಗಳಲ್ಲಿ ಸಭೆ ನಡೆಸುತ್ತಿತ್ತು. ನಂತರ ಇದು ೧೫.೧೦.೧೯೯೦ರಲ್ಲಿ 'ಮಲೆಕುಡಿಯರ ಸಂಘ' ಎಂದು ನಾಮಕರಣಗೊಂಡು ೧೯೯೬-೯೭ರಲ್ಲಿ ಈ ಸಂಘವನ್ನು ನೊಂದಾಯಿಸಲಾಯಿತು. ಈ ಸಂಘದ ನೋಂದಣಿ ಸಂಖ್ಯೆ ೫/೯೬-೯೭ ಆಗಿರುತ್ತದೆ. ಈಗ ೧೫ನೇ ವರ್ಷದ ವಾರ್ಷಿಕ ಸಮಾವೇಶ ಮಾಡುತ್ತಿದೆ. ಇದುವರೆಗೆ ೩ ಸಮಾವೇಶಗಳನ್ನು ನಡೆಸಿದೆ. ೯ನೇ ವಾರ್ಷಿಕ ಸಮಾವೇಶವನ್ನು ಸುಬ್ರಮಣ್ಯದ ಪದವಿಪೂರ್ವ ಕಾಲೇಜಿನಲ್ಲಿ ನಂತರ ಹಾಲಂಗಾಯ್‌ಲ್ಲಿನ ನವದುರ್ಗಾ ಭಜನಾ ಮಂದಿರದಲ್ಲಿ ನಡೆಸಲಾಗಿದೆ. ನಂತರ ೯.೨.೧೯೯೭ರಲ್ಲಿ ಬೆಳ್ತಂಗಡಿಯ ಯುನೆಸ್ಕೋ ವಿದ್ಯಾಕೇಂದ್ರದಲ್ಲಿ ಒಂದು ದಿನದ ನಾಯಕತ್ವ ತರಬೇತಿ ಶಿಬಿರ, ೧೯೯೯ರಲ್ಲಿ ಕುದುರೆಮುಖದ ರಾಷ್ಟ್ರೀಯ ಉದ್ಯಾನದಲ್ಲಿ ೨೩೫ ಕುಟುಂಬಗಳಿಗೆ ಒಂದು ದಿನದ ನಾಯಕತ್ವ ತರಬೇತಿ ಶಿಬಿರವನ್ನು ನಡೆಸಲಾಗಿದೆ ಎಂಬುದನ್ನು ಸಂಘದ ಕಾರ್ಯದರ್ಶಿ ಜಯರಾಮ ತಿಳಿಸಿದ್ದಾರೆ. ೧೬.೨.೨೦೦೯ರಂದು ಈಗಿನ ಜಾಗದಲ್ಲಿ ೨ಲಕ್ಷರೂಗಳ ವೆಚ್ಚದಲ್ಲಿ ಸ್ವಂತ ಕಟ್ಟಡದ ಉದ್ಘಾಟನೆಯು ಕೆ. ನಾರಾಯಣರವರಿಂದ ಉದ್ಘಾಟನೆ ಯಾಗಿದೆ. ಸಂಜೀವ ಮಲೆಕುಡಿಯರ ಅಧ್ಯಕ್ಷತೆಯಲ್ಲಿ ೭ ಸಂಘಟಿತ ಪದಾಧಿಕಾರಿಗಳನ್ನು ಒಳಗೊಂಡ ಈ ಸಂಘ ಕಳೆದ ವರ್ಷಕ್ಕಿಂತ ಈ ವರ್ಷ ಹೆಚ್ಚು ಜನರನ್ನು ಸೇರಿಸುವಲ್ಲಿ ಯಶಸ್ವಿಯಾಗಿದೆ. ಸಂಜೆಯ ಸಭಾಕಾರ್ಯಕ್ರಮದ ನಂತರ ಭಜನಾ ತಂಡಗಳಿಂದ ಭಜನೆಯ ವ್ಯವಸ್ಥೆ ಮಾಡಲಾಗಿತ್ತು. ನಂತರ ಸಮುದಾಯದ ಮಕ್ಕಳಿಂದ ವಿವಿಧ ಪ್ರತಿಭಾ ಪ್ರದರ್ಶನಗಳಾದ ಹಾಡು, ನೃತ್ಯ, ಸಂಗೀತಗಳ ಮೂಲಕ ಮನೋಹರವಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ಕಾಡಿನಲ್ಲಿ ಬೆಳೆದ ಈ ಸಮುದಾಯದ ಮಕ್ಕಳು ಭರತನಾಟ್ಯ, ನೃತ್ಯ, ಸಂಗೀತ, ಚಲನಚಿತ್ರ ಹಾಡುಗಾರಿಕೆ, ಪ್ರಹಸನ, ಮೂಕಾಭಿನಯದ ಮೂಲಕ

ನೆರೆದ ಜನರನ್ನು ಮನರಂಜಿಸುವಲ್ಲಿ ಯಶಸ್ವಿಯಾಗಿದ್ದಾರೆ. ಮಡಿಕೇರಿಯಿಂದ ಬಂದ ಕುಡಿಯರ ಪುರುಷ ಮತ್ತು ಮಹಿಳೆಯರು ತಮ್ಮ ಕೊಡವ ಸಂಸ್ಕೃತಿಯ ವೇಷಭೂಷಣ, ಸಾಂಪ್ರದಾಯಿಕ ವಾದ್ಯ ಹಾಗೂ ಹಾಡುಗಳ ಮೂಲಕ ಮಾಡಿದ ನೃತ್ಯ ಈ ಸಮುದಾಯದ ಜನರನ್ನು ಸಂಸ್ಕೃತಿಯ ಕಡಲಲ್ಲಿ ಲೀನಗೊಳಿಸಿತ್ತು. ಮಡಿಕೇರಿಯ ಬುಡಕಟ್ಟು ಕೃಷಕರ ಸಂಘದ ಅಧ್ಯಕ್ಷರಾದ ಕುಡಿಯರ ಮುತ್ತಪ್ಪ ಮತ್ತು ಕೊಡವ ಅಕಾಡೆಮಿಯ ನೇತೃತ್ವದಲ್ಲಿ ತಲಾ ಎರಡೆರಡು ನೃತ್ಯಗಳು ಪ್ರದರ್ಶನಗೊಂಡವು. ಕೆ.ಟಿ. ಬಾನರೆ ಮತ್ತು ಇವರ ಕುಡಿಯರ ಮಹಿಳೆಯರು ತಮ್ಮ ಸಾಂಪ್ರದಾಯಿಕ ಉಡುಪಿನೊಂದಿಗೆ ತಾಳ ಮೇಳಕ್ಕೆ ಹೆಜ್ಜೆ ಹಾಕುತ್ತಾ ಉಮ್ಮತ್ತಾಟದ ಮೂಲಕ ನೃತ್ಯ ಪ್ರದರ್ಶನವನ್ನು ನೀಡಿದರು. ಕಾವೇರಿ ತಾಯಿಯನ್ನು ಸ್ಮರಿಸುವ–

೧. 'ಕಾವೇರಮ್ಮ ದೇವಿ ಕಾಪಾಡೆಮ್ಮ' ಎಂಬ ಹಾಡಿಗೆ ನೃತ್ಯ ಮೂಡಿ ಬಂದರೆ,

೨. 'ಬಂದಿರ ಬಂದಿಕ್ಕೆಲ್ಲಾ ನಿಂಗೆಲ್ಲಾ ಚಾ ಇತ್ತ ಉಳ್ಳರಲ್ಲಾ' ಎಂಬ ಹಾಡಿನ ನಂತರದಲ್ಲಿ

೩. 'ತೇನಾ ತೇನಾ ತೇನಾ ತೇನಾಂಡ ತೇನಾ' ನೃತ್ಯವು ಮೂಡಿ ಬಂದಿತು. ಸಂಕ್ರಮಣದ ಸುಗ್ಗಿಯಲ್ಲಿನ

೪. 'ಕೆಂಗ ತೊಳಿ ಅಂಡಾ ಸಂಕ್ರಮಣ ತಂದು' ಎಂಬ ಹಾಡು ತಾಯಿ ಕಾವೇರಿ ಕನ್ಯೆಯನ್ನು ಕೊಂಡಾಡುತ್ತದೆ.

೫. 'ತಾಳೊಂಡಮ್ಮ ಬಾರಮ್ಮಯ್ಯ'ಹಾಡು ಅಲ್ಲದೆ,

೬. 'ನೀಲೆಂಬಾ ಮಂದೋರ ಮಾಯತ್ತ ದೇವಿ' ಎಂಬ ದೇವಿಯನ್ನು ಸ್ತುತಿಸುವುದು

೭. 'ಲೇಳ್ಳು ಲೇಳು ಲೆಲ್ಲೋ ತಾಲಿಲೆಲ್ಲಾ'

೮. 'ಬಂದಿರಾ ಬಂದಿರಾ ಬೆಂದ ಕಳಲ್ಲಾ ಬೈತಂರ ತಾಯಿನಾ ಕೊಂಡಾಡಿ'

೯. 'ಲೇಲ್ಲೋ ಲೇಲ್ಲೋ ಲೆಲ್ಲಾಲ್ಲಾ ........'

೧೦. 'ನಮೋ ನಮೋ ನಮಸ್ತಾ ಕನ್ನಡಾಂಬೆ ತಾಯಕ್ಕು'

ಈ ಮೇಲಿನ ಹಾಡಿನ ನೃತ್ಯಕ್ಕೆ ಕೊಡಗಿನ ಕುಡಿಯರ ಮಹಿಳೆಯರು ತಮ್ಮ ಪಾರಂಪರಿಕ ನೃತ್ಯವನ್ನು ಪ್ರದರ್ಶಿಸಿದರು. ಸಾರ್ವತ್ರಿಕ ಕಾರ್ಯಕ್ರಮ ಕೊಡಗಿನ ಕುಡಿಯರ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಆದರೆ ತುಳುನಾಡಿನ ಮಲೆಕುಡಿಯರಲ್ಲಿ ಇಂತಹ ಸಂಸ್ಕೃತಿಯನ್ನು ಮೂಲ ನೆಲೆಯಲ್ಲಿ ಸಂಕೇತಿಸುವ ನೃತ್ಯ ಪರಂಪರೆ ಕಂಡುಬರಲಿಲ್ಲ. ಇದರ ಬದಲಾಗಿ ಈಗಿನ ಆಧುನಿಕ ಪರಂಪರೆಯ ನೃತ್ಯಗಳು ಪ್ರದರ್ಶನಗೊಂಡವು. ವಿವಿಧ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಸಂಜೆಯ ಸಭಾ ಕಾರ್ಯಕ್ರಮದಲ್ಲಿ ಬಹುಮಾನ ವಿತರಣೆ ಮಾಡಿದರು. ಸಂಜೆ ನಡೆದ ಸಭಾ ಕಾರ್ಯಕ್ರಮದಲ್ಲಿ ಮಲೆಕುಡಿಯ ಸಮುದಾಯದಲ್ಲಿ ೨೦೦೮–೦೯ನೇ ಸಾಲಿನಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ೩ ವಿದ್ಯಾರ್ಥಿಗಳಿಗೆ ಈ ಸಮುದಾಯದ ಹಿರಿಯ ಮುಖಂಡರಾದ ಮಾಜಿ ಜಿಲ್ಲಾ ಪಂಚಾಯತ್ ಸದಸ್ಯರು ಹಾಗೂ ಈ ಸಂಘದ ಮಾಜಿ ಅಧ್ಯಕ್ಷರಾದ ಕೆ. ನಾರಾಯಣ ಮಲೆಕುಡಿಯರು ನೀಡುವ ನಗದು ರೂಪದ ಬಹುಮಾನವನ್ನು ವಿತರಣೆ ಮಾಡುತ್ತಾರೆ.

## ೨. ಮಲೆಕುಡಿಯರ ನಾಯಕತ್ವ

ಬಂಜಾರುಮಲೆ ನಾಯಕತ್ವವು ಅನಾಧಿಕಾಲದಿಂದ ಹೆಬ್ಬಾರರ ಒಡೆತನದಲ್ಲಿ ಮುಂದುವರೆದು ಕೊಂಡು ಬಂದಿದ್ದು ಕಾಲಕ್ರಮೇಣ ಜೀತಪದ್ದತಿಯಿಂದ ವಿಮುಕ್ತಿ ಪಡೆದ ಇವರು ತಮ್ಮ ಭೂ ಸಾಗುವಳಿಯ ದಾಖಲೆಗಳನ್ನು ಹೊಂದಿ ಭೂಒಡೆತನವನ್ನು ಪಡೆದರು.ಈಗ ಈ ಮಲೆಯಲ್ಲಿ ಹಿರಿಯ ತಲೆಮಾರಿನ ಲಕ್ಷ್ಮಣ, ಸೋಮ.ಕೆ.ಜಿ, ಎಲ್.ಬೈರು, ಎವ್.ಬೈರು, ಐತಪ್ಪ ಇವರು ಹಿರಿಯ ತಲೆಮಾರಿನ ಮುಂದಾಳುಗಳಾಗಿದ್ದಾರೆ. ನೆರಿಯ ಗ್ರಾಮಪಂಚಾಯಿತ್ತಿಯ ಸದಸ್ಯರಾಗಿ ಅವಿರೋದವಾಗಿ ಆಯ್ಕೆಯಾಗಿರುವ ಕೃಷ್ಣಪ್ಪ ಬಿ. ಈ ಪ್ರದೇಶದ ಅಭಿವೃದ್ಧಿಯ ಕನಸನ್ನು ಹೊಂದಿ ಕೆಲಸ ಮಾಡುತ್ತಿದ್ದಾರೆ. ಸುಬ್ರಹ್ಮಣ್ಯ ಮಲೆಕುಡಿಯರಲ್ಲಿ ಹಿಂದೆ ಹಳೆಯ ಕುಲ ಪದ್ಧತಿಯ ನಾತಕತ್ವ ಈಗ ತನ್ನ ಪ್ರಧಾನತೆಯನ್ನು ಕಳೆದುಕೊಂಡಿದೆ. ದೇವರ ಗದ್ದೆಯ ಕೋಚಮಲೆ ಈ ಜನಾಂಗದ ಯಜಮಾನ ಆಗಿದ್ದಾನೆ. ದೇವರ ಕೆಲಸ ಕಾರ್ಯಗಳು ಇವರ ನೇತೃತ್ವದಲ್ಲಿ ನಡೆಯುತ್ತದೆ. ಇದನ್ನು ಹೊರತು ಪಡಿಸಿದರೆ ದೇವರ ಗದ್ದೆಯ ಪೊಡಿಯ ಸುಳ್ಯದ ಲ್ಯಾಂಪ್ಸ್‌ನ ಅಧ್ಯಕ್ಷರಾಗಿದ್ದರು. ಈಗ ಸದಸ್ಯರಾಗಿ ಚಂದ್ರಿಕಾ ಸುಬ್ರಹ್ಮಣ್ಯ ಗ್ರಾಮ ಪಂಚಾಯಿತಿಯ ಸದಸ್ಯೆಯಾಗಿದ್ದಾಳೆ. ಸುಬ್ರಹ್ಮಣ್ಯ ಈಗ ದೇವಸ್ಥಾನ ಸಮಿತಿಯಲ್ಲಿ ಟ್ರಸ್ಟಿಯಾಗಿದ್ದಾನೆ. ಲಕ್ಷ್ಮಣ ಎಂಬುವವರು ಹಿರಿಯ ಗುರಿಕಾರ ರಾಗಿದ್ದಾರೆ.ನಾಗೇಶ್ ಈ ದೇವಸ್ಥಾನದ ಪಹರೆ ಕೆಲಸ ಮಾಡುತ್ತಾ ಈಗ ಈ ಸಮುದಾಯದ ನಾಯಕತ್ವದ ಮುಂಚೂಣಿಯಲ್ಲಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಂಘಟನೆಯ ಅಭಿವೃದ್ದಿಗಾಗಿ ಬೆಳ್ತಂಗಡಿಯ ಸಮೀಪದ ಕೊಯ್ಯೂರಿನ ಶಿವಗಿರಿಯಲ್ಲಿ ಮಲೆಕುಡಿಯರ ಸಂಘ ಕಾರ್ಯನಿರ್ವಹಿಸುತ್ತಿದೆ. ಈ ಸಂಘಕ್ಕೆ ಸಂಜೀವ.ಕೆ ಅಧ್ಯಕ್ಷರಾಗಿ, ಉಪಾದ್ಯಕ್ಷರಾಗಿ ಶ್ರೀಮತಿ ಗಿರಿಜ ಕಾರ್ಯದರ್ಶಿಯಾಗಿ, ಜಯರಾಮ ಎಂ. ಜೊತೆಕಾರ್ಯದರ್ಶಿಯಾಗಿ, ನೋಣಯ್ಯ ಖಜಾಂಜಿಯಾಗಿ, ಶ್ರೀಮತಿ ಕೆ. ವಸಂತಿ ಹಾಗೂ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ, ಎಲ್ಯಣ್ಣ.ಕೆ, ಶಿವರಾಮ, ದೇವಪ್ಪಯ್ಯ, ಅಣ್ಣಪ್ಪಯ್ಯ ಎಮ್, ನಾರಾಯಣ.ಡಿ.ಕೆ, ಕೃಷ್ಣಪ್ಪ ಮುಂತಾದವರು ಇದ್ದಾರೆ. ಈ ಸಮುದಾಯದ ಹಿರಿಯರು ಮತ್ತು ಎಸ್.ಬಿ.ಎಂ ಬ್ಯಾಂಕ್ ಮ್ಯಾನೇಜರ್ ಆಗಿರುವ ಪರಮೇಶ್ವರಪ್ಪ ಮತ್ತು ಬೆಂಗಳೂರಿನಲ್ಲಿ ವಕೀಲರಾಗಿರುವ ವೆಂಕಟೇಶ್ ರವರು ಈ ಸಮುದಾಯದ ಸಂಘಟನೆಯ ಅಭಿವೃದ್ಧಿಗಾಗಿ ನಿರಂತರವಾಗಿ ಶ್ರಮಿಸುತ್ತಿದ್ದಾರೆ. ಈ ಸಮುದಾಯದಲ್ಲಿ ಹಲವರು ಚುನಾಯಿತ ಜನಪ್ರತಿನಿದಿಗಳಿದ್ದಾರೆ. ಯಮನಾಕ್ಷಿ ಕೊಂಬಾರು ಗ್ರಾಮ ಪಂಚಾಯ್ತಿಯ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿ ಕೆಲಸ ಮಾಡುತ್ತಿದ್ದಾರೆ. ಕನ್ಯಾನ ಗ್ರಾಮ ಪಂಚಾಯ್ತಿಯ ಸದಸ್ಯರಾಗಿ ಯಮುನ ಆಯ್ಕೆಯಾಗಿದ್ದಾರೆ. ಧರ್ಮಸ್ಥಳದ ತಾಲ್ಲೂಕ ಪಂಚಾಯ್ತಿ ಸದಸ್ಯೆಯಾಗಿ ಪುಷ್ಪಲತ ಆಯ್ಕೆಯಾಗಿದ್ದಾರೆ.ನೆರಿಯಾ ಗ್ರಾಮ ಪಂಚಾಯ್ತಿಯಿಂದ ಚಿದಾನಂದ ಮತ್ತು ಬಂಜಾರುಮಲೆಯ ಕೃಷ್ಣಪ್ಪ ಗ್ರಾಮ ಪಂಚಾಯ್ತಿಯ ಸದಸ್ಯರಾಗಿದ್ದಾರೆ. ಧರ್ಮಸ್ಥಳದ ಸದಾಶಿವ.ಎಂ ನಿರಂತರವಾಗಿ ಗ್ರಾಮ ಪಂಚಾಯ್ತಿಯ ಸದಸ್ಯರಾಗಿ ಆಯ್ಕೆಯಾಗಿ ಬಂದಿದ್ದಾರೆ.

ಈ ಸಮುದಾಯದ ಹಿರಿಯ ಜನಪ್ರತಿನಿದಿಯಾಗಿ ಸೇವೆಸಲ್ಲಿಸಿರುವ ಕೆ.ನಾರಾಯಣ ಶಿಶಿಲ ರವರು ಈ ಸಮುದಾಯದ ಸಂಘಟನೆಗೆ ಶ್ರಮಿಸಿದ್ದಾರೆ. ಈಗ ಉಜರೆಯಲ್ಲಿ ವಿಶ್ರಾಂತಿ ಜೀವನ ನಡೆಸುತ್ತಿದ್ದಾರೆ. ದಿನಾಂಕ. ೧೩.೩.೨೦೧೧ರಂದು ಶನಿವಾರ ಸಂಜೆ ಉಜಿರೆಯ ಬೆಳಾಲು ರಸ್ತೆಯಲ್ಲಿನ ಸಹಕಾರಿ ಸಂಘದ ಪಕ್ಕದಲ್ಲಿನ ಅಂಗಡಿಯಿದೆ, ಇದಕ್ಕೆ ಹೊಂದಿಕೊಂಡತೆ ಕೌಂಪೌಂಡ್ ಇದೆ. ಇದೇ ಓಣಿಯ ಮುಂದೆ

ಹೋದರೆ ಗೇಟ್ ಹೊಂದಿದ ಮನೆಯನ್ನು ಒಬ್ಬ ಹುಡುಗ ತೋರಿಸಿದ. ಆ ಮನೆಯ RCC ಮುಂದೆ ಕಪ್ಪು ಬಣ್ಣದ ಕಾರು ಇದೆ. ಮನೆಯಲ್ಲಿನ ನಾಯಿ ಗೇಟ್ ಸದ್ದು ಕೇಳಿದಾಕ್ಷಣ ಅಪರಿಚಿತರಾದ ನಮ್ಮನ್ನು ಎಚ್ಚರಿಸುತ್ತಾ ಬೊಗಳುತ್ತದೆ. ಮನೆಯಿಂದ ೭೪ ವರ್ಷದ ವಯೋವೃದ್ದರಾದ ಮಲೆಕುಡಿಯ ಸಮುದಾಯದ ಅಭಿವೃದ್ದಿಯ ನೇತಾರರಾದ ಕೆ. ನಾರಾಯಣ ತಂದೆ ಐತ್ತಪ್ಪ ಮಲೆಕುಡಿಯರ ಪರಿಚಯವಾಗುತ್ತದೆ. ಅವರೊಂದಿಗೆ ನನ್ನನ್ನು ಪರಿಚಯಿಸಿಕೊಂಡು ಬಂದ ಉದ್ದೇಶವನ್ನು ಮನವರಿಕೆ ಮಾಡಿಕೊಟ್ಟ ನಂತರ ನನ್ನನ್ನು ಅವರ ಮನೆಯ ಸೋಫಾದಲ್ಲಿ ಕುಳ್ಳಿರಿಸಿ ಚಹ ನೀಡಿ ಉಪಚರಿಸಿದರು.

೧೯೮೧ರ ಕಾಲದ ಅವಧಿಯಲ್ಲಿ ದೆಹಲಿಯವರೆಗೆ ಈ ಸಮುದಾಯದ ಪ್ರತಿನಿಧಿಯಾಗಿ ಭಾಗವಹಿಸಿರುವ ರಾಜೀವಗಾಂಧಿ ಕಾಲದ ಅವಧಿಯಲ್ಲಿ ಚುನಾಯಿತ ಪ್ರತಿನಿಧಿಯಾದ ಇವರು ಬೇರಾರು ಅಲ್ಲ. ಕೆ.ನಾರಾಯಣ ಶಿಶಿಲ, ಬಾಡೂರು ಮೂಲದ ಐತ್ತಪ್ಪ ಮಲೆಕುಡಿಯರ ದಂಪತಿಗಳ ಪುತ್ರನಾಗಿ ದಿನಾಂಕ. ೧೬.೮.೧೯೩೭ರಂದು ಜನಿಸಿದ. ಕೆ. ನಾರಾಯಣ ತನ್ನ ಬಾಲ್ಯದ ದಿನಗಳನ್ನು ತನ್ನ ತಾಯಿ ಮನೆ ಕಡಬದಲ್ಲಿ ಕಳೆಯುತ್ತಾರೆ. ಉಪ್ಪಿನಂಗಡಿ ಸಮೀಪದ ಮಚ್ಚಿನದಲ್ಲಿ ೫ನೇ ತರಗತಿವರೆಗೆ ಶಿಕ್ಷಣ ಪಡೆದು, ನಂತರ ಮಡಂತ್ಯಾರುನಲ್ಲಿ ೮ನೇ ತರಗತಿವರೆಗೆ ಕಲಿಯುತ್ತಾರೆ. ನಂತರ ಕೊಕ್ಕಡದಲ್ಲಿ ಪದ್ಮಾವತಿರವರನ್ನು ವಿವಾಹವಾದ ನಂತರ ಶಿಶಿಲದಲ್ಲಿ ನೆಲೆಸುತ್ತಾರೆ. ಈಗ ಉಜಿರೆಯಲ್ಲಿನ ಮನೆಯಲ್ಲಿ ತನ್ನ ಮಕ್ಕಳು ಮೊಮ್ಮಕ್ಕಳೊಂದಿಗೆ ವೃದ್ಯಾಪ್ಯದ ದಿನಗಳನ್ನು ಕಳೆಯುತ್ತಿದ್ದಾರೆ. ೪೨ ವರ್ಷದ ಮೊದಲನೇ ಮಗಳು ಅನುಸೂಯ ಟಿ.ಸಿ.ಹೆಚ್ ಮಾಡಿಕೊಂಡು ಈಗ ಹುಬ್ಬಳಿಯಲ್ಲಿ ಶಿಕ್ಷಕಿಯಾಗಿದ್ದಾರೆ. ರಾಮಚಂದ್ರ, ಮಧುಸೂಧನ ಇಬ್ಬರು ಗಂಡು ಮಕ್ಕಳಿದ್ದಾರೆ. ರಾಮಚಂದ್ರ ೪೦ ವರ್ಷದ ಕಾನೂನು ಪದವಿವರೆಗೆ ಕಲಿತು ಈಗ ಶಿಶಿಲದಲ್ಲಿ ಕೃಷಿ ಮಾಡಿಕೊಂಡಿದ್ದಾನೆ. ಮತ್ತೊಬ್ಬ ಮಗ ಮಧುಸೂಧನ(೩೦ ವರ್ಷ) ಪಿ.ಯು.ಸಿ. ನಂತರ ಎಲೆಕ್ಟ್ರಿಕಲ್‌ನಲ್ಲಿ ಡಿಪ್ಲೋಮೋ ಮಾಡಿಕೊಂಡು ಈಗ ಕಾರ್ಕಳದ ಕೆ.ಪಿ.ಟಿಸಿ.ಎಲ್ ನಲ್ಲಿ ನೌಕರಿ ಮಾಡುತ್ತಿದ್ದಾನೆ. ಮೂಲ್ಯ ಬರಿಗೆ ಸೇರಿದ ಇವರಿಗೆ ಶಿಶಿಲದಲ್ಲಿ ೫ ಎಕರೆ ಭೂಮಿ ಇದೆ. ಇವರಲ್ಲಿ ೧ ಎಕರೆಗೆ ಭತ್ತದ ಕೃಷಿ ಇದೆ. ಒಂದುವರೆ ಎಕರೆಯಲ್ಲಿ ಒಂದುವರೆ ಸಾವಿರ ಅಡಿಕೆ ಮರವಿದೆ. ಅರವತ್ತು ತೆಂಗಿನಮರ, ಒಂದು ನೂರು ಬಾಳೆಗಿಡದ ಹತ್ತು ಹಲಸಿನ ಮರ, ೫೪ ಮಾವಿನ ಮರಗಳ ತೋಟವಿದೆ. ತನ್ನ ಶಿಕ್ಷಣದ ಅವಧಿಯಲ್ಲಿ ಕಾಂಗ್ರೇಸ್‌ನ ಪಕ್ಷದ ಸಕ್ರಿಯ ಕಾರ್ಯ ಕರ್ತನಾಗಿಬೆಳೆದ ನಾರಾಯಣರವರು ಹಂತ ಹಂತವಾಗಿ ವಿವಿಧ ಹುದ್ದೆಗಳನ್ನು ಅಲಂಕರಿಸುತ್ತಾ ತನ್ನ ನಾಯಕತ್ವವನ್ನು ಬೆಳೆಸಿಕೊಂಡಿದ್ದಾರೆ. ಇವರು ನಿರ್ವಹಿಸಿದ ಹಲವು ಹುದ್ದೆಗಳೆಂದರೆ:

೧. ೧೯೬೧ರಲ್ಲಿ ಮೈಸೂರು ಸರ್ಕಾರದಲ್ಲಿ ಗಿರಿಜನ ಕಲ್ಯಾಣ ಸಲಹಾಸಮಿತಿ ಸದಸ್ಯರಾಗಿ ನೇಮಕರಾಗುತ್ತಾರೆ.

೨. ೧೯೬೯ರಲ್ಲಿ ಬೆಳ್ತಂಗಡಿ ತಾಲೂಕು ಬೋರ್ಡನ ಸದಸ್ಯರಾಗುತ್ತಾರೆ.

೩. ೧೯೭೪ರಲ್ಲಿ ಬೆಳ್ತಂಗಡಿ ಭೂ ನ್ಯಾಯ ಮಂಡಳಿಯ ಸದಸ್ಯರಗಿ ನೇಮಕರಾಗುತ್ತಾರೆ.

೪. ೧೯೭೪ರಲ್ಲಿ ಆರಂಭವಾದ LAMPS ಸ್ಥಾಪಕ ಅಧ್ಯಕ್ಷರಾಗಿದ್ದಾರೆ.

೫. ೧೯೮೭ರಲ್ಲಿ ಧರ್ಮಸ್ಥಳ ಕ್ಷೇತ್ರದ ಜಿಲ್ಲಾ ಪರಿಷತ್ ಸದಸ್ಯರಾಗಿ ಆಯ್ಕೆ.

೬. ೨೦೦೦ರಿಂದ ೨೦೦೫ರವರೆಗೆ ಮತ್ತೆ ಧರ್ಮಸ್ಥಳ ಕ್ಷೇತ್ರದ ಜಿಲ್ಲಾ ಪಂಚಾಯತಿ ಸದಸ್ಯರಾಗಿ ಆಯ್ಕೆ.

೭. ಈ ಅವಧಿಯಲ್ಲಿ ಇವರು ಮಲೆಕುಡಿಯ ಸಮುದಾಯದವರಿಗಾಗಿ ಬೆಳ್ತಂಗಡಿ, ನಾರಾವಿ, ನೆರಿಯಾ, ಶಿಶಿಲ ಗಳಲ್ಲಿ ಗಿರಿಜನ ವಿದ್ಯಾರ್ಥಿನಿಲಯವನ್ನು ಮತ್ತು ಆಶ್ರಮ ಶಾಲೆಗಳನ್ನು ಸ್ಥಾಪಿಸುತ್ತಾರೆ.

೮. ಶಿಶಿಲದಲ್ಲಿ ಗಿರಿಜನರ ಪುನರ್ ವ್ಯವಸಾಯ ಕಲೋನಿ ರಚನೆಗೆ ಶ್ರಮಿಸಿದ್ದಾರೆ.

೯. ಭೂ ನ್ಯಾಯ ಮಂಡಳಿ ಸದಸ್ಯರಾಗಿದ್ದಾಗ ನೆರಿಯಾದಲ್ಲಿ ಭೂ ಹಂಚಿಕೆ ಮಾಡಲು ಹೋರಾಟ ಮಾಡಿದ್ದಾರೆ.

೧೦. ನೆರಿಯಾದ ಅಂಬಟೆಮಲೆ, ಬಾಂಜಾರು ಮಲೆ, ಪ್ರದೇಶಗಳಲ್ಲಿ ಡಿಕ್ಲರೇಷನ್ ಮೂಲಕ ಭೂಮಿ ಹಂಚಿಕೆ ಹೋರಾಟ ಮಾಡಿದ್ದಾರೆ. ನೆರಿಯಾದ ಹೆಬ್ಬಾರಿಂದ ಆಗುವ ತೊಂದರೆಯ ವಿರುದ್ಧ ಮಲೆಕುಡಿಯ ಸಮುದಾಯದಲ್ಲಿ ಜಾಗೃತಿಯನ್ನುಂಟುಮಾಡಿ ಈ ಸಮುದಾಯಕ್ಕೆ ಇಲ್ಲಿ ಆಗುವ ಅನ್ಯಾಯವನ್ನು ಹೋಗಲಾಡಿಸುವಲ್ಲಿ ಶ್ರಮಿಸಿದ್ದಾರೆ. ಹೆಬ್ಬಾರರ ಗೇಟಿನ ಬಾಗಿಲು ತೆಗೆಸುವಲ್ಲಿನ ಹೋರಾಟ ಒಂದು ಮೈಲುಗಲ್ಲಾಗಿದೆ. ಸಮುದಾಯದ ಸಂಘಟಿತ ಹೋರಾಟದ ಫಲವಾಗಿ ಅಲ್ಲಿನ ಜೀತಪದ್ಧತಿ ಹೋಗಲಾಡಿಸಲು ಸಾಧ್ಯವಾಗಿದೆ.

೧೧. ಇವರು ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದಾಗ ಕೊಕ್ಕಡ ಅರಿಸಿನ ಮಗ್ಗಿಗೆ ಹೋಗುವ ಮುಖ್ಯ ರಸ್ತೆಯಿಂದ ಹತ್ಯಡ್ಕದ ಮೆದಿನಕ್ಕೆ ಹೋಗುವ ೧೧/೨ ಕಿ.ಮೀ ಉದ್ದದ ರಸ್ತೆ ನಿರ್ಮಾಣ ಮಾಡಿದ್ದಾರೆ.

೧೨. ಶಿಶಿಲದ ಗಿರಿಜನ ಕಾಲೋನಿಗೆ ಸೇತುವೆ ಮಾಡಿದ್ದಾರೆ.

೧೩. ಗಿರಿಜನ ಪ್ರದೇಶಗಳಿಗೆ ಆರೋಗ್ಯ ಸೇವೆಗೆ ಸಂಚಾರಿ ಆಸ್ಪತ್ರೆ ಮಂಜುರಾತಿ ಮಾಡಿದ್ದಾರೆ.

೧೪. ಚಾರ್ಮಾಡಿಯ ಅನಾಶದ ಕಾಲೋನಿಯ ೨೦ ಕುಟುಂಬಗಳಿಗೆ ಭೂಮಿ ಹಂಚಿಕೆ ಮಾಡುವುದು ಸೇರಿದಂತೆ ಇಲ್ಲಿ ರೇಷ್ಮೆ ಕೃಷಿ ಕೇಂದ್ರ ಸ್ಥಾಪನೆಗೆ ಶ್ರಮಿಸಿದ್ದಾರೆ.

೧೫. ಶಿಶಿಲದಲ್ಲಿ ಕೈಗಾರಿಕಾ ಕೇಂದ್ರವನ್ನು ಸ್ಥಾಪಿಸಿ ಇಲ್ಲಿ ಬೆತ್ತ, ಬಿದಿರು, ಕುಶಲ ಕರ್ಮಿ ತರಬೇತಿಗೆ ಅವಕಾಶ ಮಾಡಲಾಗಿದೆ.

೧೬. ಶಿಶಿಲದಲ್ಲಿ ಹೆಣ್ಣುಮಕ್ಕಳಿಗೆ ಹೊಲಿಗೆ ತರಬೇತಿ ಕೇಂದ್ರದ ಸ್ಥಾಪನೆ ಮಾಡಲಾಗಿದೆ.

೧೭. ಶಿಶಿಲದಲ್ಲಿ ಗಿರಿಜನರಿಗಾಗಿ ಚಾಮುಂಡೇಶ್ವರಿ ದೇವಸ್ಥಾನದ ನಿರ್ಮಾಣಕ್ಕೆ ಶ್ರಮಿಸಿದ್ದಾರೆ.

೧೮. ಶಿಶಿಲದಲ್ಲಿ ಮಲೆಕುಡಿಯರ ಗೇಣಿದಾರರಿಗೆ ಭೂಹಂಚಿಕೆಗೆ ಶ್ರಮಿಸಿದ್ದಾರೆ.

೧೯. ೧೯೬೦ರಲ್ಲಿ ಮಲೆಕುಡಿಯರ ಕಲ್ಯಾಣ ಕೇಂದ್ರಗಳ ಸ್ಥಾಪನೆ ನಂತರ ಇವು ಗಿರಿಜನ ಕಲ್ಯಾಣ ಕೇಂದ್ರಗಳಾದವು. ಈಗ ಆಶ್ರಮ ಶಾಲೆ, ಗಿರಿಜನರ ಹಾಸ್ಟೆಲ್‌ಗಳು ಆಗಿವೆ.

೨೦. ೧೯೬೨ರಿಂದ ೧೯೬೭ ರವರೆಗೆ ಮೈಸೂರು ಸರ್ಕಾರದಲ್ಲಿ ಗಿರಿಜನ ಕಲ್ಯಾಣ ಸಮಿತಿಯ ಸದಸ್ಯರಾಗಿ ನೇಮಕವಾಗಿದ್ದಾರೆ, ಮೈಸೂರು ಸರ್ಕಾರದ ಆಗಿನ ಸಮಾಜ ಕಲ್ಯಾಣ ಸಚಿವರಾದ ಯಶೋಧರ ದಾಸಪ್ಪರವರು ಈ ಬೋರ್ಡ್‌ನ ಅಧ್ಯಕ್ಷರಾಗಿದ್ದರು. ಆಗ ಇವರನ್ನು ನೇರವಾಗಿ ನಾಮಕರಣ ಮಾಡಲಾಯಿತು, ೫ ವರ್ಷಗಳ ಅವಧಿವರೆಗೆ ೧೯೬೨ರಿಂದ ೧೯೬೭ ರವರೆಗೆ ಕೆಲಸ ಮಾಡಿದ್ದಾರೆ.

೨೧. ಆ ಕಾಲದಲ್ಲಿ ಎಲ್.ಜಿ. ಹಾವನೂರರವರು ಗಿರಿಜನ ಕಲ್ಯಾಣ ಕೇಂದ್ರದ ವಿಶೇಷ ಅಧಿಕಾರಿ ಯಾಗಿದ್ದರು. ಅಲ್ಲದೆ ಸುಬ್ರನಾಯ್ಕ, ಮಡಿಕೇರಿಯ ಕೃಷ್ಣರವರು Director of social welfare Boardನ ಸದಸ್ಯರಾಗಿದ್ದರು.

೨೨. ಶಿಶಿಲದಲ್ಲಿ ಆಗ ೨೫-೨೬ ಕುಟುಂಬಗಳ ಸಂಖ್ಯೆ ಇದ್ದದ್ದು ಈಗ ಅದು ೫೦ಕ್ಕೆ ಜಾಸ್ತಿಯಾಗಿದೆ.

ಆಗ ನೆರಿಯಾದ ಹೆಬ್ಬಾರರ ಭಟ್ಟರ ಮನೆಯಲ್ಲಿ ಕೂಲಿ ಕೆಲಸ ಮಾಡಿಕೊಂಡು, ಕಾಡುತ್ಪತ್ತಿ ಮೂಲಕ ಜೀವನ ಮಾಡುತ್ತಿದ್ದ ಮಲೆಕುಡಿಯರಿಗೆ ಸ್ವತಂತ್ರವಾದ ಜೀವನಕ್ಕೆ ಅಚಕಾಶವಿರಲಿಲ್ಲ. ನೆರಿಯಾದ ಹೆಬ್ಬಾರ ಮನೆಯಲ್ಲಿ ಜೀತದಾಳುಗಳಾಗಿ ಇವರು ಹೆಬ್ಬಾರ ಆಶ್ರಯದಲ್ಲಿ ಶೋಷಣೆಗೆ ಒಳಗಾಗಿದ್ದರು. ಈ ವಿಷಯು ಆಗಿನ Director of social welfare Boardನಲ್ಲಿ ಚರ್ಚೆಯಾಯಿತು. ಇದರ ಪರಿಣಾಮದಿಂದಾಗಿ ಕೇಂದ್ರ ಸರ್ಕಾರದಿಂದ 'NCRB Project' ಮಂಜೂರಾಯಿತು. ಇದರ ಜೊತೆಗೆ ಒಟ್ಟು ೧೨ ಯೋಜನೆಗಳು ಮೈಸೂರು ರಾಜ್ಯಕ್ಕೆ ಆಗ ಮಂಜೂರಾದವು ಅವುಗಳಲ್ಲಿ ಬಿಳಿಗಿರಿ ರಂಗನ ಬೆಟ್ಟ ನಾಗರಹೊಳೆ, ಯಳಂದೂರು, ಕೊಳ್ಳೆಗಾಲ ಸೇರಿದಂತೆ ಬೆಳ್ತಂಗಡಿ ಎಲ್ಲಾ ಪ್ರದೇಶಕ್ಕೆ ಸಹ ಈ ಯೋಜನೆಗಳು ಜಾರಿಗೆ ಬಂದಿದ್ದವು. ಅಲ್ಲದೆ ಪಕ್ಕ ಕೃಷಿ ಪರಿವರ್ತನೆಗೆ ಅನುಕೂಲವಾಗುವ ಯೋಜನೆ ಇದಾಗಿತ್ತು ಎಂಬುದನ್ನು ಕೆ. ನಾರಾಯಣ ರವರು ಹೇಳಿದ್ದಾರೆ. ಈ MCRB project ಬೆಳ್ತಂಗಡಿಯ ಶಿಶಿಲದಲ್ಲಿ ಆಯಿತು. Multi Purpose Co-operative Society for Scheduled Tribes. ಇದು ಶಿಶಿಲದ ಗಿರಿಜನರ ಪುನರ್‌ವಸತಿ ಕಾಲೋನಿಯಲ್ಲಿ ಆರಂಭವಾಯಿತು.

೧೯೬೪ರಲ್ಲಿ ಆರಂಭವಾದ ಈ ಯೋಜನೆ ೧೯೬೮ರಲ್ಲಿ ಪಕ್ಕ ಆಗುತ್ತದೆ. ಈ ಯೋಜನೆಯ ಪ್ರಕಾರ ೧೨೦ ಎಕರೆಯಷ್ಟು ಭೂಮಿ ಜನರಿಗೆ ದೊರೆಯುತ್ತದೆ. ಪ್ರತಿ ಕುಟುಂಬಕ್ಕೆ ೩ರಿಂದ ೫ ಎಕರೆ ವರೆಗೆ ಶಿಶಿಲದ ೨೫ ಕುಟುಂಬಗಳಿಗೆ ಹಂಚಿಕೆ ಆಗಿದೆ. ೧೯೭೪ರಲ್ಲಿ R and L Act ಪ್ರಕಾರ ಆಗ ತಾಲೂಕು ಅಭಿವೃದ್ಧಿ ಮಂಡಳಿ ವ್ಯಾಪ್ತಿಯಲ್ಲಿತ್ತು. ಈ ಕಾಯಿದೆಯ ಅಡಿಯಲ್ಲಿ ಶಿಶಿಲದಲ್ಲಿ ೧ ಲಕ್ಷದ ೮೮ ಸಾವಿರ ರೂ.ಗಳ ಅನುದಾನದ ಯೋಜನೆಯನ್ನು ಸರ್ಕಾರ ಮಂಜೂರು ಮಾಡಿದೆ. ಈ ಹಣ ಇಡಲು Joint forming co-operation societyಯನ್ನು ಸ್ಥಾಪನೆ ಮಾಡಲಾಯಿತು. ಈ ೧.೮೮ ಲಕ್ಷ ನನ್ನ ಹಣವನ್ನು ಇಲ್ಲಿ ಇಡಲಾಯಿತು. ಈ ಯೋಜನೆಯ ಪ್ರಕಾರ ಶಿಶಿಲದಲ್ಲಿ: ೧. ಕೃಷಿ ಭೂಮಿ ಹಂಚಿಕೆ ಸೌಲಭ್ಯ ಕಲ್ಪಿಸುವುದು. ೨. ಮನೆ ನಿರ್ಮಿಸುವುದು. ೩. ಕೃಷಿ ಉಪಕರಣಗಳ ಸರಬರಾಜು. ೪. ಆಶ್ರಮ ಶಾಲೆ ಸ್ಥಾಪನೆ. ೫. ಬಾಲವಾಡಿ ಸ್ಥಾಪನೆ. ೬. ಯೋಜನಧಿಕಾರಿ ನೇಮಕ ಅಲ್ಲದೆ ಇದರ ಮೇಲೆ ಉಸ್ತುವಾರಿಗೆ Special officer of Tribal welfare ಆಗಿ ಕ.ಉ ಮುತ್ತಪ್ಪರವರು ಇದ್ದರು. ಇವರು ಬೆಂಗಳೂರಿನಲ್ಲಿದ್ದರೂ ಸಹ ತುಂಬಾ ಸಹಕರ ನೀಡಿದ್ದಾರೆ ಎಂದು ನಾರಾಯಣರವರು ಸ್ಮರಿಸುತ್ತಾರೆ.

ಕೆ. ನಾರಾಯಣರವರು, ನವದೆಹಲಿಯಲ್ಲಿ ವಿಜ್ಞಾನ ಭವನದಲ್ಲಿ ನಡೆದ ಅಖಿಲ ಭಾರತ ಪಂಚಾಯತ್ ರಾಜ್ಯ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದ್ದಾರೆ. ದಿನಾಂಕ. ೧೬.೪.೧೯೯೮ರಿಂದ ೨೦೦೪ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಪರಿಷತ್ ಸಾಮಾಜಿಕ ನ್ಯಾಯ ಸ್ಥಾಯಿಸಮಿತಿ ಅಧ್ಯಕ್ಷರಾಗಿ ಸಭೆಯಲ್ಲಿ ಭಾಗವಹಿಸಿದ್ದಾರೆ. ದಿನಾಂಕ ೨೯.೪.೧೯೮೪ರಂದು ಆಕಾಶವಾಣಿಯಲ್ಲಿ ಕರ್ನಾಟಕ ರಾಜ್ಯ ಹಾಗೂ ರಾಷ್ಟ್ರದ ಆದಿವಾಸಿ ಗಿರಿಜನ ಸಮುಗ್ರ ಅಭಿವೃದ್ಧಿ ಕುರಿತು ವಿಷಯ ಮಂಡನೆಯ ವರದಿ ಪ್ರಸಾರವಾಗಿದೆ. ೧೯೮೧ರಲ್ಲಿ ದೆಹಲಿಯಲ್ಲಿ ನಡೆದ All India panchayath Rajya conference for S.T'ನಲ್ಲಿ ಇವರು ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದಾರೆ. ಇದರ ಭಾವಚಿತ್ರವಿದೆ. ಆಗ ರಾಜೀವ್‌ಗಾಂಧಿಯವರೊಂದಿಗೆ ಭಾವಚಿತ್ರ ತೆಗಿಸಿಕೊಂಡಿದ್ದಾರೆ.

The Forest labourers co-operation society Ltd putturನ ನಿರ್ದೇಶಕರಾಗಿದ್ದಾರೆ(೩-೬-೧೯೬). ದೇವರಾಜ ಅರಸುರವರ ಸರ್ಕಾರದಲ್ಲಿ Karnataka state welfare boardನ ನಿರ್ದೇಶಕರಾಗಿ ನೇಮಕಗೊಂಡಿದ್ದಾರೆ. ಮಲೆಕುಡಿಯರ ಸಂಘದ ಸ್ಥಾಪಕ ಅಧ್ಯಕ್ಷರಾಗಿದ್ದಾರೆ. ಈ ಸಂಘದ ಅಭಿವೃದ್ದಿಗಾಗಿ ಹತ್ತು ಸಾವಿರ ರೂಪಾಯಿಗಳನ್ನು ದತ್ತಿ ನಿಧಿಗೆ ದೇಣಿಗೆ ನೀಡಿದ್ದಾರೆ. ಇದರಿಂದ ಬಂದ ಬಡ್ಡಿ ಹಣವನ್ನು ಈ ಸಮುದಾಯದ ಮಕ್ಕಳಿಗೆ ನಗದು ರೂಪದಲ್ಲಿ ಬಹುಮಾನವನ್ನು ನೀಡಲಾಗುತ್ತದೆ. ಧರ್ಮಸ್ಥಳದಲ್ಲಿನ ಮಲೆಕುಡಿಯರನ್ನು ಬರ್ಕೆ ಎಂದು ಕರೆಯುವುದಕ್ಕೆ ಸಂಬಂದಿಸಿದಂತೆ ಇವರು ನೀಡುವ ಮಾಹಿತಿ ಮಲೆ ಬರ್ಕೆದ ಕತೃಗಳು ಎನ್ನುತ್ತಾರೆ. ಇದು ತುಳು ಪದ. ಬರ್ಕೆ ಎಂದರೆ ನಾಲ್ಕು ಜನ ಗುಂಡ್ಯ ಘನಸ್ಥಿಕೆಯ ಪ್ರತೀಕವಾಗಿದೆ. ಆದಿವಾಸಿ ಮಲೆಕುಡಿಯ ಎಂಬ ಪದಕ್ಕೆ ಬದಲಾಗಿ ಈ ಬರ್ಕೆ ಎಂಬ ಪದ ಬಳಸುತ್ತಿದ್ದಾರೆ ಎಂದು ಕೆ. ನಾರಾಯಣ ರವರು ಹೇಳುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಆದಿವಾಸಿ ಸಮುದಾಯಗಳನ್ನು ಕುರಿತು ಅದ್ಯಯನ ಮಾಡಲು ಯಾರೇ ಹೊರಟರೂ ಸಹ ಇಲ್ಲಿನ ಮೂಲ ನಿವಾಸಿಗಳಾದ ಮಲೆಕುಡಿಯರ ಕಡೆಗೆ ಗಮನ ಸೆಳೆಯುತ್ತದೆ. ಈ ಮಲೆಕುಡಿಯರು ಎಲ್ಲಿದ್ದಾರೆಂಬ ಪ್ರಶ್ನೆಗೆ ಮೊದಲು ಬರುವ ಹೆಸರು ಎಂದರೆ 'ನೆರಿಯಾ' ಈ ನೆರಿಯಾದ ಸುತ್ತ ಮುತ್ತಲು ಆವರಿಸಿರುವ ಬಾಂಜಾರಮಲೆ ಅಂಬಟೆಮಲೆ ಬಾರಿ ಮಲೆ ಇಳಿಮಲೆ ಹೆಸರುಗಳು ಕೇಳಿ ಬರುತ್ತವೆ. ಈ ನೆಲೆಗಳು ಈ ಸಮುದಾಯದ ಮೂಲ ವಾಸದ ಸ್ಥಳಗಳಾಗಿವೆ. ಈ ಸ್ಥಳಗಳನ್ನು ನೋಡಲು ಹೊರಟಾಗ ಇಲ್ಲಿನ ನೈಜ ಪಾರಂಪರಿಕ ಮೂಲ ನಿವಾಸಿಗಳ ಸ್ಥಿತಿ ಗತಿಗಳ ಚಿತ್ರಣ ಕಂಡುಬರುತ್ತದೆ. ಈ ಮಲೆಗಳ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಕುಟುಂಬಗಳಲ್ಲಿ ಪದವಿ ಶಿಕ್ಷಣ ಪಡೆದು ಮುಂದೆ ಹೋದವರು ಇದ್ದಾರೆ. ಆದರೆ ತಮ್ಮಸಮುದಾಯದ ಮೂಲ ಭೂತ ಸಮಸ್ಯೆ, ತಮ್ಮ ಮೂಲ ನೆಲ ಭೂಮಿ ಹಕ್ಕುಗಳ ಪರಂಪರೆ ಸಂಪತ್ತನ್ನು ಉಳಿಸಿಕೊಂಡು ಬರುವುದಕ್ಕಾಗಿ ಅಷ್ಟೇ ಅಲ್ಲ ಅರಣ್ಯ ಹಕ್ಕು, ಕಾಯಿದೆ ಎಸ್ಟೇಟ್, ಪ್ಲಾಂಟರ್ಸ್ ಕಾಯಿದೆ ಕುರಿತು ಆಳವಾದ ಅರಿವು ಜ್ಞಾನವನ್ನು ತುಂಬಿಕೊಂಡು ನಿರರ್ಗಳವಾಗಿ ಮಾತನಾಡಬಲ್ಲ ನೆರಿಯಾದ ಹೆಬ್ಬಾರರ ಮನೆತನದೊಡನೆ ತಮ್ಮ ದಾರಿಗಾಗಿ ನಿರಂತರವಾಗಿ ಹೋರಾಟ ಮಾಡುತ್ತಲೆ ಬಂದ ದಿಟ್ಟ ಹೋರಾಟಗಾರ ಕೋಲೋಡಿಯ ಎಲ್ಯಣ್ಣ ಮಲೆಕುಡಿಯ. ಬೆಳ್ತಂಗಡಿಯಲ್ಲಿ ಮಲೆಕುಡಿಯರ ಸಂಘದ ನಾಯಕತ್ವವನ್ನು ವಹಿಸಿದ್ದಾರೆ. ಈ ಸಂಘದ ಕಾರ್ಯಚಟುವಟಿಕೆಗಳನ್ನು ಇದುವರೆಗೂ ನಡೆಸಿಕೊಂಡು ಬಂದಿರುವ ಎಲ್ಯಣ್ಣ ತುಂಬಾ

ಸರಳ. ಸಾದಾ. ಉಡುಪಿನಲ್ಲಿಯೇ ಇರುತ್ತಾರೆ. ತಮ್ಮ ಮೂಲ ಸಂಸ್ಕೃತಿಗೆ ದಕ್ಕೆ ಬಾರದಂತೆ ಸರಳತೆಯನ್ನು ಮೈಗೂಡಿಸಿಕೊಂಡಿರುವ ಇವರು ಕಾರ್ಕಳದಲ್ಲಿ ಪದವಿಯನ್ನು ಮುಗಿಸಿ ನೋಡಲು ಗಿಡ್ಡದಾಗಿರುವ ವ್ಯಕ್ತಿ ಎನಿಸಿದರೆ ಅವರ ವಿಚಾರ ದಾರೆಗಳಲ್ಲಿನ ಚಿಂತನೆಯನ್ನು ಜ್ಞಾನದ ಆಳ ಅರಿವು ಮತ್ತು ತಮ್ಮನ್ನು ಆವರಿಸಿರುವ ಗಿರಿಶಿಖರಗಳನ್ನು ಮೀರಿಸುತ್ತದೆ. ಕುದುರೆಮುಖದ ಹೋರಾಟದಲ್ಲಿ ಪಶ್ಚಿಮ ಘಟ್ಟದ ಪರಿಸರದ ರಕ್ಷಣೆ ಇಲ್ಲಿನ ಯೋಜನೆಗಳು ಮಾತ್ರವಲ್ಲ ಮಲೆಕುಡಿಯರನ್ನು ಇಲ್ಲಿಂದ ಒಕ್ಕಲೆಬ್ಬಿಸುವುದು ಸೇರಿದಂತೆ ಈ ಹಿಂದೆ ನೆರಿಯಾ ಹೆಬ್ಬಾರರ ಮನೆತನದ ಭೂಮಿ ಎಸ್ಟೇಟ್ ಕಾಯಿದೆಯಲ್ಲಿನ ಕಾನೂನು ಹೋರಾಟದ ಅನುಭವ ಇವರಲ್ಲಿದೆ ನಾವು ಬಹಳಷ್ಟು ವರ್ಷಗಳಿಂದಲೂ ಬದುಕಿ ಬಾಳಿದ ಕಾಡು, ಸಂಪತ್ತು, ಹಚ್ಚ ಹಸಿರಿನ ಪರಿಸರ ಸ್ವಚ್ಚ ಗಾಳಿಯ ವಾತವರಣವನ್ನು ಬಿಟ್ಟು ನಾವು ಕಾಡಿನಿಂದ ನಾಡಿಗೆ ಬರಲು ಆಗುವುದಿಲ್ಲ ಎಂದು ಹೇಳುವ ಎಲ್ಯಣ್ಣ ತಮ್ಮ ಭೂಮಿಯನ್ನು ಭತ್ತದ ಗದ್ದೆ ಕೃಷಿ ಮಾಡಿ ಹಚ್ಚ ಹಸಿರಾಗಿಸಿದ್ದಾರೆ. ಈ ಪರಿಸರದ ಎತ್ತರದ ಗುಡ್ಡದಿಂದ ಹರಿಯುವ ಒರತೆ ನೀರನ್ನು ಬಳಸಿ ತಮ್ಮದೇ ಆದ ಕಿರು ಜಲ ವಿದ್ಯುತ್ತನ್ನು ಕೋಲೋಡಿಯಲ್ಲಿ ತಯಾರಿಸಿ ಇದರಿಂದ ತಮ್ಮ ಮನೆಗೆ ಬೇಕಾದ ಬೆಳಕನ್ನು ಪಡೆಯುತ್ತಿದ್ದಾರೆ. ಇಲ್ಲಿಂದ ಕಕ್ಕಿಂಜ ಪೇಟೆಗೆ ಬಂದು ಹೋಗಲು ಸ್ವಂತ ಜೀಪನ್ನು ಹೊಂದಿದ್ದಾರೆ. ಇದರ ಮೂಲಕ ಸಾಗಾಣಿಕೆಗೆ ಅನೂಕೂಲವಾಗುವಂತೆ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಮಳೆಗಾಲದಲ್ಲಿ ತುಂಬಿ ಹರಿಯುವ ಇಲ್ಲಿನ ಹಳ್ಳ ಕೊಳ್ಳಗಳನ್ನು ದಾಟಿ ಹೋಗಲು ಅಸಾಧ್ಯವಾದಾಗ ಇಲ್ಲಿನ ಹೊಳೆಗೆ ತಾವೇ ಮರದ ದಿಮ್ಮೆಯನ್ನು ಹಾಕಿ ಅದರ ಮೇಲೆ ನಡೆದು ಹೊಳೆ ದಾಟುವುದಕ್ಕೆ ಮೇಲು ಸೇತುವೆ ಮಾಡಿಕೊಂಡಿದ್ದಾರೆ. ಇದರಲ್ಲಿ ನಡೆದು ಹೋಗಲು ಆಧಾರಕ್ಕೆ ಬಿದಿರಿನ ಬೆತ್ತ ಬೊಂಬನ್ನು ಕಟ್ಟಿದ್ದಾರೆ. ಮಳೆಗಾಲಕ್ಕೆ ಪ್ರತಿವರ್ಷ ಭದ್ರ ಮಾಡುತ್ತಾ ಬಂದಿದ್ದಾರೆ. ಇಲ್ಲಿ ಒಂದು ಸೇತುವೆ ಆದರೆ ಮಳೆಗಾಲದ ಇವರ ಭವಣೆಗೆ ಒಂದಿಷ್ಟು ಪರಿಹಾರ ದೊರೆಯುತ್ತದೆ. ಇಲ್ಲಿನ ರಸ್ತೆ ಅಭಿವೃದ್ದಿ ಕಾಮಗಾರಿ ಈಗಷ್ಟೆ ಆರಂಭವಾಗಿದೆ. ಕಾಡಿನ ರಸ್ತೆಗೆ ಒಂದಿಷ್ಟು ಮಣ್ಣನ್ನು ಹಾಕುವ ಕೆಲಸ ನಡೆಯುತ್ತಿದೆ. ಇದನ್ನು ಬಿಟ್ಟರೆ ಇವರ ವಾಸದ ಕೋಲೋಡಿಯಲ್ಲಿ ಡಾಂಬರ್ ರಸ್ತೆಯನ್ನು ಈ ಹಿಂದೆ ಮಾಡಿದ್ದಾರೆ.

**ಮಲೆಕುಡಿಯ ನಾಯಕತ್ವದ ಸ್ಥಿತಿ**

ಈ ಸಮುದಾಯದ ಸಂಘಟನೆಗಾಗಿ ಈಗಾಗಲೆ ಕಾರ್ಯನಿರ್ವಹಿಸುತ್ತಿರುವ ಮಲೆಕುಡಿಯರ ಸಂಘ ಕರ್ನಾಟಕ ರಾಜ್ಯಾದ್ಯಂತ ವಿಸ್ತಾರಗೊಂಡು ಕಾರ್ಯನಿರ್ವಹಿಸುವ ಉದ್ದೇಶವನ್ನು ಹೊಂದಿದೆ. ಇದಕ್ಕಾಗಿ ಈ ಸಂಘದ ಎಲ್ಲಾ ಪದಾದಿಕಾರಿಗಳು ಮತ್ತು ಮುಖಂಡರು ನಿರಂತರವಾದ ಪ್ರಯತ್ನವನ್ನು ಮಾಡುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಪ್ರದೇಶಗಳಿಗೆ ಈ ಸಂಘದ ಕಾರ್ಯಚಟುವಟಿಕೆಗಳು ವಿಸ್ತಾರಗೊಂಡಿಲ್ಲ. ಅತಿ ಹಿಂದುಳಿದ ಪ್ರದೇಶಗಳಿಗೆ ಕ್ಷೇತ್ರಕಾರ್ಯಕ್ಕೆ ಹೋದಾಗ ಈ ಸಂಘದ ಮಾಹಿತಿಯೇ ಇಲ್ಲದಿರುವ ಸ್ಥಿತಿ ಇದೆ. ಈಗ ಈ ಸಂಘದ ನಾಯಕತ್ವದಲ್ಲಿನ ಬಿನ್ನಾಭಿಪ್ರಾಯಗಳು ಗುಂಪುಗಾರಿಕೆಗೆ ಅವಕಾಶ ಮಾಡಿಕೊಟ್ಟಿದೆ. ಇದರಿಂದಾಗಿ ಇವರ ಸಂಘಟನೆಗೆ ತೊಡಕಾಗಿದೆ. ಬಂಜಾರುಮಲೆ, ಅಂಬಟೆಮಲೆ, ಇಳಿಮಲೆಯವರು ಈ ಸಂಘಟನೆಯಿಂದ ದೂರವೇ ಇದ್ದಾರೆ. ಆದರೆ ಇಳಿಮಲೆಯ ಎಲ್ಯಣ್ಣ ಮಲೆಕುಡಿಯ ಮಾತ್ರ ಈ ಎಲ್ಲಾ ಬಿನ್ನಾಭಿಪ್ರಾಯ, ಪ್ರಾದೇಶಿಕ ಬಿನ್ನತೆಯನ್ನು ಪರಿಗಣಿಸದೆ ಸಂಘದ ಕಾರ್ಯಚಟುವಟಿಕೆ ಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಇವರಲ್ಲಿನ ಜಾಗೃತಿ ಮತ್ತು ಹಿಂಜರಿಕೆಯ ಕೊರತೆಯು ಇಲ್ಲಿ

ಕಂಡುಬರುತ್ತದೆ. ಅಲ್ಲದೆ ರಾಜಕೀಯ ಪ್ರಾತಿನಿಧ್ಯ ಪಕ್ಷದ ಬೆಂಬಲಿಸುವ ವಿಚಾರಗಳಲ್ಲಿನ ಬಿನ್ನಾಭಿಪ್ರಾಯವು ಸಹ ಇವರ ನಾಯಕತ್ವ ಮತ್ತು ಸಂಘಟನೆಗೆ ತೊಡಕಾಗಿದೆ. ಇದರ ಮಧ್ಯೆ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯ ನಿವಾಸಿಗಳನ್ನು ಒಕ್ಕಲೆಬ್ಬಿಸುವ ಪ್ರಯತ್ನ ಕುರಿತಂತೆ ಒಮ್ಮತದ ತೀರ್ಮಾನ ಮೂಡಿಬರದೆ ಇವರ ನಾಯಕತ್ವಕ್ಕೆ ತೊಂದರೆಯಾಗಿದೆ. ಅಲ್ಲದೆ ಕುತ್ಲೂರು ಪರಿಸರದ ನಕ್ಸಲ್ ಚಟುವಟಿಕೆಗಳ ನಂಟು ಇರುವುದರ ಬಗಗಿನ ಆರೋಪ, ಪ್ರಕರಣಗಳು ಇಲ್ಲಿನ ಮಲೆಕುಡಿಯ ಸಮುದಾಯದವರ ನಾಯಕತ್ವ ಮತ್ತು ಸಂಘಟನೆಗೆ ಒಂದು ದೊಡ್ಡ ಕಳಂಕ ಮತ್ತು ಸವಾಲಾಗಿದೆ. ಸುಲ್ಕೇರಿಯ ನಾಯಿದಗುರಿಯಲ್ಲಿನ ೬ ಕುಟುಂಬಗಳ ಒಕ್ಕಲೆಬ್ಬಿಸುವಿಕೆ ಪ್ರಕರಣದಲ್ಲಿ ಇಲ್ಲಿನ ಎರಡು ಪ್ರಮುಖ ರಾಜಕೀಯ ಪಕ್ಷಗಳ ಬಲಾಬಲ ಮತ್ತು ಈ ಸಮುದಾಯವನ್ನು ಓಲೈಸಿಕೊಳ್ಳುವ ಪ್ರಯತ್ನದ ಫಲವಾಗಿ ಇವರು ನಿರಾಶ್ರಿತರಾಗಿಯೇ ಉಳಿಯುವ ಸ್ಥಿತಿ ಬಂದಿದೆ. ವಿಠ್ಠಲ ಮಲೆಕುಡಿಯ ಪ್ರಕರಣವು ಈ ಸಮುದಾಯಕ್ಕೆ ಒಂದು ಆತಂಕಕಾರಿಯಾಗಿದೆ.

**೩. ಲ್ಯಾಂಪ್ಸ್**

ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ, ಬಂಟ್ವಾಳ ತಾಲೂಕುಗಳಲ್ಲಿ ಪರಿಶಿಷ್ಟ ಪಂಗಡಗಳ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ ನಿ(ಲ್ಯಾಂಪ್ಸ್)ಗಳು ಕಾರ್ಯ ನಿರ್ವಹಿಸುತ್ತವೆ. ದಕ್ಷಿಣಕನ್ನಡ ಜಿಲ್ಲೆಯ ಸುಳ್ಯ, ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದವರು ವಾಸ ಮಾಡುತ್ತಿದ್ದಾರೆ. ಸುಳ್ಯ ತಾಲೂಕಿನ ಲ್ಯಾಂಪ್ಸ್‌ಗೆ ದಿನಾಂಕ. ೬.೯.೨೦೦೮ರಂದು ಭೇಟಿ ನೀಡಿ ಅಧ್ಯಯನ ಮಾಡಲಾಗಿದೆ.

ಸುಳ್ಯದ ಲಾಂಪ್ಸ್‌ನ ಅಧ್ಯಕ್ಷರಾಗಿ ಜಿ. ದೇವಪ್ಪ ನ್ಯಾಕ್, ಉಪಾಧ್ಯಕ್ಷರಾಗಿ ಎಸ್. ಅಣ್ಣು ನ್ಯಾಕ್‌ರವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಘಕ್ಕೆ ಮಂಗಳೂರು ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ ಎಫ್.ಎ.ಎಸ್.ಸಿ.ಆರ್. ೯೭ ಕಿ.ಕಾ.ಉ. ೨೦೦೮-೦೯, ದಿನಾಂಕ. ೫.೯.೨೦೦೮ರ ಪ್ರಕಾರ ಸುಳ್ಯ, ಸುಬ್ರಹ್ಮಣ್ಯ, ಪಂಜ ಮತ್ತು ಪುತ್ತೂರು ಅರಣ್ಯ ವಲಯಗಳಲ್ಲಿ ಸುಳ್ಯ ತಾಲೂಕಿನ ವ್ಯಾಪ್ತಿಗೆ ಒಳಪಡುವ ಮೀಸಲು ಅರಣ್ಯಗಳು ಸರ್ವದ ಬ್ಲಾಕ್‌ಗಳು ಹಾಗೂ ಸರ್ಕಾರಿ ಅಧೀನ ಸಂಸ್ಥೆಗಳಿಂದ ೨೦೦೮-೦೯ನೇ ಸಾಲಿನ ೩೦.೦೬.೨೦೦೯ರ ತನಕ ಕಿರುಕಾಡು ಉತ್ಪತ್ತಿಯನ್ನು ಸಂರಕ್ಷಿಸಲು ಆದೇಶ ನೀಡಿರುತ್ತಾರೆ. ಅದರಂತೆ ಈ ಕಿರುಕಾಡು ಉತ್ಪತ್ತಿಯನ್ನು ಸಂಗ್ರಹಿಸಲು ಸದಸ್ಯರನ್ನು ನೇಮಕ ಮಾಡಲು ಸಂಘದ ಸದಸ್ಯರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಇದರಲ್ಲಿ ಆಸಕ್ತಿ ಇರುವ ಸದಸ್ಯರುಗಳು ತಮ್ಮ ಮೂರು ಭಾವಚಿತ್ರಗಳೊಂದಿಗೆ ಅರ್ಜಿಯನ್ನು ದಿನಾಂಕ. ೦೪.೧೦.೨೦೦೮ ರಂದು ಸಂಜೆ ೫ ಗಂಟೆಯ ಒಳಗಾಗಿ ಸಲ್ಲಿಸಲು ಅರ್ಜಿಗಳನ್ನು ಆಹ್ವಾನಿಸಿ ಮುಂದಿನ ಕ್ರಮ ಕೈಗೊಂಡಿದ್ದಾರೆ.

## ಕೋಷ್ಟಕ ೩.೯(೧)

## ಸುಳ್ಯ ಲ್ಯಾಂಪ್ಸ್‌ನಿಂದ ಸಾಲ ಸೌಲಭ್ಯವನ್ನು ಪಡೆದ ಮಲೆಕುಡಿಯ ಸಮುದಾಯದ ಫಲಾನುಭವಿಗಳ ವಿವರ.

| ಕ್ರ.ಸಂ. | ವರ್ಷ | ಫಲಾನುಭವಿ ಹೆಸರು | ಗ್ರಾಮ | ಸಾಲದ ಉದ್ದೇಶ | ಸಾಲದ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| ೧ | ೨೦೦೩-೦೪ | ಪರಮೇಶ್ವರಮಲೆ | ಬಾಳಗೋಡು | ಕೃಷಿ ಅಭಿವೃದ್ಧಿ | ೧೦,೦೦೦ |
| ೨ | ೨೦೦೩-೦೪ | ಶಿವಪ್ಪಮಲೆ | ಅರಂತೋಡು | ಕೃಷಿ ಅಭಿವೃದ್ಧಿ | ೧೫,೦೦೦ |
| ೩ | ೨೦೦೩-೦೪ | ದೇವಮ್ಮ ನೆಲ್ಲೂರು | ಕೆಮ್ರಾಜೆ | ಕೃಷಿ ಅಭಿವೃದ್ಧಿ | ೧೫,೦೦೦ |
| ೪ | ೨೦೦೩-೦೪ | ಅಮ್ರಾಜೆ | ದೇವಲಗ್ರಾಮ | ಕೃಷಿ ಅಭಿವೃದ್ಧಿ | ೧೫,೦೦೦ |
| ೫ | ೨೦೦೪-೦೫ | ರಾಮ ಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೨೦,೦೦೦ |
| ೬ | ೨೦೦೪-೦೫ | ಅಣ್ಣಪ್ಪ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೫,೦೦೦ |
| ೭ | ೨೦೦೪-೦೫ | ಮಲೆಕರಿಯಪ್ಪ | ಅರಂತೋಡು | ಕೃಷಿ ಅಭಿವೃದ್ಧಿ | ೧೫,೦೦೦ |
| ೮ | ೨೦೦೫-೦೬ | ಅಂಗಾರಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೨೫,೦೦೦ |
| ೯ | ೨೦೦೫-೦೬ | ಸುಬ್ಬಪ್ಪ ಮಲೆ | ಸುಬ್ರಮಣ್ಯ | ಗುಡಿ ಕೈಗಾರಿಕೆ | ೫೦೦೦ |
| ೧೦ | ೨೦೦೫-೦೬ | ದೇಜಪ್ಪಮಲೆ | ಕೋಡಿ ಕಜೆ ಸುಬ್ರಮಣ್ಯ | ಸ್ವ ಉದ್ಯೋಗ | ೬೦೦೦ |
| ೧೧ | ೨೦೦೬-೦೭ | ಅಮ್ಮಣ್ಣಿ | ದೇವಚ್ಚಲ | ಕೃಷಿ ಅಭಿವೃದ್ಧಿ | ೨೫,೦೦೦ |
| ೧೨ | ೨೦೦೬-೦೭ | ಕೇಶವ ಮಲೆ | ಅರಂತೋಡು | ಕೃಷಿ ಅಭಿವೃದ್ಧಿ | ೫೦,೦೦೦ |
| ೧೩ | ೨೦೦೭-೦೮ | ಅಮ್ಮು ಮಲೆ | ದೇರ್ಕಜೆ ಕನಕಮಜಲು | ಕೃಷಿ ಅಭಿವೃದ್ಧಿ | ೨೦,೦೦೦ |
| ೧೪ | ೨೦೦೭-೦೮ | ರಾಮ ಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೫೦,೦೦೦ |
| ೧೫ | ೨೦೦೮-೦೯ | ಪರಮೇಶ್ವರ ಮಲೆ | ಬಾಳಗೋಡು | ಕೃಷಿ ಅಭಿವೃದ್ಧಿ | ೨೫,೦೦೦ |
| ೧೬ | ೨೦೦೯-೧೦ | ಕಮಲಾಕ್ಷ | ಕೊಲ್ಲಮೊಗರು | ಸ್ವ ಉದ್ಯೋಗ | ೧೨,೦೦೦ |

## ಕೋಷ್ಟಕ ೩.೯(೨)

## ಸುಳ್ಯ ಲ್ಯಾಂಪ್ಸ್‌ನಿಂದ ಸಾಲ ಮನ್ನಾ ಆದ ಫಲಾನುಭವಿಗಳ ವಿವರ.

| ಕ್ರ.ಸಂ. | ವರ್ಷ | ಫಲಾನುಭವಿ ಹೆಸರು | ಗ್ರಾಮ | ಸಾಲದ ಉದ್ದೇಶ | ಸಾಲದ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| ೧ | ೨೦೦೪-೦೫ | ಕೃಷ್ಣಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೫೦೬೦ |
| ೨ | ೨೦೦೪-೦೫ | ಭಾಸ್ಕರ್ | ಅರಂತೋಡು | ಕೃಷಿ ಅಭಿವೃದ್ಧಿ | ೯೮೦ |
| ೩ | ೨೦೦೪-೦೫ | ಸೋಮಪ್ಪಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೩೦೬೭ |
| ೪ | ೨೦೦೫-೦೬ | ಸಂಕೇಶ | ಮುಡ್ನೂರುಗ್ರಾಮ | ಕೃಷಿ ಅಭಿವೃದ್ಧಿ | ೩೦೦೦ |
| ೫ | ೨೦೦೫-೦೬ | ಕೆ.ಎನ್.ಸುಬ್ರಮಣ್ಯ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೫೨೮೭ |
| ೬ | ೨೦೦೫-೦೬ | ಬಾಬುಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೬೩೦೬ |
| ೭ | ೨೦೦೫-೦೬ | ಬಾಲಕೃಷ್ಣಮಲೆ | ಹರಿಹರಬಾಳಗೋಡು | ಕೃಷಿ ಅಭಿವೃದ್ಧಿ | ೩೭೫೮ |
| ೮ | ೨೦೦೫-೦೬ | ವೆಂಕಪ್ಪಮಲೆ | ಹರಿಹರಬಾಳಗೋಡು | ಕೃಷಿ ಅಭಿವೃದ್ಧಿ | ೯೨೪೮ |
| ೯ | ೨೦೦೫-೦೬ | ಐತ್ತಪ್ಪಮಲೆ | ಸುಬ್ರಮಣ್ಯ | ಕೃಷಿಅಭಿವೃದ್ಧಿ | ೨೦೯೩ |
| ೧೦ | ೨೦೦೬-೦೭ | ಕೆ.ನಾಗೇಶಮಲೆ | ಸುಬ್ರಮಣ್ಯ | ಕೃಷಿಅಭಿವೃದ್ಧಿ | ೬೭೫೬ |
| ೧೧ | ೨೦೦೬-೦೭ | ವೇದಮಲೆ | ಸುಬ್ರಮಣ್ಯ | ಕೃಷಿ ಅಭಿವೃದ್ಧಿ | ೮೦೦೦ |

## ಟಿಪ್ಪಣಿಗಳು

೧. ಕಾರಂತ ಎಸ್, **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೧, ೧೯೫೧.

೨. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು.೫೬, ೧೯೯೧.

೩. ಅದೇ ಪು.೫೦, ೧೯೯೧.

೪. ಕಪಿಲ್ ಮೋಹನ್(ಸಂ)., **ಪೊಲಿ ಕೆನರಾ ೨೦೦,** ವೀರೇಂದ್ರ ಹೆಗ್ಗಡೆ, 'ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು', ಜಿಲ್ಲಾಡಳಿತ ಮಂಗಳೂರು, ಪು. ೩೦೦, ೨೦೦೦.

೫. ಅದೇ ಪು. ೩೦೦, ೨೦೦೦.

೬. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು.೫೩, ೧೯೯೧.

೭. ಪ್ರಭಾಕರ ಎ.ಎಸ್(ಸಂ)., **ಆದಿವಾಸಿ ಆಖ್ಯಾನ,** ಗಂಗಾಧರ ದೈವಜ್ಞ, 'ಆದಿವಾಸಿಗಳ ವೈದ್ಯಪದ್ಧತಿ', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪು. ೨೧೨, ೨೦೦೬.

೮. ಅದೇ ಪು. ೨೧೨, ೨೦೦೬.

೮. ಅದೇ ಪು. ೨೧೨, ೨೦೦೬.

೧೦. ಅದೇ ಪು. ೩೧೩, ೨೦೦೬.

೧೧. ವಿವೇಕ ರೈ ಬಿ.ಎ ಮತ್ತು ಯದುಪತಿಗೌಡ ಡಿ(ಸಂ), **ಮಲೆಕುಡಿಯ,** ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ಪು. ೧೩೭, ೧೯೯೬.

೧೨. ಮಂಗಳ ಶ್ರೀಧರ್, **ಬುಡಕಟ್ಟು ವೈಧ್ಯ ಸಂಸ್ಕೃತಿ,** ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು, ಪು.೨೫೮, ೨೦೦೮.

೧೩. ರಾಧಾಕೃಷ್ಣ ಭಡ್ತಿ, 'ನೀರುನೆರಳು' ಲೇಖನ, *ವಿಜಯ ಕರ್ನಾಟಕ,* ಪು. ೬, ದಿನಾಂಕ. ೨೪.೭.೨೦೦೯.

೧೪. ಬೋರಲಿಂಗಯ್ಯ ಹಿ.ಚಿ, **ಗಿರಿಜನ ನಾಡಿಗೆ ಪಯಣ,** 'ಚಾರ್ಮಡಿಯ ಪಾತಾಳ ಲೋಕ', ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ಪು.೫೭, ೧೯೯೧.

೧೫. ಕಾರಂತ ಎಸ್. **ಕುಡಿಯರ ಕೂಸು,** ಹರ್ಷ ಮುದ್ರಣಾಲಯ, ಪುತ್ತೂರು, ಪು.೨, ೧೯೫೧.

೧೬. ಅದೇ ಪು.೩, ೧೯೫೧.

೧೭. ಅದೇ ಪು. ೨೪೭, ೧೯೫೧.

೧೮. ಲಾರೆನ್ಸ್ ಡಿಸೋಜ ಎಸ್.ಜೆ, **Make MALEKUDIYAS,** A primitive Tribe OF South India, UNESCO, CO-ACTION LEARNING CENTRE, MANGALORE-೧೯೯೩-೯೪.

# ಅಧ್ಯಾಯ ನಾಲ್ಕು

# ಸರ್ಕಾರದ ಅಭಿವೃದ್ಧಿ ಯೋಜನೆಗಳು ಮತ್ತು ಮಲೆಕುಡಿಯರ ಹೋರಾಟ

೪.೧. ಆರ್ಥಿಕತೆಗೆ ಸಂಬಂದಿಸಿದ ಹೋರಾಟಗಳು

೧. ನೆರಿಯಾದ ಭೂ ಹೋರಾಟ

೨. ಕುದುರೆಮುಖ ರಾಷ್ಟ್ರೀಯ ಉಧ್ಯಾನವನ ಪುನರ್ವಸತಿ ಯೋಜನೆ ಹೋರಾಟ

೩. ಅರಣ್ಯವಾಸಿಗಳ ಸ್ಥಳಾಂತರ ಹೋರಾಟ

೪. ಪುನರ್ವಸತಿ ಫಲಾನುಭವಿಗಳ-ನಿರಾಶ್ರಿತರ ಹೋರಾಟ

೬. ಪಾರಂಪಾರಿಕ ಅರಣ್ಯಹಕ್ಕು ಕಾಯಿದೆಗೆ ಸಂಬಂಧಿಸಿದ ಹೋರಾಟ

೭. ಗುಂಡ್ಯ ಜಲವಿದ್ಯುತ್ ಯೋಜನೆ ಹೋರಾಟ

೪.೨. ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಹೋರಾಟಗಳು

೪.೩. ಸಾಮಾಜಿಕ ಹೋರಾಟಗಳು

೧. ಸುಬ್ರಹ್ಮಣ್ಯದ ಮಡೆಸ್ನಾನ

# ಸರ್ಕಾರದ ಅಭಿವೃದ್ಧಿ ಯೋಜನೆಗಳು ಮತ್ತು ಮಲೆಕುಡಿಯರ ಹೋರಾಟ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯರ ಸಮುದಾಯದ ಅಭಿವೃದ್ದಿಗಾಗಿ ಸರ್ಕಾರ ಹಲವಾರು ಯೋಜನೆಗಳನ್ನು ಜಾರಿಗೆ ತಂದಿದೆ ಅದರಲ್ಲಿ ಪ್ರಾದೇಶಿಕ ಅಭಿವೃದ್ದಿ ಯೋಜನೆಗಳು, ರಸ್ತೆ ಸಂಪರ್ಕ ಅಭಿವೃದ್ದಿ, ಶಿಕ್ಷಣ ವಸತಿ, ಮೂಲಭೂತ ಸೌಕರ್ಯಗಳು, ಉದ್ಯೋಗ, ಭೂ ಒಡೆತನ, ಕೃಷಿ ಅಭಿವೃದ್ದಿ, ಕುದುರೆಮುಖ ರಾಷ್ಟೀಯ ಉದ್ಯಾನವನ ಪುನರ್ವಸತಿ ನೀತಿ, ಗುಂಡ್ಯ ಯೋಜನೆ, ಮುಂತಾದ ಯೋಜನೆಗಳನ್ನು ಸರ್ಕಾರ ಜಾರಿಗೆ ತಂದಿದೆ. ಸರ್ಕಾರದ ಅಭಿವೃದ್ಧಿ ಯೋಜನೆಗಳು ಮತ್ತು ಮಲೆಕುಡಿಯ ಹೋರಾಟವು ಪರಸ್ಪರ ಅವಲಂಬಿತವಾಗಿವೆ. ಅಭಿವೃದ್ಧಿ ಯೋಜನೆಯ ಹಿಂದೆಯೇ ಹೋರಾಟ ರೂಪುಗೊಳ್ಳುತ್ತದೆ. ಇದು ಭಾರತದ ಬಹುತೇಕ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬರುವ ವಾಸ್ತವತೆಯಾಗಿದೆ. ಬುಡಕಟ್ಟು ಸಮುದಾಯಗಳ ಹೋರಾಟ ಆರಂಭವಾದದ್ದೇ ಸರ್ಕಾರದ ಅಭಿವೃದ್ಧಿ ಯೋಜನೆಗಳಿಂದ. ಇದಕ್ಕೆ ಸಂಬಂಧಿಸಿದಂತೆ ಜಾರಿಗೆ ಬಂದ ನೀತಿಗಳು ಅರಣ್ಯವಾಸಿಯಾದ ಮಲೆಕುಡಿಯ ಬುಡಕಟ್ಟು ಸಮುದಾಯದ ಮೇಲೆ ಪ್ರಭಾವ ಬೀರಿವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನ, ಯೋಜನೆಯ ಅನುಷ್ಠಾನದ ಫಲವಾಗಿ ಈ ಪ್ರದೇಶದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯರನ್ನು ಇಲ್ಲಿಂದ ಒಕ್ಕಲೆಬ್ಬಿಸುವ ಪ್ರಯತ್ನಗಳು ಸರ್ಕಾರದಿಂದ ನಡೆದಾಗಲೆಲ್ಲ ಅದನ್ನು ವಿರೋಧಿಸುವಲ್ಲಿ ಆರಂಭವಾದ ಸಂಘಟನೆ ಮತ್ತು ಹೋರಾಟವು ಈ ಪ್ರದೇಶದಲ್ಲಿ ನಕ್ಸಲ್ ಚಳುವಳಿಯ ಬೆಳವಣಿಗೆಗೆ ಕಾರಣವಾಗಿದೆ. ಈ ಪ್ರದೇಶಗಳು ಇಂದು ನಕ್ಸಲ್ ಪ್ರಭಾವಿತ ಪ್ರದೇಶಗಳಂದೇ ಹಣೆಪಟ್ಟಿ ಕಟ್ಟಿಕೊಳ್ಳಬೇಕಾದ ದುಸ್ಥಿತಿ ಈ ಸಮುದಾಯಕ್ಕೆ ಒದಗಿದೆ. ಅಷ್ಟೇ ಮಾತ್ರವಲ್ಲ ಈ ಪ್ರದೇಶದ ಅಭಿವೃದ್ಧಿಗೆ ಸರ್ಕಾರ ಈಗಾಗಲೇ ನಕ್ಸಲ್ ಪ್ಯಾಕೇಜ್‌ನ್ನು ಘೋಷಿಸಿದೆ. ನಾರಾವಿ, ಕುತ್ಲೂರು, ಎಳನೀರು, ಇಂದಬೆಟ್ಟು, ಸವಣಾಲು, ಸಿರ್ಲಾಲು, ಸುಲ್ಕೇರಿ, ನಾಯ್ದುಗುರಿ ಮತ್ತು ಇತ್ತೀಚೆಗೆ ಶಿಶಿಲ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳಿಲ್ಲದೆ ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಈ ಪ್ರದೇಶಗಳ ಅಭಿವೃದ್ಧಿಗಾಗಿ ಸರ್ಕಾರ ಅಭಿವೃದ್ಧಿ ಪ್ಯಾಕೇಜ್‌ನ್ನು ಘೋಷಿಸಿದ್ದರೂ, ಇದರ ಅನುಷ್ಠಾನಕ್ಕೆ ನೂರಾರು ತೊಡಕುಗಳಿವೆ. ಅರಣ್ಯ ಕಾಯ್ದೆಯಿಂದಾಗಿ ಇಲ್ಲಿ

ರಸ್ತೆ, ವಿದ್ಯುತ್ ಸೌಲಭ್ಯಕ್ಕೆ ಅವಕಾಶವಾಗುತ್ತಿಲ್ಲ. ಈ ಪ್ರದೇಶಗಳಲ್ಲಿ ಅಳವಡಿಸಿರುವ ಸೋಲಾರ್ ದೀಪಗಳು ಕೆಟ್ಟುಹೋದರೆ ಅದರ ದುರಸ್ತಿಗೆ ಪ್ರಯತ್ನಗಳಾಗುತ್ತಿಲ್ಲ ಎಂದು ಈ ಸಮುದಾಯದ ಹೋರಾಟದ ಮುಂಚೂಣಿಯಲ್ಲಿರುವ ವಸಂತಿ ಕುತ್ತೂರುರವರು ದೂರುತ್ತಾರೆ. ಪುನರ್‌ವಸತಿ ಪ್ಯಾಕೇಜ್ ಅಡಿಯಲ್ಲಿ ತಲಾ ಹತ್ತು ಲಕ್ಷ ರೂಪಾಯಿಗಳನ್ನು ಪರಿಹಾರವನ್ನು ಪಡೆದು ಕಾಡಿನಿಂದ ಹೊರಬರುವ ಕುಟುಂಬಗಳಿಗೆ ಮನೆರಸೀದಿ ಆಧಾರದ ಮೇಲೆ ಮೌಲ್ಯವನ್ನು ನಿಗಧಿಪಡಿಸಿ ಪರಿಹಾರವನ್ನು ನೀಡಬೇಕು. ಹೊರಬಂದ ಕುಟುಂಬಗಳಿಗೆ ನೌಕರಿಯನ್ನು ಕೊಡಬೇಕು. ತಲಾ ಎರಡು ಎಕರೆ ಭೂಮಿಯನ್ನು ಪರ್ಯಾಯವಾಗಿ ಕೊಡಬೇಕು. ಕುಟುಂಬದ ಇಬ್ಬರಿಗೆ ಗೌರವ ಧನ ನೀಡಬೇಕು ಎಂಬ ಬೇಡಿಕೆಗಳನ್ನು ವಸಂತಿ ಪುತ್ತೂರುರವರು ಸರ್ಕಾರದ ಮುಂದಿಟ್ಟಿದ್ದಾರೆ. ಈ ಪ್ರದೇಶದ ಆರೋಗ್ಯ ಸೇವೆಗಾಗಿ ಸಂಚಾರಿ ಆಸ್ಪತ್ರೆ ಸೌಲಭ್ಯವನ್ನು ನೀಡಲಾಗಿದೆ. ಇದು ಅಲ್ಲದೆ ಈ ಪ್ರದೇಶದ ಜನರಿಗೆ ಉದ್ಯೋಗ ಪತ್ರ, ಭಾಗ್ಯಲಕ್ಷ್ಮಿ ಬಾಂಡ್, ತೋಟಗಾರಿಕೆ ಇಲಾಖೆಯಿಂದ ಸಸಿ ವಿತರಣೆ, ಕೈಮಗ್ಗ ಮತ್ತು ಜವಳಿ ಇಲಾಖೆಯಿಂದ ಸಹಾಯಧನ ವಿತರಣೆ, ಯೋಜನೆಗಳು ಈ ಪ್ರದೇಶದಲ್ಲಿ ಈಗಾಗಲೇ ಅನುಷ್ಠಾನಗೊಳಿಸಲಾಗಿದೆ. ವಕ್ಕಲೆಬ್ಬಿಸುವಿಕೆ, ನಾಯ್ದುಗುರಿ ಪ್ರಕರಣ ಮತ್ತು ವಿಠ್ಠಲಮಲೆಕುಡಿಯ ಪ್ರಕರಣಗಳು, ಸುಬ್ರಹ್ಮಣ್ಯದ ಮಡೆಸ್ನಾನದ ನಿಷೇಧ ಕುರಿತು ವಾದವಿವಾಧಗಳು ಈ ಸಮುದಾಯದ ವರ್ತಮಾನದ ಸವಾಲುಗಳಾಗಿವೆ.

**ಸರ್ಕಾರದ ವಿವಿಧ ಗಿರಿಜನ ಅಭಿವೃದ್ಧಿ ಯೋಜನೆಗಳು**

'ಸ್ವಾತಂತ್ರ್ಯ ನಂತರ, ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರ್ಕಾರ ನೇಮಿಸಿದೆ. ಆದಿವಾಸಿಗಳ ಅಭಿವೃದ್ಧಿಗಾಗಿ ಪಂಚಶೀಲ ತತ್ವಗಳನ್ನು ನೆಹರೂ ರೂಪಿಸಿದರು. ಅಲ್ಲದೆ ಆದಿವಾಸಿಗಳ ಕಾಡಿನ ಮುಗ್ಧ ಪರಿಸರವನ್ನು ಹೊರಗಿನ ಜನ ಯಾವ ಕಾರಣಕ್ಕೂ ಕದಡಬಾರದೆಂದು ನೆಹರು ಪದೇ ಪದೇ ತಮ್ಮ ಭಾಷಣಗಳ ಮೂಲಕ ಕರೆ ನೀಡುತ್ತಿದ್ದರು. ಆದಿವಾಸಿಗಳು ಕಾಡಲ್ಲಿಯೇ ಇದ್ದು, ಅವರಷ್ಟಕ್ಕೇ ಅವರು ಅಭಿವೃದ್ಧಿಯ ಕಡೆಗೆ ನಡೆದು ಹೋಗಬೇಕೆಂದು ನೆಹರು ಬಯಸುತ್ತಿದ್ದರು'.[೧] ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಜಾರಿಗೊಳಿಸುತ್ತಾ ಬಂದಿದೆ. ಅಂತೆಯೇ ಕರ್ನಾಟಕ ರಾಜ್ಯ ಸರ್ಕಾರ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ನಿಯಮಿತ ವತಿಯಿಂದ ಈ ಸಮುದಾಯದ ಕಲ್ಯಾಣಕ್ಕಾಗಿ ಹಲವಾರು ಯೋಜನೆಗಳನ್ನು ಜಾರಿಗೊಳಿಸಿದೆ. ಈ ಯೋಜನೆಗಳು ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಸುಧಾರಣೆಗೆ ಸಹಾಯಕವಾಗಿವೆ. ಅವುಗಳಲ್ಲಿ ಪ್ರಮುಖ ಯೋಜನೆಗಳೆಂದರೆ:

**೧. ಉದ್ಯಮ ಶೀಲತಾ ಅಭಿವೃದ್ಧಿ(ಐ.ಎಸ್.ಬಿ) ಯೋಜನೆ**

ಈ ಯೋಜನೆಯಡಿ ಯಾವುದೇ ಸಣ್ಣ ಕೈಗಾರಿಕೆ ಪ್ರಾರಂಭಿಸಲು ಮತ್ತು ಸರಕು ಸಾಗಾಣಿಕೆ/ ಪ್ರಯಾಣಿಕ ವಾಹನ, ಟ್ರ್ಯಾಕ್ಟರ್ ಇತ್ಯಾದಿ ವಾಹನಗಳನ್ನು ಖರೀದಿಸಲು ಹಾಗೂ ಕಿನಿಕಲ್ ಲ್ಯಾಬೋರೇಟರಿ, ಡಿ.ಟಿ.ಪಿ. ಸೆಂಟರ್, ಬ್ರೌಸಿಂಗ್ ಸೆಂಟರ್ ಇತ್ಯಾದಿ ಸೇವಾ ಘಟಕಗಳನ್ನು ತೆರೆಯಲು ಸಾಲ ಸೌಲಭ್ಯ ಒದಗಿಸಲಾಗುವುದು. ಯೋಜನಾವೆಚ್ಚ ರೂ.೧.೦೦ ಲಕ್ಷದಿಂದ ರೂ.೧೦.೦೦ ಲಕ್ಷದವರೆಗಿದ್ದು, ಘಟಕದ

ವೆಚ್ಚದ ಶೇ.೨೦ ಭಾಗ ನಿಗಮದ ಅಂಚಿನ ಹಣವಾಗಿದ್ದು(ಗರಿಷ್ಟ ರೂ.೧.೦೦) ಶೇ.೭೫ ಭಾಗ ಬ್ಯಾಂಕ್ ಸಾಲ ಮತ್ತು ಉಳಿದ ಶೇ.೫ ಭಾಗವನ್ನು ಫಲಾನುಭವಿ ಭರಿಸಬೇಕಾಗಿರುತ್ತದೆ. ರೂ.೫೦೦೦೦/-ದಿಂದ ರೂ.೧.೦೦ ಲಕ್ಷದೊಳಗೆ ಬರುವ ಯೋಜನಾ ವೆಚ್ಚಕ್ಕೆ ಸಹಾಯಧನ ಗರಿಷ್ಟ ರೂ.೧೦೦೦೦/- ಪಡೆಯಲು ಅರ್ಹತೆ ಇರುತ್ತದೆ.

**೨. ಮೈಕ್ರೋ ಕ್ರೆಡಿಟ್(ಕಿರುಸಾಲ) ಯೋಜನೆ(ರಾಜ್ಯ ಸರ್ಕಾರ)**

ಈ ಯೋಜನೆಯಡಿ ಗ್ರಾಮೀಣ ಮತ್ತು ನಗರ ಪ್ರದೇಶಗಳಿಗೆ ಸೇರಿದ ಪರಿಶಿಷ್ಟ ಪಂಗಡದ ಕುಶಲಿ ಅಥವಾ ಕುಶಲಿ ಅಲ್ಲದ ವ್ಯಕ್ತಿಗಳಿಗೆ ಸಣ್ಣ ಪ್ರಮಾಣದ ವ್ಯಾಪಾರ ಚಟುವಟಿಕೆಗಳನ್ನ ಕೈಗೊಳ್ಳಲು ಧನ ಸಹಾಯ ನೀಡುವುದಾಗಿರುತ್ತದೆ. ೨೦೧೦-೧೧ನೇ ಸಾಲಿಗೆ ಸದರಿ ಯೋಜನೆಗೆ ರೂ.೫೦.೦೦ ಲಕ್ಷ ಸಹಾಯಧನ ಮತ್ತು ರೂ.೫೦.೦೦ ಲಕ್ಷ ಅಂಚಿನ ಹಣವನ್ನು ನಿಗದಿಪಡಿಸಲಾಗಿದೆ. ಸದರಿ ಅನುದಾನವನ್ನು ಪ್ರತಿಯೊಂದು ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಗಳ ಜನಸಂಖ್ಯೆ ಆಧರಿಸಿ ೨೦೦೦ ಜನರಿಗೆ ನೆರವು ಕಲ್ಪಿಸಲು ಗುರಿ ನಿಗದಿಪಡಿಸಲಾಗಿದೆ. ಪ್ರತಿ ಅರ್ಜಿದಾರರಿಗೆ ರೂ. ೫೦೦೦ಗಳ ಗರಿಷ್ಟ ಮೊತ್ತವನ್ನು ಪ್ರಸ್ತಾಪಿತ ಚಟುವಟಿಕೆಗಳಿಗೆ ಮಂಜೂರು ಮಾಡಲಾಗುತ್ತದೆ. ಇದರಲ್ಲಿ ರೂ.೨೫೦೦/- ಸಹಾಯಧನ ಮತ್ತು ರೂ.೨೫೦೦/-ಗಳ ಅಂಚಿನ ಹಣ ಸಾಲವಾಗಿದ್ದು, ನಿಗಮದಿಂದ ನೇರವಾಗಿ ಮಂಜೂರು ಮಾಡಲಾಗುತ್ತದೆ.

**೩. ನೇರ ಸಾಲ ಯೋಜನೆ**

ಈ ಯೋಜನೆಯಲ್ಲಿ ನಿಗದಿಪಡಿಸಿದ ಘಟಕದ ವೆಚ್ಚವು ರೂ.೩೫೦೦೦/- ದಿಂದ ರೂ.೧೦.೦೦ ಲಕ್ಷಗಳವರೆಗಿದ್ದು, ಅವಧಿ ಸಾಲವನ್ನು ರಾಷ್ಟ್ರೀಯ ಪರಿಶಿಷ್ಟ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ(NSTFDC) ಪಡೆದು ಸಾಲ ಸೌಲಭ್ಯ ಕಲ್ಪಿಸಲಾಗುವುದು. ಯಾವ ಯಾವ ಉದ್ದೇಶಗಳಿಗೆ ನೇರಸಾಲ ಮಂಜೂರು ಮಾಡಲಾಗುವುದು ಎಂಬ ಬಗ್ಗೆ ಸರ್ಕಾರದ ಗ್ಯಾರೆಂಟಿ ದೊರೆತ ನಂತರ ತಿಳಿಸಲಾಗುವುದು. ಈ ಯೋಜನೆಯಡಿ ಸೌಲಭ್ಯ ಪಡೆದ ಫಲಾನುಭವಿಗಳು ಸರಿಯಾದ ಸಮಯದಲ್ಲಿ ಮರುಪಾವತಿ ಮಾಡದಿದ್ದಲ್ಲಿ ರಾಷ್ಟ್ರೀಯ ಪರಿಶಿಷ್ಟ ಪಂಗಡಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮವು ಮುಂದಿನ ಕಂತನ್ನು ಬಿಡುಗಡೆ ಮಾಡುವುದಿಲ್ಲ. ಆದುದರಿಂದ ಸಾಲದ ಕಂತುಗಳನ್ನು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಲು ಫಲಾನುಭವಿಗಳಿಗೆ ತಿಳುವಳಿಕೆ ನೀಡಿ ಸಾಲವನ್ನು ವಸೂಲಿ ಮಾಡಬೇಕು.

**೪. ಭೂ ಒಡೆತನ ಯೋಜನೆ**

ಪರಿಶಿಷ್ಟ ವರ್ಗದ ಭೂ ರಹಿತ ಕೃಷಿ ಕಾರ್ಮಿಕರಿಗೆ ಎರಡು ಎಕರೆ ಖುಷ್ಕಿ ಅಥವಾ ಒಂದು ಎಕರೆ ತರಿ ಜಮೀನು ಖರೀದಿಸಲು ಸಹಾಯ ಧನ ಮತ್ತು ಸಾಲ ಸೌಲಭ್ಯ ಒದಗಿಸಲಾಗುವುದು. ಭೂ ಒಡೆತನ ಯೋಜನೆಯಡಿ ಖರೀದಿಸುವ ಜಮೀನಗೆ ಆಯಾ ಗ್ರಾಮಗಳಲ್ಲಿ ಜಮೀನು ನೋಂದಣಿಯಾಗಿರುವ ದಸ್ತಾವೇಜುಗಳ ನೋಂದಾಯಿತ ಬೆಲೆಯನ್ನು ಆಧಾರವಾಗಿಟ್ಟುಕೊಂಡು ನೋಂದಾಯಿತ ಬೆಲೆಯ ಎರಡು ಪಟ್ಟುವರೆಗೂ(ಗರಿಷ್ಟ ಮಿತಿ ರೂ. ೨.೫ ಲಕ್ಷ) ಬೆಲೆ ನಗದಿಪಡಿಸಲು ಸರ್ಕಾರ ಆದೇಶ ಸಂಖ್ಯೆ:

ಸಕಇ ೮೦ ಎಸ್.ಡಿ.ಸಿ.೨೦೦೭ ದಿನಾಂಕ. ೨೫.೮.೨೦೦೯ರಲ್ಲಿ ಆದೇಶಿಸಿದೆ. ಇದರಲ್ಲಿ ಶೇ.೫೦ ಭಾಗ ಸಹಾಯಧನ ಮತ್ತು ಶೇ.೫೦ ಭಾಗ ಅವಧಿ ಸಾಲವಾಗಿರುತ್ತದೆ. ಅವಧಿ ಸಾಲಕ್ಕೆ ಶೇ.೬ ವಾರ್ಷಿಕ ಬಡ್ಡಿ ವಿಧಿಸಲಾಗುವುದು. ಅವಧಿ ಸಾಲವನ್ನು ರಾಷ್ಟ್ರೀಯ ಪರಿಶಿಷ್ಟ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ ಪಡೆಯಲಾಗುವುದು. ಯೋಜನೆಯ ಯಶಸ್ವಿ ಅನುಷ್ಠಾನ ಮರುಪಾವತಿಯನ್ನು ಅವಲಂಬಿಸಿದೆ.

ಪ್ರಸಕ್ತ ಸಾಲಿನಲ್ಲಿ ಈ ಯೋಜನೆಗಾಗಿ ಪರಿಶಿಷ್ಟ ವರ್ಗಕ್ಕೆ ರೂ.೧.೦೦ ಕೋಟಿ ಸಹಾಯಧನ ಹಣವನ್ನು ಸರ್ಕಾರವು ನಿಗದಿಪಡಿಸಿದ್ದು, ಅವಧಿ ಸಾಲವನ್ನು ರಾಷ್ಟ್ರೀಯ ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ ಪಡೆಯಲಾಗುವುದು. ಜಿಲ್ಲಾವಾರು ಜನಸಂಖ್ಯಾ ಆಧಾರದ ಮೇಲೆ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ನಿಗದಿಪಡಿಸಲಾಗಿದೆ.

**೫. ಗಂಗಾ ಕಲ್ಯಾಣ ಯೋಜನೆ**

ಗಂಗಾ ಕಲ್ಯಾಣ ಯೋಜನೆಯಡಿ ೨೦೧೦-೧೧ ನೇ ಸಾಲಿನ ಆಯವ್ಯಯದಲ್ಲಿ ಪರಿಶಿಷ್ಟ ಪಂಗಡಕ್ಕೆ ರೂ. ೩೧೦೦.೦೦ ಲಕ್ಷಗಳನ್ನು ಸರ್ಕಾರವು ನಿಗದಿಪಡಿಸಿದೆ. ಅದರಲ್ಲಿ ೩೦೦.೦೦ ಲಕ್ಷಗಳನ್ನು ಗಂಗಾ ಕಲ್ಯಾಣ ಯೋಜನೆಯಡಿ ಸಾಮೂಹಿಕ ಏತ ನೀರಾವರಿ ಘಟಕಗಳಿಗೆ ಹಾಗೂ ರೂ.೨೮೦೦.೦೦ ಲಕ್ಷಗಳನ್ನು ವೈಯಕ್ತಿಕ ನೀರಾವರಿ ಕೊಳವೆಬಾವಿ ಯೋಜನೆಗಳು ಜಾರಿಯಲ್ಲಿವೆ. ವೈಯಕ್ತಿಕ ನೀರಾವರಿ ಕೊಳವೆ ಬಾವಿ ಯೋಜನೆ, ಏತ ನೀರಾವರಿ ಯೋಜನೆಗಳು ಈ ಸಮುದಾಯದ ಅಭಿವೃದ್ಧಿಗಾಗಿ ಜಾರಿ ಗೊಳಿಸಲಾಗಿದೆ.[೨]

**ಆದಿವಾಸಿ ಹೋರಾಟ**

'ಇಂದು ಆದಿವಾಸಿಗಳ ಮತ್ತು ಕೆಳಜಾತಿಗಳ ಬಹುತೇಕ ಆಚರಣೆಗಳು ಮತ್ತು ಅಭಿವ್ಯಕ್ತಿ ಸಾಧ್ಯತೆಗಳು ಭೂಮಿಗಳ ಜೊತೆಗಿನ ಅವುಗಳ ಸಂಬಂಧದ ಫಲವಾಗಿ ಹುಟ್ಟಿಕೊಂಡಿವೆ' ಎಂದು ಎ.ಎಸ್. ಪ್ರಭಾಕರ ರವರು ಕರ್ನಾಟಕದ ಆದಿವಾಸಿ ರೈತಹೋರಾಟಗಳ ಸ್ವರೂಪ ಪುಟ-೩೮೨ ಆದಿವಾಸಿ ಆಖ್ಯಾನದಲ್ಲಿ ಉಲ್ಲೇಖಿಸಿದ್ದಾರೆ.[೩] ಕರ್ನಾಟಕದ ಕೆಲವು ಕಡೆ ಆದಿವಾಸಿಗಳು ಕಾಡಿನ ಮಧ್ಯ ಹೇಗೋ ಯಾರ ಕಣ್ಣಿಗೆ ಬೀಳದಂತ ಕೃಷಿ ಮಾಡಿಕೊಂಡಿದ್ದರೂ ಸಹ ಎಸ್ಟೇಟ್‌ಗಳ ಅಬ್ಬರದಲ್ಲಿ ಅವರು ಭೂಮಿ ಕಳೆದುಕೊಂಡು ನಿರ್ಗತಿಕರಾದರು ಇನ್ನು ಕೆಳಜಾತಿಯ ಗ್ರಾಮವಾಸಿಗಳಿಗೆ ಭೂಒಡೆತನ ಕನಸಿನ ಮಾತಾಗಿತ್ತು(ಪುಟ-೩೮೩)[೪] ಎಂಬ ಇವರ ಚಿಂತನೆಯು ಮಲೆಕುಡಿಯ ಬುಡಕಟ್ಟು ಸಮುದಾಯದ ಬದುಕಿನ ಸ್ಥಿತ್ಯಂತರಿಗಳನ್ನು ಸಂಕೇತಿಸುತ್ತದೆ. ಬಾಂಜಾರುಮಲೆ, ಅಂಬಟಮಲೆ ಮತ್ತು ಇಳಿಮಲೆಗಳಲ್ಲಿನ ಇವರ ಭೂಮಿಯ ಸ್ಥಿತಿ ಇದೇ ಆಗಿತ್ತು. ದೀವರಿಗಿಂತ ಕೆಳಗಿನವರಾದ ಹರಿಜನರಿಗೆ ಕೃಷಿ ಭೂಮಿಯನ್ನು ಕೆಣಿಗೆ ಸಹಿತ ಕೊಡುತ್ತಿರಲಿಲ್ಲ ಎಂಬ 'ಜಿ. ರಾಜಶೇಖರವರ ಕಾಗೋಡು ಸತ್ಯಾಗ್ರಹ ಕುರಿತ ಉಲ್ಲೇಖವನ್ನು ಪ್ರಭಾಕರ ರವರು ನೀಡಿದ್ದಾರೆ. ಆದಿವಾಸಿ ರೈತನೊಬ್ಬನ ಭೂಮಿಯ ಮೇಲಿನ ಅವಲಂಬನೆಯು ಕೇವಲ ಆರ್ಥಿಕ ಕಾರಣಗಳಿಗೆ ಮಾತ್ರ ಅಲ್ಲ ಎಂಬುದನ್ನು ಇವರು ಪುಟ-೩೮೩ರಲ್ಲಿ ಸ್ಪಷ್ಟಪಡಿಸಿದ್ದಾರೆ.[೫] ಆದಿವಾಸಿಗರು ಆರಂಭದಲ್ಲಿ ಅನುಸರಿಸುತ್ತಿದ್ದ ಕುಮ್ರಿ ಬೇಸಾಯ ಪದ್ಧತಿಯಲ್ಲಿ ನೇಗಿಲಿನಿಂದ ಉಳುವುದು ಭೂಮಿಯ ಎದೆಸೀಳಿದಂತೆ ಎಂಬ ನಂಬಿಕೆ ಅವರಲ್ಲಿತ್ತು ಎನ್ನುತ್ತಾರೆ. ಕಾಡಿನ ಮರ ಪ್ರಾಣಿಗಳು ಭಗವಂತನಿಗೆ ಸೇರಿದ ಆಸ್ತಿಗಳೆಂದು

ಪರಿಗಣಿಸಿದ್ದ ಆದಿವಾಸಿಗಳು ಇವರು ಇಂದಿಗೂ ಮರವನ್ನು ಕಡಿದರೆ ತಮ್ಮಲ್ಲಿಯ ಒಬ್ಬ ವ್ಯಕ್ತಿಯನ್ನು ಕಳೆದುಕೊಂಡಂತೆ ಎಂದು ಭಾವಿಸುತ್ತಾರೆ.ಇದೇ ಕಾರಣಗಳಿಗಾಗಿ ಆದಿವಾಸಿಗಳ ಭೂ ಒಡೆತನ ಎಂಬುದು ಹೊರ ಜಗತ್ತಿನ ಭೂ ಒಡೆತನದಂತೆ ಕಾನೂನಬದ್ದವಲ್ಲ ಎಂದು(ಪುಟ. ೩೮೩)[೬] ಎ.ಎಸ್. ಪ್ರಭಾಕರರವರು ಹೇಳಿದ್ದಾರೆ. ಇಲ್ಲಿ ಆದಿವಾಸಿಗಳ ಕಾಡಿನ ಬದುಕಿನ ಸಂಬಂಧ ಅವರದೇ ಆದ ಮಿತಿಯಲ್ಲಿ ಇರುವುದು ಗೋಚರವಾಗುತ್ತದೆ.ಮಾತ್ರವಲ್ಲ ಈ ಸಮುದಾಯಕ್ಕೆ ಬೇರೆ ಕಾನೂನಿನ ಅವಶ್ಯಕತೆಯಿಲ್ಲ ಎಂಬುದು ಸಹ ಇಲ್ಲಿ ಸ್ಪಷ್ಟವಾಗುತ್ತದೆ. ಆದಿವಾಸಿ ಸಮುದಾಯಗಳಿಗೆ ಭೂ ಒಡೆತನ ಒಂದು ಕಾನೂನುಬದ್ದ ಹಕ್ಕು ಎಂಬ ಭಾವನೆಗಳಿಲ್ಲ. ಕಾಡಿನ ಅಮಾಯಕ ಜಗತ್ತಿನಲ್ಲಿ ಭೂಮಿಯ ಜೊತೆಗಿನ ಅವರ ನಂಟು ವೈವಾಹಿಕ ಸಂಬಂಧಗಳ ಆಚಿನದು ಈ ಅಮಾಯಕ ಸಂಬಂಧಗಳೇ ಹೊರಗಿನ ಆಕ್ರಮಣಕಾರರಿಗೆ ಒಂದು ವರದಾನವಾಗಿತ್ತು. ಕಾಯ್ದೆ ಕಾನೂನಗಳ ರೆಕ್ಕೆ ಕಟ್ಟಿಕೊಂಡು ಬಂದ ರಣಹದ್ದು ಈ ಅಮಾಯಕ ಜಗತ್ತಿನ ಮೇಲೆ ಎರಗಿದಾಗ ಆದಿವಾಸಿಗಳು ದಿಕ್ಕೆಟ್ಟರು, ಈ ಭೂಮಿ ಅಪಾರ ಸಂಪತ್ತಿನ ಗಣಿ ಎಂಬ ಲೆಕ್ಕಾಚಾರ, ಹೊರಗಿನ ಆಸೆಬುರುಕ ವ್ಯಾಪಾರಿಗಳನ್ನು ಆಕ್ರಮಣಕ್ಕೆ ಇಳಿಸಿತ್ತು. ನಾಗರಿಕ ಜಗತ್ತೆಂಬ ಜಗತ್ತಿನಲ್ಲಿ ರೂಪುಗೊಂಡ ಕಾನೂನುಗಳ ಸಹ ಈ ಆಕ್ರಮಣಕಾರರ ಪರವಾಗಿದ್ದವು ಎಂಬುದನ್ನು ಎ.ಎಸ್.ಪ್ರಭಾಕರರವರು ಸ್ಪಷ್ಟಪಡಿಸಿದ್ದಾರೆ. ಹೊರಜಗತ್ತಿನ ಆಕ್ರಮಣಕಾರರನ್ನು ರಣಹದ್ದುಗಳೆಂತಲೆ ಕರೆದಿದ್ದಾರೆ. ಮಾತ್ರವಲ್ಲ ಪ್ರಜಾಪ್ರಭುತ್ವ ವ್ಯವಸ್ಥೆಯು ಸಹ ಪ್ರಾಣಿಗಳಿಗೂ ಕಡೆಯಾಗಿ ಒಕ್ಕಲೆಬ್ಬಿಸಿ ಅವರ ಭೂಮಿಗಳನ್ನು ಆಕ್ರಮಿಸಿಕೊಂಡಿದೆ. ಭೂಮಿಯಿಂದ ವಂಚಿತರಾದ ಆದಿವಾಸಿಗಳ ಇಂದಿನ ಅನೇಕ ಅಸಹಾಯಕ ಹೋರಾಟಗಳು ಇಲ್ಲಿನ ಆಳುವ ವ್ಯವಸ್ಥೆಯ ಹುನ್ನಾರಗಳನ್ನು ಎತ್ತಿತೋರಿಸುತ್ತವೆ ಎಂದಿದ್ದಾರೆ(ಪುಟ.೩೮೪).[೭]

ದಕ್ಷಿಣ ಕನ್ನಡ ಮತ್ತು ಕೊಡುಗುಗಳಲ್ಲಿ ನಡೆದ ಎರಡು ರೈತ ಹೋರಾಟಗಳು ಪುಟ್ಟಬಸಪ್ಪರವರ ನೇತೃತ್ವದಲ್ಲಿ ಸಂಘಟಿತವಾದಾಗ ಮಲೆಕುಡಿಯ, ಚಟ್ಟಕುಡಿಯ, ಕುತುನಕುಡಿಯ, ಮುಂತಾದ ಆದಿವಾಸಿ ಕೆಳಸಮುದಾಯಗಳ ಹೋರಾಟಕ್ಕೆ ಇದು ನಾಂದಿಯಾಯಿತು. ೧೯೫೦ರಲ್ಲಿ ನಡೆದ ಕಾಗೋಡು ರೈತಹೋರಾಟ ಶಿವಮೊಗ್ಗ ಜಿಲ್ಲೆಯ ಹಿಂದುಳಿದ ಬುಡಕಟ್ಟಿಗೆ ಸೇರಿದ ದೀವರಿಂದ ಸಂಘಟಿತವಾಗಿತ್ತು ಶಾಂತವೇರಿಗೋಪಾಲಗೌಡರು ಹೇಳುವ ಪ್ರಕಾರ 'ಗೇಣಿ ಎಷ್ಟಿರಬೇಕೆಂಬ ಒಂದು ವಿವಾದ ಮಲೆನಾಡಿನ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಕಾಗೋಡು ಗ್ರಾಮದ ಜಮೀನುದಾರರು ಮತ್ತು ರೈತರ ನಡುವೆ ಹುಟ್ಟಿತ್ತು ರಾಜಿಯಾಗಲಿಲ್ಲ ಸಂಧಾನಗಳು ಫಲಿಸಿಲಿಲ್ಲ' ಎನ್ನುತ್ತಾರೆ. ಕಾಗೋಡು ಸತ್ಯಾಗ್ರಹದಲ್ಲಿ ದೇಶದ ಕೆಲವೆಡೆ ಕಮ್ಯುನಿಷ್ಟರು ವರ್ಗಹೋರಾಟದ ನೆಲೆಯಲ್ಲಿ ಸಂಘಟಿತರಾಗಿರುವುದು ಆದಿವಾಸಿ ಸಮುದಾಯಗಳ ಹೋರಾಟಕ್ಕೆ ವೇದಿಕೆಯಾಯಿತು. ೧೯೯೮ರಿಂದ ಕರ್ನಾಟಕದ ವಿಮೋಚನಾರಂಗ ಪಶ್ಚಿಮಘಟ್ಟದ ಆದಿವಾಸಿಗಳನ್ನು ಸಂಘಟಿಸುವಲ್ಲಿ ನಿರಂತರವಾಗಿ ಹೋರಾಟವನ್ನು ಮಾಡುತ್ತಾ ಬಂದಿದೆ. ಕುದುರೆಮುಖ ಅರಣ್ಯಪ್ರದೇಶವನ್ನು ರಾಷ್ಟ್ರೀಯ ಉದ್ಯಾನಯೋಜನೆಯಡಿಯಲ್ಲಿ ತರುವಸಲುವಾಗಿ ಈ ಪ್ರದೇಶದಲ್ಲಿನ ಆದಿವಾಸಿಗಳನ್ನು ಒಕ್ಕಲೆಬ್ಬಿಸುವ ಪ್ರಯತ್ನವನ್ನು ಸರ್ಕಾರ ಮಡಿದಾಗ ೧೯೯೮ ಸೆಪ್ಟಂಬರ್ ೧೪ರಂದು ಶೃಂಗೇರಿಯ ಆದಿವಾಸಿಗಳೊಂದಿಗೆ ಕರ್ನಾಟಕದ ವಿಮೋಚನಾರಂಗ ನೇತೃತ್ವದಲ್ಲಿ ಹೋರಾಟ ನಡೆಯುತ್ತದೆ. ೧೯೯೮ ನವೆಂಬರ್‌ನಲ್ಲಿ ನೆಲ್ಲಿಬೀಡಿನಲ್ಲಿ ಇದೇ ಆದಿವಾಸಿ ಸಮುದಾಯಗಳು ಕರ್ನಾಟಕ ವಿಮೋಚನಾರಂಗ

ನೇತೃತ್ವದಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನದ ವಿರುದ್ಧ ಬೃಹತ್‌ರ್‍ಯಾಲಿಯನ್ನು ನಡೆಸಿದ್ದಾರೆ.೧೯೯೯ ರಲ್ಲಿ ಚಿಕ್ಕಮಗಳೂರಿನಲ್ಲಿ ಕುದುರೆಮುಖದಲ್ಲಿ ನಡೆದ ಗಣಿಗಾರಿಕೆಯನ್ನು ವಿರೋದಿಸಿ ಕರ್ನಾಟಕ ವಿಮೋಚನಾರಂಗ ಇಲ್ಲಿನ ಗಿರಿಜನರನ್ನು ಸಂಘಟಿಸಿ ಹೋರಾಟ ನಡೆಸಿದೆ(ಪುಟ.೩೯೭)[೮] ಇದು ಕುದುರೆಮುಖ ಪ್ರದೇಶದ ವ್ಯಾಪ್ತಿಯಲ್ಲಿನ ಆದಿವಾಸಿ ಸಮುದಾಯಗಳ ಹೋರಾಟವನ್ನು ಸೂಚಿಸುತ್ತದೆ. ಈ ಪ್ರದೇಶದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದ ಕುಟುಂಬಗಳನ್ನು ಒಕ್ಕಲೆಬ್ಬಿಸುವಿಕೆಯ ಕುರಿತ ಪ್ರಯತ್ನ ಆ ಕಾಲದಿಂದ ಆರಂಭವಾಗಿ ಈಗ ಒಂದು ಹಂತಕ್ಕೆ ಬಂದು ತಲುಪಿದೆ ಆದರೆ ಇದು ಅಂತ್ಯವಲ್ಲ ಆರಂಭಮಾತ್ರ ಎಂಬುದು ಇದುವರೆವಿಗೂ ಆದ ಬೆಳವಣಿಗೆಗಳಿಂದ ತಿಳಿದುಬರುತ್ತದೆ. ಎಂಬುದನ್ನು ಪ್ರಭಾಕರ ಎ.ಎಸ್. ಅವರು 'ಕರ್ನಾಟಕದ ಆದಿವಾಸಿ ರೈತಹೋರಾಟಗಳ ಸ್ವರೂಪ', "ಆದಿವಾಸಿ ಆಖ್ಯಾನ"(ಪುಟ. ೩೮೩)ದಲ್ಲಿ ಪ್ರತಿಪಾದಿಸಿದ್ದಾರೆ.[೯]

## ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯದ ಹೋರಾಟ

ದಕ್ಷಿಣ ಕನ್ನಡ ಜಿಲ್ಲೆಯ ೨೦೦ ವರ್ಷಗಳ ಚರಿತ್ರೆಯೆಂದರೆ ೧೩೭ ವರ್ಷಗಳ ವಸಹಾತು ಪ್ರಭುತ್ವ ಮತ್ತು ಅದಕ್ಕೆ ವಿರುದ್ಧವಾದ ಹೋರಾಟಗಳ ಚರಿತ್ರೆ ಎನ್ನಬಹುದು. ಕೊನೆಯ ೫೩ ವರ್ಷಗಳ ಇತಿಹಾಸವೆಂದರೆ ಸ್ವಾತಂತ್ರ್ಯ ಭಾರತದೊಳಗಿನ ಒಂದು ಜಿಲ್ಲೆಯಾಗಿ ಅಭಿವೃದ್ಧಿ ಸಾಧಿಸಿದ ಇತಿಹಾಸವಾಗಿದೆ ಎಂಬ ಅಭಿಪ್ರಾಯವನ್ನು ಬಿ.ವಿ. ಕೆಕ್ಕಿಲಾಯರವರು ಪೊಲಿ ಕೆನರಾ ೨೦೦ರ ಪುಟ. ೬೭ರಲ್ಲಿ ಬರೆದ ಚಳುವಳಿಯ ನೆನಪುಗಳು ಲೇಖನದಲ್ಲಿ ಹೇಳಿದ್ದಾರೆ.[೧೦] ದಕ್ಷಿಣ ಕನ್ನಡದ ಜಿಲ್ಲೆಯಲ್ಲಿ ನಡೆದ ಹಂತಹಂತವಾದ ಹೋರಾಟಗಳನ್ನು ವಿಶ್ಲೇಷಣೆ ಮಾಡಿರುವ ಇವರು ಪೋರ್ಚುಗೀಸರ ಆಗಮನದಿಂದ ಹಿಡಿದು ಬ್ರಿಟಿಷರ ಆಗಮನದವರೆಗಿನ ಪ್ರತಿಭಟನೆಗಳು, ಆದಿವಾಸಿ ಪ್ರತಿಭಟನೆಗಳು ಮೊದಮೊದಲಿನ ಹೋರಾಟಗಳು, ರೈತರ ಎರಡು ಬಂಡಾಯಗಳು, ಕಲ್ಯಾಣತ್ಸವ ಕಾಟುಕಾಯಿ ಹೋರಾಟ, ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಸಮಾಜ ಸುಧಾರಣೆ, ಸ್ವಾತಂತ್ರ್ಯ ಹೋರಾಟದಲ್ಲಿ ದ.ಕ.ಸಹಕಾರ ಚಳುವಳಿ, ವಿದ್ಯಾರ್ಥಿ ಚಳುವಳಿ, ಕಾರ್ಮಿಕ ಚಳುವಳಿ ಸಮಾಜಸೇವಾ ಕಾರ್ಯಗಳ ಪ್ರತಿಭಟನೆ ಇದೆ.

ಅರಣ್ಯದಿಂದ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಪೇಟೆಗಳಿಗೆ ಸಾಗಿಸಿ ಜೀವನ ಮಾಡುತ್ತಿದ್ದ ಈ ಜನಾಂಗದ ಮೇಲೆ ದಾಳಿ ನಡೆದಾಗ ಇದನ್ನು ವಿರೋಧಿಸಿ ಪ್ರತಿಭಟನೆ ನಡೆಸುತ್ತಾರೆ. ತನ್ನ ಜೀವನದ ಆಧಾರವಾಗಿದ್ದ ಕುಮರಿಬೆಳೆ ಪದ್ಧತಿಯನ್ನು ನಿಷೇಧಿಸಿದಾಗ ಆದಿವಾಸಿಗಳು ವಿರೋಧಿಸುತ್ತಾರೆ. ಪ್ರತಿವರ್ಷ ಅರಣ್ಯದ ಬೆಟ್ಟಗಳ ತಪ್ಪಲಿನ  ಪೊದೆಗಳನ್ನು ಸವರಿ, ಬರಿದು ಮಾಡಿ ವಸ್ತುಗಳಿಂದ ನೀರೆತ್ತಿ ಹಾಯಿಸಿ, ನೆಲವನ್ನು ಗದ್ದೆಗಳನ್ನಾಗಿಸಿ ಬೆಳೆಯುತ್ತಿದ್ದ. ಕುಮರಿ  ಬೇಸಾಯ ಪದ್ದತಿಗೆ ಧಕ್ಕೆಯಾಯಿತು. ಇಲ್ಲಿನ ಭೂ ಒಡೆಯರು ಭೂ ಕಂದಾಯ ವರಿಸಿದಾಗ ತೆರಿಗೆ ಸುಂಕಗಳನ್ನು ವಿಧಿಸಿದಾಗ, ಗೇಣಿ ಏರಿಕೆಯಿಂದ ತೊಂದರೆಗೆ ಒಳಗಾದ ಕುಮರಿ ಬೆಳೆಯನ್ನು ನಂಬಿಕೊಂಡಿದ್ದ ಆದಿವಾಸಿಗಳಿಗೆ ತೊಂದರೆಯಾಯಿತು. ಇದನ್ನು ಪ್ರತಿಭಟಿಸಿ ಸಾಮಾಹಿಕ ಚಳುವಳಿಗಳು ನಡೆದವು. ಈ ಬಂಡಾಯದ ಹಿನ್ನೆಲೆಯು ಇಲ್ಲಿನ ಜಾನಪದ ಹಾಡು ಪಾಡ್ದನಗಳಲ್ಲಿ, ನಾಟಿ ಹಾಡುಗಳಲ್ಲಿ ಭೂತಗಳ ಪಾಡ್ದನಗಳಲ್ಲಿ ಮೂಡಿಬಂದಿದೆ. ಇಂಥವುಗಳಲ್ಲಿ ಕೆಲವು ಸರಕಾರಿ  ದಾಖಲೆಗಳಲ್ಲಿವೆ ಎಂಬುದನ್ನು ಬಿ.ವಿ. ಕೆಕ್ಕಿಲಾಯರು(ಪೊಲಿ ಪುಟ ೬೯) ಹೇಳಿದ್ದಾರೆ.[೧೧] ಕುದುರೆಮುಖ ರಾಷ್ಟ್ರೀಯ ಉದ್ಯಾನವನದಿಂದ ಜನರನ್ನು ಒಕ್ಕಲೆಬ್ಬಿಸಿ ಹೊರಹಾಕುವ

ಪ್ರಯತ್ನದ ವಿರುದ್ದ ನಡೆದ ಹೋರಾಟಕ್ಕೆ ಇದು ವೇದಿಕೆಯಾಗಿದೆ. ಇದಕ್ಕೂ ಮೊದಲು ನೆರೆಯಾದ ಹೆಬ್ಬಾರರ ಎಸ್ಟೇಟ್‌ನ ಗೇಟ್ ತೆಗೆಸುವಲ್ಲಿ ನಡೆದ ಹೋರಾಟವು ಪ್ರಧಾನವಾಗಿದೆ. ತುಳು ಭಾಷೆಗೆ ಬರವಣಿಗೆ ಇಲ್ಲದಿದ್ದರೂ ಇಲ್ಲಿನ ಜನರ ಬದುಕಿನ ಹೋರಾಟದ ಹಿನ್ನೆಲೆಯನ್ನು ಇಲ್ಲಿನ ಪಾಡ್ದನಗಳೇ ಆಧಾರಗಳಾಗಿವೆ. ಬ್ರಿಟಿಷರ ಆಳ್ವಿಕೆಯಲ್ಲಿ ಹಲವಾರು ಕ್ಷೇತ್ರಕಾರ್ಯ ಸಂಶೋಧನೆ ಗಳಿಂದಾಗಿ ಇದು ಬರವಣಿಗೆಯ ರೂಪ ತಾಳಿದೆ. ೧೮೧೦ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಲೆಕ್ಟರ್ ಆಗಿದ್ದ ಅಲೆಗ್ಸಾಂಡರ್ ರೀಡ್ ತನ್ನ ಮೇಲಿನ ಅಧಿಕಾರಿಗಳಿಗೆ ಆಗ ಕಳಸಿದ್ದ ಒಂದು ವರದಿಯಲ್ಲಿ "ನಾವು ಒಳ್ಳೆಯ ನೀತಿಗೆ ಸಲ್ಲದ ಭೂ ಕಂದಾಯವನ್ನು ರೈತರಿಂದ ವಸೂಲಿ ಮಾಡುತ್ತಿದ್ದೇವೆ. ಇದು ಎಷ್ಟು ಬೇಗ ಖಾಯಂ ಕಂದಾಯ ನಿಗದಿಯ ಮೂಲಕ ಕೊನೆಗೊಳ್ಳುತ್ತದೆಯೋ ಅಷ್ಟು ಒಳ್ಳೆಯದು" ಎಂದು ಬರೆದಿದ್ದಾರೆಂಬ ಉಲ್ಲೇಖ ಪೊಲಿಯ ಪುಟ. ೭೧ರಲ್ಲಿದೆ.[೨]

**೪.೧. ಆರ್ಥಿಕತೆಗೆ ಸಂಬಂಧಿಸಿದ ಹೋರಾಟಗಳು**

ಮಲೆಕುಡಿಯ ಸಮುದಾಯದ ಸಾಮಾಜಿಕ ಅರ್ಥಿಕ ವ್ಯವಸ್ಥೆಯ ಮೇಲೆ ಹಲವಾರು ಯೋಜನೆಗಳು ತುಂಬಾ ಪರಿಣಾಮ ಬೀರಿವೆ. ಇವುಗಳಲ್ಲಿ ಆರ್ಥಿಕತೆಗೆ ಸಂಬಂಧಿಸಿದ ಹೋರಾಟಗಳಲ್ಲಿ ನೆರಿಯಾದ ಭೂ ಹೋರಾಟ, ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪುನರ್ವಸತಿ, ಯೋಜನೆ ಹೋರಾಟ, ಅರಣ್ಯ ವಾಸಿಗಳ ಸ್ಥಳಾಂತರ ಹೋರಾಟ, ಪುನರ್ವಸತಿ ಫಲಾನುಭವಿಗಳ-ನಿರಾಶ್ರಿತರ ಹೋರಾಟ, ಪಾರಂಪಾರಿಕ ಅರಣ್ಯ ಹಕ್ಕು ಕಾಯಿದೆಗೆ ಸಂಬಂಧಿಸಿದ ಹೋರಾಟ, ಗುಂಡ್ಯ ಜಲವಿದ್ಯುತ್ ಯೋಜನೆ ಹೋರಾಟಗಳು ಈ ಸಮುದಾಯವನ್ನು ಸಾಂಸ್ಕೃತಿವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕ ಹೋರಾಟದ ಹಾದಿಗೆ ಕೊಂಡೊಯ್ಯುವಷ್ಟು ಪರಿಣಾಮ ಬೀರಿವೆ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಹೋರಾಟಗಳಲ್ಲಿ ಸಾಮಾಜಿಕ ಹೋರಾಟಗಳು ಸುಬ್ರಹ್ಮಣ್ಯದ ಮಡೆಸ್ನಾನ ಪ್ರಧಾನವಾಗಿದೆ. ಮಲೆಕುಡಿ ಸಮುದಾಯದ ಜೀವನಾಧರಿತ ಕೃಷಿಪದ್ಧತಿ ಇವರ ಮೂಲಅರ್ಥಿಕ ಅಧಾರವಾಗಿದೆ. ಕುಮರಿ ಬೇಸಾಯ ಪದ್ದತಿಯಂದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸ್ಥಳಾಂತರಗೊಳ್ಳುತ್ತಾ ತಮ್ಮ ಮೂಲ ನೆಲೆಯನ್ನ ಕಳೆದುಕೊಂಡು ತಮ್ಮ ಅಸ್ತಿತ್ವಕ್ಕಾಗಿ ನಿರಂತರವಾದ ಹೋರಾಟವನ್ನು ಮಾಡುತ್ತಾ ಬಂದಿದ್ದಾರೆ.

**೧. ನೆರಿಯಾದ ಭೂ ಹೋರಾಟ**

ಎಲ್ಯಣ್ಣ ಹೇಳುವ ಪ್ರಕಾರ 'ನೆರಿಯಾ ಎಂಬ ಪ್ರದೇಶವನ್ನು ಸೂಚಿಸುವ **ನೆರಿಯಾ** NERIA ಎಂಬ ಇಂಗ್ಲೀಷ್ ಪದದ ವಿಸ್ತಾರ ರೂಪವು N-NERIA, E-ESTATE, R-RURAL, I-INDUSTRIAL, ASSOCIATION PVT LIMITED ಎಂಬ ಅರ್ಥವಿದೆ. NERIA ESTATE RURAL INDUSTRIAL ASSOCIATION PVT. LTD. ಇದು ಈಗ ನೆರಿಯಾ ಹೆಬ್ಬಾರರ ವ್ಯವಹಾರಿಕ ಸಂಸ್ಥೆಯಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬೆಳ್ತಂಗಡಿ ತಾಲ್ಲೂಕಿನಲ್ಲಿ ಮಲೆಕುಡಿಯ ಸಮುದಾಯದವರು ಹೆಚ್ಚು ವಾಸವಾಗಿದ್ದಾರೆ. ಈ ಸಮುದಾಯದ ಮೂಲ ನೆಲೆಗಳು ಬೆಳ್ತಂಗಡಿ ತಾಲೂಕಿನ ನೆರಿಯಾದ ಬಂಜಾರುಮಲೆ, ಎಲಿಮಲೆ, ಅಂಬಟೆಮಲೆ ಗಳೆಂಬ ೩ ಮಲೆಗಳಲ್ಲಿ ವಾಸವಾಗಿರುವ ಮಲೆಕುಡಿಯರನ್ನು ಒಟ್ಟು ಮಾಡುವ ಪ್ರಯತ್ನ ಆಗಲಿಲ್ಲ ಎನ್ನುವ ನಾರಾಯಣರವರು ಇದಕ್ಕೆ ಕಾರಣವನ್ನು ಸಹ ಹೇಳುತ್ತಾರೆ. ಹೆಬ್ಬಾರರು ವಾಸವಾಗಿರುವ ಈ ಪ್ರದೇಶಗಳು ಹೆಬ್ಬಾರರ ಖಾಸಗಿ ಒಡೆತನದಲ್ಲಿದ್ದರಿಂದ ಹೆಬ್ಬಾರರು ಮಲೆಕುಡಿಯರನ್ನು ಒಟ್ಟಾಗಿ

ಸೇರಲು, ಮಾತನಾಡಲು ಬಿಡುತ್ತಿರಲಿಲ್ಲ. ಈ ಭೂಮಿ ಎಲ್ಲವೂ ಹೆಬ್ಬಾರರ ಪಟ್ಟಾದಲ್ಲಿ ಸೇರಿಕೊಂಡಿದ್ದರಿಂದ ಈ ಸಮಸ್ಯೆಯಾಗಿತ್ತು. ೧೯೦ಳರಲ್ಲಿ ಆದ Survey settlementನಲ್ಲಿ ಹೆಬ್ಬಾರರು ಈ ಭೂಮಿಯನ್ನು ತಮ್ಮ ಹೆಸರಿಗೆ ಬರೆಸಿಕೊಂಡರು ಮತ್ತು ದಾಖಲೆ ಮಾಡಿಕೊಂಡರು. ಈ ಪ್ರದೇಶದ ನಿವಾಸಿಗಳಾದ ಮಲೆಕುಡಿಯರಿಗೆ ಇದು ಒಂದು ದೊಡ್ಡ ಅಪಾಯವಾಯಿತು. ಹೆದರಿಕೆಯೂ ಆಯಿತು. ಇದರ ಪರಿಣಾಮವಾಗಿ ಇವರು ವಾಸವಾಗಿರುವ ಜಾಗಗಳು ಹೆಬ್ಬಾರರ ಹೆಸರಿಗೆ ಮತ್ತು ಅರಣ್ಯ ಭೂಮಿಗೆ ಸೇರಿಕೊಂಡಿತ್ತು. ಇದರಿಂದಾಗಿ ಮಲೆಕುಡಿಯರಿಗೆ ಸಮಸ್ಯೆಯಾಯಿತು ಎಂಬುದನ್ನು ಕೆ.ನಾರಾಯಣರವರು ವಿವರಿಸಿದ್ದಾರೆ. Govt of India SC/ST Commissioner ರವರು ಹಲವಾರು ಬಾರಿ ಇಲ್ಲಿಗೆ ಬಂದಾಗ ಇಲ್ಲಿನ ಭೂ ದಾಖಲೆಗಳು ಹೆಬಾರರ ಪಟ್ಟ ಮತ್ತು ಅರಣ್ಯ ಪ್ರದೇಶವು ಹೆಬ್ಬಾರರ ಎಸ್ಟೇಟ್ ಆಗಿತ್ತು. ೭೯, ೧೪ KLR Act ಜಾರಿಗೆ ಬಂದಾಗ 48-A ಪ್ರಕಾರ ಗೇಣಿದಾರರ Declaration ಗೆ ಅವಕಾಶ ಮತ್ತು ಗೇಣಿದಾರರು Protection of Attrocity Act 1987ನ ಭಯದಿಂದಾಗಿ ಹೆಬ್ಬಾರರು ಭಯಗೊಂಡರು. ಹೆಬ್ಬಾರರಗಿಂತ ಮೊದಲೇ ಈ ಸ್ಥಳದಲ್ಲಿ ವಾಸವಾಗಿದ್ದ ಮಲೆಕುಡಿಯರು ಇಲ್ಲಿನ ಮೂಲ ನಿವಾಸಿಗಳಾಗಿದ್ದರು. ಹೆಬ್ಬಾರರು ಈ ಭೂಮಿ ಹಕ್ಕು ಪಡೆದ ನಂತರ ಇಲ್ಲಿ ತಿಕ್ಕಾಟ ಆರಂಭವಾಯಿತು. ಈ ಹೋರಾಟದ ಫಲವಾಗಿ ಇಲ್ಲಿನ ಜನರಿಗೆ ಭೂಮಿ ದೊರೆಯಿತು, ಹೆರಬ್ಬಾರರ ಗೇಟ್ ತೆರೆಯಿತು, ಶಾಲೆಗೆ ಮಕ್ಕಳನ್ನು ಕಳಿಸುವಂತಾಯಿತು, ೧೯೭೯ರಲ್ಲಿ ನಿಜವಾದ ಸ್ವಾತಂತ್ರ್ಯ ದೊರೆಯಿತು, ೯ ಕಿ.ಮೀ ದೂರದ ಕಕ್ಕಿಂಜಕ್ಕೆ ಇವರು ಬಂದವರಲ್ಲ, ಬಂದಿಲ್ಲ. ಈಗ ಇದು ಸಾಧ್ಯವಾಯಿತು ಎಂದು ಕೆ.ನಾರಾಯಣರವರು ತಮ್ಮ ನೆರಿಯಾದ ಭೂ ಹೋರಾಟದ ದಿನಗಳನ್ನು ನೆನಪಿಸಿಕೊಳ್ಳುತ್ತಾರೆ. ಪರಿಶಿಷ್ಟ ಪಂಗಡಗಳ ಮೇಲಿನ ದೌರ್ಜನ್ಯ ಪ್ರತಿಬಂಧಕ ಕಾಯಿದೆ ೧೯೮೭ ಈ ಕಾಯಿದೆಯ ಭಯಕ್ಕೆ ಹೆದರಿದ ಹೆಬ್ಬಾರರು ಮಲೆಕುಡಿಯರಿಗೆ ತೊಂದರೆ ಕೊಡುವುದು, ಪ್ರವೇಶ ನಿರ್ಬಂಧಿಸುವುದನ್ನು ಕೈ ಬಿಟ್ಟರು. ಹೆಬ್ಬಾರರ ಗೇಟ್ ಮುಕ್ತವಾಗಿ ತೆರೆಯಲಾಯಿತು. ಇದು ನಮ್ಮ ಸಮುದಾಯದ ಹೋರಾಟಕ್ಕೆ ದೊರೆತ ಜಯವಾಗಿತ್ತು. ಇದರ ಪ್ರತಿಫಲವಾಗಿ ನೆರಿಯಾದ ಹೆಬ್ಬಾರರಿಂದ ಸ್ವಾತಂತ್ರ ತಮ್ಮ ಹೋರಾಟ ಪಡೆಯುವಂತಾಯಿತು ಎಂಬುದನ್ನು ಕೆ.ನಾರಾಯಣ ರವರು ದಿನವನ್ನು ನೆನಪು ಮಾಡಿಕೊಳ್ಳುತ್ತಾರೆ. ಒಂದು ಮಲೆಕುಡಿಯರು ಮತ್ತೊಂದು ಮಲೆಗೆ ಹೋಗುವಂತಿರಲಿಲ್ಲ. ಮಾತನಾಡುವಂತಿರಲಿಲ್ಲ. ಇದು ಸರಿಹೋಯಿತು. ಮಕ್ಕಳ ಶಿಕ್ಷಣಕ್ಕೆ ಅವಕಾಶವಿರಲಿಲ್ಲ. ಅದಕ್ಕೆ ಸಹ ಅವಕಾಶವಾಯಿತು. ಶಾಲೆಗೆ ಸೇರಿಸಲು ನೆರಿಯಾದಲ್ಲಿನ ಶಾಲೆಯಲ್ಲಿ ಟಿ.ಸಿ ಕೊಡುತ್ತಿರಲಿಲ್ಲ. ಮಕ್ಕಳನ್ನು ಅಲ್ಲಿಂದ ಬೇರೆ ಕಡೆ ಸೇರಿಸುವಲ್ಲಿ ತುಂಬಾ ಕಷ್ಟಪಡಬೇಕಾಯಿತು. ನೆರಿಯಾದ ಆಶ್ರಮದಲ್ಲಿದ್ದ ಜೆ.ಸಿ.ಎಸ್ ಪಾಲ್‌ರವರು ನನಗೆ ಆಗ ತುಂಬಾ ಸಹಾಯ ಮಾಡುತ್ತಿದ್ದರು. ಈ ಹೋರಾಟದ ಫಲವಾಗಿ ಹಿಂದೆ ಕೇವಲ ಹೆಬ್ಬಾರರ ಅಡಿಯಲ್ಲಿ ಕೆಲಸ ಮಾಡುತ್ತಿದ್ದ ನಮ್ಮ ಜನರು ಈಗ ಬ್ರಾಹ್ಮಣರ, ಶೆಟ್ಟರ, ಜೈನರಲ್ಲಿ ಕೆಲಸ ಮಾಡಿಕೊಂಡಿದ್ದಾರೆ. ಹಿಂದಿನ ಅಧ್ಯಯನ ಸಮೀಕ್ಷೆಗಳ ಪ್ರಕಾರ ನಮ್ಮಲ್ಲಿ ರಕ್ತ ಸಂಬಂಧದಲ್ಲೇ ವಿವಾಹವಾಗುತ್ತಿತ್ತು. ಆದರೆ ಈಗ ಅದು ಬದಲಾಗಿದೆ. ಹಿಂದಿನ ಪದ್ಧತಿ ಈಗ ಇಲ್ಲ ಹೊರಗಿನ ಸಂಬಂಧಗಳಲ್ಲಿ ವಿವಾಹವಾಗುತ್ತಿದ್ದಾರೆ. ಅಲ್ಲದೆ ಹಲವಾರು ಅಂತರ್‌ಜಾತಿ ವಿವಾಹಗಳು ಸಹ ನಡೆದಿವೆ ಎಂಬುದನ್ನು ಕೆ. ನಾರಾಯಣರವರು ಹೇಳುತ್ತಾರೆ. ೧೯೬೧ರಲ್ಲಿ ಕೇವಲ ನಾಲ್ಕು ಜನರು ಮಾತ್ರ ವ್ಯಾಸಂಗ ಮಾಡುತ್ತಿದ್ದರು ಇವರನ್ನು ಹೊರತುಪಡಿಸಿದರೆ ಎಲ್ಲರೂ ಹೆಬ್ಬೆಟ್ಟು ಒತ್ತುವವರೇ ಆಗಿದ್ದರು.

ಆಗ ಹೈಸ್ಕೂಲ್‌ಗೆ ಹೋಗುವವರು ಬಂಟ್ವಾಳದಲ್ಲಿ ಒಬ್ಬರು ಮಾತ್ರ ಇದ್ದರು. ಅವರ ಹೆಸರು ಪ್ರಭಾಕರ ಅಂತ. ಆಗ ಹತ್ತನೆ ತರಗತಿವರೆಗೆ ಕಲಿತ ಇವರು ಪ.ಜಾತಿಯಲ್ಲಿ ಅಂತರ್‌ಜಾತಿ ವಿವಾಹವಾದರು. ಮಡಿಮೈಲಿಗೆಯಲ್ಲಿ ತುಂಬಾ ಕಟ್ಟು ನಿಟ್ಟಾಗಿದ್ದು ನಮ್ಮವರು ಇದನ್ನು ಸಹಿಸಲಿಲ್ಲ. ಪ್ರಭಾಕರರವರು ಈಗ ಪರವೂರಿನಲ್ಲಿದ್ದಾರೆ. ನಮ್ಮ ಮೂಲದ ಬಗ್ಗೆ ಹೇಳುವುದಾದರೆ ಇದಕ್ಕೆ ನಮ್ಮಲ್ಲಿ ಯವುದೇ ಆಕಾರಗಳಿಲ್ಲ, ನಿರ್ದಿಷ್ಟತೆ ಇಲ್ಲ. ನಮ್ಮ ಪೂರ್ವಿಕರು ಹೇಳುವ ಕಥೆಗಳಿವೆ ಆದರೆ ಇದಕ್ಕೆ ಆಧಾರ ದಾಖಲೆಗಳಿಲ್ಲ. ನಾವು ಬೇರೆ ಕಡೆಯಿಂದ ಬಂದವರು ಎಂಬುದಕ್ಕೆ ಇಲ್ಲಿನವರೆಗೆ ಎಲ್ಲಿಯೂ ದಾಖಲೆಗಳಿಲ್ಲ. ನಾವು ಬೇರೆ ಕಡೆಯಿಂದ ಬಂದದ್ದು ಇಲ್ಲ ಅಂತ ಎಂಬುದನ್ನು ಇವರು ಹೇಳುತ್ತಾರೆ. ಬದಲಾವಣೆ ಬಗ್ಗೆ ಹೇಳುವುದಾದರೆ

೧. ನಮ್ಮ ಉಡುಪುನಲ್ಲಿ ಬದಲಾವಣೆ ಆಗಿದೆ.

೨. ಲ್ಯಾಂಪ್ಸ್ ಮೂಲಕ ಅರಣ್ಯ ಉತ್ಪನ್ನಗಳ ಸಂಗ್ರಹ ಮಾರಾಟಕ್ಕೆ ಅವಕಾಶವಾಗಿದೆ.

೩. ಗಿರಿಜನ ಅಭಿವೃದ್ಧಿ ಪ್ರದೇಶಗಳಾಗಿವೆ.

೪. ಆಶ್ರಮ ಶಾಲೆಗಳಾಗಿವೆ / ಹಾಸ್ಟೆಲ್‌ಗಳಾಗಿವೆ. ನೌಕರಿ ಸಿಕ್ಕಿದೆ.

ಇನ್ನು ನಮ್ಮ ಜನಾಂಗದಲ್ಲಿ ಹಿಂದೆ ಪ್ರಾಮಾಣಿಕತೆ, ಸತ್ಯನಿಷ್ಟತೆ, ಸೌಮ್ಯ ಸ್ವಭಾವಕ್ಕೆ ಅವಕಾಶವಿತ್ತು. ಕಾರಂತರ ಕುಡಿಯರ ಕೂಸು, ಚೋಮನದುಡಿಯಲ್ಲಿ ಕಂಡುಬರುವ ಸ್ಥಿತಿ ಈಗ ಇಲ್ಲದಾಗಿದೆ. ಆಗ ನಮ್ಮವರ ಮೇಲೆ ಒಂದೇ ಒಂದು ಪೋಲೀಸ್ ಕೇಸ್ ಇರಲಿಲ್ಲ. ಇತ್ತೀಚೆಗೆ ನಾರಾವಿ ಸುತ್ತ ಸುತ್ತಲಿನ ವಾತಾವರಣ ನೋಡಿದರೆ ಸಮುದಾಯದ ಅಭಿವೃದ್ದಿಗೆ ಅಧಿಕಾರಿಗಳ ಸ್ಪಂದನೆ ಇಲ್ಲದೇ ಇದ್ದಾಗ, ಅನಿವಾರ್ಯವಾಗಿ ಅಲ್ಲಿನ ಜನರು ಆಚೆ ಸೇರಿರಬಹುದು ಎಂಬುದನ್ನು ಕೆ.ನಾರಾಯಣ ರವರು ಹೇಳುತ್ತಾರೆ. ಕಾಡಿನಲ್ಲಿ ಕಾಡುತ್ಪತ್ತಿ ಮಾಡಿ ಜೀವನ ಮಾಡುತ್ತಿದ್ದವರಿಗೆ ತೊಂದರೆ ಆದಾಗ ಆ ರೀತಿ ಆಗಿರುವುದು ನನ್ನ ಅಭಿಪ್ರಾಯವಾಗಿದೆ. ಹಿಂದೆ ಕಷ್ಟಪಟ್ಟು ಕಾಡುತ್ಪತ್ತಿ ತಂದು ತಾನೇ ಮಾರಾಟ ಮಾಡಿ ಜೀವನ ಸಾಗಿಸುತ್ತಿದ್ದವರು ಈಗ ಗುತ್ತಿಗೆದಾರರು ಇದಕ್ಕೆ ಸರಿಯಾದ ಬೆಲೆ ಕೊಡದೆ ಶೋಷಣೆ ಮಾಡುತ್ತಿದ್ದಾರೆಂಬುದನ್ನ ಸಹ ಇವರು ತಿಳಿಸಿದ್ದಾರೆ. ಕುದುರೆ ಮುಖ ರಾಷ್ಟ್ರೀಯ ಉದ್ಯಾನವನ ಯೋಜನೆಯನ್ನು ಹಿಂದೆ ಕಾರ್ಕಳದ ಶಾಸಕರಾಗಿದ್ದು ವೀರಪ್ಪ ಮೋಯಿಲಿರವರ ಕಾಲದಲ್ಲಿ ಆಯಿತು. ವಿಶ್ವಬ್ಯಾಂಕ್ ಸೇರಿದ ಯೋಜನೆಯಲ್ಲಿ ೭೦೦ ಕೋಟಿ ರೂಗಳ ಅನುದಾನ ಬಂದಿತ್ತು. ಅಭಿವೃದ್ದಿಗಿಂತ ವಿಶ್ವಬ್ಯಾಂಕ್‌ರವರು ಈ ಅಭಯಾರಣ್ಯಕ್ಕೆ ಹಣ ಕೊಟ್ಟರು. ಆದರೆ ಈ ಯೋಜನೆ ಜಾರಿಗೆ ಬಂದ ನಂತರ ಆದದ್ದೇ ಬೇರೆ, ಅಂದು ಏನಾದರೂ ಈ ಯೋಜನೆ ಜಾರಿಗೆ ಬರದೇ ಇದ್ದರೆ ಇಂದು ನಮ್ಮ ಹುಡುಗರು ದಿಕ್ಕು ತಪ್ಪುತ್ತಿರಲಿಲ್ಲ. ಇಂದು ನಮ್ಮ ಹುಡುಗರ ಪ್ರಾಣಗಳಾದರೂ ಉಳಿಯುತ್ತಿದ್ದವು. ಎಂಬ ಆತಂಕವನ್ನು ವ್ಯಕ್ತಪಡಿಸಿದರು. ಇಲ್ಲಿರುವವರು ಈ ಅರಣ್ಯ ಯೋಜನೆಯ ವ್ಯಾಪ್ತಿಗೆ ಸೇರಿಕೊಂಡರು, ಇಲ್ಲಿನ ಜನರನ್ನು ಒಕ್ಕಲೆಬ್ಬಿಸಿದರು. ಅಭಿವೃದ್ದಿ ಇಲ್ಲಿ ಇವರಿಗೆ ಮುಳುವಾಯಿತು. ಅನಾದಿಕಾಲದಿಂದ ಇಲ್ಲಿನ ಮೂಲ ನಿವಾಸಿಗಳಾದ ಇಲ್ಲಿಯವರು ಎಲ್ಲಿಂದಲೋ ಇಲ್ಲಿಗೆ ಬಂದವರಲ್ಲ. ಈಗ ಇಲ್ಲಿಂದ ಬಿಟ್ಟು ಹೋಗುವುದು ಕಷ್ಟವಾಗಿದೆ ಎಂಬ ಅಭಿಪ್ರಾಯ ಇವರದಾಗಿದೆ. ಹಿಂದೆ ಇವರು ಕಾಡಿನ ಮಲೆಗಳನ್ನು ಬಿಟ್ಟು ನಾಡಿಗೆ

ಬರುವುದಕ್ಕೆ ಅವರಲ್ಲಿನ ನಂಬಿಕೆಯೇ ಕಾರಣವಾಗಿತ್ತು. ನಾಡಿನಲ್ಲಿ ಮೇಲಿನಿಂದ ಹರಿಯುವ ನೀರು ಕುಡಿದರೆ ನಮ್ಮ ಸಂತಾನ ನಾಶವಾಗುತ್ತದೆ ಎಂಬ ನಂಬಿಕೆಯಿಂದಲೇ ಇವರು ಕಾಡನ್ನು ಬಿಟ್ಟು ನಾಡಿಗೆ ಬರಲಾರದೆ ಇರುವ ಸ್ಥಿತಿ ಇತ್ತು. ಈಗ ಇದು ಬದಲಾಗಿದೆ. ನಗರಗಳಲ್ಲಿ ಗ್ರಾಮಗಳಿಗೆ ಬಂದು ನೆಲೆಸಿದ್ದಾರೆ. ಆಗಿನ ನಂಬಿಕೆ ಮಾಯವಾಗಿದೆ. ೧೯೭೪ರ ನಂತರದಲ್ಲಿ ತುಂಬಾ ಸುಧಾರಣೆಯಾಗಿದೆ. ಈಗ ಯಾರ ಹಂಗೂ ಇಲ್ಲದಾಗಿದೆ. ನಿರ್ಭೀತಿಯಿಂದ ಬದುಕುವಂತಾಗಿದೆ. ಸ್ವಾತಂತ್ರ್ಯ, ಸ್ಥಾನಮಾನಕ್ಕಾಗಿ ಹಿಂದೆ ನಡೆಯುತ್ತಿದ್ದ ಹೋರಾಟ ಈಗ ಇಲ್ಲದಾಗಿದೆ. ಎಂದು ನಾರಾಯಣ ರವರು ಹೇಳಿದ್ದಾರೆ.

ಈ ಹಿಂದೆ ಬಾಂಜಾರು ಮಲೆ ನೆರಿಯಾದ ಹೆಬ್ಬಾರರ ಒಡೆತನದಲ್ಲಿತ್ತು. ನಂತರ ಮುಂಡಾಜೆಯ ವೈ.ಎನ್. ಬಿಡೆವರಿಗೆ ಸೇರಿತು ಅವರ ನಂತರ ಈಗ ವೈ.ಎಮ್.ಕೆ.ರವರು ಒಡೆಯರಾಗಿದ್ದಾರೆ. ಇದುವರೆಗೆ ಬಾಂಜಾರು ಮಲೆಗೆ ವೈ.ಎಮ್.ಕೆ.ರವರು ಒಂಬತ್ತನೇ ಧಣಿಗಳಾಗಿದ್ದಾರೆ ಎಂದು ಬಾಂಜಾರು ಮಲೆಯ ಗ್ರಾಮ ಪಂಚಾಯಿತಿ ಸದಸ್ಯ ಕೃಷ್ಣಪ್ಪ ಹೇಳುತ್ತಾರೆ. ಆಗಿನಿಂದಲೂ ಈಗಿನವರೆಗೆ ನಾವು ದಾರಿಗಾಗಿ ನಡೆಸಿದ ಹೋರಾಟ ಇನ್ನೂ ಪ್ರಯೋಜನವಾಗಿಲ್ಲ. ಇದು ಖಾಸಗಿ ರಸ್ತೆಯಾಗಿರುವುದರಿಂದ ಅಭಿವೃದ್ಧಿಗೆ ಬಿಡುವುದಿಲ್ಲ. ನಮ್ಮ ಸುತ್ತಲೂ ಎಸ್ಟೇಟ್‌ಗಳು ತುಂಬಿರುವುದರಿಂದ ಅಭಿವೃದ್ಧಿ ಕಷ್ಟವಾಗಿದೆ ಎಂದು ಕೃಷ್ಣಪ್ಪ ತನ್ನ ಅಸಹಾಯಕತೆಯನ್ನ ವ್ಯಕ್ತಪಡಿಸುತ್ತಾರೆ.

**ಡಿ. ಸಿ. ಕಟ್ಟೆ ಹೋರಾಟ**

ಬಂಜಾರು ಮಲೆಯ ವಿಶಿಷ್ಟ ಆಕರ್ಷಣೆಗಳಲ್ಲಿ ನಾವು ನೋಡಬಹುದಾದ ಒಂದು ಹಳೆಯದಾದ ಕಲ್ಲು ಮಣ್ಣಿನಿಂದ ನಿರ್ಮಿಸಿದ ಚೌಕಕಾರದ ಒಂದು ಕಟ್ಟೆ ಇದೆ. ಇದಕ್ಕೆ ಸಗಣಿಯಿಂದ ಸಾರಿಸಿ ಈಗಲೂ ಅದನ್ನು ಹಾಗೆಯೇ ಸಂರಕ್ಷಣೆ ಮಾಡಿಕೊಂಡು ಬಂದಿದ್ದಾರೆ. ೧೯೭೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳಾಗಿದ್ದ ಕೆ.ಎಸ್. ದಾಸ್ ಅವರು ಈ ಬಾಂಜಾರುಮಲೆಗೆ ಭೇಟಿ ನೀಡುವುದಾಗಿ ದಿನಾಂಕವನ್ನು ಗೊತ್ತುಪಡಿಸಿದ್ದರಂತೆ. ಅದಕ್ಕಾಗಿ ಕಾಡಿನ ಮಲೆಯ ಮಕ್ಕಳಾದ ಇವರನ್ನು ನೋಡಲು ಡಿ.ಸಿ. ಬಂದಾಗ ಡಿ.ಸಿ.ಕುಳಿತುಕೊಳ್ಳಲು ಈ ಕಟ್ಟೆಯನ್ನು ಇವರೇ ನಿರ್ಮಿಸಿದ್ದರಂತೆ. ಇಲ್ಲಿಗೆ ಡಿ.ಸಿ. ಬರುತ್ತಾರೆಂದು ಇಲ್ಲಿನ ನಿವಾಸಿಗಳೆಲ್ಲಾ ಜಾತಕ ಪಕ್ಷಿಗಳಂತೆ ಕಾದರಂತೆ. ಆದಿನ ಇಲ್ಲಿಗೆ ಬರಬೇಕಾದ ಡಿ.ಸಿ. ಬರಲೇ ಇಲ್ಲವಂತೆ. ಇಲ್ಲಿನ ಹೆಬ್ಬಾರರ ಎಸ್ಟೇಟ್‌ನಲ್ಲಿ ಆತಿಥ್ಯ ಸ್ವೀಕರಿಸಿದ ಡಿ.ಸಿ. ಇಲ್ಲಿಂದಲೇ ಎದ್ದು ಹೋದರಂತೆ. ಬಂಜಾರುಮಲೆಗೆ ಡಿ.ಸಿ.ಬರಲಿಲ್ಲ. ಬರಲು ಆಗಲೂ ಇಲ್ಲ. ಅಲ್ಲಿಂದ ಇಲ್ಲಿಯವರೆಗೆ ಈ ಕಟ್ಟೆಗೆ 'ಡಿ.ಸಿ. ಕಟ್ಟೆ' ಎಂದು ಕರೆಯುತ್ತಾ ಬಂದಿದ್ದಾರೆ ಎಂಬುದನ್ನು ಇಲ್ಲಿನ ಬಿ.ಎಸ್.ಲಕ್ಷ್ಮಣ ಹೇಳುತ್ತಾರೆ. ಭೂ ಸುಧಾರಣೆ ಕಾಯಿದೆ ಜಾರಿಯಿಂದಾಗಿ ಇಲ್ಲಿನ ಕುಟುಂಬಗಳಿಗೆ ೪ ಎಕರೆ ಭೂಮಿ ದೊರೆಯಿತು. ಗೇಣಿದಾರರಾದ ಇವರಿಗೆ ಭೂ ಒಡೆತನ ದೊರೆಯಿತು. ಬಾರಿಮಲೆ, ಬಾಂಜಾರು ಮಲೆ, ಇಳಿಮಲೆ, ಅಂಬಟೆ ಮಲೆಗಳಿವೆ. ಹಾಲಾಂಗಾಯ್‌ನಿಂದ ೯.೫ ಕಿ.ಮೀ ದೂರ ಇರುವ ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆಯಲ್ಲಿ ರಾಷ್ಟ್ರಿಯ ಹೆದ್ದಾರಿಯನ್ನು ನಾಚುವಂತೆ ಸಿಮೆಂಟ್ ಕಾಂಕ್ರಿಟೀಕರಣದ ರಸ್ತೆ ನಿರ್ಮಾಣದ ಕಾಮಗಾರಿ ಭರದಿಂದ ಸಾಗುತ್ತಿದೆ. ೬-೨-೨೦೧೧ರಂದು ಇಲ್ಲಿಗೆ ನಾವು ಕ್ಷೇತ್ರ ಕಾರ್ಯಕ್ಕೆ ಗೆಳೆಯ ಚಂದ್ರಣ್ಣನವರೊಂದಿಗೆ ಬೈಕಿನಲ್ಲಿ ಹೋಗಿದ್ದೆವು. ಇಲ್ಲಿನ ಕುಟುಂಬಗಳಿಗೆ ಇಷ್ಟೊಂದು ದೊಡ್ಡ ಮೊತ್ತದ ಹಣ ಖರ್ಚು ಮಾಡಿ ಗ್ರಾಮ ಸಡಕ್ ಯೋಜನೆಯ ಸಿಮೆಂಟ್ ರಸ್ತೆ ಆಗಿರುವುದು ನೋಡಿ

ನಮಗೆ ಆಶ್ಚರ್ಯದ ಜೊತೆಗೆ ಕುತೂಹಲವಾಯಿತು. ಇಲ್ಲಿನ ಬುಡಕಟ್ಟು ಸಮುದಾಯದ ಅಭಿವೃದ್ಧಿಯ ಆಸಕ್ತಿಯನ್ನು ಕುರಿತು ನಿಜವಾಗಿಯೂ ಮೆಚ್ಚಲೇಬೇಕು. ರಸ್ತೆ ನಂತರ ಬಸ್ಸು ಬರಬಹುದು, ಈಗ ಬಸ್ಸು ಬರುವುದಿಲ್ಲ. ನಡೆದೇ ಹೋಗಬೇಕು. ಅಗೋ ಅಲ್ಲಿ ಕಾಣುತ್ತಿದೆಯಲ್ಲಾ ಅಲ್ಲಿಯವರೆಗೆ ನಡೆಯಬೇಕು. ನಂತರ ಅಲ್ಲಿಂದ ನಮಗೆ ಜೀಪು ಸಿಗುತ್ತದೆ. ನಾನು ಎಲ್ಲರೂ ಸೇರಿ ೩೦೦ ರೂಗಳಿಗೆ ಜೀಪನ್ನು ಮಾಡಿಕೊಂಡು ಹೋಗುತ್ತೇವೆ. ವಾಪಾಸ್ಸು ಬರುವುದಕ್ಕೆ ಸಹ ಅದೇ ಜೀಪು ಬಳಸುತ್ತೇವೆ. ಇದು ಬಾಡಿಗೆಗೆ ಇರುತ್ತದೆ ಎಂದು ರಸ್ತೆಯ ಪಕ್ಕದ ಎಡಕ್ಕೆ ಸಿಗುವ ಒಂದು ಮನೆಯಲ್ಲಿನ ರಾಮ ಮಲೆಕುಡಿಯವರನ್ನು ಸಂದರ್ಶನ ಮಾಡಿದಾಗ ತಿಳಿಯಿತು.

ಬೆಳ್ತಂಗಡಿ ತಾಲೂಕಿನ ಉಜರೆಯಿಂದ ಚಾರ್ಮಡಿ ರಸ್ತೆಯಲ್ಲಿ ಬರುವ ಕಿಕ್ಕಿಂಜ ಅಣಿಯೂರುನಿಂದ ೮ ಕಿ.ಮೀ ದೂರ ಸಾಗಿದರೆ ಕಿಕ್ಕಿಂಜ ಪುದುವೆಟ್ಟು ಜಿಲ್ಲಾ ಪಂಚಾಯತ್ ರಸ್ತೆಯಲ್ಲಿ ಎಡಕ್ಕೆ ಬರುವ ಕ್ರಾಸ್‌ನಲ್ಲಿ 'ನೆರಿಯಾ ಹೌಸ್' ಎಂಬ ನಾಮ ಫಲಕ ಬರುತ್ತದೆ. ಭೂಪ್ರದೇಶದ ಹೊಸ ಮಣ್ಣಿನ ರಸ್ತೆಯಲ್ಲಿ ಸಾಗಿ ಬಂದರೆ ನೆರಿಯಾದ ಹೆಬ್ಬಾರರ ಎಸ್ಟೇಟ್-ಹೌಸ್, ಪ್ಲಾಂಟೇಶನ್  ಬದಿಯಲ್ಲಿನ ವಿದ್ಯುತ್ ಚಾಲಿತ ತಂತಿ ಬೇಲಿಯ ಬದಿಯಲ್ಲಿನ ಮಣ್ಣಿನ ರಸ್ತೆ ಬರುತ್ತದೆ. ಏರು ಇಳಿವಿನ  ರಸ್ತೆಯಲ್ಲಿ ಸಾಗಿದರೆ ಅಲ್ಲಲ್ಲಿ ಜುಳು ಜುಳು ಹರಿಯುವ ತೊರೆ ಹಳ್ಳ ಕೊಳ್ಳಗಳನ್ನು ದಾಟಿ ಸಾಗುತ್ತೇವೆ. ಈ ಹಳ್ಳದಲ್ಲಿ ಹರಿಯುವ ತಿಳಿಯಾದ ನೀರು ಅನುಭವವನ್ನು ನೀಡುತ್ತಿದೆ. ತುಂಬಾ ಕಡಿದಾದ ಅಷ್ಟೇ ಇಳಿಜಾರಾದ  ಕಲ್ಲು ಗುಂಡುಗಳ ಈ ರಸ್ತೆಯಲ್ಲಿ ಮುಂದೆ ಸಾಗಿದರೆ ನಾವು ಕೋಲೋಡಿ ಕಾಲೊನಿಯನ್ನು ತಲುಪುತ್ತೇವೆ. ಈಕಾಲೋನಿಯ ಮುಖ್ಯ ರಸ್ತೆ ಡಾಂಬರ ರಸ್ತೆಯಾಗಿದೆ ಇದರ ಎಡ ಬಲಕ್ಕೆ ಹಚ್ಚ ಹಸಿರಿನ ಭತ್ತ, ಇದರ ಮದ್ಯ  ಜುಳು ಜುಳು ಹರಿಯುವ ನೀರು ಹಚ್ಚ ಹಸಿರಾದ  ಪ್ರಕೃತಿಯ ಮಡಿಲಿನಲ್ಲಿ ನಾವು ಮುಂದೆ ಸಾಗಿದರೆ, ತೆಂಗು ಅಡಿಕೆ ಬಾಳೆ ಗೇರು ರಬ್ಬರ್ ಬೆಳೆಗಳು ಹಸರು ತೋಟಗಳು ನಮ್ಮನ್ನು ಕೈ ಬೀಸಿ ಕರೆಯುತ್ತವೆ. ಮುಂದೆ ಸಾಗಿದಂತೆಲ್ಲ ಎತ್ತರದ ಗಿರಿ ಶಿಖರಗಳು ಎದುರಾಗುತ್ತವೆ. ಈ ಗಿರಿ ಶಿಖರಗಳನ್ನು 'ಇಳಿಮಲೆ' ಎಂದು ಕರೆಯುತ್ತೇವೆ. ೮೦ ಕುಟುಂಬಗಳನ್ನೊಳಗೊಂಡ ಈ ಕೋಲೋಡಿಯಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದವರು ವಾಸವಾಗಿದ್ದಾರೆ. ೩೦೦ ಜನಸಂಖ್ಯೆ ಹೊಂದಿರುವ ಈ ಪ್ರದೇಶದಲ್ಲಿ ೨೦೦ ಮತದಾರರಿದ್ದಾರೆ, ಇವರಿಗಾಗಿ ಒಂದು ಅಂಗನವಾಡಿ ಶಾಲೆ ಇದೆ. ಪ್ರಾಥಮಿಕ ಶಾಲೆಗೆ ನೆರಿಯಾಗೆ ಬರಬೇಕು ಇಲ್ಲವೇ ಹಾಲಂಗಾಯ್ ಆಶ್ರಮ ಶಾಲೆಗೆ ಹೋಗಬೇಕು. ಈ ಪ್ರದೇಶದ  ಅವಿಭಕ್ತ ಕುಟುಂಬಗಳ ವಾಸದ ನೆಲೆಗಳು ಈಗ ಚದುರಿದ ಕುಟುಂಬಗಳಾಗಿವೆ. ಅವರು ವಾಸವಾಗಿರುವ ಹೊಲ ಗದ್ದೆಗಳಲ್ಲಿನ ಹೆಂಚಿನ ಮನೆಗಳಲ್ಲಿ ವಾಸವಾಗಿದ್ದಾರೆ. ಈ ಪ್ರದೇಶವನ್ನು ಈಗ ಇಳಿಮಲೆ ಎಂದು ಕರೆಯುತ್ತಾರೆ. ೧೯೮೦ಕ್ಕೆ ಮೊದಲು ಇದು ಏಲಕ್ಕಿ ಮಲೆಯಾಗಿತ್ತು. ಬಾರಿಮಲೆಯಲ್ಲಿ ಈಗ ಮಲೆಕುಡಿಯರು ವಾಸವಾಗಿಲ್ಲ. ಇಲ್ಲಿನ ಮೂಲ ನಿವಾಸಿಗಳನ್ನು ಈ ಹಿಂದೆಯೇ ಇಲ್ಲಿಂದ ಖಾಲಿ ಮಾಡಿಸಿದ್ದಾರೆ. ಭೂಮಾಲೀಕರ ಕಿರಿಕುಳದಿಂದಾಗಿ ಇವರು ಇಲ್ಲಿಂದ ದೂರ ಸರಿಯುವ ಪ್ರಯತ್ನ ನಡೆದಿದೆ. ಎಂದು ಎಲ್ಯಣ್ಣರವರು ಹೇಳುತ್ತಾರೆ. ೧೯೭೭ರಿಂದ ೭೮ರ ಅವಧಿಯ ನಂತರ ವನಪ್ರಿಯರ ಕಿರುಕುಳ ಕಡಿಮೆಯಾಗಿ ಇವರಿಗೆ ಇದ್ದ ಕುಮರಿ ಬೆಳೆ ಕೃಷಿ ಪದ್ದತಿಯನ್ನು ಕೈ ಬಿಡಲಾಯಿತು. ಇಲ್ಲಿನವರನ್ನು ಏಲಕ್ಕಿ ತೋಟದಲ್ಲಿ ಕೆಲಸಕ್ಕೆ ದುಡಿಸಿಕೊಳ್ಳಲಾರಂಭಿಸಿದರು. ೧೯೭೮ ಕ್ಕೆ ಮೊದಲು ಇಲ್ಲಿ ದುಡಿಯುತ್ತಿದ್ದವರಿಗೆ

ಮೂರು ಪಾವು ಅಕ್ಕಿ, ಉಪ್ಪು, ಮೆಣಸು ಕೊಡುವ ಪದ್ದತಿ ಇತ್ತು. ೧೯೮೦ರಲ್ಲಿ ಈ ಕೋಲೋಡಿಗೆ ಬಂದು ನೆಲೆಸಿದರು ಈ ಇಳಿಮಲೆ ಪ್ರದೇಶದ ವ್ಯಾಪ್ತಿಯಲ್ಲಿನ ಪ್ರದೇಶಗಳನ್ನು,

೧. ಮಾಣಿ ದಿಕ್ಕಲು, ೨. ಮಂಚಿ ದಿಕ್ಕಲು, ೩. ಆನೆ ದಿಕ್ಕಲು, ೪. ಅಮೇದಿಕ್ಕಲು ಎಂದು ಕರೆಯಾಲಾಗುತ್ತದೆ. ಇಲ್ಲಿನ ಜನರು ಮಾತಾನಾಡುವ ಬಾಷೆ ಮೂಲ ಹಳೆಯಾದಾದ ತುಳು ಭಾಷೆ ಆಗಿದೆ. ಈಗಿನ ತುಳೂವಿಗೂ ಇವರು ಮಾತಾನಾಡುವ ತುಳುವಿಗೂ ತುಂಬಾ ಅಂತರವಿದೆ. ಇವರು ಮಾತಾನಾಡುವ ತುಳು ಭಾಷೆಯಲ್ಲಿ ಆದಿವಾಸಿ ಬುಡಕಟ್ಟು ಭಾಷೆಯ ಸೊಗಡು ಇದೆ. ಇವರು ಚಾರ್ಮಾಡಿಯ ಪ್ರದೇಶದಲ್ಲಿರುವ ಕಾಲ ಭೈರವೇಶ್ವರನ ಆರಾಧಕರಾಗಿದ್ದಾರೆ. ಇಲ್ಲಿ ಈಗಲೂ ದೇವಸ್ಥಾನವಿದೆ. ಪ್ರತಿ ವರ್ಷ ಪ್ರತಿಯೊಂದು ಕುಟುಂಬದವರು ಇಲ್ಲಿಗೆ ಬಂದು ಪೂಜೆ ಮಾಡಿಕೊಂಡು ಬರುತ್ತಿದ್ದಾರೆ. ಹಿಂದೆಲ್ಲಾ ಕಾಡಿನಲ್ಲಿ ನಡೆದುಕೊಂಡು ಹೋಗಿ ಬರುತ್ತಿದ್ದರು. ಈಗೆಲ್ಲಾ ಹೋಗಿ ಬರಲು ವಾಹನ ಸೌಕರ್ಯವಿದೆ ಎಂದು ಎಲ್ಯಣ್ಣ ಹೇಳುತ್ತಾರೆ. ಈಗ ಈ ಕೋಲೋಡಿಯಲ್ಲಿ ಮಣಿ ಚಾಮುಂಡಿ, ಮಹಾಲ್ಲೋಲ್ಲ, ನಾಗಬ್ರಹ್ಮ, ಉಲ್ಲಾಕ್ಲು ದೈವ, ಆರಾಧನೆಯನ್ನು ಮಾಡುತ್ತಿದ್ದಾರೆ. ನವರಾತ್ರಿ ಉತ್ಸವ ಸೇರಿದಂತೆ ಪ್ರತಿವರ್ಷ ಮೇ ೭ರಂದು ಮಲೆ ಚಾಮುಂದೇಶ್ವರಿಯ ಜಾತ್ರೆ ನಡೆಯುತ್ತದೆ. ಚೌತಿಯಲ್ಲಿ ತೆನೆ ಹಬ್ಬ ನಡೆಯುತ್ತದೆ. ಈ ತೆನೆಹಬ್ಬದಲ್ಲಿ ಮನೆ ತುಂಬಿಸುವ ಪದ್ದತಿ ಇದೆ. ಕಮರಿ ಬೇಸಾಯ ಪದ್ದತಿಯಿಂದ ಬೆಳೆದ ಭತ್ತದ ರಾಶಿಯ ಬೆಳೆಯನ್ನು ರಾಶಿ ಪೂಜೆ ಮಾಡಿ ಮನೆ ತುಂಬಿಸಿಕೊಳ್ಳುವ ಪೂಜೆಯನ್ನು ತೆನೆಹಬ್ಬ ಎಂದು ಕರೆಯುತ್ತಾರೆ. ಭತ್ತದ ಕಾಳಿಗೆ ಪೂಜೆ ಮಾಡಿ ಮನೆ ತುಂಬಿಸಿಕೊಳ್ಳುವುದನ್ನು ಕೊರಳ್‌ಕಟ್ನದು ಎಂದು ಕರೆಯುತ್ತಾರೆ. ಕೋಲೋಡಿ ನಿವಾಸಿಗಳಲ್ಲಿ ಕೌಂತು, ಕೋಟೆ, ಮುದರ ಈ ಮೂರು ವಂಶದವರು ಇಲ್ಲಿನ ಕುಟುಂಬಗಳ ಮೂಲ ಪುರುಷರಾಗಿದ್ದಾರೆ. ಇವರು ಮಕ್ಕಳ ಕಟ್ಟು ಸಂತತಿಗೆ ಸೇರಿದವರಾಗಿದ್ದಾರೆ ಎಂದು ಎಲ್ಯಣ್ಣರವರಿಂದ ತಿಳಿದುಬರುತ್ತದೆ.

## ಕಿರು ಜಲ ವಿದ್ಯುತ್ ಯೋಜನೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸವಾಗಿರುವ ಮಲೆಕುಡಿಯ ಬುಡಕಟ್ಟು ಸಮುದಾಯದವರ ನೆಲೆಗಳಿಗೆ ಕ್ಷೇತ್ರ ಕಾರ್ಯಕ್ಕೆ ಹೋದಾಗ ಅತ್ಯಂತ ದುರ್ಗಮ ನಾಗರಿಕತೆ ಸೌಲಭ್ಯಗಳಿಂದ ವಂಚಿತರಾಗಿ ಜೀವನ ಸಾಗಿಸುತ್ತಿರುವ ಕುಟುಂಬಗಳು ಈಗಲೂ ಸಹ ಕತ್ತಲೆ ಬದುಕಿನಲ್ಲಿ ದಿನಕಳೆಯಬೇಕಾದ ಸ್ಥಿತಿಗತಿಗಳಿವೆ. ಕೆಲವೇ ಕೆಲವು ಬೆರಳಣಿಕೆಯಷ್ಟು ಕುಟುಂಬಗಳು ಮಾತ್ರ ವಿದ್ಯುತ್ ಸಂಪರ್ಕ ಪಡೆದುಕೊಂಡಿವೆ. ಉಳಿದ ಬಹುಪಾಲು ಕುಟುಂಬಗಳು ಎಣ್ಣೆ ದೀಪದಲ್ಲಿ ಬದುಕುವುದು ಅದ್ಯಯನದಿಂದ ತಿಳಿದುಬರುತ್ತದೆ. ಇಂತಹ ದುಸ್ಥಿತಿಯಲ್ಲಿ ವಿದ್ಯುತ್ ಕಂಬಗಳೂ ಇಲ್ಲದೇ, ತಂತಿ ಸಂಪರ್ಕವಿಲ್ಲದೆ ಇದ್ದರೂ ಸಹ ಕೆಲವು ಮಲೆಕುಡಿಯರ ಮನೆಯಲ್ಲಿ ವಿದ್ಯುತ್ ಬಲ್ಪ್ ಇರುತ್ತದೆ. ಸ್ವಿಚ್ ಬೋರ್ಡ್ ಇರುತ್ತದೆ. ನಾವು ಸ್ವಿಚ್ ಹಾಕಿದರೆ ವಿದ್ಯುತ್ ಬೆಳಕು ಮೂಡುತ್ತದೆ. ಆದರೆ ನಮಗೆ ಇದು ಆಶ್ಚರ್ಯವಾಗುತ್ತದೆ. ಇದು ಹೇಗೆ? ಎಂದು ಕೂತೂಹಲದಿಂದ ಕುಡುಕುವ ಪ್ರಯತ್ನ ಮಾಡಿದಾಗ ಅದುವೇ ಈ ಪ್ರದೇಶದಲ್ಲಿರುವ ಕಿರು ಜಲವಿದ್ಯುತ್ ಯೋಜನೆಯಾಗಿರುತ್ತದೆ.

ಕರ್ನಾಟಕ ಸರಕಾರ ಮತ್ತು ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆ ಸಹಕಾರದೊಂದಿಗೆ ಬಂಜಾರು ಮಲೆಯಲ್ಲಿ ೨೦೦೨ರಲ್ಲಿ ಕಿರು ಜಲ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲಾಗಿದೆ. ಇದರಿಂದಾಗಿ

ಇಲ್ಲಿನ ೨೨ ಕುಟುಂಬಗಳಿಗೆ ವಿದ್ಯುತ್ ಸಂಪರ್ಕ ದೊರೆತಿದ್ದು, ಈ ೨೨ ಮನೆಗಳಿಗೆ ಬೆಳಕು ಸೌಲಭ್ಯ ದೊರೆತಿದೆ. ಉಳಿದ ೧೫ ಮನೆಗಳಿಗೆ ಈ ಸೌಲಭ್ಯ ದೊರೆತಿಲ್ಲ. ಕಳೆದ ೮ ವರ್ಷಗಳಿಂದಲೂ ಇವರ ಪ್ರಯತ್ನ ನಡೆಯುತ್ತಿದ್ದರೂ ಪ್ರಯೋಜನವಾಗಿಲ್ಲದೆ ಇರುವುದು ತಿಳಿದು ಬರುತ್ತದೆ. ೨೦೦೨ರಲ್ಲಿ ಈ ಕಿರು ಜಲವಿದ್ಯುತ್ ಯೋಜನೆಯ ಉದ್ಘಾಟನೆಯ ಸಂದರ್ಭದಲ್ಲಿ ಅಂದಿನ ಸಮಾಜ ಕಲ್ಯಾಣ ಸಚಿವರಾದ ಕಾಗೋಡು ತಿಮ್ಮಪ್ಪರವರು ಈ ಪ್ರದೇಶಕ್ಕೆ ಬಂದು ಇವರ ಸಮಸ್ಯೆಗಳನ್ನು ಆಲಿಸಿದ್ದರು. ಆಗಿನ ಶಾಸಕರಾಗಿದ್ದ ಪ್ರಭಾಕರ ಬಂಗೇರವರು ಆಗ ಇಲ್ಲಿನ ಸೇತುವೆಗೆ ಶಿಲಾನ್ಯಾಸ ಮಾಡಿದ್ದಾರೆ. ಆದರೆ ಸೇತುವೆ ಕಾಮಗಾರಿ ಮಾತ್ರ ಇದುವರೆಗೆ ನಡೆಯದೇ ಹಾಗೆಯೇ ಇದೆ. ಈ ಸಮಸ್ಯೆ ಸಮಸ್ಯೆಯಾಗಿಯೇ ಉಳಿದಿದೆ. ಹಿಂದೆ ಕೇಂದ್ರ ಸರಕಾರ ಇಲ್ಲಿನ ಮೂಲನಿವಾಸಿಗಳ ಸಮಗ್ರ ಅಭಿವೃದ್ಧಿಗಾಗಿ ವಿಶೇಷ ಪ್ಯಾಕೇಜನ್ನು ಪ್ರಕಟಿಸಿತ್ತು. ಇಲ್ಲಿ ೫ ಲಕ್ಷ ರೂ. ಅನುದಾನ ವೆಚ್ಚದಲ್ಲಿ ಸಮಜ ಮಂದಿರವನ್ನು ನಿರ್ಮಿಸಲಾಗಿದೆ. ಇದರ ಹೊರತಾಗಿ ಬೇರೆ ಅಭಿವೃದ್ಧಿಯಗಿರುವುದು ಕಂಡುಬರುತ್ತಿಲ್ಲ. ಇಲ್ಲಿನ ಮಕ್ಕಳಿಗೆ ಅಂಗನವಾಡಿ ಶಾಲೆ, ಕಿರಿಯ ಪ್ರಾಥಮಿಕ ಶಾಲೆ ಸೌಲಭ್ಯ ಇರುವುದಿಲ್ಲ. ಶೌಚಾಲಯ ಸೌಲಭ್ಯವಿಲ್ಲದೆ ಈಗಲೂ ಬಯಲು ಶೌಚಾಲಯವನ್ನು ಅವಲಂಭಿಸಿರುತ್ತಾರೆ. ಶ್ರೀಕ್ಷೇತ್ರ ಧರ್ಮಸ್ಥಳದ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಗ್ರಾಮ ಪಂಚಾಯಿತಿ ನೆರವಿನಿಂದ ಇಲ್ಲಿನ ಎಲ್ಲಾ ಕುಟುಂಬಗಳಿಗೆ ಶೌಚಾಲಯ ಸೌಲಭ್ಯ ಆಗಬೇಕಾಗಿತ್ತು. ಇಲ್ಲಿ ಆಗಿಲ್ಲ.

**ಕೋಷ್ಟಕ ೪.೧.**

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಮಲೆ ಕುಡಿಯರ ಜಲವಿದ್ಯುತ್ ಯೋಜನೆಗಳ ವಿವರ.**

| ಕ್ರ.ಸಂ. | ಹೆಸರು | ಸ್ಥಳ/ ಪ್ರದೇಶ | ಮಾದರಿ |
|---|---|---|---|
| ೧ | ಬಾಂಜಾರುಮಲೆ | ಬಾಂಜಾರು ಮಲೆ | ಸಾಮೂಹಿಕ |
| ೨ | ಎಳೆನೀರು | ಎಳೆನೀರು | ಸಾಮೂಹಿಕ |
| ೩ | ಕೆ. ರಾಮ | ಅಂಬಟೆ ಮಲೆ | ವೈಯಕ್ತಿಕ |
| ೪ | ಎಲ್ಯಣ್ಣ | ಕೋಲೋಡಿ | ವೈಯಕ್ತಿಕ |
| ೫ | ಪುಟ್ಟಣ್ಣ | ನಾವುರು | ವೈಯಕ್ತಿಕ |
| ೬ | ಪ್ರಸನ್ನ | ನೆರಿಯಾ | ವೈಯಕ್ತಿಕ |
| ೭ | ಸರ್ವೇಶ | ಪರ್ಪಳ | ವೈಯಕ್ತಿಕ |
| ೮ | ದಯಾನಂದ | ಮಲ್ಲ | ವೈಯಕ್ತಿಕ |
| ೯ | ವೆಂಕಪ್ಪ | ಶಿಶಿಲ | ವೈಯಕ್ತಿಕ |

## ಬಾಂಜಾರುಮಲೆಯ ಕಿರು ಜಲವಿದ್ಯುತ್ ಯೋಜನೆ

ಸುತ್ತಲೂ ಸುತ್ತುವರಿದ ಎತ್ತರದ ಗಿರಿಶಿಖರ ಎಸ್ಟೇಟ್‌ಗಳ ಮಧ್ಯೆ ೧೮೦ ಎಕರೆ ಭೂ ವಿಸ್ತೀರ್ಣದಲ್ಲಿ ವಾಸವಾಗಿರುವ ೩೭ ಕುಟುಂಬಗಳಲ್ಲಿ ೧೩೦ ಜನಸಂಖ್ಯೆಯನ್ನು ಹೊಂದಿರುವ ಬಾಂಜಾರುಮಲೆಗೆ ವಿದ್ಯುತ್ ಸಂಪರ್ಕ ಒಂದು ಗಗನ ಕುಸುಮವಾಗಿರುವ ಸ್ಥಿತಿಯಲ್ಲಿ ೨೨ ಕುಟುಂಬಗಳಿಗೆ ಬೆಳಕು ನೀಡುವ ಕಿರು ಜಲವಿದ್ಯುತ್ ಯೋಜನೆಯ ಅನುಷ್ಠಾನವು ಕತ್ತಲೆ ಬದುಕಿನ ಕರಿಮಲೆಯ ಜನರಿಗೆ ಒಂದು ವರದಾನವಾಗಿದೆ. ಇನ್ನೂ ಬಾಕಿ ಉಳಿದ ೧೨ ಕುಟುಂಬಗಳಿಗೆ ಬೆಳಕಿನ ಸೌಲಭ್ಯ ಆಗಬೇಕಾಗಿದೆ. ಚಾರ್ಮಾಡಿಯ ಘಟ್ಟ ಪ್ರದೇಶದಿಂದ ಅತಿ ಹೆಚ್ಚು ಮಳೆಯಿಂದಾಗಿ ಹರಿಯುವ ಸುಣಾಳು ಹೊಳೆ ಮತ್ತು ನೆರಿಯಾದ ಹೊಳೆಗೆ ೬೦೦ ಮೀ. ನಷ್ಟು ಉದ್ದದ ಕಾಲುವೆಯನ್ನು ಮಾಡಿ ಈ ಕಾಲುವೆಯಲ್ಲಿ ನೆರಿಯಾದ ಹೊಳೆಯ ನೀರನ್ನು ಹರಿಸಿ, ಈ ನೀರನ್ನು ಸಂಗ್ರಹಿಸಲು ೮ ಅಡಿ ಉದ್ದದ ಆಳದ ನೀರು ಸಂಗ್ರಹ ತೊಟ್ಟಿ ಮಾಡಿ ಅದರ ಮೇಲೆ ಕಸ ಕಡ್ಡಿ ಬೀಳದಂತೆ ಶೋದಿಸುವ ಸಣ್ಣ ರಂದ್ರದ ಪರದೆ ಹಾಕಲಾಗಿದೆ. ಸಂಗ್ರಹವಾದ ಈ ಟ್ಯಾಂಕ್‌ನಿಂದ ಗುಡ್ಡದ ಕೆಳಬಾಗದಲ್ಲಿ ಅಳವಡಿಸಿರುವ ಜಟ್‌ನ ಕೊಠಡಿಗೆ ಪೈಪ್ ಸಂಪರ್ಕ ಮಾಡಿ ಇದಕ್ಕೆ ವಾಟರ್ ವಾಲ್ ಮತ್ತು ಏರ್ ವಾಲ್‌ಗಳನ್ನು ಆಳವಡಿಸಿದ್ದಾರೆ. ಎತ್ತರದಲ್ಲಿ ಸಂಗ್ರಹಿಸಲಾದ ನೀರಿನ ತೊಟ್ಟಿನಿಂದ ಪೈಪ್ ಮೂಲಕ ಇಳಿಜಾರಿನ ಕೊಳವೆಯಲ್ಲಿ ರಭಸವಾಗಿ ಬರುವ ನೀರು ಅಷ್ಟೆ ಒತ್ತಡದ ರಭಸಕ್ಕೆ ಕೆಳಗೆ ಜೋಡಿಸಲಾದ ಜಲಚಕ್ರ ತಿರುಗಿದಾಗ ಇಲ್ಲಿನ ಜಟ್ ಡೈನೊಮದಿಂದ ಜಲವಿದ್ಯುತ್ ಉತ್ಪಾದನೆಯಾಗತ್ತದೆ. ಇಲ್ಲಿಂದ ೬ ಕೀಮಿ ದೂರದವರೆಗೆ ತಂತಿ ಮೂಲಕ ೨೨ ಕುಟುಂಬಗಳಿಗೆ ವಿದ್ಯುತ್ ಸರಬಾರಾಜು ಮಾಡುವ ಯೋಜನೆ ಇದಾಗಿದೆ. ಬೆಂಗಳೂರಿನ ಟಿ.ಐ.ಡಿ.ಎಸ್ ಸಂಸ್ಥೆ ತಾಂತ್ರಿಕ ನಿರ್ವಹಣೆಯೊಂದಿಗೆ ೧೨ ಲಕ್ಷ ರೂ. ಬೆಲೆಯ ಈ ಯೋಜನೆಗೆ ಶ್ರೀ ಕ್ಷೇತ್ರ ಧರ್ಮಸ್ಥಳದ ಗ್ರಾಮೀಣ ಅಭಿವೃದ್ಧಿ ಯೋಜನೆ ೧.೫೦ ಲಕ್ಷ ರೂ. ಮತ್ತು ಸಿ.ಎ. ಬ್ಯಾಂಕ್‌ನಿಂದ ೧ ಲಕ್ಷ ರೂ. ಸಾಲ ಸೌಲಭ್ಯ ದೊರೆತಿದೆ. ಬಾಂಜಾರು ಮಲೆ ಜಲವಿದ್ಯುತ್ ಯೋಜನೆ ಅನುಷ್ಠಾನ ಸಮಿತಿ ವತಿಯಿಂದ ಪ್ರತಿ ತಿಂಗಳೂ ೨೨ ಕುಟುಂಬಗಳಿಗೆ ೧೦೦ ರೂ. ನಂತೆ ಕಂತಿನ ಹಣದ ರೂಪದಲ್ಲಿ ಸಾಲ ತೀರಿಸುತ್ತಿದ್ದಾರೆ. ತಾಲೂಕು ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ೬ ಲಕ್ಷ ಅನುದಾನ ಮಂಜೂರಾಗಿದೆ. ಪ್ರತಿ ಕುಟುಂಬಕ್ಕೆ ಇದರ ನಿರ್ಮಾಣ ಕಾಮಗಾರಿಗೆ ೭೦ ಕೂಲಿ ಕಾರ್ಮಿಕರು ಕೆಲಸ ಮಾಡಿದ್ದಾರೆ. ಪ್ರತಿ ಕುಟುಂಬ ಪ್ರತಿ ತಿಂಗಳು ನೀಡುವ ೧೦೦ ರೂ. ವಂತಿಕೆಯಲ್ಲಿ ಇದರ ರೀಪೆರಿ ನಿರ್ವಹಣೆ, ಮೇಲ್ವಿಚಾರಕರ ಸಂಬಳ ವೆಚ್ಚಗಳನ್ನು ಭರಿಸಲಾಗುತ್ತದೆ. ವೀರೇಂದ್ರ ಹೆಗಡೆಯವರ ಅಧ್ಯಕ್ಷತೆಯಲ್ಲಿ ದಿ. ೧೦.೦೫.೨೦೦೨ರಂದು ಅಂದಿನ ಸಮಾಜ ಕಲ್ಯಾಣ ಸಚಿವರಾದ ಕಾಗೋಡುತಿಮ್ಮಪ್ಪರವರು ಈ ಯೋಜನೆಯನ್ನು ಉದ್ಘಾಟನೆ ಮಾಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ಜ್ಯೋತಿ ಆರ್ ಪೂಜಾರಿ ಬೆಳ್ತಂಗಡಿ ಶಾಸಕರಾದ ಪ್ರಭಾಕರ್ ಬಂಗೇರ, ಮಂಗಳೂರಿನ ಯನಪೋಯ ಗ್ರೂಪ್ಸ್‌ನ ಮಹಮ್ಮದ್ ಕುಂಞ, ಟಿ.ಐ. ಡಿ.ಇ. ನಿರ್ದೇಶಕರಾದ ರಾ.ಜೆ. ದಿನೇಶ್, ಯೋಜನಾ ಸಮನ್ವಯ ಅಧಿಕಾರಿಗಳಾದ ಬಿ.ಟಿ. ಲಮಾಣಿ, ಬೆಳ್ತಂಗಡಿ ತಾ.ಪ. ಕಾರ್ಯ ನಿರ್ವಹಣಾ ಅಧಿಕಾರಿ ಎಸ್, ರಾಜಯ್ಯ, ಬಾಂಜಾರುಮಲೆಯ ಕಿರು ಜಲವಿದ್ಯುತ್ ಯೋಜನಾ ಅನುಷ್ಠಾನ ಸಮಿತಿ, (ರಿ)ನ ಅಧ್ಯಕ್ಷರಾದ ಎ.ಬಿ. ಅಣ್ಣಪ್ಪ, ತಾಲೂಕು ಸಮಾಜ ಕಲ್ಯಾಣ ಅಧಿಕಾರಿ ನಾರಾಯಣ ರಾವ್ ಮತ್ತು ಎಸ್.ಕೆ.ಡಿ.ಪಿ.ಆರ್‌ನ ಕಾರ್ಯ ನಿರ್ವಾಹಕ ಅಧಿಕಾರಿ ಹೆಚ್.ಎಲ್. ಮಂಜುನಾಥ ಉಪಸ್ಥಿತಿಯಲ್ಲಿ ಈ ಯೋಜನೆ ಉದ್ಘಾಟನೆಯಾಗಿದೆ. ಹತ್ತಿರದಲ್ಲಿ

ಸಿಡಿಲು ನಿರೋಧಕವನ್ನು ಸಹ ಆಳವಡಿಸಲಾಗಿದೆ. ಈ ಯೋಜನಾ ಸ್ಥಳದಿಂದ ಹೊಳೆ ದಾಟಿ ಮುಂದೆ ಸಾಗುವ ಮೇಲ್ಸೆತುವೆ ನಿರ್ಮಾಣಕ್ಕಾಗಿ ಶಿಲಾನ್ಯಾಸ ೧೦-೦೫-೨೦೦೨ ಮಾಡಲಾಗಿದೆ. ಆದರೆ ಸೇತುವೆ ಮಾತ್ರ ಆಗಿಲ್ಲದೇ ಇರುವುದು ಗೋಚರವಾಗುತ್ತದೆ. ಆಗಿನಿಂದ ಇಂದಿನವರೆಗೆ ಈ ಯೋಜನೆ ಯಶಸ್ವಿಯಾಗಿ ನಡೆದುಕೊಂಡು ಬಂದಿದೆ. ಇದಕ್ಕಿಂತಲೂ ಮೊದಲು ಆರಂಭವಾದ ಎಳೆನೀರು ಜಲವಿದ್ಯುತ್ ಯೋಜನೆಹಾಳಾಗಿದ್ದು, ಈಗ ಸ್ಥಗಿತವಾಗಿದೆ. ನಾವು ಎಲ್ಲರೂ ಈ ಯೋಜನೆಯನ್ನುನೋಡುವ ಅವಶ್ಯಕತೆ ಇದೆ. ಇದನ್ನು ಪ್ರಕೃತಿದತ್ತ ಪ್ರವಾಸಿ ತಾಣವನ್ನಾಗಿ ಮಾಡಿದರೆ ತುಂಬಾ ಉಪಯುಕ್ತವಾಗುತ್ತದೆ.

೨೦೦೮ರಲ್ಲಿ ಕರ್ನಾಟಕ ಜನಪದ ಅಕಾಡಮಿ ವತಿಯಿಂದ ರಾಜ್ಯ ಪ್ರಶಸ್ತಿ ವಿಜೇತರಾದ ಶಿಶಿಲದ ವೆಂಕಣ್ಣ ಮಲೆಕುಡಿಯರ ಮನೆಯಲ್ಲಿ ನಾನು ಕುಟುಂಬದ ಸಮೀಕ್ಷೆ ಮಾಹಿತಿ ಪಡೆಯುವಾಗ ವಿದ್ಯುತ್ ಸೌಲಭ್ಯವಿದೆಯೇ? ಎಂದು ಕೇಳಿದಾಗ ಇಲ್ಲ ಎಂದರು. ಆದರೆ ಅವರ ಮನೆಯಲ್ಲಿ ವಿದ್ಯುತ್ ಬಲ್ಫ್ ಅಳವಡಿಸಲಾಗಿದೆ. ಇದು ಹೇಗೆ? ಎಂದಾಗ ನಮಗೆ ಇದುವರೆಗೆ ಕರೆಂಟ್ ಸೌಲಭ್ಯ ಸಿಕ್ಕಿಲ್ಲ. ನಿಮ್ಮ ಹಾಗೆ ಬಂದವರು ಎಲ್ಲಿಯೋ ಕುಳಿತು ಬರೆದುಕೊಂಡು ಹೋಗುತ್ತಾರೆ. ನಮಗೆ ಬಿ.ಪಿ.ಎಲ್ ಕಾರ್ಡ್ ಸಿಕ್ಕಿಲ್ಲ. ನಮಗೆ ಕೇಸರಿ ಬಣ್ಣದ ಕಾರ್ಡ್ ನೀಡಿದ್ದಾರೆ. ನೋಡಿ ಎಂದು ತಮ್ಮ ಅಳಲುತೋಡಿಕೊಂಡರು. ಮತ್ತೆ ಬೆಳಕು ಇಲ್ಲದ ಕತ್ತಲೆಗೆ ಎಣ್ಣೆ ದೀಪ ಬಳಸುತ್ತಿದ್ದಾರಾ? ಎಂದು ಕೇಳಿದಾಗ ಇಲ್ಲ ಇಲ್ಲಿ ನೋಡಿ ಎಂದು ಸ್ವಿಚ್ ಹಾಕಿ ಮನೆಯ ಬಲ್ಬ್‌ನ್ನು ಉರಿಸಿ ತೋರಿಸಿದರು. ನನಗೆ ಆಶ್ಚರ್ಯವಾಗಿ ಇದು ಹೇಗೆ? ಎಂದು ಕೇಳಿದಾಗ ಇಲ್ಲಿ ಬನ್ನಿ ನೋಡಿ ನಾವೇ ತಯಾರಿಸಿ ಬಳಸುವ ಕರೆಂಟ್ ಇದು ಎಂದು ಹೊರಗೆ ಕರೆದುಕೊಂಡು ಹೋದರು. ಗುಡ್ಡದ ಇಳಿಜಾರಿನಲ್ಲಿ ಒಂದು ಪೈಪ್‌ಗೆ ಒರತೆ ನೀರು ಹಾಯಿಸಿ ಪೈಪ್‌ನ ತುದಿಗೆ ಒಂದು ಸಣ್ಣ ರಂದ್ರ ಮಾಡಿ ನೀರು ಹಾಯಿಸಿದಾಗ ತುಂಬಾ ಒತ್ತಡದಲ್ಲಿ ಬರುವಾಗ ಇದಕ್ಕೆ ೧.ಕಿ.ಮೀ ವ್ಯಾಟ್ ಸಾಮರ್ಥ್ಯ ಡೈನಮೋ ಅಳವಡಿಸಿದ್ದಾರೆ. ಈ ಡೈನಾಮೋದಲ್ಲಿರುವ ಅಳವಡಿಸಿದ ಜಲ ಚಕ್ರಕ್ಕೆ ಒತ್ತಡದಿಂದ ಬರುವ ನೀರು ಬಿದ್ದಾಗ ಈ ಚಕ್ರ ಅತೀ ವೇಗದಲ್ಲಿ ತಿರುಗುವುದರಿಂದ ಮನೆ ಬಳಕೆಗೆ ಬೇಕಾದ ೨೫೦ ವೋಲ್ಟ್ ಸಾಮರ್ಥ್ಯದ ವಿದ್ಯುತ್ ತಯಾರಾಗುತ್ತದೆ. ಇವರ ಮನೆಯ ಬಲ್ಬ್‌ಗಳು ಉರಿಯುತ್ತವೆ. ಈ ಡೈನಾಮೋವನ್ನು ಏಳು ಸಾವಿರ ರೂಪಾಯಿಗಳಿಗೆ ನಿರಂಜನ್‌ರಿಂದ ತರಿಸಲಾಯಿತು. ಇದನ್ನು ಹೊರತು ಪಡಿಸಿದರೆ ಯಾವುದೇ ಖರ್ಚು ಇದಕ್ಕೆ ಇರುವುದಿಲ್ಲ ಎಂಬುದನ್ನು ವೆಂಕಪ್ಪ ಮಲೆಕುಡಿಯ ಹೇಳುತ್ತಾರೆ. ಈ ಒರತೆ ನೀರಿಗೆ ಹಾಕಿರುವ ಒಂದು ಇಂಚು ಪೈಪ್‌ಗೆ ಒಂದು ವಾಲ್ ಹಾಕಿ ಇದರ ಮೂಲಕ ಈ ನೀರನ್ನು ಕುಡಿಯಲು ಮತ್ತು ಕೃಷಿಗೆ ಬಳಸುತ್ತಾರೆ. ಪಕ್ಕದಲ್ಲಿ ಇಲ್ಲಿಯೇ ಕಪಿಲ ನದಿ ಹರಿದರೂ ಇವರಿಗೆ ಇರುವ ಕುಡಿಯುವ ನೀರಿನ ಮೂಲವೆಂದರೆ ಗುಡ್ಡದ ಈ ಒರತೆ ನೀರು ಆಗಿದೆ. ಬೇಸಿಗೆಯಲ್ಲಿ ಇದು ಕಡಿಮೆ ಆಗುತ್ತದೆ. ಕುಡಿಯಲು ಬೇಕಾದಷ್ಟು ಮಾತ್ರ ಸಿಗುತ್ತದೆ. ತೊಂದರೆ ಅಂತು ಇಲ್ಲ ಎಂದು ವೆಂಕಪ್ಪ ತಿಳಿಸಿದರು.

ಮಲ್ಲ ವಾಳ್ಯದಲ್ಲಿ ವಾಸವಾಗಿರುವ ಗಿರಿಯಪ್ಪ ಮಲೆಕುಡಿಯ ಮತ್ತು ಅಂಬಟಮಲೆಯ ಕೆ.ರಾಮು, ಕೋಲೋಡಿಯ ಕೆ. ಎಲ್ಯಣ್ಣ, ನಾವೂರಿನ ಪುಟ್ಟಣ್ಣ, ನೆರಿಯಾದ ಪ್ರಸನ್ನ, ಪರ್ಪಳದ ಸರ್ವೇಶರವರು ಸಹ ತನ್ನ ಸ್ವಂತ ವಿದ್ಯುತ್ ಉತ್ಪಾದನಾ ಘಟಕವನ್ನು ಸ್ಥಾಪನೆ ಮಾಡಿಕೊಂಡಿದ್ದಾರೆ. ಇವರು ತಯಾರಿಸಿದ ಈ ವಿದ್ಯುತ್ ಇವರ ಕುಟುಂಬಗಳಿಗೆ ಪ್ರಯೋಜನವಾಗುತ್ತಿದೆ. ಮಲ್ಲವಾಳ್ಯದ ತಾನದಡಿ ಎಂಬಲ್ಲಿ

ಇವರು ಒಂದು ಕೆರೆಯನ್ನು ನಿರ್ಮಿಸಿದ್ದಾರೆ. ಕಾಡಿನಿಂದ ಹರಿದು ಬರುವ ಮಳೆನೀರು ಇಲ್ಲಿ ಸಂಗ್ರಹವಾಗುತ್ತದೆ. ಇಲ್ಲಿ ಸಂಗ್ರಹಿಸಿ ಇಡಲಾದ ಈ ನೀರನ್ನು ಇದರ ಕೆಳಭಾಗದ ಪ್ರದೇಶದಲ್ಲಿ ಒಂದು ಕಿ.ಮೀ. ದೂರದವರೆಗೆ ಇವರ ತೋಟದಲ್ಲಿ ಒಂದು ಸಣ್ಣ ಡೀಸಲ್ ಜನರೇಟರನ್ನು ಅಳವಡಿಸಿದ್ದಾರೆ. ಫೈಬರ್ ಪೈಪ್ ಮೂಲಕ ಇಲ್ಲಿಗೆ ನೀರು ಹರಿದು ಈ ಜನರೇಟರನ್ನು ತಿರುಗಿಸುತ್ತಾರೆ. ಈ ನೀರಿನ ನಿಯಂತ್ರಣಕ್ಕೆ ಗೇಟ್ವಾಲ್ ಹಾಕಿದ್ದಾರೆ. ಈ ನೀರು ಹರಿಯುವ ರಭಸಕ್ಕೆ ೨೩೦ ಕಿಲೋ ವ್ಯಾಟ್ ವಿದ್ಯುತ್ ಶಕ್ತಿ ಉತ್ಪಾದನೆಯಾಗುತ್ತದೆ. ಇದಕ್ಕೆ ೧.೨೦ ಲಕ್ಷ ರೂಪಾಯಿಗಳಷ್ಟು ಖರ್ಚಾಗಿದೆ. ಸರ್ಕಾರದಿಂದ ೬೦ ಸಾವಿರ ರೂಪಾಯಿಗಳ ಸಬ್ಸಿಡಿ ದೊರೆತಿದೆ. ಇದು ಇವರ ಕೃಷಿ ತೋಟಕ್ಕೆ ಹಾಗೂ ಮನೆಗೆ ಬಳಕೆಯಾಗುತ್ತಿದೆ. ಇವರ ಅಡಿಕೆ, ತೆಂಗು ಹಾಗೂ ರಬ್ಬರ್ ತೋಟಕ್ಕೆ ವಿದ್ಯುತ್ ಬಳಕೆಯಾಗುತ್ತಿದೆ. ಕಾಡಿನಲ್ಲಿ ಬದುಕಿದರೂ ಸಹ ಆಧುನಿಕ ವಿಜ್ಞಾನ, ತಂತ್ರಜ್ಞಾನದ ಪ್ರಯೋಜನ ಪಡೆದು ಜೀವನ ಸಾಗಿಸುತ್ತಿರುವ ಕರಿಯಪ್ಪ ತಮ್ಮ ಮನೆಗೆ ಡಿಟಿಹೆಚ್ ಸೌಲಭ್ಯದಿಂದ ಟಿ.ವಿ. ನೋಡುತ್ತಿದ್ದಾರೆ. ಮೊಬೈಲ್ ಹೊಂದಿದ್ದಾರೆ.

**೨. ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪುನರ್ವಸತಿ ಯೋಜನೆ ಹೋರಾಟ**

ಭಾಗ್ಯಲಕ್ಷ್ಮಿ ಸಂಪಾದಕತ್ವದ ಗಣಿಗಾರಿಕೆ ಮತ್ತು ಅಭಿವೃದ್ಧಿ, ಗ್ರಂಥದಲ್ಲಿ ಅನಂತರತ್ನಂ ಅವರು 'ಗಣಿಗಾರಿಕೆ ಜಾಗತಿಕ ಪ್ರಕ್ರಿಯೆ'(ಪುಟ. ೯) ಕುರಿತು ಚಿಂತನೆಯಲ್ಲಿ 'ಫಿಲಿಫೈನ್ಸ್‌ನಲ್ಲಿ ೩ ವರ್ಷದ ಹಿಂದೆ ಗಣಿಗಾರಿಕೆ ಸಂಬಂಧಿಸಿದಂತೆ ಒಂದು ಕಾನೂನು ಬಂದಿತು. ಅದು ಅದಿರನ್ನು ಬೇರೆ ದೇಶಗಳಿಗೆ ಕಳುಹಿಸಲು ಅವರಿಗೆ ಅವಕಾಶವನ್ನು ಒದಗಿಸಿ ಕೊಡಲಾಯಿತು. ಜನ ಸೇರಿ ಆ ಕಾಯ್ದೆಯನ್ನು ರದ್ದು ಮಾಡಿಸಿದ್ದಾರೆ. ಆ ಹಕ್ಕು ಬುಡಕಟ್ಟುಗಳಿಗೆ ಇರುತ್ತೆ. ಆದರೆ ಅದರ ಹಕ್ಕು ಸರ್ಕಾರಕ್ಕಿಲ್ಲ ಎಂದು. ಆ ಕಾಯ್ದೆಯನ್ನು ರದ್ದು ಮಾಡಿದ್ದಾರೆ. ಇನ್ನೂ ಕೆಲವು ಕಡೆ ಆರೋಗ್ಯ ವಿಷಯದ ಬಗ್ಗೆ ಹೋರಾಟ ಮಾಡ್ತಾ ಇದ್ದಾರೆ. ಗಣಿಗಾರಿಕೆ ಈ ರೀತಿ ಮಾಡುವುದರ ಬಗ್ಗೆ, ಕಾರ್ಮಿಕರ ಕೂಲಿಯ ಬಗ್ಗೆ ಹೀಗೆ ಅನೇಕ ರೀತಿಯಲ್ಲಿ ಹೋರಾಟ ಮಾಡುತ್ತಿದ್ದಾರೆ. ಆದಿವಾಸಿ ಜನಾಂಗ ಇದು ನಮ್ಮದೇ ಸಂಪನ್ಮೂಲ, ಸಕಾರಕ್ಕೂ ಇದರ ಮೇಲೆ ಹಕ್ಕಿಲ್ಲ ಎಂಬ ಕೂಗಿದೆ. ಹಕ್ಕು ಅವರಿಗೆ ಬಂದ ಮೇಲೆ ಅವರು ಏನು ಮಾಡ್ತಾರೋ ಹೇಳೋಕ್ಕಾಗಲ್ಲ. ಇವುಗಳೆಲ್ಲವನ್ನು ಅರ್ಥವಾಡಿಕೊಳ್ಳಬೇಕಾಗಿದೆ' ಎಂದು ಅನಂತರತ್ನಂರವರು(ಪುಟ. ೯) ಅಭಿಪ್ರಾಯಪಟ್ಟಿದ್ದಾರೆ.[೧೩]

ಕುದುರೆಮುಖ ರಾಷ್ಟ್ರೀಯ ಉದ್ಯಾನದ ಯೋಜನೆ ದಕ್ಷಿಣ ಕನ್ನಡ, ಚಿಕ್ಕಮಗಳೂರು ಮತ್ತು ಉಡುಪಿ ಈ ಮೂರು ಜಿಲ್ಲೆಗಳ ಸು.೧ ಲಕ್ಷದ ೬೩ ಸಾವಿರ ಎಕರೆ ಭೂ ಪ್ರದೇಶವನ್ನು ಒಳಗೊಂಡಿದೆ. ಶೃಂಗೇರಿ ತಾಲೂಕಿನ ೧೬ ಗ್ರಾಮ, ಕೊಪ್ಪದ ೪ ಗ್ರಾಮ, ಮೂಡಿಗೆರೆಯ ೩ ಗ್ರಾಮ ಬೆಳ್ತಂಗಡಿಯ ೧೧ ಗ್ರಾಮ, ಕಾರ್ಕಳದ ೪ ಗ್ರಾಮಗಳು ಈ ಯೋಜನೆ ವ್ಯಾಪ್ತಿಗೆ ಸೇರಿವೆ. ರಾಷ್ಟ್ರೀಯ ಉದ್ಯಾನಕ್ಕೆ ಮೀಸಲಿರಿಸಿದ ಈ ಪ್ರದೇಶದಲ್ಲಿ ೪ ಸಾವಿರಕ್ಕೂ ಹೆಚ್ಚು ಕುಟುಂಬಗಳ ೨೦ ಸಾವಿರಕ್ಕೂ ಹೆಚ್ಚು ಬುಡಕಟ್ಟು ಜನರಾದ 'ಮಲೆಕುಡಿಯ' ಮತ್ತು 'ಗೌಡ್ಲು' ಶತಶತಮಾನಗಳಿಂದ ಈ ಕಾಡಿನಲ್ಲಿ ವಾಸಿಸುತ್ತ ಬಂದಿದ್ದಾರೆ. ಜತೆಗೆ ಹಲವು ರೈತ ಕುಟುಂಬಗಳು ಈ ಪ್ರದೇಶದ ವ್ಯಾಪ್ತಿಯಲ್ಲಿ ವಾಸವಾಗಿದ್ದಾರೆ.

ಕುದುರೆಮುಖ ಗಣಿಗಾರಿಕೆ ಮುಚ್ಚುವುದರಿಂದ ೨೫೦೦ ಕಾರ್ಮಿಕರು ಬೀದಿ ಪಾಲಾಗುತ್ತಿದ್ದಾರೆ ಮತ್ತು "ಈ ಕಂಪನಿಯ ಮೇಲೆ ಸರಕಾರ ಹೂಡಿರುವ ಬಂಡವಾಳದ ಮೇಲೆ ವಾರ್ಷಿಕ ಸರಾಸರಿ ೨೦

ಕೋಟಿ ಲಾಭ ಬರುತ್ತಿದೆ. ರೂ.೧೦ ಕೋಟಿಯಷ್ಟು ಆದಾಯ ತೆರಿಗೆ ನೀಡುತ್ತಿದೆ. ಪ್ರತಿ ಟನ್ ಅದುರಿನ ಮೇಲೆ ರೂ.೩ರಂತೆ ವರ್ಷಕ್ಕೆ ೧°/, ಕೋಟಿ ನೀಡುತ್ತಿದೆ. ವಿವಿಧ ತೆರಿಗೆಗಳ ರೂಪದಲ್ಲಿ ಸರ್ಕಾರಕ್ಕೆ ೩೦ ಕೋಟಿ ಆದಾಯ ಗಳಿಸಿಕೊಡುತ್ತದೆ.[೧೪]

ಶಿವರಾಮಯ್ಯರವರು ಕುದುರೆಮುಖದ ಕ್ಷೇತ್ರಕಾರ್ಯದ ಅನುಭವಗಳನ್ನು ಹೇಳುತ್ತಾ, ಆದಿವಾಸಿಗಳ ಭಯದ ಮಾತುಗಳನ್ನು ವಿವರಿಸಿದ್ದಾರೆ(ಪುಟ ೧೮, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು ೨೦೦೩).[೧೫]

ಕೇರಳದ ಮೈನಾಡು ಅರಣ್ಯ ಪ್ರದೇಶದಲ್ಲಿ ಒಕ್ಕಲೆಬ್ಬಿಸುವುದನ್ನು ವಿರೋಧಿಸಿ ಹೋರಾಟ ಮಾಡುತ್ತಿದ್ದ ಮುತುಂಗದ ಆದಿವಾಸಿಗಳ ಮೇಲೆ ಅಲ್ಲಿನ ಪೊಲೀಸರು ಗೋಲಿಬಾರ್ ನೆಡೆಸಿ ನಾಲ್ಕಾರು ಜನರನ್ನು ಕೊಂದು ನೂರಾರು ಜನರನ್ನು ಗಾಯಗೊಳಿಸುವುದನ್ನು ಕಂಡು ನಮ್ಮ ಕುದುರೆಮುಖದ ವಾಸಿಗಳಾದ ಆದಿವಾಸಿ ಜನರು ತೀವ್ರ ಆತಂಕಗೊಂಡಿದ್ದಾರೆ.

ಎಸ್.ಪಿ. ಶಂಕರನಾರಾಯಣರವರು ತಮ್ಮ ಸ್ವಾತಂತ್ರ ಗಂಗೆ ಸಾವಿರ ತೊರೆಗಳು ಪುಟ. ೧೫೫, ನವ ಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೧ರಲ್ಲಿ ಆದಿವಾಸಿಗಳ ಹೋರಾಟಗಳನ್ನು ನೋವು ಕಣ್ಣೀರುಗಳಿಂದ ಅಳಿಯುವುದಾದರೆ ಇದು ಆಧುನಿಕ ಜಗತ್ತಿನ ಅತ್ಯಂತ ಮಾನವೀಯ ದುರಂತ ಎಂದು ಅಭಿಪ್ರಾಯಪಟ್ಟಿದ್ದಾರೆ.[೧೬] ಹೊಸ ವಸಾಹತುಶಾಹಿ ನೀತಿ ಜಾರಿ ಮಾಡಿದ ಕಾನೂನುಗಳು ಅರಣ್ಯ ನೀತಿಗಳು ಆದಿವಾಸಿಗಳ ಬದುಕಿನಲ್ಲಿ ಯಾವತ್ತೂ ಮುಳ್ಳಾಗಿಯೇ ಪರಿಣಮಿಸಿವೆ. ಜಮೀನ್ದಾರರು, ಕಂಟ್ರಾಕ್ಟರ್‌ಗಳು, ಸರ್ಕಾರ, ಅರಣ್ಯ ಇಲಾಖೆ ಆದಿವಾಸಿಗಳ ಬದುಕಿನಲ್ಲಿ ಕಂಠಕಪ್ರಾಯವಾಗಿ ಕಾರ್ಯ ನಿರ್ವಹಿಸುತ್ತವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನ ಯೋಜನೆಯಡಿಯಲ್ಲಿ ಬರುವ ಗೌಡ್ಲು ಮತ್ತು ಆದಿವಾಸಿ ಮಲೆಕುಡಿಯರು ಇದಕ್ಕೆ ಹೊರತಲ್ಲ. ಬದಲಾಗಿ ಇಲ್ಲಿನ ಆದಿವಾಸಿಗಳು ತಮ್ಮ ಅಸ್ತಿತ್ವಕ್ಕಾಗಿ ನಿರಂತರ ಹೋರಾಟ ಮಾಡುತ್ತಲೇ ಭಯ ಆತಂಕದಲ್ಲಿ ಬದುಕುತ್ತಿದ್ದಾರೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಉಮೇಶ್ ಸೂರಮ್ಮನಹಳ್ಳಿಯವರು ಕುದುರೆಮುಖ ಏನದು ಕಾನನದ ಕಿಚ್ಚು ಕುರಿತು ಲೇಖನದಲ್ಲಿ ರಾಷ್ಟ್ರೀಯ ಉದ್ಯಾನ ಆದೇಶದ ಮೇರೆಗೆ ಕಾಡಿನ ಉಪ ಉತ್ಪನ್ನಗಳಾದ ಜೇನನ್ನು ಮಾರಿ ಬದುಕುವ ಆದಿವಾಸಿಗಳನ್ನು ಕಾಡಿಗೆ ಹೋಗದಂತೆ ಅರಣ್ಯ ಅಧಿಕಾರಿಗಳು ತಡೆದರು. ಸಾಲದ್ದಕ್ಕೆ ಆದಿವಾಸಿಗಳ ಮೇಲೆ ಕೇಸುಗಳನ್ನು ಹಾಕಿ ಕೋರ್ಟು ಕಛೇರಿ, ಪೊಲೀಸ್ ಸ್ಟೇಷನ್ ಅಲೆಯುವಂತೆ ಮಾಡಿದರು. ಬದಲಾಗಿ ಅರಣ್ಯ ಇಲಾಖೆ ಆದಿವಾಸಿಗಳೇ ಕಾಡಿನಿಂದ ಹೊರ ಹೋಗುವಂತೆ ಕಿರುಕುಳಗಳನ್ನು ನೀಡಿತು. ಬಲವಂತವಾಗಿ ಕಾಡಿನಿಂದ ಬುಡಕಟ್ಟು ಜನರನ್ನು ಒಕ್ಕಲೆಬ್ಬಿಸಲು ಸರ್ವ ತಯಾರಿಕೆಗಳನ್ನು ನಡೆಸಿದೆ. ಆದಿವಾಸಿಗಳನ್ನು 'ನ್ಯಾಷನಲ್ ಪಾರ್ಕ್' ಯೋಜನೆಗಾಗಿ ಕಾಡಿನಿಂದ ಎತ್ತಂಗಡಿ ಮಾಡುವುದಕ್ಕೆ ಕಾರಣಗಳೆಂದರೆ "ಇವರಿದ್ದರೆ ಕಾಡಿನ ಕಾವಲು ಸಾಧ್ಯವಿಲ್ಲ. ಕಳ್ಳನಾಟ ಸಾಗಾಣಿಕೆದಾರರನ್ನು ಪ್ರತಿಬಂಧಿಸಲು ಆಗುವುದಿಲ್ಲ. ಕಾಡಿನ ಕಿರು ಉತ್ಪನ್ನಗಳು ಹಾಗೂ ಗಿಡಮೂಲಿಕೆಗಳನ್ನು ಇವರು ಕಿತ್ತು ನಾಶ ಮಾಡುತ್ತಾರೆ. ವನ್ಯ ಮೃಗಗಳ ವಾಸಕ್ಕೆ ಇವರು ಅಡ್ಡಿಯಾಗಿದ್ದಾರೆ. ಜನವಸತಿ ಇದ್ದರೆ ಬೆಂಕಿಗೆ ಕಾರಣವಾಗುತ್ತದೆ. ನ್ಯಾಷನಲ್ ಪಾರ್ಕನ್ನು ಒತ್ತುವರಿ ಮಾಡುವವರನ್ನು ತಡೆಯುವುದು ಸಾಧ್ಯವಿಲ್ಲ ಹಾಗೂ ಈ ಯೋಜನೆಯಿಂದ ವಿದೇಶ ಪ್ರವಾಸಿಗರನ್ನು ಆಕರ್ಷಿಸಿ ರಾಜ್ಯಾದಾಯವನ್ನು ಹೆಚ್ಚಿಸಬಹುದಾಗಿದೆ."[೧೭] ಅರಣ್ಯದ ಮಧ್ಯೆ

ಜೀವಿಸುವ ಆದಿವಾಸಿಗಳು ಕಾಡಿನ ಉಪ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಿ ಜೀವನ ಸಾಗಿಸುತ್ತಾರೆಯೇ ಹೊರೆತು, ಬೆಲೆ ಬಾಳುವ ಸಂಪದ್ಭರಿತವಾದ ಮರಗಳನ್ನು, ವನಮೃಗಗಳ ಮಾರಾಟದ ಜಾಲದಲ್ಲಿ ತೊಡಗಿರುವುದಿಲ್ಲ. ಅರಣ್ಯ ನಾಶಕ್ಕೆ ಕಾರಣ ಕಾಡುಗಳ್ಳರೇ ಹೊರೆತು ಆದಿವಾಸಿಗಳಲ್ಲವೆಂಬುದು ಸರ್ಕಾರದ ಗಮನಕ್ಕೆ ಏಕೆ ಬರುವುದಿಲ್ಲ. ಅರಣ್ಯ ನಾಶಕ್ಕೆ ಕಾರಣರು ಆದಿವಾಸಿಗಳಲ್ಲ, ಬದಲಾಗಿ ಅರಣ್ಯವನ್ನು ಕಾಪಾಡುತ್ತಲೇ ಬಂದಿದ್ದಾರೆ. ಕಾಡಿನ ಬಗ್ಗೆ ಅಪಾರ ಪ್ರೀತಿ ಇಟ್ಟುಕೊಂಡಿರುವ "ಆದಿವಾಸಿಗಳು ಕಾಡಲ್ಲಿಯ ಒಂದು ಮರ ಕಡಿಯುವುದೆಂದರೆ ಒಬ್ಬ ಮನುಷ್ಯನನ್ನು ಕೊಂದಂತೆಯೇ ಎಂದು ಭಾವಿಸುತ್ತಾರೆ. ಇಂದಿಗೂ ಬಿಳಿಗಿರಿರಂಗನ ಬೆಟ್ಟದ ಸೋಲಿಗರು ತಮ್ಮ ಜೊತೆಗಿದ್ದ ವ್ಯಕ್ತಿಯೊಬ್ಬ ಸತ್ತಾಗ ಅನುಭವಿಸುವ ದುಃಖವನ್ನು, ಮರವೊಂದು ಕಡಿದಾಗಲೂ ಅನುಭವಿಸುತ್ತಾರೆ." ಅದೇ ರೀತಿ ಕುದುರೆಮುಖ ರಾಷ್ಟ್ರೀಯ ಉದ್ಯಾನ ವ್ಯಾಪ್ತಿಯಲ್ಲಿ ಬರುವ ಆದಿವಾಸಿಗಳು ಕೂಡಾ ಕಾಡಿನೊಂದಿಗೆ ಬದುಕು ರೂಪಿಸಿಕೊಂಡಿರುವ ಗೌಡ್ಲುಗಳು ಕಾಡನ್ನೇ 'ಕಾನ್‌ದೈವ' ಎಂದು ಪೂಜಿಸಿಕೊಂಡು ಬಂದಿದ್ದಾರೆ. ವಿಶೇಷ ಸಂದರ್ಭದಲ್ಲಿ ಶುಭಕಾರ್ಯ ನಡೆಯುವಾಗ ಕಾಡಿಗೆ ಎದುರಾಗಿ ನಿಂತು ಕಾಡನ್ನೇ ಪೂಜಿಸುತ್ತಾರೆ. ದೇವರಿಗೆ ತಾವು ಬಳಸುವ ಆಹಾರವನ್ನೆಲ್ಲಾ ನೈವೇದ್ಯವಾಗಿ ಅರ್ಪಿಸಿ ಪೂಜೆ ಮಾಡುತ್ತಾರೆ. ಈ ಪೂಜೆ ಮಾಡಲು ಕಾಡಿನ ಗಿಡಗಳ ಕುಡಿ ಎಲೆಯನ್ನೆ ಬಳಸುವುದು ಇವರ ಮತ್ತೊಂದು ವಿಶೇಷ. ಪೂಜೆಯ ಸಂದರ್ಭದಲ್ಲಿ ಇತರ ಪ್ರಾಣಿ-ಪಕ್ಷಿಗಳಂತೆ ನಮಗೂ ಇಲ್ಲಿ ಬದುಕಲು ಅವಕಾಶ ಮಾಡಿಕೊಡು ಎಂದು ಪ್ರಾರ್ಥಿಸುತ್ತಾರೆ. ಕಷ್ಟದಲ್ಲಿದ್ದಾಗಲೂ ಕಾಡುದೇವರನ್ನು ಬೇಡುತ್ತಾರೆ. ಸುಖದಲ್ಲಿಯೂ ಕಾಡನ್ನೇ ಪೂಜಿಸುತ್ತಾರೆ. ಇವರು ಕಾಡನ್ನೆ ಬದುಕಾಗಿಸಿಕೊಂಡಿದ್ದಾರೆ. ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಕಾಡನ್ನು ಉಳಿಸಿಕೊಂಡಿದ್ದಾರೆ. ಗಿರಿಜನರು ಬೇಕಾ ಬಿಟ್ಟಿಯಾಗಿ ಕಾಡು ಕಡಿದವರೇ ಅಲ್ಲ. ದೇವರೆಂದು ಕರೆದು ಕಾಡನ್ನು ಕಡಿಯುವುದು ಅವರಿಂದ ಸಾಧ್ಯವೇ ಇಲ್ಲ. "ಅದಕ್ಕಾಗಿಯೇ ಈ ಹಿಂದೆ ಬ್ರಿಟೀಷರು, ಅರಣ್ಯ ಇಲಾಖೆ ಕಾಡು ಕಡಿಯುವ ಕೆಲಸವನ್ನು ಇವರಿಗೆ ಹೇಳಿದರೆ ಇವರು ಒಪ್ಪಲೇ ಇಲ್ಲ. ಕೊನೆಗೆ ಇಲ್ಲಿಯ ಕಾಡು ಕಡಿಯಲು ಕೇರಳ, ದಕ್ಷಿಣ ಕನ್ನಡ ಹಾಗೂ ಬಯಲುಸೀಮೆಯ ಜನ ಬರಬೇಕಾಯಿತು. ಗೌಡ್ಲುಗಳಿಗೆ ಬರೀ ಕಾಡಿನೊಂದಿಗೆ ಅಂದರೆ ಗಿಡಮರಗಳೊಂದಿಗೆ ಮಾತ್ರ ಸಂಬಂಧವಿರಲಿಲ್ಲ. 'ಕಾಡು ಪ್ರಾಣಿಗಳನ್ನು ಅವರು ಕಾಡಿನ ಮಕ್ಕಳೆಂದೇ ಭಾವಿಸುತ್ತಾ ಬಂದಿದ್ದಾರೆ ಎಂದು ಉಮೇಶ್ ಸೂರಮ್ಮನಹಳ್ಳಿ, ಕುದುರೆಮುಖ, ಏನದು ಕಾನನದ ಕಿಚ್ಚು? ಲೇಖನದಲ್ಲಿ ವಿಶ್ಲೇಷಣೆ ಮಾಡಿದ್ದಾರೆ(ಪುಟ ೧೧೫,೧೧೬,೧೧೭).'[೧೮]

**೩. ಅರಣ್ಯವಾಸಿಗಳ ಸ್ಥಳಾಂತರ ಹೋರಾಟ**

ಭಾರತ ಸರ್ಕಾರ ಆದಿವಾಸಿ ಸಮುದಾಯಗಳನ್ನು ಮುಖ್ಯ ವಾಹಿನಿಗೆ ತರಲು ರಾಷ್ಟ್ರೀಯ ಆದಿವಾಸಿ ಕರಡು ನೀತಿಯನ್ನು ರೂಪಿಸಿದೆ. ಸಾಮಾನ್ಯ ಶಿಕ್ಷಣ, ಆರೋಗ್ಯ, ಸ್ಥಳಾಂತರ ಮತ್ತು ಪುನರ್ವಸತಿ ನೀತಿ, ಅರಣ್ಯ ಗ್ರಾಮಗಳು, ಬೇಸಾಯ ಪದ್ಧತಿ, ಭೂಮಿಯ ಪರಾಧೀನತೆ, ಹಕ್ಕುಗಳು, ಬುಡಕಟ್ಟು ಭಾಷೆ, ಆದಿಮ ಬುಡಕಟ್ಟು ಗುಂಪುಗಳು, ಅನುಸೂಚಿತ ಪ್ರದೇಶಗಳು, ಆಡಳಿತ, ಸಂಶೋಧನೆ, ಪರಸ್ಪರ ಭಾಗವಹಿಸುವಿಕೆ ಸೇರಿದಂತೆ ಹಲವಾರು ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಸಾಧಿಸುವುದರ ಮೂಲಕ ಬುಡಕಟ್ಟು ಸಮುದಾಯಗಳ ಕಲ್ಯಾಣವನ್ನು ಸಾಧಿಸುವುದು ಈ ನೀತಿಯ ಉದ್ದೇಶ. ರಾಷ್ಟ್ರೀಯ ಆದಿವಾಸಿ ನೀತಿ ಮತ್ತು ೧೯೯೯ರಲ್ಲಿ ಕೇಂದ್ರ ಸರ್ಕಾರ ಪ್ರತ್ಯೇಕವಾದ ಬುಡಕಟ್ಟು ಖಾತೆಯನ್ನು ಆರಂಭಿಸಿದೆ.

ಇದರಲ್ಲಿ ಸ್ಥಳಾಂತರ ಮತ್ತು ಪುನರ್ವಸತಿ ನೀತಿ ಪ್ರಧಾನವಾಗಿದೆ. ಬುಡಕಟ್ಟು ಸಮುದಾಯಗಳ ಸ್ಥಳಾಂತರವು ಹಲವಾರು ರೀತಿಯ ತೊಂದರೆಗಳನ್ನು ಉಂಟು ಮಾಡಿದೆ. ಸರ್ಕಾರ ಜಾರಿಗೊಳಿಸಿರುವ ಅಣೆಕಟ್ಟು, ರಸ್ತೆ, ಗಣಿಗಾರಿಕೆ, ಕೈಗಾರಿಕೆಗಳ ಸ್ಥಾಪನೆ, ರಾಷ್ಟ್ರೀಯ ಉದ್ಯಾನಗಳ ನಿರ್ಮಾಣಗಳ ಪರಿಣಾಮವಾಗಿ ಸ್ಥಳಾಂತರ ನೀತಿ ಜಾರಿಗೆ ಬರಲು ಅವಕಾಶವಾಯಿತು. ೧೯೯೧ರವರೆಗೆ ಭಾರತದಲ್ಲಿ ಸುಮಾರು ೮೫.೩೯ ಲಕ್ಷದಷ್ಟು ಆದಿವಾಸಿಗಳು ಸ್ಥಳಾಂತರಗೊಂಡಿದ್ದಾರೆ. ದೇಶದ ಒಟ್ಟಾರೆ ಸ್ಥಳಾಂತರಗೊಂಡ ಜನರಲ್ಲಿ ಶೇ.೫೫.೧೬ ಬುಡಕಟ್ಟು ಜನಾಂಗದವರಾಗಿದ್ದಾರೆ. ಹಣದ ರೂಪದಲ್ಲಿ ಕೊಡುವ ಪರಿಹಾರ ಅವರ ಕಷ್ಟಕ್ಕೆ ಆಗುವುದಿಲ್ಲ. ಸಂವಿಧಾನದ ೫೫ನೇ ಪರಿಚ್ಛೇದದ ಪ್ರಕಾರ ಬುಡಕಟ್ಟು ಜನಾಂಗವನ್ನು ಸ್ಥಳಾಂತರ ಮಾಡುವುದು ತಪ್ಪಾಗುತ್ತದೆ. ಆದ್ದರಿಂದ ರಾಷ್ಟ್ರೀಯ ನೀತಿ ಬುಡಕಟ್ಟು ಜನರ ಸ್ಥಳಾಂತರ ಮಾಡುವಾಗ ಕೆಲವು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಲು ಸಲಹೆ ನೀಡಿದೆ.

ಸ್ಥಳಾಂತರ ಅನಿವಾರ್ಯವಾದಾಗ ಅವರ ಭೂಮಿಗೆ ಬದಲು ಬೇರೆ ಭೂಮಿಯನ್ನು ಕೊಡುವುದು. ಕನಿಷ್ಠ ೨ ಹೆಕ್ಟೇರ್ ಭೂಮಿಯನ್ನು ಅವರ ಕುಟುಂಬಕ್ಕೆ ನೀಡುವುದು. ಕುಟುಂಬ ಎಂದರೆ ಗಂಡ, ಹೆಂಡತಿ ಮತ್ತು ಮಕ್ಕಳು ಎಂದು ಪರಿಗಣಿಸಲಾಗಿದೆ. ಮೀನುಗಾರಿಕೆ ಅನುಮತಿ ಹೊಂದಿದವರಿಗೆ ಅವರ ವಾಸಸ್ಥಳದಲ್ಲಿಯೇ ಅದೇ ಉದ್ಯೋಗಕ್ಕೆ ಅವಕಾಶ ಕಲ್ಪಿಸಿಕೊಡಬೇಕು. ಮೂಲ ಸ್ಥಳದಲ್ಲಿರುವಂತೆ ಮೀಸಲಾತಿ ಸೌಲಭ್ಯಗಳನ್ನು ನೂತನ ಸ್ಥಳದಲ್ಲಿ ಮುಂದುವರೆಸುವುದು. ಕನಷ್ಠ ಒಂದೂವರೆ ವರ್ಷಕ್ಕಾಗುವಷ್ಟು ಕೃಷಿ ಕೂಲಿಯನ್ನು ಹೆಚ್ಚುವರಿ ಆರ್ಥಿಕ ಸಹಾಯವನ್ನಾಗಿ ನೀಡುವುದು. ಗಿರಿಜನರಿಗೆ ಅವರ ಮೂಲ ನಿವಾಸಕ್ಕೆ ಸಮೀಪದಲ್ಲಿಯೇ ಪುನರ್ವಸತಿ ವ್ಯವಸ್ಥೆಯಾಗ ಬೇಕು. ಅವರ ಕುಲ ಸಂಬಂಧ ಭಾಷೆ ಸಾಮಾಜಿಕ ಸಾಂಸ್ಕೃತಿಕ ಮಹತ್ವಗಳಿಗೆ ಧಕ್ಕೆ ಬಾರದಂತೆ ನೋಡಿಕೊಳ್ಳುವುದು. ಸಾಮಾಜಿಕ ಧಾರ್ಮಿಕ ಆಚರಣೆಗಳ ಉದ್ದೇಶಕ್ಕಾಗಿ ಭೂಮಿಯನ್ನು ಉಚಿತ ವಾಗಿ ನೀಡಬೇಕು. ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಪುನರ್ವಸತಿ ಸೌಲಭ್ಯ ಕಲ್ಪಿಸಿದರೆ ಹೆಚ್ಚುವರಿ ಆರ್ಥಿಕ ನೆರವು ನೀಡಬೇಕು. ಸಾಮೂಹಿಕವಾಗಿ ಸ್ಥಳಾಂತರ ಆಗುವುದಾದರೆ ಅವರಿಗೆ ಬೇಕಾಗುವ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು. ಅವು ರಸ್ತೆ, ವಿದ್ಯುತ್, ಒಳಚರಂಡಿ, ನೈರ್ಮಲ್ಯ ಸುರಕ್ಷತೆ, ಕುಡಿಯುವ ನೀರು, ಶಿಕ್ಷಣ, ಆರೋಗ್ಯ, ನ್ಯಾಯಬೆಲೆ ಅಂಗಡಿ, ಸಮುದಾಯ ಭವನ, ಪಂಚಾಯತ್ ಭವನಗಳನ್ನು ಒಳಗೊಂಡಿರಬೇಕು.

**ವಲಸೆ-ಸ್ಥಳಾಂತರಗೊಂಡ ಮಲೆಕುಡಿಯ ಸಮುದಾಯ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದ ನೆಲೆಗಳಲ್ಲಿ ಮೂಲ ನೆಲೆಗಳಿವೆ. ಅಂತೆಯೇ ಬದಲಾದ ಸ್ಥಿತಿಗೆ ಅನುಗುಣವಾಗಿ ಈ ನೆಲೆಗಳಿಂದ ಕೆಲವು ಕುಟುಂಬಗಳು ಬೇರೆ ಸ್ಥಳಗಳಿಗೆ ವಲಸೆ ಬಂದು ಸ್ಥಳಾಂತರಗೊಂಡ ಕುಟುಂಬಗಳಿರುವುದು ಅಧ್ಯಯನದಿಂದ ಕಂಡುಬರುತ್ತದೆ. ವಲಸೆ ಎಂದರೆ ಒಬ್ಬ ವ್ಯಕ್ತಿ ಇಲ್ಲವೇ ಒಂದು ಕುಟುಂಬ ಭೌತಿಕವಾಗಿ ಹಾಗೂ ದೈಹಿಕವಾಗಿ ಒಂದು ಸಾಮಾಜಿಕ ಪರಿಸ್ಥಿತಿಯಿಂದ ಇನ್ನೊಂದು ಸಾಮಾಜಿಕ ಸ್ಥಿತಿಗೆ ವರ್ಗಾಯಿಸುವುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದವರು ಕೇರಳದ ಕಾಸರಗೋಡಿನಿಂದ ಕನ್ಯಾನ, ಪಾಣಾಜೆ, ಕೊಕ್ಕಡ, ಶಿಶಿಲ ಕಡೆಗೆ ವಲಸೆ ಬಂದು ನೆಲೆಸಿದವರು ಇದ್ದಾರೆ. ಬಾಂಜಾರುಮಲೆ, ನಾಲುಮಲೆ, ಎಲಿಮಲೆ ನರಿಯಾ, ನಾರಾವಿ ಪ್ರದೇಶಗಳಿಂದ ಕೆಲವರು ಸ್ಥಳಾಂತರಗೊಂಡಿದ್ದಾರೆ. ಕುದುರೆ ಮುಖದ ರಾಷ್ಟ್ರೀಯ ಉದ್ಯಾನವನದಿಂದ ಹನ್ನೊಂದು ಕುಟುಂಬಗಳು ಸ್ಥಳಾಂತರಗೊಂಡಿವೆ.

**ಒಕ್ಕಲೆಬ್ಬಿಸುವಿಕೆ**

ಬೆಳ್ತಂಗಡಿ ತಾಲೂಕಿನ ನಾವೂರು ಗ್ರಾಮದಲ್ಲಿರುವ ಪುಳಿತ್ತಡಿಯ ಮಲೆಕುಡಿಯರು ಇಲ್ಲಿನ ನಾವೂರು, ಸವಣಾಲು ಗ್ರಾಮಗಳು ನಕ್ಸಲ್ ಪ್ರಭಾವಿತ ಪ್ರದೇಶಗಳೆಂದು ಪರಿಗಳಿತವಾದ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಗೆ ಒಳಪಟ್ಟಿದೆ. ಇಲ್ಲಿನ ಮುಖ್ಯ ರಸ್ತೆಯಿಂದ ಸುಮಾರು ಐದಾರು ಕಿ.ಮೀ. ದೂರ ಸಾಗಿ, ಬಳಿಕ ಅಲ್ಲಿಂದ ೬ ಕಿ.ಮೀ ದೂರದವರು ಇಳಿವಿನ ರಸ್ತೆಯಲ್ಲಿ ಸಾಗಿದರೆ ಮಲೆಗಳಲ್ಲಿ ವಾಸವಾಗಿರುವ ಈ ಕಾಡಿನ ಮಕ್ಕಳು ಕೃಷಿ ಮಾಡಿಕೊಂಡು ವಾಸವಾಗಿರುವ ಪ್ರದೇಶಗಳು ಸಿಗುತ್ತವೆ. ಈಗ ಸರ್ಕಾರದಿಂದ ಒಕ್ಕಲೆಬ್ಬಿಸುವ ಭೀತಿಯಲ್ಲಿರುವ ಇಲ್ಲಿನ ಸಮುದಾಯದ ಜನರು "ಹೀಗೆ ಸದ್ಯ ಬಾವಿಯಿಂದ ಹೊರ ತೆಗೆದ ಮೀನಿನಂತೆ ಮಾಡಿ, ನಮ್ಮನ್ನು ಈ ಕಾಡು ಬಿಟ್ಟು ಹೊರ ಹೋಗಲು ಹೇಳಿದರೆ ನಾವೇನು ಮಾಡುವುದು. ಇಲಿ ಮಾಡಿದ ಕೃಷಿ ಮನೆ, ತೋಟ ಮರಳಿ ಮಣ್ಣಿಗೆ ಸೇರಿಸಿ ನಾವು ಪುನಃ ಕೃಷಿ ಮಾಡಿ ಅದರ ಫಲ ತಿನ್ನಲುಂಟೇ" ಎಂದು ಎಲ್ಲರೂ ಹೇಳತ್ತಾರೆಂಬ ವರದಿಯನ್ನು ನೀಡಿದ್ದಾರೆ. ಈ ಪ್ರದೇಶದಲ್ಲಿ ಒಟ್ಟು ೩೩ ಕುಟುಂಬಗಳಿವೆ. ತಲೆ ತಲಾಂತರದಿಂದ ಈ ಕಾಡಿನಲ್ಲಿದ್ದು ಕೃಷಿ ಮಾಡಿಕೊಂಡಿದ್ದಾರೆ. ಎಲ್ಲರೂ ೫ ಎಕರೆ ಒಳಗೆ ಜಾಗ ಹೊಂದಿದ್ದಾರೆ. ನಾವು ಕಾಡು ನಾಶ ಮಾಡುವ ಅತಿಕ್ರಮ ಮಾಡುವ ಉದ್ದೇಶ ಹೊಂದಿದ್ದರೆ ಈ ಹಿಂದೆಯೇ ನೂರಾರು ಎಕರೆಗೆ ಬೇಲಿ ಹಾಕಬಹುದಿತ್ತು. ಯಾವ ಅರಣ್ಯ ಇಲಾಖೆಯವರಾಗಲಿ ಈ ಕಡೆ ತಲೆ ಹಾಕುತ್ತಿರಲಿಲ್ಲ. ಇತ್ತಿತ್ತಲಾಗಿ ಮಾತ್ರ ಅರಣ್ಯ ಇಲಾಖೆಯಿಂದ ಕಾಯಿದೆ ಕಟ್ಟಳೆಗಳು ಹೆಚ್ಚಾಗುತ್ತಿದೆ ಎಂದು ಇಲ್ಲಿನ ಮಲೆಕುಡಿಯರು ಅಭಿಪ್ರಾಯ ಪಡುತ್ತಾರೆ. ನಕ್ಸಲ್ ಬಾದಿತ ಪ್ರದೇಶಾಭಿವೃದ್ಧಿ ನಿಧಿಯಲ್ಲಿ ಈ ಪ್ರದೇಶದಲ್ಲಿ ಲಕ್ಷಾಂತರ ರೂಪಾಯಿಗಳ ಅನುದಾನದಡಿಯಲ್ಲಿ ಅಭಿವೃದ್ಧಿ ಕಾಮಗಾರಿಯನ್ನು ಮಾಡಿದ್ದಾರೆ. ಈಗ ಇಲ್ಲಿಂದ ಒಕ್ಕಲೇಳಿ ಎಂದರೆ ಹೇಗೆ ಎನ್ನುವ ಇವರು, ಸರ್ಕಾರದ ಜನಪ್ರನಿಧಿಗಳಾಗಲಿ, ಅಧಿಕಾರಿಗಳಾಗಲಿ ಇದುವರೆಗೆ ನಮ್ಮನ್ನು ಸಂಪರ್ಕಿಸಿಲ್ಲ. ಈ ಜಾಗ ಬಿಟ್ಟು ಕೊಡುತ್ತೀರಾ ಎಂದು ಕೇಳಲಿಲ್ಲ. ಮೂರನೇ ವ್ಯಕ್ತಿ ಇಲ್ಲಿಗೆ ಬರುತ್ತಾರೆ. ಇಲ್ಲಿಂದ ಹೊರ ಬರಲು ಯಾವುದಾದರೂ ಒಂದು ಕುಟುಂಬ ಮಾತ್ರ ಇವರು ಕೊಡುವ ಹಣದ ಪರಿಹಾರಕ್ಕೆ ಒಪ್ಪಿಕೊಂಡು ಸಮ್ಮತಿ ಸೂಚಿಸಿದರೆ, ಅಧಿಕಾರಿಗಳು ಗುಟ್ಟಾಗಿ ಒಂದು ಸಭೆ ಸೇರುತ್ತಾರೆ. ಇದು ಪ್ರಜಾಪ್ರಭುತ್ವ ವ್ಯವಸ್ಥೆಯ ಕ್ರಮವಾ ಎಂದು ಕೇಳುತ್ತಾರೆ. ಕಾಡಿನ ಕತ್ತಲೆ ಬದುಕಿನಲ್ಲಿ ಬಾಳುತ್ತಿರುವ ನಾವು ಧರ್ಮಸ್ಥಳ ಯೋಜನೆ ಮೂಲಕ ಒಂದಿಷ್ಟು ಉದ್ಧಾರವಾದೆವು. ಇಲ್ಲಿ ನಮಗೆ ಯಾರಿಂದಲೂ ಸಮಸ್ಯೆ ಇಲ್ಲ. ಪ್ರಾಣಿಗಳ ಹಾವಳಿ ಇಲ್ಲ, ಅರಣ್ಯ ಇಲಾಖೆಯವರದೇ ನಮಗೆ ದೊಡ್ಡ ಸಮಸ್ಯೆಯಾಗಿದೆ. ಅದು ಬಿಟ್ಟರೆ ನಮಗೆ ದಲ್ಲಾಳಿಗಳದ್ದು ಎರಡನೇ ಸಮಸ್ಯೆಯಾಗಿದೆ ಎಂದು ಊರಿನ ಜನರು ಹೇಳುತ್ತಾರೆ. ಶಿವಪ್ಪರವರು ಸುಮಾರು ೪೩ ವರ್ಷದಿಂದ ಇಲ್ಲಿ ಕೃಷಿ ಮಾಡಿದ್ದರೂ ನಮಗೆ ಜಾಗದ ಪಟ್ಟೆ ದೊರೆಯತ್ತಿಲ್ಲ ಎಂದು ಬೇಸರದಿಂದ ಹೇಳುತ್ತಾರೆ. ಅಕ್ರಮ ಸಕ್ರಮದ ಕಡತಕ್ಕಾಗಿ ಇಲಾಖೆಯಿಂದ ಇಲಾಖೆಗೆ ಅಧಿಕಾರಿಗಳು ಅಲೆದಾಟ ನಡೆಸುವುದಕ್ಕಾಗಿ ದೇವಪ್ಪರವರು ರೋಸಿ ಹೋಗಿದ್ದಾರೆ. ಕೈಕಂಬದಿಂದ ಪುಳಿತ್ತಡಿಯವರೆಗೆ ಬರುವ ರಸ್ತೆ ದುರಸ್ತಿಗೆ ಅರಣ್ಯ ಇಲಾಖೆಯವರ ಆಕ್ಷೇಪವಿದೆ. ಇಲ್ಲಿ ವಿದ್ಯುತ್ ತಂತಿ ಹಾಯಿಸಲು, ರಸ್ತೆ ದುರಸ್ತಿ ಮಾಡಲು ಅರಣ್ಯ ಕಾನೂನುನ ತೊಡಕು ಇದೆ. ಮಂಜೊಟ್ಟಿಯಿಂದ ಎರ್ಮೆಲೆಗೆ ಬರುವ ರಸ್ತೆ ದುರಸ್ತಿಯಾಗದೇ ಅದೆಷ್ಟೋ ದಶಕವಾಯಿತೋ ಎನ್ನುತ್ತಾರೆ. ಜಿನ್ನಪ್ಪಗೋಳ್ತರ, ಶಿವಪ್ಪ . ಮಲ್ಲದ

ಸುಂದರ್, ಡೀಕಯ್ಯ, ಕೊಡಂಗೆ ಜಿನ್ನಪ್ಪ ಈ ಮನೆಯವರು ಕಿರು ಜಲ ವಿದ್ಯುತ್ ಘಟಕ ಸ್ಥಾಪಿಸಿಕೊಂಡು ತನ್ನ ಮನೆಗಳಿಗೆ ವಿದ್ಯುತ್ ಸೌಲಭ್ಯ ಮಾಡಿಕೊಂಡಿದ್ದಾರೆ. ಆದರೆ ಇತರೆ ಮನೆಯವರಿಗೆ ಸೀಮೆಎಣ್ಣೆ ಬತ್ತಿಯೇ ಗತಿಯಾಗಿದೆ. ಇವರು ತಯಾರಿಸುವ ಕಿರು ವಿದ್ಯುತ್ ಉತ್ಪಾದನೆಗೆ ಸರಕಾರದಿಂದ ಸಬ್ಸಿಡಿ ದೊರೆಯಲಿ ಎಂಬ ಬೇಡಿಕೆ ಇವರದ್ದಾಗಿದೆ. ಈ ಸುಮಾರು ೨೦೦ ಜನಸಂಖ್ಯೆ ವಾಸವಾಗಿರುವ ಈ ಪ್ರದೇಶದಲ್ಲಿ ೫೦ ಮಕ್ಕಳು ಶಾಲೆಗೆ ಹೋಗುತ್ತಿದ್ದಾರೆ. ಇಲ್ಲಿಂದ ೬ ಕಿ.ಮೀ ದೂರದಲ್ಲಿರುವ ಸುಳ್ಯೋಡಿ ಶಾಲೆಗೆ ಕೇವಲ ಆರು ಮಕ್ಕಳು ಮಾತ್ರ ಹೋಗುತ್ತಿದ್ದಾರೆ. ಹಲವಾರು ಮಕ್ಕಳು ದೂರ ದೂರದ ಹಾಸ್ಟೆಲ್ ನಲ್ಲಿ ಕಲಿಯುತ್ತಿದ್ದಾರೆ. ಇಲ್ಲಿ ನಡೆದ ಜಾಗದ ಸರ್ವೆ ಕಾರ್ಯದಿಂದಾಗಿ ಇಲ್ಲಿನ ಜನರು ಆತಂಕಕ್ಕೆ ಒಳಗಾಗಿದ್ದಾರೆ. ಸರ್ಕಾರ ನೀಡುವ ೧೦ ಲಕ್ಷ ಪರಿಹಾರ ಸಾಲದು ಎಂಬ ಕೂಗು ಕೆಲವರದ್ದಾಗಿದೆ. ಈ ಆತಂಕಕ್ಕೆ ಸರ್ಕಾರದಿಂದ ಯಾವುದೇ ಮಾಹಿತಿ, ಪರಿಹಾರ ದೊರೆಯದೇ ಇರುವುದು ಇವರ ಈ ಆತಂಕ ಗೊಂದಲಗಳಿಗೆ ಕಾರಣವಾಗಿದೆ. ಇದು ಅತಂತ್ರ ಬದುಕಿನ ಆತಂಕಗಳನ್ನು ಸೂಚಿಸುತ್ತದೆ.

**ಅರಣ್ಯ ವಾಸಿಗಳ ಒಕ್ಕಲೆಬಿಸುವಿಕೆ**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಗೆ ಸೇರಿದ ನಾರಾವಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದ ೧೧ ಗ್ರಾಮಗಳು ಕುದುರೆಮುಖದ ರಕ್ಷಿತಾರಣ್ಯಕ್ಕೆ ಒಳಪಡುತ್ತದೆ. ಇಲ್ಲಿ ವಾಸವಾಗಿರುವ ಮಲೆಕುಡಿಯರ ಕುಟುಂಬಗಳ ಜಾಗದ ಸರ್ವೆ ಕಾರ್ಯವು ದಿನಾಂಕ. ೬.೨.೨೦೧೧ರಂದು ಶನಿವಾರ ನಡೆಯಿತು. ಇಲ್ಲಿ ವಾಸವಾಗಿರುವ ಮಲೆಕುಡಿಯರ ಕುಟುಂಬಗಳನ್ನೂ ಒಕ್ಕಲೆಬ್ಬಿಸುವ ಕುರಿತು ಈಗ ಗೊಂದಲವಾಗಿದೆ. ಈ ಪ್ರದೇಶದಿಂದ ಹೊರಬರುವುದಕ್ಕೆ ಒಪ್ಪದೇ ಇರುವುದು, ಸರ್ಕಾರ ಈ ಪ್ರದೇಶ ಬಿಟ್ಟು ಹೊರಬರುವವರಿಗೆ ಹತ್ತು ಲಕ್ಷ ರೂಗಳ ಪರಿಹಾರ ನೀಡುತ್ತಾರೆಯೇ ಅಥವಾ ಅವರು ವಾಸವಾಗಿರುವ ಜಾಗಕ್ಕೆ ಮೌಲ್ಯ ನಿರ್ಧರಿಸಿ ಪರಿಹಾರವನ್ನು ನೀಡುತ್ತಾರೆಯೇ ಎಂಬ ಗೊಂದಲ ಇವರಲ್ಲಿದೆ. ಈ ಮೌಲ್ಯದ ನಿರ್ಧಾರದ ಬಗ್ಗೆ ಇರುವ ಅಸ್ಪಷ್ಟವಾದ ಮಾಹಿತಿಯ ಕೊರತೆಯು ಇವರಿಗಿದೆ. ಸಧ್ಯಕ್ಕೆ ಕೆಲವು ಕುಟುಂಬಗಳು ಕಾಡಿನಿಂದ ಬರುವುದಕ್ಕೆ ಒಪ್ಪಿಕೊಂಡು ೧೦ ಲಕ್ಷ ಪರಿಹಾರ ಪಡೆಯುವುದಕ್ಕೆ ಒಪ್ಪಿದ್ದಾರೆ. ಇವರಿಗೆ ಅಲ್ಪಸ್ವಲ್ಪ ಜಾಗವಿದ್ದುದರಿಂದ ಸುಲಭವಾಗಿ ಒಪ್ಪಿಕೊಂಡಿದ್ದಾರೆ. ಆದರೆ ಹೆಚ್ಚು ಜಾಗ ಇರುವವರಿಗೆ ಇವರು ಪರಿಹಾರ ಸಾಲದು ಎಂಬುದು ಇವರು ನೀಡುವ ಸಮರ್ಥನೆಯಾಗಿದೆ. ಮುಕ್ಕಾಲು ಎಕರೆ ಜಾಗದಲ್ಲಿ ವಾಸವಾಗಿರುವವರಿಗೆ ೧೦ ಲಕ್ಷ ಪರಿಹಾರ ದೊರೆತರೆ ಸುಲಭವಾಗಿ ಒಪ್ಪುತ್ತಾರೆಂಬ ವಾದವಿದೆ. ಇದಕ್ಕಾಗಿ ಇವರು ವಾಸವಾಗಿರುವ ಜಾಗದ ವಿಸ್ತೀರ್ಣದ ಸರ್ವೆ ಕಾರ್ಯವನ್ನು ೬.೨.೨೦೧೧ರಂದು ಶನಿವಾರ ಮಾಡಿದ್ದಾರೆ. ಸರ್ಕಾರದ ನಿಯಮಾನುಸಾರ ಈ ಮೌಲ್ಯವನ್ನು ನಿರ್ಧರಿಸುವುದು ಇದರ ಉದ್ದೇಶವಾಗಿದೆ. ಸರ್ವೆಕಾರ್ಯ ನಡೆಯುತ್ತಿದ್ದಾಗಲೇ ಇದನ್ನು ಒಪ್ಪದೇ ಕೆಲವರು ನಿರಾಕರಿಸಿದ ಪ್ರಸಂಗವು ಇಲ್ಲಿ ನಡೆದಿದೆ. ವಂಶಪರಾಂಪಯನವಾಗಿ ಈ ಜಾಗದಲ್ಲಿದ್ದು ಮಾಡಿಕೊಂಡು ಕಾಡು ಜೀವನ ನಡೆಸುತ್ತಿರುವ ಇಲ್ಲಿನ ಮಲೆಕುಡಿಯರ ಕುಟುಂಬಗಳು, ಕಾಡು ಜೀವನ, ಕಾಡುತ್ತಪತ್ತಿ ಸಂಗ್ರಹ, ಕೃಷಿ, ಮಾಡಿಕೊಂಡು ಜೀವನ ಮಾಡುತ್ತಾ ಬಂದಿದ್ದಾರೆ. ಹೀಗಾಗಿ ತಮ್ಮ ಮೂಲ ನೆಲೆಯನ್ನು ಬಿಟ್ಟು ಹೊರಬರುವುದಕ್ಕೆ ಇವರಿಗೆ ಮನಸ್ಸು ಇಲ್ಲ. ಒಂದು ವೇಳೆ ಇಲ್ಲಿಂದ ಹೊರ ಬರಬೇಕಾದರೆ ಈಗ ಇರುವ ಇವರ ಜಾಗಕ್ಕೆ ಸರ್ಕಾರ ಕೊಡುವ ೧೦ ಲಕ್ಷ ರೂ. ಸಾಲದ್ದು ಎಂಬ ಬೇಡಿಕೆ ಕೆಲವರದ್ದು ಆಗಿದೆ. ಈ ಸರ್ವೆ ಮಾಡಿ.

ಜಾಗದ ವಿಸ್ತೀರ್ಣದ ಪ್ರಮಾಣದ ಆಧಾರದ ಮೇಲೆ ಪರಿಹಾರ ನೀಡುವುದಾದರೆ ೩ ರಿಂದ ೬ ಲಕ್ಷ ರೂ ಗಳಾಗುತ್ತದೆ, ೧೦ ಲಕ್ಷ ರೂ. ಗಳಾಗುವುದಿಲ್ಲ ಎಂಬ ಲೆಕ್ಕಾಚಾರ ಇಲ್ಲಿನ ಕುಟುಂಬಗಳ ಗೊದಲಕ್ಕೆ ಕಾರಣವಾಗಿದೆ. ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪುನಿಂದ ಈ ಕಾಯ್ದಿಟ್ಟ ಅರಣ್ಯ ಪ್ರದೇಶಗಳಲ್ಲಿ ವಾಸವಾಗಿರುವ ಕುಟುಂಬಗಳಿಗೆ ಸಮಾನಯವಾದ ನೆಲೆ ಒದಗಿಸಿ ಕಾಡಿನಿಂದ ಹೊರಗೆ ಕಳುಹಿಸಿ ಎಂದು ತೀರ್ಪು ನೀಡಿದೆ. ಕೇಂದ್ರ ಸರ್ಕಾರ ಇದಕ್ಕಾಗಿ ಅನುಸೂಚಕ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳ ಮಾನ್ಯ ಮಾಡುವ) ಅಧಿನಿಯಮ ೨೦೦೬(೨೦೦೭) ಮತ್ತು ನಿಯಮ ೨೦೦೮. ಅನುಷ್ಠಾನಕ್ಕೆ ಬಂದ ಹಂತದಲ್ಲಿ ಗ್ರಾಮ ಅರಣ್ಯ ಸಮಿತಿಗಳನ್ನು ರಚಿಸಿ ಆ ಮೂಲಕ ಅಂತಹ ಕುಟುಂಬಗಳನ್ನು ಗುರುತಿಸಿ ಇವರಿಗೆ ನೀಡುವುದಕ್ಕೆ ಅವಕಾಶವಿದೆ. ಆದರೆ ಇಲ್ಲಿ ವಾಸವಾಗಿರುವ ಕುಟುಂಬಗಳನ್ನು ಇಲ್ಲಿಂದ ಒಕ್ಕಲೆಬ್ಬಿಸುವ ಕಾರ್ಯ ನಡೆಯುತ್ತಿದೆ. ಅರಣ್ಯ ಇಲಾಖೆ, ಕಂದಾಯ, ಸರ್ವೆ ಇಲಾಖೆಯ ಜಂಟಿ ಅಧಿಕಾರಿಗಳ ತಂಡ ಪೋಲಿಸ್ ರಕ್ಷಣೆಯೊಂದಿಗೆ ಸರ್ವೆಕಾರ್ಯವನ್ನು ನಡೆಸಿರುತ್ತಾರೆ. ದಿನಾಂಕ ೯.೩.೨೦೧೦ರಂದು ಮಂಗಳವಾರ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ವಾಸಿಸುತ್ತಿದ್ದ ೧೧ ಮಲೆಕುಡಿಯ ಸಮುದಾಯದ ಕುಟುಂಬಗಳು ಇಲ್ಲಿಂದ ಹೊರಹೋಗಲು ತಮ್ಮ ಪರಿಹಾರದ ಚಕ್‌ನ್ನು ಪಡೆದು ತಮ್ಮ ಜಮೀನನ್ನು ಸರ್ಕಾರಕ್ಕೆ ಬಿಟ್ಟುಕೊಟ್ಟು ೧೦ ಲಕ್ಷ ರೂಪಾಯಿಗಳ ಪರಿಹಾರವನ್ನು ಪಡೆದವರ ವಿವರವನ್ನು ಈ ಕೋಷ್ಟಕದಲ್ಲಿ ಕಾಣುತ್ತೇವೆ.

**ಕೋಷ್ಟಕ ೪.೩(೧)**

**ಕುದುರೆಮುಖ ರಾಷ್ಟ್ರೀಯ ಉಧ್ಯಾನದ ಪ್ಯಾಕೇಜ್ ಪಡೆದ ಫಲಾನುಭವಿಗಳು**

| **ಕ್ರಸಂ** | **ಹೆಸರು** | **ಗ್ರಾಮದ/ಸ್ಥಳದ ಹೆಸರು** |
|---|---|---|
| ೧ | ಬಾಬು ಮಲೆಕುಡಿಯ | ಬೆಲ್ಲ-ನಾವೂರು ಗ್ರಾಮ |
| ೨ | ಸೋಮಯ್ಯ ಮಲೆಕುಡಿಯ | ಬೆಲ್ಲ-ನಾವೂರು ಗ್ರಾಮ |
| ೩ | ವೀರಪ್ಪ ಸಪಲ್ಯ | ಮೇಲಿನರಾಬೆ, ನಾವೂರು |
| ೪ | ಸತೀಶ್ ಮಲೆಕುಡಿಯ | ಎರ್ಮಾಳ್ ನಾವೂರು |
| ೫ | ವಾರಿಜಾ | ಎರ್ಮಾಳ್ ನಾವೂರು |
| ೬ | ಲೋಕಯ್ಯ ಮಲೆಕುಡಿಯ | ಎರ್ಮಾಳ್ ನಾವೂರು |
| ೭ | ತಿಮ್ಮಲು ಮಲೆಕುಡಿಯ | ಎರ್ಮಾಳ್ ನಾವೂರು |
| ೮ | ಸುಂದರ | ಕುರಿಯಾಡಿ, ಕುತ್ಲೂರು |
| ೯ | ವೆಂಕಪ್ಪ ಮಲೆಕುಡಿಯ | ಕುರಿಯಾಡಿ, ಕುತ್ಲೂರು |
| ೧೦ | ಸುರೇಶ್ ಮಲೆಕುಡಿಯ | ಕುರಿಯಾಡಿ, ಕುತ್ಲೂರು |
| ೧೧ | ಹೊನ್ನಮ್ಮ ಮಲೆಕುಡಿಯ | ಕುರಿಯಾಡಿ, ಕುತ್ಲೂರು |
| ೧೨ | ಅಪ್ಪಿ ಮಲೆಕುಡಿಯ | ಅಳಂಬ, ಕುತ್ಲೂರು |

## ೪. ಪುನರ್ವಸತಿ ಫಲಾನುಭವಿಗಳ-ನಿರಾಶ್ರಿತರ ಹೋರಾಟ

ದಿನಾಂಕ ೧೩.೧೧.೨೦೧೧ರಂದು ಗುರುವಾರ ಬೆಳ್ತಂಗಡಿ ತಾಲೂಕಿನ ಸುಲ್ಕೇರಿ ಗ್ರಾಮದ ವ್ಯಾಪ್ತಿಯಲ್ಲಿ ನಾಯ್ದಗುರಿ ಎಂಬಲ್ಲಿ ನೆಲೆಸಿದ ೬ ಮಲೆಕುಡಿಯರ ಬುಡಕಟ್ಟು ಜನರನ್ನು ಕಂದಾಯ ಇಲಾಖೆ ವತಿಯಿಂದ ಅವರು ವಾಸವಾಗಿರುವ ಸ್ಥಳದಿಂದ ಒಕ್ಕಲೆಬ್ಬಿಸುವ ಪ್ರಯತ್ನ ನಡೆಯಿತು. ಈ ಸ್ಥಳದ ನಿರಾಶ್ರಿತರಾಗಿ ಭಯದ ವಾತಾವರಣದಲ್ಲಿ ಜೀವನ ನಡೆಸುತ್ತಿರುವ ಈ ಕುಟುಂಬಗಳನ್ನು ಸಂದರ್ಶನ ಮಾಡುವುದರ ಸಲುವಾಗಿ ನನ್ನ ಗೆಳೆಯ ಚಂದ್ರಣ್ಣನವರೊಂದಿಗೆ ದಿನಾಂಕ ೨೬.೦೧.೨೦೧೧ರಂದು ಬುಧುವಾರ ಭೇಟಿ ನೀಡಿ ಇವರ ಸ್ಥಿತಿಗತಿಯ ಅಧ್ಯಯನ ಮಾಡಿ ಇವರ ಅತಂತ್ರ ಬದುಕಿನ ನಗ್ನ ಸತ್ಯಗಳು ತಿಳಿದುಬಂದವು. ಗುರುವಾರ ಕಾರ್ಕಳಕ್ಕೆ ಹೋಗುವ ರಾಜ್ಯ ಹೆದ್ದಾರಿಯ ೧೫ನೇ ಮೈಲುಗಲ್ಲಿನಲ್ಲಕಿ ಸಿಗುವ ಜಂತಿಗುಳಿ ಬಸ್ ನಿಲ್ದಾಣದಲ್ಲಿ ಇಳಿದು ಅಲ್ಲಿಂದ ವಾಟರ್ ಟ್ಯಾಂಕ್ ಪಕ್ಕದ ಬಲಗಡೆಯ ಮಣ್ಣಿನ ರಸ್ತೆಯಲ್ಲಿ ನಡೆದು ಎಡಕ್ಕೆ ರಬ್ಬರ್ ಎಸ್ಟೇಟ್ ಬಲಗಡೆ ಕೃಷಿಭೂಮಿ, ಈ ಮಣ್ಣಿನ ರಸ್ತೆಯಿಂದ ೧ ಕೀಮಿ ಸಾಗಿದರೆ ಔಟ್ಲದ ಹೊಳೆಯ ಸೇತುವೆ ತಲುಪುತ್ತೆವೆ. ಅಲ್ಲಿಂದ ಬಲಕ್ಕೆ ಬರುವ ಮಣ್ಣಿನ ರಸ್ತೆಯಿಂದ ಬಲಕ್ಕೆ ಸಾಗಿದರೆ ಸುಲ್ಕೆ ಕಿರಿಯಾದ ಕಿಕ್ಕುಂಜಗೆ ಹೋಗುವ ದಾರಿ ಸಿಗುತ್ತದೆ. ಇಲ್ಲಿಂದ ೨ ಕಿ.ಮೀ ದೂರದ ಇಳಿಜಾರು ರಸ್ತೆಯಲ್ಲಿ ಸಾಗುತ್ತಾ ಹೋದರೆ ಹತ್ತಿರದ ಎಡಕ್ಕೆ ಬಂದು ಹಾಳಾದ ಕೆಟ್ಟು ಹೊದ ಕೈ ಪಂಪ್ ಮುಂದೆ ೩ ಕಡೆ ಹೋಗುವ ದಾರಿ ಸಿಗುತ್ತದೆ. ಮುಂದೆ ಇತರ ಕೃಷಿ ಸ್ಥಳಕ್ಕೆ ದಾರಿ ಇದೆ. ಇಲ್ಲಿಂದ ಎಡಕ್ಕೆ ಹೊಗುವ ದಾರಿಯಲ್ಲಿ ನಡೆದರೆ ನಾಯಿದ ಗುರಿ ಸ್ಥಳ ತಲುಪುತ್ತೇವೆ. ರಬ್ಬರ್ ಎಸ್ಟೇಟ್ ಪಕ್ಕದ ಖಾಲಿ ಇರುವ ಸರ್ಕಾರಿ ಜಾಗದಲ್ಲಿ ಸಂಜೀವ ಮಲೆಕುಡಿಯರ ಸಿಮೆಂಟ್ ಇಟ್ಟಿಗೆ. ಸಿಮೆಂಟ್ ಶೀಟ್ಗಳ ಮಾಡುವಿನಿಂದ ಕಟ್ಟಿದ ಮನೆ. ನಾವು ಮುಂದೆ ಹೋಗಿ ನಿಂತ ಕೂಡಲೇ ಸಂಜೀವ ಮಲೆಕುಡಿಯರ ಮಗ ಗಣೇಶ್ ಮತ್ತು ಲಕ್ಷ್ಮಣ ಇತರರು ಬಂದು ಸುತ್ತುವರೆದು ನೀವ್ಯಾರು? ಎಲ್ಲಿಂದ ಬಂದಿರಿ? ಎಂಬ ಪ್ರಶ್ನೆಗಳ ಸುರಿಮಳೆಯನ್ನು ಸುರಿಸಿದರು. ನಾವು ನಮ್ಮ ಪರಿಚಯ ಮಾಡಿಕೊಂಡು ಬಂದ ಉದ್ದೇಶವನ್ನು ತಿಳಿಸಿದೆವು. 'ಅಯ್ಯೋ ದಿನಾಲು ಹೀಗೆ ಬರ್ತಾರೆ. ಕೇಳ್ತಾರೆ. ಹೋಗುತ್ತಾರೆ. ಆದರೆ ನಮ್ಮ ಸ್ಥಿತಿ ಮಾತ್ರ ಹೀಗೆಯೇ ಇದೆ. ನಮ್ಮನ್ನು ಇಲ್ಲಿಂದ ಹೊರ ಹಾಕಲು ದೌರ್ಜನ್ಯ ಮಾಡಿದವರ ಮೇಲೆ ಏಕೆ ಕ್ರಮ ಇಲ್ಲ? ನಮ್ಮ ಮನೆ, ರಸ್ತೆ ಎಲ್ಲವನ್ನು ಕಳೆದುಕೊಂಡಿದ್ದೇವೆ. ನಮಗೆ ಬದುಕಲು ಕಷ್ಟವಾಗಿದೆ ಎಂದು ಗಣೇಶ ಲಕ್ಷ್ಮಣ್ ಹೇಳಿದರು. ಇವರ ಈ ಪ್ರಶ್ನೆ ಭಯ ಆತಂಕ ಮಾತ್ರವಲ್ಲ ಇವರ ಅತಂತ್ರ ಬದುಕಿನ ಸ್ಥಿತಿಗತಿಯನ್ನು ಸೂಚಿಸುತ್ತದೆ. ಈ ೬ ಕುಟುಂಬಗಳ ಕುಟುಂಬವಾರು ಸಮೀಕ್ಷೆಯ ಮಾಹಿತಿಯನ್ನು ಕೇಳಿದಾಗ ಮಾಹಿತಿ ನೀಡಲು ನಿರಾಕರಿಸಿದರು. ನಾವು ಏಕೆ ಮಾಹಿತಿ ಕೊಡಬೇಕು. ಇದಕ್ಕೆ ನಮ್ಮ ಲೀಡರ್ಗಳಿದ್ದಾರೆ. ಅವರನ್ನೆಲ್ಲಾ ಕೇಳಬೇಕು ಎಂದು ಅವರ ಮುಖಂಡರಿಗೆ ಗಣೇಶ ಫೋನ್ ಮಾಡಿ ನಂತರ ನಾನು ಸಹ ಅವರೊಂದಿಗೆ ಮಾತಾನಾಡಿ ಬಂದ ಉದ್ದೇಶವನ್ನು ತಿಳಿಸಿ ಮನವರಿಕೆ ಮಾಡಿದ್ದಾಗ ನನಗೆ ಅವಕಾಶ ದೊರೆಯಿತು.

### ನಾಯಿದಗುರಿ ಅತಂತ್ರ ಸ್ಥಿತಿ

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕು ಕೇಂದ್ರದಿಂದ ೨೫ ಕಿ.ಮೀ ದೂರದ ಸುಲ್ಕೇರಿಯ ನಾಯಿದ ಗುರಿ ಸಕಾರಿ ಭೂಮಿಯಲ್ಲಿ ಸಿಮೆಂಟ್ ಇಟ್ಟಿಗೆಯಿಂದ ಮನೆ ಕಟ್ಟಿಕೊಂಡು ನೆಲೆಸಿರುವ

ಮಲೆಕುಡಿಯರ ೬ ಕುಟುಂಬಗಳು ತಮ್ಮ ಭದ್ರತೆಯ ಆತಂಕದಲ್ಲಿ ದಿನ ಕಳೆಯುತ್ತಿದ್ದಾರೆ. ಕುದುರೆಮುಖ ರಾಷ್ಟ್ರಿಯ ಉದ್ಯಾನವನದಲ್ಲಿ ನೆಲೆಸಿದ್ದ ಈ ಕುಟುಂಬಗಳು ಅಲ್ಲಿಂದ ಇಲ್ಲಿಗೆ ಬಂದು ನೆಲೆಸಿದ್ದಾರೆ. ಕೂಲಿ ನಾಲಿ ಮಾಡಿಕೊಂಡು ಕಾಡಿನಲ್ಲಿ ಕಾಲ ಕಳೆಯೋಣ ಎಂದರೆ ಅದಕ್ಕೆ ಅವಕಾಶ ನೀಡುತ್ತಿಲ್ಲ ಹೀಗಾದರೆ ನಾವು ಎಲ್ಲಿಗೆ ಹೋಗೊದು ನಮ್ಮನ್ನು ಯಾವಾಗ ಒಕ್ಕಲೆಬ್ಬಿಸುತ್ತಾರೋ ಎಂಬ ಭಯ ಕಾಡುತ್ತಿದೆ. ಎಂದು ಸಂಜೀವ ಮಲೆಕುಡಿಯ ತನ್ನ ಆತಂಕವನ್ನು ವ್ಯಕ್ತಪಡಿಸುತ್ತಾನೆ. ಕುಡಿಯುವ ನೀರಿಗಾಗಿ ಇವರೇ ಒಂದು ಬಾವಿ ತೋಡಿಕೊಂಡಿದ್ದಾರೆ. ಯಾವುದೇ ಮೂಲ ಸೌಕರ್ಯಗಳಿಲ್ಲದೇ ಅತಂತ್ರ ಸ್ಥಿತಿಯಲ್ಲಿ ಬದುಕುವ ಇವರು ತಾವು ಈಗ ನೆಲೆಸಿರುವ ಸರ್ಕಾರಿ ಭೂಮಿಯನ್ನು ಸರ್ಕಾರ ಇವರಿಗೆ ಮುಂಜೂರು ಮಾಡಿ ಅವರಿಗೆ ಭೂ ದಾಖಲೆಗಳನ್ನು ನೀಡಬೇಕು ಎಂಬ ಬೇಡಿಕೆ ಇವರದ್ದಾಗಿದೆ.

ನೋಟೀಸ್ ಜಾರಿ: ಸುಲ್ಕೇರಿ ಗ್ರಾಮದ ಸರ್ವೇ ನಂ-೬೫/೧ಐ-೨೩ ರಲ್ಲಿ ವಾಸವಾಗಿರುವ ಈ ೬ ಕುಟುಂಬಗಳಿಗೆ ಮಾರ್ಚ್ ೪ರಂದು ಬೆಳ್ತಂಗಡಿ ತಹಸಿಲ್ದಾರ್ ಅವರಿಂದ ಒಂದು ನೋಟಿಸ್ ಜಾರಿಯಾಗಿದೆ. "ಸುಲ್ಕೇರಿ ಗ್ರಾಮದ ಸರ್ವೆ ನಂ ೬೫/೧ಐ೨೩ರಲ್ಲಿ ವಾಸವಾಗಿರುವ ನೀವು ಯಾವ ಆದಾರದಲ್ಲಿ ಸರ್ಕಾರಿ ಜಮೀನನ್ನು ಸ್ವಾಧಿನಪಡಿಸಿಕೊಂಡಿದ್ದೀರಿ ಎಂಬುದನ್ನು ೧೫ ದಿನಗಳ ಲಿಖಿತ ಸ್ಪಷ್ಟನೆ ನೀಡಬೇಕು ಎಂದು ನೋಟಿಸ್‌ನಲ್ಲಿದೆ. ಈ ನೋಟಿಸ್ ಬಂದ ನಂತರ ಇವರು ಜಿಲ್ಲಾಧಿಕಾರಿ ಸುಭೋದ್‌ರಾವ್ ಅವರನ್ನು ಬೇಟಿಯಾಗಿದ್ದಾರೆ. ಇದಕ್ಕೆ ಜಿಲ್ಲಾಧಿಕಾರಿ ಗಳು ಈಗ ವಾಸವಾಗಿರುವ ಸರ್ಕಾರಿ ಜಮೀನನ್ನು ಇವರಿಗೆ ನೀಡುವ ಭರವಸೆ ನೀಡಿದ್ದಾರೆ. ಇದು ಒಂದು ವಿಶೇಷ ಪ್ರಕರಣ ಎಂದು ಪರಿಗಣಿಸಿದ ಸರ್ಕಾರ ಜಿಲ್ಲಾಧಿಕಾರಿಗಳು ಇವರಿಗೆ ಭೂ ಮುಂಜುರಾತಿ ನೀಡುತ್ತಾರೆಂಬ ಭರವಸೆ ಇವರಿಗಿದೆ. ಒತ್ತುವರಿಯಾದ ಇತರ ೫೮ ಜನರಿಗೆ ನೋಟಿಸ್ ಈ ನಾಯಿದ ಗುರಿ ಪ್ರಕರಣದ ನಂತರ ಈ ಪ್ರದೇಶವನ್ನು ಸೇರಿದಂತೆ ಬೆಳ್ತಂಗಡಿ ತಾಲೂಕಿನ ಇತರ ಕಡೆಗಳಲ್ಲಿ ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡಿರುವುದನ್ನು ಕಂದಾಯ ಇಲಾಖೆ ನಡೆಸಿದ ಪ್ರಾಥಮಿಕ ಸಮೀಕ್ಷೆಯ ಪ್ರಕಾರ ಬೆಳ್ತಂಗಡಿ ತಾಲೂಕಿನಲ್ಲಿ ಸು. ೩೩೧ ಎಕರೆ ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡಿರುವುದು ಬೆಳಕಿಗೆ ಬಂದಿದೆ. ಈ ಸಂಬಂಧ ೫೮ ಜನರಿಗೆ ನೋಟಿಸ್ ಜಾರಿ ಮಾಡಿದ್ದಾರೆ. ಈ ಒತ್ತುವರಿ ಮಾಡಿಕೊಂಡ ಜಾಗದಲ್ಲಿ ರಬ್ಬರ್ ಅಡಿಕೆ, ಬಾಳೆ ಇತರ ಬೆಳೆಗಳನ್ನು ಬೆಳೆಯುತ್ತಿದ್ದಾರೆ. ಈ ಎಲ್ಲಾ ಬೆಳವಣಿಗೆಗಳ ಹಿನ್ನಲೆಯಲ್ಲಿ ಭೂ ಅಕ್ರಮಗಳ ಪ್ರಕರಣಗಳು ಮುಂದೆ ಯಾವ ರೀತಿಯ ತಿರುವನ್ನು ಪಡೆದು ಕೊಳ್ಳುತ್ತವೆಯೋ ಎಂಬ ಕೂತೂಹಲದ ನಡುವೆ ಇದರ ರಕ್ಷಣೆಗಾಗಿ ನಿರಂತರ ಪ್ರಯತ್ನಗಳು ನಡೆಯುತ್ತಿವೆ. ಇವರನ್ನು ಹಿಡಿತದಲ್ಲಿಟ್ಟುಕೊಂಡು ಇಷ್ಟೆಲ್ಲಾ ಮಾಡುತ್ತಿರುವವರು ಯಾರು ಎಂಬ ಕುತೂಹಲವೂ ಇತ್ತು. ಇವರ ಕುರಿತು ಮಾಹಿತಿ ಕೇಳಿದೆ. ಈಗ ಫೋನ್‌ನಲ್ಲಿ ಮಾತಾನಾಡಿದವರು ಯಾರು ಎಂದು ಅಶೋಕನನ್ನು ಕೇಳಿದಾಗ ನಾರಾವಿಯ ಗ್ರಾಮಪಂಚಾಯಿತಿಯ ಅದ್ಯಕ್ಷರಾದ ಕುತ್ಲೂರು ರಾಮಚಂದ್ರಭಟ್. ಇವರ ಮೋಬೈಲ್ ಸಂಖ್ಯೆ: ೯೪೪೯೩ ೩೧೪೩೦ ಆಗಿತ್ತು. ಇವರು ಇಲ್ಲಿ ಬಂದು ನೆಲೆಸಲು ಎಲ್ಲಾ ರೀತಿಯ ಸಹಕಾರ, ಬೆಂಬಲ ನೀಡುತ್ತಾ ಬಂದಿರುವುದನ್ನು ಕಾಣಬಹುದು.

**ಮೂಲ ಹಿನ್ನಲೆ:** ಈ ೬ ಕುಟುಂಬಗಳ ಮೂಲ ಸ್ಥಳ ಇಲ್ಲಿಂದ ೬ ಕಿ.ಮೀ ದೂರ ಇರುವ ಕುತ್ಲೂರು ಆಗಿದೆ. ಈ ಕುತ್ಲೂರು ಈಗಿನ ಕುದುರೆಮುಖ ರಾಷ್ಟ್ರಿಯ ಉದ್ಯಾನವನದ ವ್ಯಾಪ್ತಿಗೆ ಒಳಪಡುತ್ತದೆ.

ಇತ್ತೀಚೆಗೆ ವಾಸವಾಗಿರುವ ಈ ಕುಟುಂಬಗಳನ್ನು ಇಲ್ಲಿಂದ ಮನವೊಲಿಸಿ, ಹೊರಗೆ ಕಳಿಸುವ ಸಂಬಂಧ ಜಿಲ್ಲಾಧಿಕಾರಿಗಳು ಬೆಳ್ತಂಗಡಿಗೆ ಕರೆದಾಗ ಅವರು ನಮ್ಮ ಜಿಲ್ಲೆಯ ಬೆಳ್ತಂಗಡಿ ತಾಲೂಕಿನಲ್ಲಿ ಯಾವುದಾದರೂ ಸರ್ಕಾರಿ ಜಮೀನು ಇದ್ದರೆ, ನೀವು ಕುಳಿತುಕೊಳ್ಳಿ, ನಂತರ ನಾವು ಅಕ್ರಮ-ಸಕ್ರಮ ದಡಿಯಲ್ಲಿ ನಮಗೆ ಒಂದು ಎಕರೆ ಭುಮಿಯನ್ನು ಮಂಜೂರು ಮಾಡುತ್ತೇವೆ ಎಂಬ ಭರವಸೆಯನ್ನು ನೀಡಿದಾಗ ಇದರಿಂದ ಪ್ರೇರಿತಗೊಂಡ ಈ ಕುಟುಂಬಗಳ ಜನರು ಈ ಗಾಗಲೇ ಈ ಪರಿಸರದಲ್ಲಿ ಇಲ್ಲಿನ ತೋಟಗಳಿಗೆ ಕೂಲಿ ಕಾರ್ಮಿಕರಾಗಿ ಬಂದಾಗ ಇಲ್ಲಿ ಖಾಲಿ ಇರುವ ಈ ಭೂಮಿಯ ಬಗ್ಗೆ ಖಚಿತವಾದ ಮಾಹಿತಿಯನ್ನು ತಿಳಿದುಕೊಂಡೇ ಕೂತ್ಲೂರುನಿಂದ ಇಲ್ಲಿಗೆ ಬಂದು ನೆಲೆಸಿದ್ದಾರೆ. ಇವರು ಇಲ್ಲಿಗೆ ಬಂದು ನೆಲೆಸುವ ಮೊದಲು ೧. ಲಕ್ಷ್ಮಣ ಮಲೆಕುಡಿಯ, ೨. ಸಂಜೀವ ಮಲೆಕುಡಿಯ, ೩. ರಾಮ ಮಲೆಕುಡಿಯ, ೪.ವಸಂತಿ ಮಲೆಕುಡಿಯ, ೫. ಚಂದ್ರಯ್ಯ ಮಲೆಕುಡಿಯ, ೬. ವಿಠ್ಠಲ ಮಲೆಕುಡಿಯ ಈ ಆರು ಕುಟುಂಬಗಳು ದಿನಾಂಕ ೯.೧೦.೨೦೧೧ರಂದು ಬೆಳ್ತಂಗಡಿಯ ತಹಸಿಲ್ದಾರರಿಗೆ ಒಂದು ಅರ್ಜಿಯನ್ನು ಬರೆದು ಕೊಂಡಿದ್ದಾರೆ.

ಮಾನ್ಯರೇ,

ತಹಸಿಲ್ದಾರರೇ, ಬೆಳ್ತಂಗಡಿ ತಾಲೂಕು ಇವರಿಗೆ ಸುಲ್ಕೇರಿ ಗ್ರಾಮದ ನಾಯಿದಗುರಿ ಎಂಬಲ್ಲಿರುವ ಮಲೆಕುಡಿಯ ಜನಾಂಗದ ಜನರು ಬರೆದ ಅರ್ಜಿ.

ನಾವು ಮಲೆಕುಡಿಯ ಜಾತಿಯವರಾಗಿದ್ದು, ಕುದುರೆಮುಖ ರಾಷ್ಟ್ರಿಯ ಉದ್ಯಾನವನದಲ್ಲಿ ವಾಸವಾಗಿದ್ದು, ಸದ್ರಿ ಸ್ಥಳದಿಂದ ಸರ್ಕಾರ ನಮ್ಮನ್ನು ಹೊರಹಾಕುತ್ತಿದೆ ಎಂಬ ಉದ್ದೇಶದಿಂದ ನಾವೆಲ್ಲಾ ಸುಲ್ಕೇರಿ ಗ್ರಾಮದ ಸರ್ವೆ ನಂ. ೨೨೨-೨-೫೮-೧ ಮತ್ತು ೬೨-೧ಲಗ್ತಿಯಲ್ಲಿರುವ ಸರ್ಕಾರಿ ಸ್ಥಳದಲ್ಲಿ ವಾಸವಾಗಿದ್ದೇವೆ. ಪ್ರಸ್ತುತ ಸ್ಥಳವು ಅಳದಂಗಡಿ ಪಂಚಾಯತಿಗೆ ಸೇರುತ್ತದೆ. ಆದ್ದರಿಂದ ದಯಾಮಾಡಿ ನಾವು ವಾಸಿಸುವ ಮನೆ ಸ್ಥಳಗಳನ್ನು ನಮಗೆ ನೀಡಬೇಕಾಗಿ ಈ ಮೂಲಕ ಕೇಳಿಕೊಳ್ಳುತ್ತೇವೆ.

ಇಂತಿ ತಮ್ಮ ವಿಶ್ವಾಸಿ.

ಇವರ ಯಥಾ ನಕಲನ್ನು-

ಸಹಾಯಕ ಕಮೀಷನರ್ ಪುತ್ತೂರು.

ಈ ಪ್ರಕರಣಕ್ಕೆ ಸಂಬಂಧ ಪಟ್ಟಂತೆ ಮುಖ್ಯಮಂತ್ರಿ ಸಚಿವಾಲಯ, ವಿಧಾನ ಸೌದ ಬೆಂಗಳೂರು ಮನವಿಯ ಪ್ರತಿ ಪತ್ರದ ಸಂಖ್ಯೆ-ಸಿ.ಎಂ./೫೧೪೭೪ ಆರ್ ಇ ಪಿ-ಸಿ.ಇ.ಎನ್/೨೦೧೦ ದಿ.೯.೧೧.೨೦೧೦ ರಂದು ಒಂದು ಪತ್ರ ಬಂದಿದೆ. ಬುಡಕಟ್ಟು ಜನಾಂಗದವರಿಗೆ ಭೂಮಿ ನೀಡುವ ಕುರಿತು ಸಂಜೀವ ಮಲೆಕುಡಿಯವರು ನೀಡಿದ ಮನವಿಗೆ ಸಂಭಂದಿಸಿದಂತೆ ಸಚಿವಾಲಯದಿಂದ ಬಂದ ಉತ್ತರವೇನೆಂದರೆ "ಮೇಲ್ಕಂಡ ವಿಷಯಕ್ಕೆ ಸಂಭಂದಿಸಿದಂತೆ ಸಲ್ಲಿಸಿರುವ ತಮ್ಮ ಮನವಿಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಜಿಲ್ಲಾಧಿಕಾರಿ ದಕ್ಷಿಣ ಕನ್ನಡ ಜಿಲ್ಲೆ ಸಂಖ್ಯೆ ಸಿ.ಎಂ/೫೧೪೭೪/ಆರ್ ಪಿ.ಸಿ.ಇ.ಎನ್. ೨೦೧೦ ದಿನಾಂಕ ೧೯.೧೧.೨೦೧೦ ಪತ್ರದ ಮೂಲಕ ಕಳುಹಿಸಲಾಗಿದೆ. ಈ ಕುರಿತು ಕೈಗೊಂಡ ಕ್ರಮದ ಬಗ್ಗೆ ನಮಗೆ ಮಾಹಿತಿ ನೀಡಲು ತಿಳಿಸಿದೆ ಎಂಬ ಉತ್ತರವನ್ನು ಸಂಜೀವ ಮಲೆಕುಡಿಯ ಮಲೆಜಂಡ ಮನೆ ಕುತ್ಲುರು

ಗ್ರಾಮ ಅಂಚೆ ಬೆಳ್ತಂಗಡಿ ಇವರಿಗೆ ಬಂದಿದೆ. ನಂತರ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ಬೆಳ್ತಂಗಡಿ ತಹಸಿಲ್ದಾರರಿಗೆ ಪತ್ರ ಸಂಖ್ಯೆ ಎಸ್.ಎನ್.ಡಿ(೨)೫೪೯/೨೦೧೦-೧೧/ಸಿ.೩೮೬೮೭.ಬಿ.೩ ದಿ.೧೫.೧೧.೨೦೧೦ರಂದು ಒಂದು ಪತ್ರವನ್ನು ಬರೆಯುತ್ತಾರೆ. ಉಲ್ಲೇಖಿತ ಮನವಿಯನ್ನು ಲಗತ್ತಿಸಿದೆ. ವಿಷಯದ ಕುರಿತು ಈ ಕೂಡಲೇ ಪರಿಶಿಲನೆ ನಡೆಸಿ ನಿಯಮಾನುಸಾರ ಕ್ರಮ ಕೈಗೊಂಡು ಮನವಿದಾರರಿಗೆ ಸಮಂಜಸ ಉತ್ತರ ನೀಡಲು ತಿಳಿಸಿದೆ ಎಂಬ ಉತ್ತರವಿರುವ ಪತ್ರವನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ತಹಸಿಲ್ದಾರರಿಗೆ ಬಂದಿದೆ. ಇದರ ಪ್ರತಿ ಅರ್ಜಿದಾರರಾದ ಸಂಜೀವ ಮಲೆಕುಡಿಯವರಿಗೆ ಬಂದಿದೆ. ಇದರ ಪ್ರತಿಯಲ್ಲಿ ಮನವಿದಾರರಿಗೆ ತಹಸಿಲ್ದಾರರು ಬೆಳ್ತಂಗಡಿ ಇವರನ್ನು ಸಂಪರ್ಕಿಸಲು ತಿಳಿಸಿದೆ. ಜಿಲ್ಲಾಧಿಕಾರಿಗಳ ಮತ್ತೊಂದು ಪತ್ರ- ಸರ್ವೆ-ಉಪ-ಎಸ್-ಡಿ-(೪)ಹೆಚ್.ಎಸ್. ೧೬೪/೧೦-೧೧/ಬಿ೫/ ೩೧೫೧೮ ದಿ. ೧೫.೧೧.೨೦೧೦ರಂದು ಬೆಳ್ತಂಗಡಿ ತಹಸಿಲ್ದಾರರು ಅವರಿಗೆ ಬಂದಿದೆ. ಬೆಳ್ತಂಗಡಿ ತಾ. ಸುಲ್ಕೇರಿ ಗ್ರಾಮದ ಸರ್ವೆ ನಂ-೨೨೨/೨,೫೮/೧ ಮತ್ತು ೬೨/೧ರಲ್ಲಿ ಜಮೀನಿನಲ್ಲಿ ವಾಸವಿರುವ ಜನರಿಗೆ ಜಮೀನನ್ನು ಮಂಜೂರಾತಿ ಮಾಡುವ ಬಗ್ಗೆ. ಲಕ್ಷ್ಮಣ ಮಲೆಕುಡಿಯ ಮತ್ತು ಇತರರು ದಿ. ೮.೧೦.೨೦೧೦ರಂದು ಸಲ್ಲಿಸಿರುವ ಮನವಿಗೆ ಸಂಭಂದಿಸಿದಂತೆ ಉಲ್ಲೇಖದ ಮನವಿಯನ್ನು ಲಗತ್ತಿಸಿದೆ. ವಿಷಯದ ಕುರಿತು ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಂಡು ಅರ್ಜಿದಾರರಿಗೆ ಸಮಂಜಸ ಉತ್ತರ ನೀಡಲು ಕಳುಹಿಸಿದೆ ಎಂಬ ಸೂಚನೆ ಬಂದಿದೆ. ಅರ್ಜಿದಾರರಾದ ೧. ಲಕ್ಷ್ಮಣ ಮಲೆಕುಡಿಯ ೨. ಸಂಜೀವ ಮಲೆಕುಡಿಯ ೩. ರಾಮ ಮಲೆಕುಡಿಯ ೪. ವಸಂತಿ ಮಲೆಕುಡಿಯ ೫. ಚಂದ್ರಯ್ಯ ಮಲೆಕುಡಿಯ ೬. ವಿಠ್ಠಲ ಮಲೆಕುಡಿಯ ಇವರಿಗೆ ಬೆಳ್ತಂಗಡಿ ತಹಸಿಲ್ದಾರರು ಇವರನ್ನು ಸಂಪರ್ಕಿಸಲು ಕೋರಿದೆ ಎಂದಿದೆ. ನಾಯಿದಗುರಿ ಇಡೀ ಪ್ರಕರಣದ ದಿಕ್ಕು ತಪ್ಪಿಸುವ ಕೆಲಸ ಇದರ ನಂತರ ನಡೆದಿದೆ. ಮುಖ್ಯವಾಗಿ ಜಿಲ್ಲಾಧಿಕಾರಿಗಳಿಂದ ತಹಸಿಲ್ದಾರರಿಗೆ ಮುಂದಿನ ಕ್ರಮಕ್ಕಾಗಿ ಇವರ ಅರ್ಜಿ ಬಂದ ನಂತರ ತಹಸೀಲ್ದಾರರು ಈ ೬ ಕುಟುಂಬಗಳು ಮತ್ತು ಮುಖಂಡರನ್ನು ಸಭೆ ಕರೆದು ಇದರ ಮುಂದಿನ ಕ್ರಮ ಸಾದಕ ಬಾದಕಗಳ ಬಗ್ಗೆ ತಿಳಿಸುವುದು ಈಗಿನ ಸ್ಥಿತಿ ಬೆಳವಣಿಗೆಯನ್ನು ಕುರಿತು ಚರ್ಚಿಸುವುದನ್ನು ಬಿಟ್ಟು ಯಾವುದೇ ಮೂನ್ಸೂಚನೆ ತಿಳುವಳಿಕೆ ಪತ್ರ ನೀಡದೇ ಏಕಾಏಕಿ ಪೋಲೀಸ್ ರಕ್ಷಣೆಯೊಂದಿಗೆ ಕಂದಾಯ ಪರಿವೀಕ್ಷಕರು ಮತ್ತು ಗ್ರಾಮಲೆಕ್ಕಾದಿಕಾರಿಗಳ ನೇತೃತ್ವದಲ್ಲಿ ಇವರನ್ನು ಇಲ್ಲಿಂದ ಬಲವಂತವಾಗಿ ಹೊರಹಾಕುವ ಕ್ರಮ ನಡೆದಿರುವುದು ಈ ಕುಟುಂಬಗಳ ಅತಂತ್ರ ಬದುಕಿಗೆ ಕಾರಣವಾಗಿದೆ. ಇಲ್ಲಿ ಜವಬ್ದಾರಿಯಿಂದ ವರ್ತಿಸಬೇಕಾದ ತಹಸಿಲ್ದಾರರು ಮೇಲಾಧಿಕಾರಿಗಳಾಗಲಿ, ಜನಪ್ರತಿನಿಧಿ ಗಳಾಗಲಿ ಇವರ ಬದುಕಿಗೆ ಆಸರೆಯಾಗುವಂತಹ ಕ್ರಮದ ಬಗ್ಗೆ ಯೋಚಿಸದೇ, ಜಾಣ ಕುರುಡರಾಗಿ ಜಾರಿಕೊಳ್ಳುವುದರ ಮೂಲಕ ಇಲ್ಲಿನ ಮೂಲ ನಿವಾಸಿಗಳನ್ನು ನಿರಾಶ್ರಿತರನ್ನಾಗಿ ಮಾಡುವಲ್ಲಿ ಕಾರಣಕರ್ತರಾಗಿರುವುದು ತಿಳಿದುಬರುತ್ತದೆ. ಪಕ್ಷ ವೈಷಮ್ಯ ಗುಂಪುಗಾರಿಕೆ ಸೇರಿದಂತೆ ಪಟ್ಟಭದ್ರ ಹಿತಾಸಕ್ತಿಗಳ ಕಾಣದ ಕೈಗಳ ಕೈವಾಡ ಇಲ್ಲಿದೆ. ಈ ಪ್ರದೇಶಕ್ಕೆ ಬಂದು ವಾಸಮಾಡಲು ಆರಂಭಿಸಿದ ಈ ಕುಟುಂಬಗಳು ಸರ್ಕಾರಿ ಜಾಗದಲ್ಲಿದ್ದಾರೆ. ಇಲ್ಲಿಗೆ ಬಂದವರು ತಮ್ಮ ಬದುಕನ್ನು ಕಟ್ಟಿಕೊಳ್ಳಲು ತಮಗೆ ಅಂತ ಒಂದು ಸೂರನ್ನು ಮಾಡಿಕೊಳ್ಳುವಾಗ ಯಮದೂತರಂತೆ ಬಂದ ಕಂದಾಯ ಇಲಾಖೆಯ ಸಿಬ್ಬಂದಿಯವರನ್ನು ಒಳಗೊಂಡ ಗುಂಪು ಇವರ ಮೇಲೆ ದೌರ್ಜನ್ಯ ಮಾತ್ರವಲ್ಲ ಇವರನ್ನು ಸರ್ವನಾಶ ಮಾಡುವಷ್ಟರಮಟ್ಟಿಗೆ ಮುಂದಾಗಿದ್ದನ್ನು ನೋಡಿದರೆ ಇದು ಒಂದು ಪೂರ್ವ ನಿಯೋಜಿತ ಒತ್ತಡದ ಕ್ರಮ ಎಂಬುದು ತಿಳಿದುಬರುತ್ತದೆ. ಇಲ್ಲಿಗೆ

ಬಂದು ನೆಲೆಸಿದವರು ಕುತ್ಲೂರಿನವರಾಗಿದ್ದು ಇವರ ಹೋರಾಟದಲ್ಲಿ ಗಟ್ಟಿಗರಾಗಿದ್ದಾರೆ. ಇವರ ಬೆದರಿಕೆಗೆ ಹೆದರುವ ಸಾಮಾನ್ಯರು ಇವರಲ್ಲ. ಇವರ ಈಗಿನ ಸ್ಥಿತಿ ಇವರ ಈ ಅತಂತ್ರ ಸ್ಥಿತಿಗೆ ಇವರು ಹಾಕುವ ಓಟು ಸಹ ಒಂದು ಕಾರಣವಾಗಿದೆ.

**೬. ಪಾರಂಪಾರಿಕ ಅರಣ್ಯ ಹಕ್ಕು ಕಾಯಿದೆಗೆ ಸಂಬಂಧಿಸಿದ ಹೋರಾಟ**

ಅರಣ್ಯ ವಾಸಿಗಳು ಬುಡಕಟ್ಟು ಸಂಘಟನೆಗಳ ವತಿಯಿಂದ ದೆಹಲಿ ೨೦೧೧ ಡಿಸೆಂಬರ್ ೧೫ರಂದು ಅರಣ್ಯ ಹಕ್ಕು ಕಾಯಿದೆ ೨೦೦೬ರ ಸಮರ್ಪಕ ಕಾಯಿದೆ ಅನುಷ್ಠಾನಕ್ಕೆ ಒತ್ತಾಯಿಸಿ ಪ್ರತಿಭಟನೆ ನಡೆಸಲಾಗಿದೆ. ಈ ಕಾಯಿದೆ ಸಮರ್ಪಕವಾಗಿ ಅನುಷ್ಠಾನವಾಗಬೇಕು ಅರಣ್ಯ ಅಧಿಕಾರಿಗಳು ಮತ್ತು ಮಾಫಿಯಾಗಳ ಕಿರುಕುಳವನ್ನು ಪ್ರತಿಭಟಿಸಿ ೨೫೦೦ ಅಧಿಕ ಬುಡಕಟ್ಟು ಜನರು ಪ್ರತಿಭಟನೆಯನ್ನು ನಡೆಸಿದ್ದಾರೆ. ಈ ಪ್ರತಿಭಟನೆಯಲ್ಲಿ ದೇಶದ ಎಲ್ಲಾ ಬುಡಕಟ್ಟು ಜನರು ಅರಣ್ಯ ವಾಸಿಗಳು ಭಾಗವಹಿಸಿದ್ದು, ಈ ಹೋರಾಟದ ಒಂದು ಮಹತ್ವದ ಬೆಳವಣಿಗೆಯಲ್ಲಿದೆ. ಡಿಸೆಂಬರ್ ೧೫ರಂದು ೫ ವರ್ಷಗಳ ಹಿಂದೆ ಸಂಸತ್‌ನಲ್ಲಿ ಅರಣ್ಯ ಹಕ್ಕು ಕಾಯಿದೆಗಳನ್ನು ಅಂಗೀಕರಿಸಲಾಗಿತ್ತು. ಲಕ್ನೋದಲ್ಲಿ ನಡೆದ ಸಮಾವೇಶದಲ್ಲಿ ಉತ್ತರಪ್ರದೇಶದ ವಿವಿಧ ಭಾಗಗಳಾದ ಸರಣ್‌ಪುರ, ಲಖೀಂಪುರಿ ಖೇರಿ, ಬಾಹ್ರಿಯಾಜ್, ಗೊಂಡ, ಗೋರಖ್‌ಪುರ, ಮಹಾರಾಜ್‌ಗಂಜ್, ಸೋಂಭದ್ರ, ಚಿತ್ರಕೂಟ ಮತ್ತು ಚಾಂದೋಲಿಗಳಿಂದ ಸಾವಿರಕ್ಕೂ ಅಧಿಕ ಅರಣ್ಯ ವಾಸಿಗಳು ಮತ್ತು ಬುಡಕಟ್ಟು ನಿವಾಸಿಗಳು ಪಾಲ್ಗೊಂಡಿದ್ದಾರೆ ಎಂದು ಅರಣ್ಯ ಜನರ ಮತ್ತು ಅರಣ್ಯ ಕೆಲಸಗಾರರ ರಾಷ್ಟ್ರೀಯ ವೇದಿಕೆ ತಿಳಿಸಿದೆ. ಸಾಮಾಜಿಕ ಕಾರ್ಯಕರ್ತರಾದ ಅಶೋಕ್ ಚೌಧರಿ, ರೋಮಾ, ರಜನೀಶ್, ರಾಮ್ ಚಂದ್ರ ರಾಣಾ ಮತ್ತು ಶಾಂತಾ ಭಟ್ಟಾಚಾರ್ಯ ನೇತೃತ್ವದಲ್ಲಿ ಸಮಾವೇಶ ನಡೆಯಿತು. ಈ ಸಮಾವೇಶದಲ್ಲಿ ಪುರುಷರಿಗಿಂತ ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರೇ ಬಾಗವಹಿಸಿದ್ದು ವಿಶೇಷವಾಗಿತ್ತು. ಕಾಯ್ದೆಯ ಅನುಷ್ಠಾನಕ್ಕೆ ಅರಣ್ಯ ಅಧಿಕಾರಿಗಳು ಪೊಲೀಸರು ಮತ್ತು ಜಿಲ್ಲಾಡಳಿತದ ಅಧಿಕಾರಿಗಳೊಂದಿಗೆ ಬಂದು ಅಡ್ಡಿ ಪಡಿಸುತ್ತಿದ್ದಾರೆ ಎಂದು ಸಮಾವೇಶದಲ್ಲಿ ಭಾಗವಹಿಸಿದವರು ಆರೋಪಿಸಿದರು. ಅರಣ್ಯ ವಾಸಿಗಳಿಗೆ ಅರಣ್ಯ ಭೂಮಿಯ ಮೇಲೆ ಕಾಯ್ದೆಯು ಅಧಿಕಾರ ನೀಡಿದ್ದರೂ ಅಧಿಕಾರಿಗಳ ದೆಸೆಯಿಂದ ಅದು ಕೈಗೂಡುತ್ತಿಲ್ಲ ಎಂದು ಹೇಳಿದರು. ಅದೇ ವೇಳೆ ಅರಣ್ಯ ಮಾಫಿಯ ಕೂಡ ಅರಣ್ಯ ವಾಸಿಗಳಿಗೆ ಕಿರುಕುಳ ನೀಡುತ್ತಿದೆ ಎಂದು ಅವರು ದೂರಿದರು. ಈ ಮಾಫಿಯಾಗಳಿಗೆ ಮೇಲಿನವರ ಬೆಂಬಲವಿದೆ. ಹಾಗಾಗಿ ಅರಣ್ಯ ವಾಸಿಗಳು ತೀರಾ ಬಡತನದಲ್ಲಿ ದಿನ ಸಾಗಿಸುವಂತಾಗಿದೆ ಎಂದರು. ತಮಗೆ ನೀಡಲಾಗುತ್ತಿರುವ ಕಿರುಕುಳಗಳ ವಿವಿಧ ಮಾದರಿಗಳ ಬಗ್ಗೆ ಸಭೆಯಲ್ಲಿ ಭಾಗವಹಿಸಿದರು ಮಾಹಿತಿ ನೀಡಿದರು. ಕಾಯ್ದೆಯ ಪ್ರಕಾರ ಹಕ್ಕನ್ನು ಪ್ರತಿಪಾದಿಸಲು ಹೋದ ಬುಡಕಟ್ಟು ಜನರ ವಿರುದ್ಧ ಅರಣ್ಯ ಅಧಿಕಾರಿಗಳು ಕ್ರಿಮಿನಲ್ ಮೊಕದ್ದಮೆಗಳನ್ನು ಹೂಡುತ್ತಿದ್ದಾರೆ ಎಂದು ಚೌಧರಿ ಆರೋಪಿಸಿದರು. ಈ ಮೊಕದ್ದಮೆಗಳನ್ನು ವಾಪಸ್ ತೆಗದುಕೊಳ್ಳುವಂತೆ ಉತ್ತರ ಪ್ರದೇಶ ಸರ್ಕಾರ ಸೂಚಿಸಿದ್ದರೂ ವಾಸ್ತವದಲ್ಲಿ ಯಾವ ಬೆಳವಣಿಗೆಯೂ ಸಂಭವಿಸಿಲ್ಲ ಎಂದರು. ಅರಣ್ಯ ವಾಸಿಗಳ ಪ್ರಮುಖ ಬೇಡಿಕೆಗಳು ಸಮುದಾಯದಿಂದ ಕಿತ್ತುಕೊಂಡು ಅರಣ್ಯ ಇಲಾಖೆಯ ನಿಯಂತ್ರಣದಲ್ಲಿಟ್ಟಿರುವ ಅರಣ್ಯ ಭೂಮಿಯನ್ನು ಕಾಯ್ದೆಯ ಸಮುದಾಯ ಹಕ್ಕುಗಳ ಅಡಿಯಲ್ಲಿ ಗ್ರಾಮ ಸಮುದಾಯಕ್ಕೆ ಮರಳಿಸಬೇಕು. ಅರಣ್ಯ ಇಲಾಖೆ ವಶಪಡಿಸಿಕೊಂಡ ಗ್ರಾಮ ಸಮುದಾಯದ ಭೂಮಿಯನ್ನು ಭೂರಹಿತರಿಗೆ ಹಿಂದಿರುಗಿಸಬೇಕು.

ಅಂತರಾಷ್ಟ್ರೀಯ ಹಣಕಾಸು ಸಂಸ್ಥೆಗಳ ಸಹಭಾಗಿತ್ವದಲ್ಲಿ ಅರಣ್ಯ ಇಲಾಖೆ ಕೈಗೆತ್ತಿಕೊಂಡಿರುವ ವಿವಿಧ ಯೋಜನೆಗಳನ್ನು ಉದಾಹರಣೆಗೆ ಜಪಾನ್ ಕಂಪೆನಿ ಜೆಐಸಿಎ ಅಥವಾ ವಿಶ್ವಬ್ಯಾಂಕ್ ಪ್ರಾಯೋಜಕತ್ವದ ಸಿಡಿಎಂ ಯೋಜನೆಗಳು ನಿಲ್ಲಿಸಬೇಕು. ಸಮುದಾಯ ಅರಣ್ಯ ಭೂಮಿಯಲ್ಲಿ ಮಹಿಳೆಯರಿಗೂ ಹಕ್ಕುಗಳಿರಬೇಕು. ಎಲ್ಲ ತಾಂಗುಯ ಮತ್ತು ಅರಣ್ಯ ಗ್ರಾಮಗಳನ್ನು ಕಂದಾಯ ಗ್ರಾಮಗಳನ್ನಾಗಿ ಪರಿಗಣಿಸಬೇಕು. ಮರ ಹೊರತುಪಡಿಸಿ ಇತರ ಅರಣ್ಯ ಉತ್ಪನ್ನಗಳ ಮೇಲೆ ಅರಣ್ಯ ವಾಸಿಗಳಿಗೆ ಮಾಲೀಕತ್ವ ಹಕ್ಕು ನೀಡಬೇಕು ಹಾಗೂ ಗುತ್ತಿಗೆದಾರರು ಮತ್ತು ಇಲಾಖೆ ಅಧಿಕಾರಿಗಳ ಮಧ್ಯವರ್ತಿಗಳ ಕಿರುಕುಳ ನಿಲ್ಲಬೇಕು ಎಂಬ ಬೇಡಿಕೆ ಇವರದ್ದಾಗಿತ್ತು. ಈ ಹೋರಾಟದ ಫಲವಾಗಿ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅದಿನಿಯಮ ೨೦೦೬(೨೦೦೭-೦೯) ಮತ್ತು ನಿಯಮಗಳು ೨೦೦೮- ಡಿಸೆಂಬರ್ ೨೯, ಕಾಯಿದೆ ಜಾರಿಗೆ ಬಂದಿತು.

ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅದಿನಿಯಮ ೨೦೦೬(೨೦೦೭-೦೯) ಮತ್ತು ನಿಯಮಗಳು ೨೦೦೮- ಡಿಸೆಂಬರ್ ೨೯, ೨೦೦೬ನೇ ತಿದ್ದುಪಡಿ ಕಾಯಿದೆಯಿಂದ ಅರಣ್ಯ ನಿವಾಸಿಗಳ ಎಲ್ಲ ಭಯ –ಆತಂಕಗಳು ದೂರವಾಗಿದ್ದು, ಈ ಮೊದಲು ರಾಜ್ಯ ಸರಕಾರವು ೧೯೭೮ರ ಪೂರ್ವದ ಅರಣ್ಯ ಅತಿಕ್ರಮಣ ಮುಂಜೂರು ಮಾಡಿಕೊಡಲು ಮಾಡಿದ ಪ್ರಕ್ರಿಯೆ/ಕಮಿಟಿಗಳು ರದ್ದಾಗಿವೆ. ಡಿಸೆಂಬರ್ ೧೩, ೨೦೦೫ರವರೆಗೆ ಮಾಡಿದ ಅರಣ್ಯ ಅತಿಕ್ರಮಣ ಕೃಷಿಯನ್ನು ಹತ್ತು ಎಕರೆವರೆಗೆ ಸಕ್ರಮ ಮಾಡಲು ಪ್ರಸ್ತುತ ಕಾಯ್ದೆಯು ಗ್ರಾಮ ಸಭೆಗೆ ಅಧಿಕಾರ ನೀಡಿದೆ. ಅರಣ್ಯ ನಿವಾಸಿಗಳು ವಾಸಿಸುವ ಊರಿನ ಸುತ್ತಮುತ್ತಲೂ ಇರುವ ಅವಲಂಬಿತ ಅರಣ್ಯ ಪ್ರದೇಶದ ನಿರಂತರ ಸಂರಕ್ಷಣೆ ಮತ್ತು ಉಪಯೋಗದ ಹಕ್ಕು ಅರಣ್ಯ ಸಮಿತಿಗಳ ಮೂಲಕ ಅರಣ್ಯ ವಾಸಿಗಳಿಗೆ ಲಭ್ಯವಾಗಿ ಅರಣ್ಯ ಅತಿಕ್ರಮಣಕ್ಕೆ ಊರಿಂದಲೇ ತಡೆ ಬೀಳಲದೆ. ಈ ಕಾಯ್ದೆಯನ್ನು ಕೂದಲೇ ಜಾರಿಗೆ ತರಬೇಕೆಂದು ಬುಡಕಟ್ಟು ಸಮುದಾಯಗಳಿಂದ ರಾಜ್ಯ ಮತ್ತು ಕೇಂದ್ರ ಮಟ್ಟದಲ್ಲಿ ಹೋರಾಟಗಳು ನಡೆದವು. ಅದರ ಫಲಶ್ರುತಿಯಾಗಿ ಭಾರತ ಸರ್ಕಾರದ ಬುಡಕಟ್ಟು ವ್ಯವಹಾರಗಳ ಇಲಾಖೆಯ ಅಧಿಸೂಚನೆ ಯಂತೆ ಅರಣ್ಯ ಪ್ರದೇಶದ ಹಕ್ಕುಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಎಲ್ಲ ತಾಲ್ಲೂಕುಗಳಲ್ಲಿ ಈಗಾಗಲೇ ಪ್ರಕ್ರಿಯೆಗಳನ್ನು ಪ್ರಾರಂಭಿಸಲಾಗಿದೆ. ಗ್ರಾಮ ಸಭೆಗಳ ಮೂಲಕ ಅರಣ್ಯ ಹಕ್ಕು ಸಮಿತಿ ರಚಿಸಲು ಸರ್ಕಾರದಿಂದ ತಾ.ಪಂ ಹಾಗೂ ಗ್ರಾ.ಪಂಗೆ ಆದೇಶ ನೀಡಲಾಗಿದೆ. ಕಾಯ್ದೆಯನ್ವಯ ಅರಣ್ಯವಾಸಿ ಸಮುದಾಯಗಳಿಗೆ ಡಿಸೆಂಬರ್ ೧೩, ೨೦೦೫ರ ಮೊದಲಿನಿಂದ ಮಾಡಿಕೊಂಡು ಬಂದಿರುವ ಅರಣ್ಯ ಭೂಮಿಯಲ್ಲಿನ ಕೃಷಿಯನ್ನು ಹತ್ತು ಎಕರೆಗಳಿಗೆ ಮೀರದಂತೆ ಮಂಜೂರಿ ಪಡೆಯಲು ಅವಕಾಶವಿದೆ. ಈ ಬಗ್ಗೆ ಅವರ ಪೀಳಿಗೆಯು ೭೫ ವರ್ಷಗಳ ಹಿಂದಿನಿಂದ, ಅಂದರೆ ಮೂರು ತಲೆಮಾರು(ಒಂದು ತಲೆಮಾರು ೨೫ ವರ್ಷ)ಗಳಿಂದ ದೇಶದ ಯವುದೇ ಅರಣ್ಯ ಕ್ಷೇತ್ರದಲ್ಲಿ ಜೀವನೋಪಾಯಕ್ಕೆ ಮತ್ತು ಅಹಾರ ಭದ್ರತೆಗೆ ಅರಣ್ಯ ಭೂಮಿ ಹಾಗೂ ಅರಣ್ಯ ಉತ್ಪನ್ನಗಳನ್ನು ಆಶ್ರಯಯಿಸಿಕೊಂಡಿದ್ದಾರೆ ಎನ್ನುವ ಖಜುವಾತಿನ ಪುರಾವೆಗಳನ್ನು ಒದಗಿಸುವ ಅಗತ್ಯವಿದೆ. ಜೊತೆಗೆ ಸಮೂಹಿಕ ಅರಣ್ಯ ಹಕ್ಕು ಹೊಂದುವ ಅವಕಾಶವೂ ಇದೆ. ಪರಿಶಿಷ್ಟ ಪಂಗಡದವರಿಗೆ ಅವರ ಜಾತಿ

ಪ್ರಮಾಣ ಪತ್ರ ಮತ್ತು ೨೦೦೫ರ ಮೊದಲು ಅವರು ವಾಸವಿರುವ ಅರಣ್ಯ ಪ್ರದೇಶದ ವಾಸ್ತವ ದಾಖಲೆ ಕೊಟ್ಟರೆ ಸಾಕು. ಪ್ರತಿಯೊಂದು ಕ್ಲೇಮ್ ಅರ್ಜಿಗಳಲ್ಲಿ ಕನಿಷ್ಠ ಎರಡು ತರಹದ ಸಾಕ್ಷ್ಯಾಧಾರಗಳಾದ ಜಾತಿ ಪ್ರಮಾಣ ಪತ್ರ ಮತ್ತು ವಂಶಾವಳಿ ಪುರಾವೆ ಅಥವಾ ಗೆಜೆಟೀತರ್‌ಗಳಲ್ಲಿ ಉಲ್ಲೇಖವಿರುವ ದೃಢೀಕೃತ ಪ್ರತಿ ಅಥವಾ ೮೦ ವರ್ಷ ವಯಸ್ಸಿನ ಹಿರಿಯರ ಅಫಿಡಾವಿಟ್ ಕಾಯ್ದೆಯಲ್ಲಿ ತಿಳಿಸಿರುವಂತೆ ನಯಮಾವಳಿ ೧೧(ಎ) ಮತ್ತು ೧೩ರ ಮೂಲಕ ಸುವುದು ಅಗತ್ಯ. ಕಾಯ್ದೆಯ ಅಧ್ಯಾಯ ೨, ಕಲಂ ೩(೨)ರಲ್ಲಿ ಅರಣ್ಯದೊಳಗೆ ಶಾಲೆ ಆಸ್ಪತ್ರೆ, ಅಂಗನವಾಡಿಗಳು, ವಿದ್ಯುತ್, ದೂರವಾಣಿ ಸಂಪರ್ಕಗಳು, ರಸ್ತೆ, ನೀರು ಪುರೈಕೆ, ಕೆರೆ ಹಾಗೂ ಮತ್ತಿತರ ಕಿರು ಜಲ ಉತ್ಪನ್ನಗಳನ್ನು, ವೃತ್ತಿ ತರಬೇತಿ ಕೇಂದ್ರಗಳನ್ನು, ಮಳೆ ನೀರು ಸಂಗ್ರಹ ನಿರ್ಮಿತಿ ಕೇಂದ್ರಗಳನ್ನು, ನ್ಯಾಯ ಬೆಲೆ ಅಂಗಡಿ ಹಾಗೂ ಸಮುದಾಯ ಕೇಂದ್ರಗಳನ್ನು ತೆರೆಯಲು ಅರಣ್ಯ ಭೂಮಿಯನ್ನು ಪರಿವರ್ತಿಸಲು ಗ್ರಾಮ ಸಭೆಗೆ ಅವಕಾಶ ನೀಡಿದೆ. ಈ ಕಾಯ್ದೆಯು ಅರಣ್ಯವಾಸಿ ಜನಾಂಗಗಳ ಜನೋಪಾಯ ಮತ್ತು ಆಹಾರ ಭದ್ರತೆಗೆ ಒತ್ತು ನೀಡುವುದರಿಂದ ಕಾಯ್ದೆಯ ಪರಿಚ್ಛೇದ ೩ರ ಉಪ ವಿಭಾಗ(೧)(ಸಿ) ಮತ್ತು ನಿಯಮಾವಳಿ ೨(೧)(ಡಿ)ರನ್ವಯ ಎಲ್ಲ ಕಿರು ಅರಣ್ಯ ಉತ್ಪನ್ನಗಳನ್ನು ಉಚಿತವಾಗಿ ಸಂಗ್ರಹ ಮಾಡುವುದು, ಮಾರಾಟ ಮಾಡುವುದು ಮತ್ತು ಅರಣ್ಯ ಪ್ರದೇಶದಲ್ಲಿ ಅವುಗಳನ್ನು ಸಂಸ್ಕರಣೆ/ಮೌಲ್ಯವರ್ಧನೆ ಹಾಗೂ ಸಾಗಣೆ ಮಾಡುವ ಹಾಗೂ ಮೂಟೆಗಳಲ್ಲಿ ಸೈಕಲ್ ಅಥವಾ ತಳ್ಳುಗಾಡಿಯ ಮೂಲಕ ತಮಗಾಗಿ ಬಳಸಿಕೊಳ್ಳಲು ಅವಕಾಶವಿದೆ. ತಮಗೆ ಬೇಕಾದ ಆಹಾರ ಭದ್ರತೆ ಮರಗಳು, ಜಲ ಸಂಪನ್ಮೂಲ, ಹುಲ್ಲು ಬೆಳೆಸುವುದು, ವನ್ಯಜೀವಿಗಳ ರಕ್ಷಣೆ, ಕೆರೆ ಕಟ್ಟೆಗಳ ರಕ್ಷಣೆಯನ್ನು ಮಾಡಬೇಕೆನ್ನುವ ಕರ್ತವ್ಯದೊಂದಿಗೆ ಇದಕ್ಕಾಗಿ ತಮ್ಮ ಅರಣ್ಯ ಪ್ರದೇಶದ ವ್ಯಾಪ್ತಿಯ ಬಗ್ಗೆ ಅಧಿಕಾರಯುತ ಮಾನ್ಯತೆ ಪಡೆಯಲು ಸಮುದಾಯವು ಆ ಹಳ್ಳಿಯ ಜನರು ಜೀವನೋಪಾಯಕ್ಕೆ ಅವಲಂಬಿಸಿದ ಅರಣ್ಯಗಳ ಗಡಿಗಳನ್ನು ಗುರುತಿಸುವ ಮೂಲಕ ಅದರ ನಕಾಶೆಗಳನ್ನು ಮಾಡಿ ಅಲ್ಲಿರುವ ಅರಣ್ಯ ಸಂರಕ್ಷಣೆಗೆ ಮತ್ತು ಸಾಮರ್ಥ್ಯವನ್ನು ಹೆಚ್ಚಿಸಿ ತಮ್ಮ ನಿರಂತರ ಜೀವನೋಪಾಯ ಹಾಗೂ ಭದ್ರತೆಗೆ ಆ ಅರಣ್ಯ ಪ್ರದೇಶದ ವಹಿವಾಟು ಹಕ್ಕನ್ನು ಜನ, ಜಾನುವಾರು ಉಪಯೊಗಕ್ಕೆ ಬಳಸಿಕೊಳ್ಳಲು ಪೂರಕವಾಗಿ ನದಿ, ಕರೆ ಹಳ್ಳಗಳ ಉಪಯೊಗವನ್ನು ಹೊಂದಲು(ನೀರು, ಮೀನು ಹಿಡಿಯುವುದು ಮತ್ತು ಸಾಕಾಣಿಕೆ) ಅವಕಾಶ ನೀಡಿದ್ದು, ಆ ಮೂಲಕ ಅರಣ್ಯವಾಸಿ ಸಮುದಾಯವೇ ಸಂಪನ್ಮೂಲಗಳಿಗೆ ರಕ್ಷಣೆಯನ್ನು ನೀಡಿ ಅದನ್ನು ಸಮರ್ಪಕವಾಗಿ ಬಳಸಿಕೊಳ್ಳಲು ಅವಕಾಶ ಮಾಡಿಕೊಟ್ಟಿದೆ. ಕಾಯ್ದೆಯೇನೋ ಉತ್ತಮವಾಗಿದೆ. ಆದರೆ ಅದರ ಅನುಷ್ಠಾನ ಹೇಗೆ ಎನ್ನುವುದು ಸದ್ಯದ ಪ್ರಶ್ನೆ. ಹಕ್ಕು ಮಾನ್ಯ ಆಗಲಿ ಕಾಯ್ದೆಯಂತೆ ಈಗಾಗಲೇ ಅರಣ್ಯವಾಸಿಗಳಿಗೆ ಹಕ್ಕು ನೀಡಿ ಆಗಿದೆ; ಕೇವಲ ಅವರ ಕಬ್ಜೆಯಲ್ಲಿರುವ ಅರಣ್ಯವನ್ನು ಮಾನ್ಯ ಮಾಡುವ ಮೂಲಕ ಅವರಿಗೆ ಅರಣ್ಯ ಭೂಮಿಯಲ್ಲಿ ತಮ್ಮ ಹಕ್ಕು ಸ್ಥಾಪನೆಗಾಗಿ ಪಟ್ಟಾ ನೀಡುವಿಕೆ ಇತ್ಯಾದಿ ವಿವಿಧ ಮಟ್ಟದ ಪ್ರಕ್ರಿಯೆಗಳು ನಡೆಯಬೇಕಾಗಿವೆ. ಕಾಯ್ದೆಯನ್ನು ಜಾರಿಗೊಳಿಸುವ ಈ ಪ್ರಕ್ರಿಯೆಯಲ್ಲಿ ಮೂರು ಹೋತದ ಸಮಿತಿಗಳಿದ್ದು, ಅವುಗಳಲ್ಲಿ ಗ್ರಾಮ ಸಭೆ ಮಟ್ಟದಲ್ಲಿ ಅರಣ್ಯ ಹಕ್ಕುಗಳ ಸಮಿತಿ, ಉಪ ವಿಭಾಗೀಯ ಮಟ್ಟದ ಸಮಿತಿ ಹಾಗೂ ಜಿಲ್ಲಾ ಮಟ್ಟದ ಸಮಿತಿಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಪ್ರಕ್ರಿಯೆಯ ಪ್ರಥಮ ಹಂತದಲ್ಲಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಎಲ್ಲ ಗ್ರಾಮದ ಮಜರೆಗಳಲ್ಲಿ ಗ್ರಾಮ ಸಭೆ ಮಾಡಿ ೨/೩ರಷ್ಟು ಸದಸ್ಯರು ಭಾಗವಹಿಸಿ ಸಮಿತಿಯ ಸದಸ್ಯರನ್ನು

ಆಯ್ಕೆ ಮಾಡಬೇಕು. ಆಯ್ಕೆಯಾದ ಸಮಿತಿಯಲ್ಲಿ ಕನಿಷ್ಠ ೧/೩ ಭಾಗದಷ್ಟು ಜನರು ಒಬ್ಬ ಮಹಿಳೆಯನ್ನೊಳಗೊಂಡು ಪರಿಶಿಷ್ಟ ಪಂಗಡದವರಾಗಿರಬೇಕು. ಅವರು ಇಲ್ಲವಾದಲ್ಲಿ ಎಲ್ಲ ೧/೩ರಷ್ಟು ಸದಸ್ಯರೂ ಮಹಿಳೆಯರೇ ಇರಬೇಕು. ಗ್ರಾಮ ಸಭೆಗಳಿಂದ ಒದಗಿಸಲ್ಪಟ್ಟ ಠರಾವುಗಳು, ನಕಾಶೆ, ಕ್ಲೇಮ್ ಅರ್ಜಿಗಳನ್ನು ಪಡೆಯುವುದು, ಗ್ರಾಮ ಸಭೆಯ ಠರಾವಿನ ವಿರುದ್ಧ ಜನರ ಪಿರ್ಯಾದಿಗಳಿದ್ದಲ್ಲಿ ತೀರ್ಮಾನಿಸುವುದು ಮತ್ತು ಎಲ್ಲ ದಾಖಲೆಗಳನ್ನು ಜಿಲ್ಲಾ ಮಟ್ಟದ ಸಮಿತಿಗೆ ಅಂತಿಮ ತೀರ್ಮಾನಕ್ಕಾಗಿ ಕಳುಹಿಸುವುದು, ಅರಣ್ಯ ಹಕ್ಕನ್ನು ಕ್ಲೇಮ್ ಮಾಡುವ ಅರ್ಜಿಗಳು ಹಾಗೂ ಕಾಯ್ದೆಯ ನಿಯಮಗಳ ಪ್ರತಿಗಳನ್ನು ಎಲ್ಲರಿಗೂ ಉಚಿತವಾಗಿ ದೊರೆಯುವಂತೆ ನೋಡಿಕೊಳ್ಳುವುದು, ಗ್ರಾಮ ಸಭೆಗಳ ಮುಕ್ತ ವಾತಾವರಣ ದಲ್ಲಿ ಸರಿಯಾದ ಕೋರಂನೊಂದಿಗೆ ನಡೆಯುವಂತೆ ನೋಡಿಕೊಳ್ಳಲು ತಾಲ್ಲೂಕು ಮಟ್ಟದ ಸಮಿತಿ ಇರುತ್ತದೆ. ಉಪ-ವಿಭಾಗಾಧಿಕಾರಿಯು ಅಧ್ಯಕ್ಷರಾಗಿ ಹಾಗೂ ಸಬಸ್ಯರಾಗಿ ಉಪ-ವಿಭಾಗದಲ್ಲಿರುವ ಅರಣ್ಯಾಧಿಕಾರಿ, ತಾಲ್ಲೂಕು ಮಟ್ಟದ ಸಮಾಜ ಕಲ್ಯಾಣ ಅಧಿಕಾರಿ, ಜಿಲ್ಲಾ ಪಂಚಾಯಿತಿಯಿಂದ ನಾಮ ನಿರ್ದೇಶಿತರಾದ ತಾಲ್ಲೂಕು ಪಂಚಾಯಿತಿ ಮೂವರು ಸದಸ್ಯರು(ಎರಡು ಜನ ಸದಸ್ಯರು ಪರಿಶಿಷ್ಟ ಪಂಗಡದವರು) ಪ್ರಮುಖವಾಗಿ ಅರಣ್ಯ ದಲ್ಲಿವಾಸಿಸುವ ಅಥವಾ ಪ್ರಾಚೀನ ಬುಡಕಟ್ಟು ಪಂಗಡದವರು ಅಥವಾ ಅವರಿಲ್ಲದಿದ್ದರೆ ಒಬ್ಬ ಮಹಿಳೆಯನ್ನೊಳಗೊಂಡು ಇತರೆ ಸಂಪ್ರದಾಯಿಕ ಅರಣ್ಯ ವಾಸಿಗಳಿರುವ ಸಬಸ್ಯರ ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸಲಾಗುತ್ತದೆ. ಜಿಲ್ಲಾ ಮಟ್ಟದ ಸಮಿತಿಯು ಅಂತಿಮವಾಗಿ ಅರಣ್ಯ ಹಕ್ಕುಗಳ ದಾಖಲೆಗಳನ್ನು ಪರಿಶೀಲಿಸಿ, ಸಂಬಂಧಪಟ್ಟ ಸರ್ಕಾರಿ ದಾಖಲೆಗಳಲ್ಲಿ ಸೇರಿಸುವುದಕ್ಕೆ ನಿರ್ದೇಶನಗಳನ್ನು ನೀಡಿ ಉಪ-ವಿಭಾಗೀಯ ಮಟ್ಟದ ಸಮಿತಿಯ ಆದೇಶಗಳಿಂದ ಬಾಧಿತರಾದ ವ್ಯಕ್ತಿಗಳ ಅರ್ಜಿಗಳ ವಿಚಾರಣೆಯನ್ನು ಮಾಡಿ ಕ್ಲೇಮಗಳಿಗೆ ಸಂಬಂಧಪಟ್ಟಂತೆ ಇತರ ಜಿಲ್ಲೆಗಳೊಡನೆ ಸಮನ್ವಯ ಕಾರ್ಯ ಕೈಗೊಂಡು ಪ್ರತಿ ಕುಟುಂಬಕ್ಕೆ ಅರಣ್ಯ ಹಕ್ಕಿನ ಪಟ್ಟಾಗಳನ್ನು ಕೊಡಲು ಕಾಯ್ದೆಯಂತೆ ಪಡೆದ ಅಧಿಕಾರಗಳ ಅನ್ವಯ ಎಲ್ಲ ಮಟ್ಟಗಳಿಂದ ಕ್ರಮಬದ್ಧವಾಗಿ ಹಾಗೂ ಶೀಘ್ರವಾಗಿ ಪ್ರಕ್ರಿಯೆಗಳನ್ನು ನಡೆಯುವಂತೆ ಸಂಬಂದಪಟ್ಟವರು ಗಮನಹರಿಸಬೇಕಾದ ಅವಶ್ಯಕತೆ ಇದೆ. ಈ ಕಾಯ್ದೆ ಮತ್ತು ನಿಯಮಗಳಲ್ಲಿ ಗ್ರಾಮ ಸಭೆ ತೆಗೆದುಕೊಂಡ ತೀರ್ಮಾನದಿಂದ ತಾಲ್ಲೂಕು ಮಟ್ಟದ ಸಮಿತಿಯ ತೀರ್ಮಾನಗಳಿಂದಾಗಲಿ ತೊಂದರೆಗೊಳಗಾದ ವ್ಯಕ್ತಿ/ಕುಟುಂಬವು ೬೦ ದಿನದೊಳಗೆ ತಾಲ್ಲೂಕು ಸಮಿತಿಗಾಗಲಿ ಅಥವಾ ಜಿಲ್ಲಾ ಮಟ್ಟದ ಸಮಿತಿಗಾಗಲಿ ಮೇಲ್ಮನವಿ ಮಾಡಿಕೊಂಡು ನ್ಯಾಯ ಪಡೆಯಲು ಅವಕಾಶವಿದೆ. ಈ ಕಾಯ್ದೆಯಡಿ ಪಡೆಯುವ ಭೂಮಿಯನ್ನು ಎಂದೂ ಮಾರಾಟ ಮಾಡಲಾಗದು. ಅದು ಪೀಳಿಗೆಗೆ ವಂಶಪಾರಂಪರ್ಯವಾಗಿ ನಹಿತವಾಗುತ್ತದೆ. ಅದಕ್ಕಾಗಿಯೇ ಅರಣ್ಯ ಕೃಷಿ ಭೂಮಿಯ ಅಧಿಭೋಗ ಹೊಂದಿರುವ ಅರಣ್ಯ ನಿವಾಸಿಗಳಿಗೆ ಹತ್ತು ಎಕರೆಗೆ ಮೀರದಂತೆ ಯಾವುದೇ ಶುಲ್ಕವಿಲ್ಲದೇ ಉಚಿತವಾಗಿ ಕೊಡುವ ವ್ಯವಸ್ಥೆ ಮಾಡಲಾಗಿದೆ. ಎಲ್ಲ ಅರಣ್ಯ ಹಳ್ಳಿ ಗಳಲ್ಲಿಯೂ ಈ ಕಾಯ್ದೆಯಿಂದ ಜನಾರಣ್ಯ ಮತ್ತು ಸರ್ಕಾರದ ಹಿಡಿತದ ಅರಣ್ಯ ನಿರ್ಮಾಣ ವಾಗಲಿದ್ದು, ಆ ರೀತಿಯ ಗಡಿಗಳನ್ನು ತೀರ್ಮಾನಿಸಿ ವ್ಯವಸ್ಥಿತ ಅರಣ್ಯ ಸಂರಕ್ಷಣೆಗೆ ಅವಕಾಶಗಳಿವೆ.[೧೯]

ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ ೨೦೦೬(೨೦೦೭-೦೧) ಮತ್ತು ನಿಯಮಗಳು ೨೦೦೮- ಡಿಸೆಂಬರ್

೨೯ನೇ ೨೦೦೬ರಲ್ಲಿ ಜಾರಿಗೆ ಬಂದಿದೆ. ತಲೆ ತಲಾಂತರಗಳಿಂದ ಅರಣ್ಯಗಳಲ್ಲಿ ವಾಸವಾಗಿರುವ ಆದರೆ ಅವರ ಹಕ್ಕುಗಳನ್ನು ದಾಖಲಿಸದೇ ಇರುವ ಅರಣ್ಯ ವಾಸಿಗಳಾದ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳುಇ ಇದುವರೆಗೆ ಅರಣ್ಯ ಭೂಮಿಯಲ್ಲಿ ಹೊಂದಿರುವ ಹಕ್ಕುಗಳನ್ನು ಮತ್ತು ಅವರು ಅನುಭವಿಸುತ್ತಿರುವ ಹಕ್ಕುಗಳನ್ನು ಮಾನ್ಯತೆ ಮಾಡಲು ಅಂಥ ಅಗತ್ಯತೆಯ ಸ್ವರೂಪವನ್ನು ದಾಖಲಿಸುವುದಕ್ಕಾಗಿ ನಿರ್ದಿಷ್ಟವಾದ ರೂಪುರೇಷೆಗೆ ಅವಕಾಶವನ್ನು ಕಲ್ಪಿಸುವುದಕ್ಕೆ ಈ ಅಧಿನಿಯಮವು ಸಹಕಾರಿಯಾಗಿದೆ. ಅರಣ್ಯ ವಾಸಿಗಳಿಂದ ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕವಾದ ಅರಣ್ಯ ವಾಸಿಗಳಿಗೆ ಸಂಬಂಧಿಸಿದಂತೆ ಮಾನ್ಯ ಮಾಡಲಾದ ಹಕ್ಕುಗಳು, ದುಸ್ಥಿರ ಬಳಕೆ, ಜೈವಿಕ ವೈವಿಧ್ಯತೆಯ ಸಂರಕ್ಷಣೆ ಮತ್ತು ಪರಿಸರ ಸಮತೋಲನೆಯ ನಿರ್ವಹಣೆಯ ಹೊಣೆಗಾರಿಕೆಯನ್ನು ಅದರ ಅಧಿಕಾರ, ಜೀವನೋಪಾಯ, ಆಹಾರ ಭದ್ರತೆಯನ್ನು ನಿರ್ಧರಿಸುವಾಗ ಅರಣ್ಯಗಳ ರಕ್ಷಣೆಯ ಭದ್ರತೆಯ ಪದ್ಧತಿಯನ್ನು ಬಲಪಡಿಸುವುದನ್ನು ಈ ಕಾಯಿದೆ ಒಳಗೊಂಡಿದೆ, ರಾಜ್ಯದ ಅಭಿವೃದ್ಧಿಗಾಗಿ, ಅರಣ್ಯ ವಾಸಿಗಳು ತಮ್ಮ ವಾಸದ ಸ್ಥಳವನ್ನು ಬೇರೆ ಮಾಡಿಕೊಂಡವರು ಸಹ ಈ ಕಾಯಿದೆ ವ್ಯಾಪ್ತಿಗೆ ಒಳಪಡುತ್ತಾರೆ. ಈ ಕಾಯಿದೆಯ ಅಧ್ಯಾಯ ೧ರಲ್ಲಿ ಕಾಯಿದೆಯ ಹೆಸರು, ವ್ಯಾಪ್ತಿ ಪರಿಭಾಷೆಗಳನ್ನು ಕುರಿತು ಹೇಳಲಾಗಿದೆ. ಹೆಸರು: ಈ ಅಧಿನಿಯಮವನ್ನು ಅನುಸೂಚಿತ ಬುಡಕಟ್ಟುಗಳ ಮತ್ತು ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ ೨೦೦೬ ಎಂದು ಕರೆಯಲಾಗುವುದು. ವ್ಯಾಪ್ತಿ: ಇದು ಜಮ್ಮುಕಾಶ್ಮೀರ ರಾಜ್ಯವನ್ನು ಹೊರತು ಪಡಿಸಿ ಇದೇ ಪೂರಕಕ್ಕೆ ಅನ್ವಯವಾಗುತ್ತದೆ. ಪರಿಭಾಷೆಗಳು:- ಈ ಕಾಯಿದೆಯಲ್ಲಿ ೧. ಸಮುದಾಯ ಅರಣ್ಯ ಸಂಪನ್ಮೂಲ, ೨. ಅಪಾಯದಲ್ಲಿರುವ ವನ್ಯಜೀವಿ ತಾಣ ೩. ಅರಣ್ಯ ವಾಸಿ ಅನುಸೂಚಿತ ಬುಡಕಟ್ಟುಗಳು, ೪.ಅರಣ್ಯ ಜಮೀನು, ೫. ಅರಣ್ಯ ಹಕ್ಕುಗಳು, ೬. ಅರಣ್ಯ ಗ್ರಾಮಗಳು, ೭. ಗ್ರಾಮ ಸಭಾ, ೮.ವಾಸಸ್ಥಳ, ೯. ಸಣ್ಣ ಅರಣ್ಯ ಉತ್ಪನ್ನಗಳು, ೧೦. ಸಂಪಕ ಏಜೆನ್ಸಿ, ೧೧. ಅಧಿಸೂಚನೆ ಗೊತ್ತು ಪಡಿಸುವುದು, ೧೨. ಅನುಸೂಚಿತ ಪ್ರದೇಶಗಳು, ೧೩. ಸುಸ್ಥಿರ ಬಳಕೆಯು ಜೈವಿಕ ವೈವಿಧ್ಯತೆಯ ಅದಿನಿಯಮ, ೧೪. ಇತರ ಪಾರಂಪರಿಕ ಅರಣ್ಯ ವಾಸಿ, ೧೫. ಗ್ರಾಮ, ೧೬. ವನ್ಯ ಪ್ರಾಣಿ ಇವುಗಳನ್ನು ಕುರಿತು ಅರ್ಥೈಸಲಾಗಿದೆ. ೧. ಸಮುದಾಯ ಅರಣ್ಯ ಸಂಪನ್ಮೂಲ: ಎಂದರೆ ಮೀಸಲು ಅರಣ್ಯಗಳು, ಸಚಿರಕ್ಷಿತ ಅರಣ್ಯಗಳು, ಅಭಯಾರಣ್ಯಗಳು, ರಾಷ್ಟ್ರೀಯ ಉದ್ಯಾನಗಳು, ಮತ್ತು ಗ್ರಾಮೀಣ ಪ್ರದೇಶದ ಪಾರಂಪರಿಕ ಬಳಕೆಯ ಅರಣ್ಯವಾಗಿದೆ. ೨. ಅಪಾಯದಲ್ಲಿರುವ ವನ್ಯಜೀವಿತಾಣ: ಎಂದರೆ ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಪ್ರದೇಶಗಳಾಗಿವೆ.[೨೦]

## ದಕ್ಷಿಣ ಕನ್ನಡ ಜಿಲ್ಲೆ ಅರಣ್ಯಹಕ್ಕು ಕಾಯಿದೆ ಅನುಷ್ಠಾನದ ಸ್ಥಿತಿ

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯ ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ನೆಲೆಸಿರುವ ಅರಣ್ಯ ವಾಸಿಗಳಿಂದ ಹಕ್ಕುಪತ್ರ ಪಡೆಯಲು ಒಟ್ಟು ೧೬೦೦ ಅರ್ಜಿಗಳನ್ನು ಇತ್ಯರ್ಥ ಪಡಿಸಲಾಗಿದ್ದು, ಇದರಲ್ಲಿ ೨೬೮ ಅರ್ಜಿಗಳನ್ನು ಪುರಸ್ಕರಿಸಿ ದಿನಾಂಕ ೧೫-೦೮-೨೦೧೦ರಂದು ಹಕ್ಕುಪತ್ರಗಳನ್ನು ನೀಡಲಾಯಿತು. ಈ ೨೬೮ ಅರ್ಜಿದಾರರು ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಭಾರತದ ವಿವಿಧ ಅರಣ್ಯ ಪ್ರದೇಶಗಳಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯದ ಅರಣ್ಯ ವಾಸಿಗಳು ಸೇರಿದಂತೆ ಪಾರಂಪರಿಕ ಅರಣ್ಯ ವಾಸಿಗಳ ಹಿತರಕ್ಷಣೆ ಉದ್ದೇಶದಿಂದ ಕೇಂದ್ರ

ಸರಕಾರ ಜಾರಿಗೆ ತಂದಿರುವ ಪಾರಂಪರಿಕ ಅರಣ್ಯ ಹಕ್ಕು ಕಾಯಿದೆ ಪ್ರಕಾರ ಇವರು ವಾಸವಾಗಿರುವ ಅರಣ್ಯ ಭೂಮಿಯ ಹಕ್ಕನ್ನು ಅವರಿಗೆ ನೀಡುವ ಉದ್ದೇಶದಿಂದಾಗಿ ಅರ್ಜಿಗಳನ್ನು ಪಡೆದು ಇದರ ಮಂಜೂರಾತಿ ಪ್ರಕ್ರಿಯೆ ನಡೆದಿರುತ್ತದೆ. ದ.ಕ.ಜಿಲ್ಲೆಯ ಅತಿ ಹೆಚ್ಚು ಅರಣ್ಯವಾಸಿ ಬುಡಕಟ್ಟು ಸಮುದಾಯದವರು ಹೊಂದಿರುವ ಬೆಳ್ತಂಗಡಿ ತಾಲೂಕಿನಲ್ಲಿ ಒಟ್ಟು ೧೩೮೧ ಅರ್ಜಿ ಬಂದಿದ್ದು, ಇದರಲ್ಲಿ ೧೨೮೨ ಅರ್ಜಿಗಳು ಉಪವಿಭಾಗ ಮಟ್ಟದಲ್ಲಿ ತಿರಸ್ಕೃತ ವಾಗಿರುತ್ತವೆ. ಇದರಲ್ಲಿ ಕೇವಲ ೯೯ ಅರ್ಜಿಗಳನ್ನು ಮಾತ್ರ ಅಂಗೀಕರಿಸಿ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಗೆ ಕಳುಹಿಸಲಾಗಿದೆ. ೧೨೮೨ ಅರ್ಜಿಗಳು ತಿರಸ್ಕೃತವಾಗಲು ಮುಖ್ಯ ಕಾರಣ ಅರಣ್ಯ ಇಲಾಖೆ ಆಕ್ಷೇಪಣೆಯಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ವಾಸವಾಗಿರುವ ಅರ್ಜಿದಾರರು ಸಲ್ಲಿಸಿದ ಭೂಮಿ ಅರಣ್ಯ ಭೂಮಿಯಾಗಿರುವುದಿಲ್ಲ ಎಂಬುದು ಅರಣ್ಯ ಇಲಾಖೆ ನೀಡುವ ಆಕ್ಷೇಪಣೆಯಾಗಿದೆ. ಈ ಹಿಂದೆ ಇದೇ ಅರಣ್ಯ ಇಲಾಖೆಯವರು ಇಲ್ಲಿ ವಾಸವಾಗಿರುವವರಿಗೆ ಅರಣ್ಯದಿಂದ ಹೊರಹೋಗುವಂತೆ ನೋಟೀಸು ನೀಡಿದೆ. ಈಗ ಇದು ಅರಣ್ಯ ಭೂಮಿಯಲ್ಲ ಎಂಬ ಆಕ್ಷೇಪಣೆ ನೀಡಿದೆ. ಈಗ ಅರಣ್ಯ ಇಲಾಖೆಯವರೇ ರಾಷ್ಟ್ರೀಯ ಉದ್ಯಾನವನದ ಭೂಮಿ ನಮ್ಮದಲ್ಲ ಎಂದು ಆಕ್ಷೇಪಣೆ ನೀಡಿದೆ. ಇದು ಅರಣ್ಯ ಭೂಮಿಯೇ ಅಲ್ಲ ಎಂಬುದಾದರೆ ಇದುವರೆಗೆ ಇಲ್ಲಿನ ಮೂಲ ನಿವಾಸಿಗಳನ್ನು ಒಕ್ಕಲೆಬ್ಬಿಸಲು ಇಲಾಖೆ ಮಾಡಿದ್ದಾದರೂ ಏನು? ಏಕೆ? ಎಂಬ ಪ್ರಶ್ನೆಗಳು ಇಲ್ಲಿ ಕಾಡುತ್ತವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ವಾಸವಾಗಿರುವವರು ಕಾಡನ್ನು ಬಿಟ್ಟು ಬಂದರೆ ತಲಾ ಹತ್ತು ಲಕ್ಷ ರೂ.ಗಳ ಪರಿಹಾರ ನೀಡುವ ಪುನರ್ವಸತಿ ಯೋಜನೆ ಜಾರಿಗೆ ತರುತ್ತಿದೆ. ಮತ್ತೊಂದು ಕಡೆ ಇವರಿಂದಲೇ ಭೂ ಮಂಜೂರಾತಿಗೆ ಅರ್ಜಿ ಪಡೆದಿದೆ. ಹೀಗಾಗಿ ಈ ಗೊಂದಲ ಸೃಷ್ಟಿಯಾಗಿದೆ. ಅರಣ್ಯ ಹಕ್ಕು ಕಾಯಿದೆ ಪ್ರಕಾರ ಸುಮಾರು ಮೂರು ತಲೆಮಾರುಗಳಿಂದಲೂ(೭೫ ವರ್ಗ) ವಾಸವಾಗಿರುವ ಬುಡಕಟ್ಟು ಸಮುದಾಯ ಮತ್ತು ಇತರ ಸಾಂಪ್ರದಾಯಿಕ ಅರಣ್ಯ ವಾಸಿಗಳಿಗೆ ಭೂ ಒಡೆತನ ನೀಡಿ, ಭೂ ಮಂಜೂರಾತಿ ಹಕ್ಕು ಪತ್ರ ನೀಡುವ ಉದ್ದೇಶಕ್ಕಾಗಿ ಇರುವ ಈ ಕಾಯಿದೆ ಪ್ರಕಾರ ಪ.ಪಂಗಡ ಹಾಗೂ ಇಲ್ಲಿ ನೆಲೆಸಿರುವ ಪ.ಪಂಗಡ ಅಲ್ಲದವರು ಸಹ ಅರ್ಹರಾಗಿರುತ್ತಾರೆ. ಅರಣ್ಯ ಉಪಸಮಿತಿಯ ಪ.ಪಂಗಡ ಅಲ್ಲದವರ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಪ.ಪಂಗಡದವರು ಸಲ್ಲಿಸಿದ ೩೧೭ ಅರ್ಜಿಗಳಲ್ಲಿ ೨೧೬ ಅರ್ಜಿಗಳನ್ನು ತಿರಸ್ಕರಿಸಲಾಗಿದೆ. ಇವರು ಅರ್ಜಿಯಲ್ಲಿ ತೋರಿಸಿರುವ ಭೂಮಿಯು ಅರಣ್ಯ ಭೂಮಿಯಲ್ಲಿ, ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವುದಿಲ್ಲ ಎಂಬ ಕಾರಣು ಈ ಅರ್ಜಿಗಳ ತಿರಸ್ಕಾರಕ್ಕೆ ಕಾರಣವಾಗಿದೆ.ಒಂದು ಕಡೆ ಇರುವ ಭೂಮಿ ಬಿಟ್ಟು ಪರಿಹಾರ ಪಡೆದು ಹೊರ ಬಂದು ಮುಂದೇನು? ಎಂಬ ಸಮಸ್ಯೆ ಕಾಡಿದರೆ ಇನ್ನೊಂದೆಡೆ ಇವರು ನೆಲೆಸಿರುವ ಭೂಮಿ ಅರಣ್ಯವೇ ಅಲ್ಲ ಎಂಬ ಹೊಸ ಸಮಸ್ಯೆ ಈಗ ಉದಯವಾಗಿದೆ. ಕಾಡಿನಲ್ಲಿರುವ ಉಳಿದವರು ಮುಂದೇನು ಮಾಡಬೇಕು? ಎಂಬ ಗೊಂದಲ ನಿರ್ಮಾಣವಾಗಿದೆ.

ಕೋಷ್ಟಕ ೪.೬(೧): ಪುತ್ತೂರು ತಾಲೂಕಿನ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯ ದವರು ಅನುಸೂಚಕ ಬುಡಕಟ್ಟುಗಳು ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳ(ಅರಣ್ಯ ಹಕ್ಕುಗಳ ಮಾನ್ಯ ಮಾಡುವ)ಅಧಿನಿಯಮ ೨೦೦೬ ೨೦೦೭ರ ನಿಯಮಗಳು ೨೦೦೮ರ ಪ್ರಕಾರ ಅರ್ಜಿ ಸಲ್ಲಿಸಿದವರ ವಿವರ.

| ಕ್ರ ಸಂ | ಹೆಸರು-ವಿಳಾಸ | ಭೂ ವಿಸ್ತೀರ್ಣ |
|---|---|---|
| ೧ | ತನಿಯಪ್ಪ ಮಲೆಕುಡಿಯ ತಂದೆ ಕೊರಗಪ್ಪ ಮಲೆಕುಡಿಯ ಕೈಕಂಬ ನರ್ಸರಿ ಬಳಿನೆಲೆ ಪುತ್ತೂರು | ೨ ಎಕರೆ |
| ೨ | ಪೋಡಿಯಾ ಮಲೆಕುಡಿಯ ತಂದೆ ಕುಂಞ ಮಲೆಕುಡಿಯ ಕೋಟೆ ಬಾಗಿಲು ಮನೆ ಬಿಳಿನೆಲೆ ಗ್ರಾಮ ಪುತ್ತೂರು. | ೧.೦೮ ಎಕರೆ |
| ೩ | ತುಕ್ರಪ್ಪ ಮಲೆಕುಡಿಯ ಎನಿಕಳಮನೆ ಕೊಂಬಾರು ಗ್ರಾಮ ಕಡಬ. ಪುತ್ತೂರು | ೨ ಎಕರೆ |
| ೪ | ತಿಮ್ಮಪ್ಪ ಮಲೆಕುಡಿಯ ಶಿವಣ್ಣ ಮಲೆಕುಡಿಯ ಕೊಂಬಾರು ಗ್ರಾಮ ಕಡಬ. ಪುತ್ತೂರು | ೨ ಎಕರೆ |
| ೫ | ಪ್ರಮೀಳಾ ಗಂಡ ಪನಾರಾಯಣ ನರ್ಸರಿ ಮನೆ ಕೈಕಂಬ (ಅಂಚೆ) ಬಿಳನೆಲೆ ಪುತ್ತೂರು. | ೪ ಎಕರೆ |

## ೭. ಗುಂಡ್ಯ ಜಲವಿದ್ಯುತ್ ಯೋಜನೆ ಹೋರಾಟ

ಕರ್ನಾಟಕ ವಿದ್ಯುತ್ ನಿಗಮ ಗುಂಡ್ಯದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ೨೪೦ ಮೆಗಾವ್ಯಾಟ್ ವಿದ್ಯುತ್ ಯೋಜನೆಯಿಂದ ೧೨೦೦ ಹೆಕ್ಟೇರ್ ಕಾಡು ನಾಶವಾಗಲಿದೆ. ಸಾವಿರಾರು ಎಕರೆ ಕೃಷಿ ಭೂಮಿ ಮುಳುಗಡೆಯ ಜತೆ ಅಪರೂಪವೆನಿಸಿರುವ ವಿವಿಧ ಜಾತಿಯ ಪ್ರಾಣಿ-ಪಕ್ಷಿ, ಕೋಟ್ಯಂತರ ಸೂಕ್ಷ್ಮಜೀವಿಗಳು ಗಿಡಮೂಲಿಕೆಗಳು ನಾಶವಾಗಲಿವೆ ಎನ್ನುತ್ತದೆ. ಪರಿಸರ ವನ್ಯಜೀವಿ ಅಧ್ಯಯನ ತಂಡ. ಸಕಲೇಶಪುರ-ಮಂಗಳೂರು ಅಂಚಿನ ನಡುವಿನ ಪಶ್ಚಿಮ ಘಟ್ಟ ಪ್ರದೇಶ ಅತ್ಯಂತ ಸೂಕ್ಷ್ಮವಾಗಿದ್ದು ಇವು ಮಳೆ ತರುವ ಕಾಡುಗಳೆಂದೇ ಪ್ರಸಿದ್ಧ. ಈ ಕಾಡುಗಳಲ್ಲಿ ಸ್ವಚ್ಛಂದವಾಗಿ ಬದುಕುವ ಆನೆ, ಹುಲಿ, ಕಡವೆ, ಕಾಡುಕೋಣ ವಿವಿಧ ವರ್ಗಕ್ಕೆ ಸೇರಿದ ಮಂಗಗಳು, ಘಟಸರ್ಪ, ಕತ್ತೆಕಿರುಬ, ಕಾಡುಕುರಿ, ಕಬ್ಬೆಕ್ಕು, ನರಿ, ಕಾಡುಕೋಳಿಗಳು ಯೋಜನೆಯಿಂದ ದಿಕ್ಕೆಡಲಿವೆ ಎನ್ನುತ್ತಾರೆ. ವನ್ಯಜೀವಿಗಳ ಅಧ್ಯಯನ ನಿರತ ಭುವನೇಶ್ ಕೈಕಂಬ. ಕಾಡುಗಳ ನಾಶದಿಂದ ಆಹಾರ ದೊರೆಯದೆ ಆನೆಗಳು, ಹಂದಿ, ಕಾಡುಕೋಣ, ಮಂಗಗಳು ರೈತರ ಜಮೀನಿಗೆ ಲಗ್ಗೆ ಹಾಕಿದರೆ, ಚಿರತೆಯಂತಹ ಕ್ರೂರ ಪ್ರಾಣಿಗಳು ಸಾಕು ದನಗಳನ್ನು ಆಹುತಿ ತೆಗೆದುಕೊಳ್ಳಲಿವೆ. ಹೀಗಾಗಿ ವೈವಿಧ್ಯಮಯ ಜೀವ ಸಂಕುಲವನ್ನೊಳಗೊಂಡ ಈ ವಿಭಿನ್ನ ಪರಿಸರದ ಅರಣ್ಯಗಳನ್ನು ನಿಸರ್ಗದ ಪ್ರಯೋಗ ಶಾಲೆಗಳಾಗಿ ರಕ್ಷಿತಾರಣ್ಯ ಎಂದು ಪರಿಗಣಿಸಬೇಕು ಎಂದು ಆಗ್ರಹಿಸಿರುವ ಅವರು ಸಸ್ಯ, ವನ್ಯಜೀವಿಗಳನ್ನು, ಕೀಟ ವರ್ಗಗಳ ಸಂಕುಲಗಳನ್ನು ಗುರುತಿಸಿ ಅವುಗಳ ಬಗ್ಗೆ ಅಧ್ಯಯನ ಮಾಡಿ ದಾಖಲಿಸುವ ವೈಜ್ಞಾನಿಕ ಸಂಶೋಧನೆ ನಡೆಯಬೇಕಿದೆ ಎಂದಿದ್ದಾರೆ. ವಿದ್ಯುತ್ ಅನಿವಾರ್ಯತೆ ಹಾಗು

ನಾಡಿನ ಅಭಿವೃದ್ಧಿ ದೃಷ್ಟಿಯಿಂದ ಮೇಲ್ನೋಟಕ್ಕೆ ಇದು ಉತ್ತಮ ಯೋಜನೆ ಎಂದು ಕಂಡುಬಂದರೂ ತಮ್ಮ ಜೀವನಾಧಾರವಾಗಿ ಕೃಷಿಯನ್ನೇ ನಂಬಿಕೊಂಡ ಪರಿಸರದ ಜನತೆ ನಿರ್ವಸಿತರಾಗುವ ಭೀತಿ ಒಂದೆಡೆಯಾದರೆ ಗುಂಡ್ಯದಲ್ಲಿ ನಿರ್ಮಾಣವಾಗಲಿರುವ ವಿದ್ಯುತ್ ಉತ್ಪಾದನಾ ಕೇಂದ್ರ ಹಾಗು ೪ ಅಣೆಕಟ್ಟು ನಿರ್ಮಾಣದಿಂದ ಅಲ್ರಳ್ಳಿ, ಕಡ್ರಳ್ಳಿ, ಚಿನ್ನಳ್ಳಿ, ಹಿರಿದನಹಳ್ಳಿ, ವಳಲಹಳ್ಳಿ, ಹೊಂಗದಹಳ್ಳಿ, ಮೂಕನಮನೆ, ಬಾಳೆಹಳ್ಳಿ, ಜೋಡಿಗದ್ದೆ-ಶೆಟ್ರಳ್ಳಿ, ಕೂಂತನ ಮನೆ, ದೊಡ್ಡಗದ್ದೆ ಗ್ರಾಮಗಳು ಮುಳುಗಡೆಯಾದರೆ ಕುಮಾರಧಾರ ನದಿಗೆ ಬೂದಿ ಚೌಡಿಯಿಂದ ನೀರನ್ನು ಪೈಪ್‌ನಲ್ಲಿ ಕೊಂಡುಹೋಗಲು ರಸ್ತೆ ನಿರ್ಮಾಣ, ಸುರಂಗ, ಸಿಬ್ಬಂದಿಗಳಿಗೆ ಕ್ವಾರ್ಟರ್ಸ್(ವಸತಿಗೃಹ) ನಿರ್ಮಾಣದಿಂದ ಅರಣ್ಯ ನಾಶವಾಗುತ್ತಿದೆ. ಈ ಯೋಜನೆ ಪಶ್ಚಿಮ ಘಟ್ಟದ ತಪ್ಪಲಿನಲ್ಲಿ ಬರುವ ಕಾರಣ ಅದರ ಅಡ್ಡ ಪರಿಣಾಮ ಘಟ್ಟದ ಪ್ರದೇಶದಲ್ಲೂ ಇದರ ಜತೆಗೆ ಈ ಯೋಜನೆಗಾಗಿ ಲಿಂಗದ ಹೊಳೆ, ಅಡ್ಡದ ಹೊಳೆ ಹಾಗೂ ಕುಮಾರಧಾರ ನದಿ ನೀರನ್ನು ತಿರುಗಿಸುವ ಕಾರಣ ಇವುಗಳನ್ನೇ ನಂಬಿದವುಗಳಿಗೆ ತೊಂದರೆ ಕಟ್ಟಿಟ್ಟ ಬುತ್ತಿ. ಯೋಜನೆಯ ಪ್ರಯೋಜನ ಹಾಗೂ ಲಾಭಗಳು ಎಷ್ಟೇ ಪ್ರಮಾಣದ್ದಾಗಿದ್ದರೂ ಅದು ಅರಣ್ಯ ಮತ್ತು ಜೀವ ಸಂಕುಲಗಳಿಗೆ ನೀಡಲಿರುವ ಮಾರಕ ವಿದ್ಯುತ್ ಅವಘಡವಾಗುವುದಂತೂ ಸತ್ಯ. ಪರಿಸರ ಪ್ರೇಮಿಗಳು ಹಾಗೂ ವನ್ಯಜೀವಿ ಪ್ರೇಮಿಗಳು ಇದನ್ನು ಖಂಡಿಸುವುದಾಗಿ ನೇಚರ್ ಕ್ಲಬ್ ತಂಡ ತಿಳಿಸಿದ್ದಾರೆ. ಎಸಳೂರು ರೇಂಜ್, ಹಾಸನ ವಿಭಾಗದಲ್ಲಿ ಏಳು ಉಷ್ಣ ವಿದ್ಯುತ್ ಸ್ಥಾವರ ಸುಬ್ರಮಣ್ಯ ಸಮೀಪದ ಗಡಿ ಚೌಡಿದೇವಿ ಗುಡಿಯ ಬಳಿ ಕಾರ್ಯ ಸದ್ದಿಲ್ಲದೆ ನಡೆಯುತ್ತಿದೆ. ಇಂತಹ ಯೋಜನೆ ಪ್ರಕೃತಿಯ ಮೇಲಿನ ದುಷ್ಪರಿಣಾಮ ಆತಂಕಕಾರಿಯಾದುದು. ಸುಬ್ರಹ್ಮಣ್ಯ ಪ್ರದೇಶದಿಂದ ಸ್ಥಳಾಂತರ ಗೊಂಡು ಗುಂಡ್ಯ ಪ್ರದೇಶದ ವ್ಯಾಪ್ತಿಯಲ್ಲಿ ನೆಲೆಸಿರುವ ಹೊನ್ನಪ್ಪ ಮಲೆಕುಡಿಯ ಮತ್ತು ವೀರ ಮಲೆಕುಡಿಯ ಎರಡು ಕುಟುಂಬಗಳು ಇವರ ಭೂಮಿ ಗುಂಡ್ಯ ಯೋಜನೆಯ ಅನುಷ್ಠಾನದಿಂದಾಗಿ ಮುಳುಗಡೆಯಾಗಲಿವೆ. ಇದರಿಂದ ಇವರು ಆತಂಕಕ್ಕೊಳಗಾಗಿದ್ದಾರೆ. ಈ ಯೋಜನೆಯಿಂದ ಇಲ್ಲಿಯ ವಾತಾವರಣ ಪ್ರಕೃತಿ ಮತ್ತು ಹರಿಯುವ ನೀರು ಕಲುಷಿತವಾಗಿದೆ. ಗುಂಡ್ಯ ಹೊಳೆಯಲ್ಲಿ ಬರುವ ನೀರು ಕೆಂಪು ಬಣ್ಣದ್ದಾಗಿದೆ. ಈ ನೀರು ಬಳಕೆಗೆ ಯೋಗ್ಯವಲ್ಲದೇ ಇರುವುದರಿಂದ ಈ ನದಿಯನ್ನೇ ನಂಬಿಕೊಂಡಿರುವ ಮಲೆಕುಡಿಯ ಸಮುದಾಯಕ್ಕೆ ತೊಂದರೆಯಾಗಿದೆ.

### ೪.೨. ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಂಬಂಧಿಸಿದ ಹೋರಾಟಗಳು

ದಕ್ಷಿಣ ಕನ್ನಡ ಜಿಲ್ಲೆಯು ಸಾಂಸ್ಕೃತಿಕವಾಗಿ ಶ್ರೀಮಂತ ಪರಂಪರೆಯನ್ನು ಹೊಂದಿದ ಪ್ರದೇಶವಾಗಿದೆ. ತುಳುನಾಡಿನಲ್ಲಿ ಆಚರಿಸುವ ಜಾತ್ರೆ, ಹಬ್ಬ, ಉತ್ಸವ, ಆಚರಣೆಗಳು ಈ ಪ್ರದೇಶದ ಸಂಸ್ಕೃತಿಯ ಪರಂಪರೆಯನ್ನು ಸೂಚಿಸುತ್ತದೆ.

### ಅರೆಕಲ್ಲು ಜಾತ್ರೆ

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನ ಮಂಗಳೂರು ಮಡಿಕೇರಿ ರಾಜ್ಯ ಹೆದ್ದಾರಿಯಲ್ಲಿನ ಸಂಪಾಜೆಯ ಮಸೀದಿ ಎದುರು ತಿರುಗುವ ರಸ್ತೆಯಲ್ಲಿ ೮ ಕಿ.ಮೀ ಅಡವಿಯಲ್ಲಿ ಹೋಗುವ ದಾರಿಯಿಂದ ಜೀಪ್‌ನಲ್ಲಿ ಸಾಗಿದರೆ ಅರೆಕಲ್ಲು ಸಿಗುತ್ತದೆ. ಇಲ್ಲಿಂದ ಹೋಗಿ ಬರಲು ಜೀಪಿನ ಸೌಕರ್ಯವಿದೆ. ಜಾತ್ರೆ ದಿನ ಮಾತ್ರ ವಿಶೇಷ ವಾಹನದ ವ್ಯವಸ್ಥೆ ಇರುತ್ತದೆ. ದಕ್ಷಿಣ ಕನ್ನಡ ಮತ್ತು ಮಡಿಕೇರಿಯ ಗಡಿಭಾಗದಲ್ಲಿರುವ

ಸಂಪಾಜೆಯ ಅರೆಕಲ್ಲಿನ ಮಲೆಕುಡಿಯರು ಹಾಗೂ ಮಡಿಕೇರಿ ತಾಲೂಕಿನ ಗೋಣಿಬೀಡಿನ ಪೂ ಮಲೆಕುಡಿಯರ ಕುಟುಂಬಗಳು ವರ್ಷಕ್ಕೆ ಒಮ್ಮೆ ಸಮಾಗಮಗೊಳ್ಳುವ ಆಚರಣೆ ಇದಾಗಿದೆ. ಅರೆಕಲ್ಲಿನ ಕುಟುಂಬಗಳು ದೋಸೆ ಒಯ್ದರೆ ಗೋಳಿಬೀಡಿನ ಮಲೆಕುಡಿಯರು ಸಾಂಬಾರು ಮಾಡುತ್ತಾರೆ. ನಂತರ ಇಬ್ಬರು ಈ ದೋಸೆ ಸಾಂಬಾರನ್ನು ಸೇರಿಸಿ ಪ್ರಸಾದ ತಿಂದು ಸೇರಿಸುವ ಪದ್ಧತಿಯಲ್ಲಿ ಇವರ ಪರಂಪರೆ ಇದೆ.

**ಅರೆಕಲ್ಲು ಅಯ್ಯಪ್ಪನ ಹಿನ್ನೆಲೆ:** ಅಯ್ಯಪ್ಪ ಒಮ್ಮೆ ಕಾಡಿನಲ್ಲಿ ಅನ್ನ ಆಹಾರವಿಲ್ಲದೆ ಬಳಲುತ್ತಾ ಈ ಅರೆಕಲ್ಲುಗೆ ಬಂದನಂತೆ ಈ ಸಮಯದಲ್ಲಿ ಇಲ್ಲಿನ ಒಬ್ಬ ಅಜ್ಜಿ ಈ ದಣಿದು ಬಂದ ಅಯ್ಯಪ್ಪಗೆ ದೋಸೆಯನ್ನು ನೀಡಿ ಉಪಚರಿಸಿದಳಂತೆ. ಇದರಿಂದ ಸಂತೃಪ್ತನಾದ ಅಯ್ಯಪ್ಪ ಇಲ್ಲಿಯೇ ನೆಲೆನಿಂತನೆಂಬ ಪ್ರತೀತಿ ಇದೆ. ಹೀಗಾಗಿ ಇಲ್ಲಿ ಅಯ್ಯಪ್ಪ ಗುಡಿ ಆಗಿದೆ. ಕೊಡವ ಸಮುದಾಯಕ್ಕೆ ಸೇರಿದ ಪಾಂಡೀರ ಮನೆತನದವರು ಈ ಅಯ್ಯಪ್ಪ ದೇವರ ದೇವಸ್ಥಾನಕ್ಕೆ ಮುಖ್ಯ ಆಡಳಿತಗಾರರಾಗಿದ್ದಾರೆ. ಈ ಜಾತ್ರೆಯ ಪೂರ್ಣ ನಿಯಂತ್ರಣ, ನಿರ್ವಹಣೆ ಇಲ್ಲಿನ ಮಲೆಕುಡಿಯರದ್ದಾಗಿದೆ. ಕೊಡವರ ಪಾಂಡೀರ ಮನೆಯಿಂದಲೇ ಭಂಡಾರ ಬರುತ್ತದೆ. ನಂತರ ಇಲ್ಲಿ ಆರಾಧನೆ ನಡೆಯುತ್ತದೆ. ಜಾತ್ರೆ ಪ್ರತಿವರ್ಷ ಮಾರ್ಚ್ ೧೪ರಂದು ಅರೆಕಲ್ಲುನಲ್ಲಿ ನಡೆಯುತ್ತದೆ. ಇದು ಅರೆಕಲ್ಲು ಅಯ್ಯಪ್ಪ ಜಾತ್ರೆ ಕೋಳಿಜಾತ್ರೆ ಎಂದು ಪ್ರಸಿದ್ಧಿಯಾಗಿದೆ. ಸಾಮೂಹಿಕವಾಗಿ ದೋಸೆ ಒಯ್ಯುವ ಆಚರಣೆ ಇಲ್ಲಿ ನಡೆಯುತ್ತದೆ.

**ಪಟ್ನಿ:** ಅರೆಕಲ್ಲು ಪ್ರದೇಶದಲ್ಲಿ ನೆಲೆಸಿರುವ ಕೊಡವರ ಸುಮಾರು ೧೮ ಕುಟುಂಬಗಳು ಮಹಿಳೆಯರು ಉಪವಾಸ ವ್ರತದಲ್ಲಿದ್ದು ದಿನಾಂಕ ಮಾರ್ಚ್ ೧೪ರಂದು ಇಲ್ಲಿ ನೆಲೆಸಿರುವ ಅಯ್ಯಪ್ಪನಿಗೆ ದೋಸೆ ಒಯ್ಯುವ ಸೇವೆಯನ್ನು ಮಾಡುತ್ತಾರೆ. ಈ ದೋಸೆ ಒಯ್ಯುವ ಸಂದರ್ಭದಲ್ಲಿ ಒಬ್ಬರಿಗೊಬ್ಬರು ಮಾತನಾಡಿಕೊಳ್ಳುವುದಿಲ್ಲ. ಮಾತನಾಡುವಾಗ ಬಾಯಿಂದ ಎಂಜಲು ದೋಸೆಗೆ ಬಿದ್ದರೆ ಪ್ರಸಾದಕ್ಕೆ ಅಪವಾದವಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.ಮಾರ್ಚ್ ೧೪ರ ಹಿಂದಿನ ದಿನ ಇಲ್ಲಿನ ಅಯ್ಯಪ್ಪ ಗುಡಿಯಿಂದ ಪಡೆದ ಅಕ್ಕಿಯನ್ನು ನೆನೆಹಾಕಿ ಮನೆಯಲ್ಲಿಯೇ ರುಬ್ಬಿಕೊಂಡು ಮುಂಜಾನೆ ಗುಡಿಯ ಕಡೆಗೆ ಬರುತ್ತಾರೆ. ಎಲ್ಲಾ ಮಹಿಳೆಯರು ಸೇರಿ ಸಾಮೂಹಿಕ ಒಲೆಯನ್ನು ರಚಿಸಿಕೊಳ್ಳುತ್ತಾರೆ. ಇದರಲ್ಲಿ ದೋಸೆ ಒಯ್ಯುವ ಕಾವಲಿ ಇಟ್ಟು ಸಾಮೂಹಿಕವಾಗಿ ದೋಸೆ ಒಯ್ಯುತ್ತಾರೆ. ನಾಲ್ಕು ಗಂಟೆಗಳ ಕಾಲ ದೋಸೆ ಒಯ್ಯುತ್ತಾರೆ. ತಾವು ರುಬ್ಬಿ ಸಿದ್ದ ಮಾಡಿಕೊಂಡು ಬಂದ ಹಿಟ್ಟು ಮುಗಿಯುವವರೆಗೆ ದೋಸೆ ಒಯ್ಯುತ್ತಾರೆ. ಈ ದೋಸೆಯನ್ನು ಒಂದು ಬುಟ್ಟಿಯಲ್ಲಿ ಇಟ್ಟುಕೊಂಡು ಅರೆಕಲ್ಲು ಅಯ್ಯಪ್ಪ ದೇವರ ನೈಬೇದ್ಯಕ್ಕೆ ಒಪ್ಪಿಸುತ್ತಾರೆ. ಹೀಗೆ ಇಲ್ಲಿನ ದೇವರ ನೈವೇದ್ಯಕ್ಕಾಗಿ ಸಾಮೂಹಿಕವಾಗಿ ದೋಸೆ ಒಯ್ಯುವ ಆಚರಣೆಯನ್ನು, 'ಪಟ್ನಿ' ಎನ್ನುತ್ತಾರೆ. ಕೊಡಗಿನ ಕೊಡವ ಭಾಷೆಯಲ್ಲಿ ಉಪವಾಸ ಎಂದರ್ಥ. ಮಹಿಳೆಯರು ಉಪವಾಸ ವ್ರತಾಚರಣೆ ಮೂಲಕ ದೋಸೆ ಒಯ್ಯುವ ಸೇವೆ ಇದಾಗಿದೆ. ಇವರು ತಯಾರಿಸಿ ದೋಸೆಯನ್ನು ದೇವರ ಗುಡಿಯ ಕೆಳಗಿನ ಅಂಗಣದಲ್ಲಿ ಇರುವ ಕಟ್ಟೆಯ ಮೇಲೆ ಇರಿಸುತ್ತಾರೆ. ಇದೇ ಸಮಯದಲ್ಲಿ ಗಾಳಿಬೀಡುವ ಪೂ ಮಲೆಕುಡಿಯರು ಸಾಂಬಾರು ತಯಾರಿಸುತ್ತಾರೆ. ಇವರು ತಯಾರಿಸಿ ಸಾಂಬಾರನ್ನು ಸಹ ಅಯ್ಯಪ್ಪನಿಗೆ ಸಮರ್ಪಿಸುತ್ತಾರೆ. ಸಂಜೆ ೬ ಗಂಟೆ ಹೊತ್ತಿಗೆ ದೋಸೆ ತಯಾರಿಸಿದ ಮನೆಯವರು ಮತ್ತು ಗೋಳಿಬೀಡುವ ಸಾಂಬಾರು ತಯಾರಿಸಿದ ಮನೆಯವರು ಸೇರಿಕೊಂಡು ಈ ದೋಸೆಯೊಂದಿಗೆ ಸಾಂಬಾರನ್ನು ಸೇರಿಸಿ ತಿನ್ನುವ ಮೂಲಕ ತಮ್ಮ ಉಪವಾಸದ ವ್ರತವನ್ನು ಕೊನೆಗೊಳಿಸುತ್ತಾರೆ.

**ಕೋಳಿಜಾತ್ರೆ:** ಈ ದಿನ ಇಲ್ಲಿನ ಬೆಟ್ಟದ ಮೇಲೆ ಇರುವ ಗುಹೆಯಲ್ಲಿರುವ 'ಮಲೆಚಾಮುಂಡಿ' ದೈವಕ್ಕೆ ಕೋಳಿಯನ್ನು ಹರಕೆಯಾಗಿ ಒಪ್ಪಿಸಲಾಗುತ್ತದೆ. ಜಾತ್ರೆಗೆ ಬರುವವರ ಕೈಯಲ್ಲಿ ಸಾಮಾನ್ಯವಾಗಿ ಕೋಳಿ ಇದ್ದೇ ಇರುತ್ತದೆ. ಒಂದು ಕೋರಿಕೆ ಹರಕೆಯ ಎಲ್ಲಾ ಕೋಳಿಗಳನ್ನು ತೆಗೆದುಕೊಂಡು ಹೋಗಿ ಇಲ್ಲಿನ ದೈವಕ್ಕೆ ಸಲ್ಲಿಸುವ ಪದ್ದತಿ ಇಲ್ಲಿ ನಡೆಯುತ್ತದೆ. ಮಡಿಕೇರಿ ತಾಲೂಕಿನ ಕಾಳಿಬೀಡುನಲ್ಲಿ ನೆಲೆಸಿರುವ ಪೂ ಮಲೆಕುಡಿಯರು ಬರುತ್ತಾರೆ. ಗುಡಿಯೊಳಗಿಂದ ಪ್ರಸಾದ ಪಡೆದುಕೊಂಡು ಹೂಂಕರಿಸುತ್ತಾ ಗುಡಿಗೆ ಸುತ್ತು ಬರುತ್ತಾರೆ. ಕೊಡಗಿನ ಪೂಮಲೆಕುಡಿಯರ ಸಾಂಪ್ರದಾಯಿಕ ಉಡುಪು ವೇಷ-ಭೂಷಣದೊಂದಿಗೆ ಸುಮಾರು ೫೦ ಹೆಚ್ಚು ಮಂದಿ ಗುಡಿಗೆ ಸುತ್ತು ಹಾಕುತ್ತಾರೆ. ಇಲ್ಲಿ ಇವರ ಸಾಂಪ್ರದಾಯಿಕ ನೃತ್ಯವನ್ನು ಮಾಡುತ್ತಾರೆ. ಪುರುಷರ ತಂಡ ಬೊಳ್ಕಟ್, ನೃತ್ಯ ಮಾಡುತ್ತಾರೆ. ಇವರ ನಂತರ ಮಹಿಳೆಯವರ ತಂಡ ಸಾಮೂಹಿಕ ನೃತ್ಯ 'ಉಮ್ಮತ್ತಾಳ' ನಡೆಯುತ್ತದೆ. ಎಲ್ಲರೂ ಈ ಉತ್ಸವದಲ್ಲಿ ಭಾಗವಹಿಸಿ ಸಂಭ್ರಮಿಸುತ್ತಾರೆ. ಈ ಜಾತ್ರೆಯ ವಿಶೇಷ ನಿರ್ಬಂಧವೆಂದರೆ ಈ ದೇವಸ್ಥಾನದ ಸುತ್ತ ಯಾರು ಯಾವುದೇ ಭಾವಚಿತ್ರ ತೆಗೆಯುವಂತಿಲ್ಲ.

**ಪುರುಷವೇಷ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಕೃತಿ ಆರಾಧನೆಗೆ ಸಂಬಂಧಿಸಿದಂತೆ ಹಲವಾರು ವಿಶಿಷ್ಟವಾದ ಜನಪದ ಕಲೆಗಳು ಅನಾದಿಕಾಲದಿಂದಲೂ ಆಚರಣೆಯಲ್ಲಿರುವುದು ಕಂಡುಬರುತ್ತದೆ. ಪ್ರಕೃತಿ ಆರಾಧನೆಯ ಪ್ರತೀಕವಾಗಿ ಸುಗ್ಗಿಯ ಸಮಯದಲ್ಲಿ ಆಚರಿಸುವ ಆಚರಣೆನ್ನು ಪುರುಷ ವೇಷ ಕಟ್ಟುವುದು ಎಂದು ಕರೆಯಲಾಗುತ್ತದೆ. ಪುರುಷರ ಕೂಟ ಎಂತಲೂ ಕರೆಯುತ್ತರೆ. ಈ ಪುರುಷ ಕೂಟ ಮುಂಟ್ರುಪಳಿಕೆ ಮತ್ತು ಧರ್ಮಸ್ಥಳದಲ್ಲಿದೆ. ಪುರುಷರು ವೇಷ ಹಾಕುವುದರಿಂದ ಇದಕ್ಕೆ ಪುರುಷವೇಷ ಎಂದು ಕರೆಯುತ್ತಾರೆ. ಮಂಗಳೂರಿನ ಕದ್ರಿ ಶ್ರೀಮಂಜುನಾಥ ಸ್ವಾಮಿ ದೇವರ ಆರಾಧನೆಯೊಂದಿಗೆ ಪ್ರತಿವರ್ಷ ಸುಗ್ಗಿಯ ಹುಣ್ಣಿಮೆಗೆ ಮೊದಲು ೫ ದಿನ ಬೆಳದಿಂಗಳ ಬೆಳಕಿನಲ್ಲಿ ಆಚರಿಸುವ ಆಚರಣೆ ಇದಾಗಿದೆ. ಧರ್ಮಸ್ಥಳ, ಕೊಕ್ಕಡ ಮುಂಟ್ರುಪಳಿಕೆ ಪರಿಸರದಲ್ಲಿ ಅನಾದಿಕಾಲ ದಿಂದಲೂ ಆಚರಿಸಿಕೊಂಡು ಬರಲಾಗುತ್ತಿದೆ. ತುಳುನಾಡಿನಲ್ಲಿ ಆಚರಿಸುವ ಸುಗ್ಗಿ ಕುಣಿತಗಳಲ್ಲಿ ಪುರುಷ ವೇಷವು ಒಂದಾಗಿದೆ. ಇದನ್ನು ಪ್ರತಿ ವರ್ಷ ಸುಗ್ಗಿ ಹುಣ್ಣಿಮೆಯ ದಿನಕ್ಕೆ ೫ ದಿನ ಸಂಘಟಿಸುವುದಕ್ಕಾಗಿ 'ಪುರುಷರ ಕೂಟ' ಕೊಕ್ಕಡದ ಮುಂಟ್ರುಪಳಿಕೆಯಲ್ಲಿದೆ. ಸುಗ್ಗಿಯ ತಿಂಗಳಿನ ೫ ದಿನದಲ್ಲಿ ಮನೆಮನೆಗೆ ಹೋಗಿ ಪುರುಷ ಪೂಜೆ ಮಾಡುವುದು ಇಲ್ಲಿನ ಆಚರಣೆಯಾಗಿದೆ. ಕೊಕ್ಕಡ, ಪಟ್ರಮೆ ಧರ್ಮಸ್ಥಳದ ಪರಿಸರದಲ್ಲಿ ಇದು ಈಗಲೂ ಆಚರಣೆಯಲ್ಲಿದೆ. ಮುಂಡೂರು ಪಳಿಕೆಯ ಪುರುಷ ಕೂಟ ಪ್ರತಿ ವರ್ಷ ಇದನ್ನು ನಡೆಸುತ್ತಾ ಬಂದಿದೆ. ಅನಾದಿಕಾಲದಿಂದ ಸುಮಾರು ೩೦-೪೦ ವರ್ಷಗಳಿಂದಲೂ ಇದು ಆಚರಣೆಯಲ್ಲಿದೆ. ಪುರುಷ ಪೂಜೆ ನೆರವೇರಿಸಿದ ರೈತರು ಹರಿಕೆ ಮಾಡಿಕೊಂಡು ಹಣ, ಬೆಳ್ಳಿ, ದವಸ-ಧಾನ್ಯ, ನೀಡುತ್ತಾರೆ. ಗೌಡ, ಪೂಜಾರಿ, ಮಲೆಕುಡಿಯ, ಕೃಷಿಕರು ಸೇರಿ ಇದನ್ನು ಆಚರಿಸುತ್ತಾರೆ. ಪುರುಷ ಪೂಜೆಯ ಸಮಯದಲ್ಲಿ ದಾನ ಧರ್ಮ ಮಾಡಿದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇಲ್ಲಿನ ಜನರಲ್ಲಿದೆ. ಎಂಬುದನ್ನು ಮುಂಡೂರುಪಳಿಕೆಯ ದುಗ್ಗಮ್ಮ ಹೇಳುತ್ತಾರೆ. ಅಲಂಕೃತ ದೇವರ ಉತ್ಸವ ಪುರುಷ ವೇಷ ದೊಂದಿಗೆ ವಾದ್ಯ ಮೇಳದೊಂದಿಗೆ ಮನೆಮನೆಗೆ ತೆರಳಿ ಪೂಜೆ ಮಾಡುವುದಕ್ಕೆ ಪುರುಷ ಪೂಜೆ ಎಂದು ಕರೆಯಲಾಗುವುದು.ಸುಗ್ಗಿ ಹುಣ್ಣಿಮೆಯ ಸಮಯದಲ್ಲಿ

ಹಿಂದೆ ಭತ್ತದ ಪೈರು ಕಟಾವಿಗೆ ಬಂದಾಗ ಹಳ್ಳಿಯ ಕೃಷಿಕರು ಬೆಳದಿಂಗಳ ಬೆಳಕಿನಲ್ಲಿ ಕೃಷಿಕರು ಎಲ್ಲರೂ ಸೇರಿಕೊಂಡು ಈ ಉತ್ಸವವನ್ನು ಆಚರಿಸುತ್ತಾರೆ. ಈ ಪ್ರದೇಶದಲ್ಲಿನ ರೈತರು ಕದ್ರಿ ಮಂಜುನಥ ದೇವರ ಸವಾರಿಯೊಂದಿಗೆ ವಿವಿಧ ಬಗೆಯ ವೇಷಗಳನ್ನು ಧರಿಸಿ ಮನೆಮನೆಗೆ ಹೋಗಿ ನರ್ತಿಸುತ್ತ ದೇವರನ್ನು ಆರಾಧಿಸುವ ಪದ್ಧತಿಯನ್ನು ಪುರುಷ ವೇಷ ಕಟ್ಟುವುದು ಎಂದು ಕರೆಯಲಾಗುತ್ತದೆ. ಈ ವೇಷ ಕಟ್ಟುವವರು ಪುರುಷರೇ ಆಗಿರುತ್ತಾರೆ. ಈ ಭಗದ ರೈತರೇ ಆಗಿರುತ್ತಾರೆ. ಒಂದು ಪ್ರದೇಶದ ಎಲ್ಲಾ ಜಾತಿ ಸಮುದಾಯದ ಜನರು ಸೇರಿಕೊಂಡು ವೇಷ ಹಾಕುತ್ತಾರೆ. ವೇಷ ಹಾಕುವುದು ಮಾತ್ರವಲ್ಲ ಇವರು ಹಾಕುವ ವೇಷಕ್ಕೆ ತಕ್ಕಂತೆ ತುಳು ಪಾಡ್ದನ, ಸಂಧಿಯನ್ನು ಹೇಳುತ್ತಾರೆ. ಇಲ್ಲಿ ಬರುವ ಒಡಪುಗಳು ಪ್ರಕೃತಿ ಆರಾಧನೆಗೆ ಸಂಬಂಧಿಸಿರುತ್ತದೆ. ಈ ವೇಷಗಾರರಲ್ಲಿ ಕೊಕ್ಕಡದ ಮುಂಟ್ರುಪಳಿಕೆ ಧರ್ಮಸ್ಥಳದ ಮಲೆಕುಡಿಯರು ಇದ್ದಾರೆ. ಈ ವೇಷಗಾರಿಕೆಗೆ ಇಂತಾಹುದೇ ಅಂತ ನಿರ್ಧಿಷ್ಟತೆ ಇರುವುದಿಲ್ಲ ತಮಗೆ ಇಷ್ಟಬಂದ ವೇಷ ಹಾಕಲು ಇಲ್ಲಿ ಅವಕಾಶವಿದೆ. ಮಕ್ಕಳು, ದೊಡ್ಡವರು ಎಂಬ ವಯೋಮಿತಿ ಇಲ್ಲ, ಜಾತಿ ಬೇದಗಳಿಲ್ಲ. ಎಲ್ಲರೂ ಭಾಗವಹಿಸುವುದು ಒಂದು ವಿಶಿಷ್ಟತೆ ಯಾಗಿದೆ. ಕೃಷಿ ಆಧಾರಿತ ಗೌಡರು, ಪೂಜಾರಿಗಳು, ಮಲೆಕುಡಿಯರು ಸೇರಿದಂತೆ ವಾದ್ಯ ಪರಿಕರಗಳನ್ನು ಸಹ ಇಲ್ಲಿ ಬಳಸುತ್ತಾರೆ. ಈ ವೇಷಗಾರಿಕೆಯು ತುಳುನಾಡಿನ ಒಂದು ಜನಪದ ಕಲೆ ಪರಂಪರೆಯಾಗಿದೆ. ಇಲ್ಲಿ ದೈವ ಭಕ್ತಿ ಇದೆ, ಹರಕೆ ಇದೆ.

**ಪುರುಷವೇಷದ ವೈವಿದ್ಯತೆಗಳು:** ಪುರುಷ ಪೂಜೆಯಲ್ಲಿ ಭಾಗವಹಿಸುವ ವೇಷಗಾರರು ತಮಗಿಷ್ಟ ಬಂದ ಯಾವುದೇ ವೇಷವನ್ನಾದರೂ ಹಾಕಬಹುದು ಅದು ಅವರ ಆಸಕ್ತಿಗೆ ಅನುಕೂಲ ವಾಗಿರುತ್ತದೆ. ಅವುಗಳಲ್ಲಿ ಪ್ರಮುಖವಾಗಿ ಕೋಟಿ-ಚೆನ್ನಯ್ಯರ ವೇಷ, ಕೊಡಮಣಿತ್ತಾಯ ದೈವ, ಕರಡಿ ವೇಷ, ಹುಲಿ ವೇಷ, ಪಂಡಿತರ ವೇಷ, ಬ್ರಾಹ್ಮಣರ ವೇಷ, ಬಸವನ ವೇಷ, ಸಾಯಿಬರ(ಮುಸ್ಲಿಂರ) ವೇಷ, ಪಕೀರರ ವೇಷ, ಬಿಕ್ಷುಕರ ವೇಷ, ಸ್ತ್ರೀ ವೇಷ, ಗಂಡು-ಹೆಣ್ಣು ವೇಷ, ಚಲನ ಚಿತ್ರದ ಹಾಡುಗಾರಿಕೆ, ಹಾಸ್ಯಗಾರರ ವೇಷ, ಇತರ ಯಾವುದೇ ವೇಷ. ಈ ಎಲ್ಲಾ ಬಗೆ ಬಗೆಯ ವೇಷಗಳನ್ನು ಹಾಕುವ ಪುರುಷರು ಆ ವೇಷಕ್ಕೆ ತಕ್ಕಂತೆ ಉಡುಪು, ಅಲಂಕಾರ ಬಣ್ಣಗಾರಿಕೆ ಪರಿಕರಗಳನ್ನು ಹೊಂದಿರುತ್ತಾರೆ. ಅಂತೆಯೇ ವಾದ್ಯ, ತಾಳ, ಮೇಳಕ್ಕೆ ಅನುಗುಣವಾಗಿ ಹೆಜ್ಜೆಹಾಕಿ ಕುಣಿಯುತ್ತಾರೆ. ಸುಗ್ಗಿ ಹುಣ್ಣಿಮೆ ಮೊದಲು ಐದು ದಿನಗಳ ಬೆಳದಿಂಗಳ ಬೆಳಕಿನಲ್ಲಿ ನಡೆಯುವ ಈ ಉತ್ಸವ ಇವರ ಗ್ರಾಮದ ಎಲ್ಲಾ ಕೃಷಿಕರ ಮನೆಗಳಿಗೆ ಹೋಗುತ್ತಾರೆ. ಒಂದು ದಿನಕ್ಕೆ ೧೦ರಿಂದ ೧೫ ಮನೆಗಳನ್ನು ಸುತ್ತುತ್ತಾರೆ. ಒಂದು ವೇಳೆ ಹುಣ್ಣಿಮೆಯ ದಿನ ಕೊನೆಯಲ್ಲಿ ಬಾಕಿ ಉಳಿದ ಮನೆಗಳಿಗೆ ಮರುದಿನ ಮುಗಿಸುತ್ತಾರೆ. ನಂತರದ ದಿನಕ್ಕೆ ಇದು ಮುಂದುವರಿಯುದಿಲ್ಲ. ಕದ್ರಿ ಮಂಜುನಾಥಸ್ವಾಮಿ ದೇವರ ಸವಾರಿಯ ಅಲಂಕೃತಗೊಂಡಿರುತ್ತದೆ. ಅದರಲ್ಲಿ ಮಂಜುನಾಥ ಸ್ವಾಮಿ ಪೋಟೋ ಇರುತ್ತದೆ. ಇದನ್ನು ತಲೆ ಮೇಲೆ ಹೊತ್ತು ಸಾಗುತ್ತರೆ. ರೈತರ ಮನೆ ಮುಂದೆ ಅಂಗಳದಲ್ಲಿನ ತುಳಸಿ ಕಟ್ಟೆ ಸುತ್ತ ಸುತ್ತಿದ ನಂತರ ಅಂಗಳದಲ್ಲಿ ನರ್ತಿಸಿದ ನಂತರ ತುಳಸಿಕಟ್ಟೆ ಮುಂದೆ ಈ ದೇವರ ಪ್ರಭಾವಳಿಯನ್ನು ಇಡುತ್ತಾರೆ. ಇವರ ಮುಂದೆ ವಾದ್ಯ, ಮೇಳ ಸಾಗುತ್ತದೆ. ಹಿಂದೆ ಈಗಿನಂತೆ ಪೆಟ್ರೋಮ್ಯಾಕ್ಸ್ ಬೆಳಕು ಇರಲಿಲ್ಲ ಬೆಳದಿಂಗಳ ಬೆಳಕಿನಲ್ಲಿ ಪಂಜಿನ ಸಹಾಯದಿಂದ ಮನೆಮನೆಗೆ ಹೋಗುತ್ತಿದ್ದರು. ಈಗ ಬೆಳಕಿನ ವ್ಯವಸ್ಥೆ ಇರುತ್ತದೆ. ಇವರೊಂದಿಗೆ ವೇಷ ಧರಿಸಿ ಎಲ್ಲಾ ಪುರುಷರು

ಕುಣಿಯುತ್ತಾರೆ. ಈ ಕುಣಿತ ಕೃಷಿಕರ ಮನೆ ಅಂಗಳದಲ್ಲಿ ನಡೆಯುತ್ತದೆ. ಪ್ರತಿಯೊಬ್ಬರು ತಮ್ಮ ತಮ್ಮ ವೇಷದ ಸ್ವರೂಪಕ್ಕೆ ಅನುಗುಣವಾಗಿ ಕುಣಿಯುತ್ತಾರೆ. ಹಾಡುತ್ತಾರೆ. ವಡಪು ಹೇಳುತ್ತಾರೆ. ತುಳು ಪಾಡ್ದನದ ಮೂಲಕ ತಮ್ಮ ವೇಷಕ್ಕೆ ಜೀವ ತುಂಬುತ್ತಾರೆ. ಇಲ್ಲಿ ಅರ್ಥಗಾರಿಕೆ ಪ್ರಧಾನವಾಗಿರುತ್ತದೆ. ಸುಗ್ಗಿಯ ದಿನಗಳಲ್ಲಿ ಈ ವೇಷಗಾರಿಕೆಯ ಪುರುಷರ ಕುಣಿತ ಮನೆ ಮುಂದೆ ಬಂದಾಗ ಮನೆಯವರು ಭಕ್ತಿಯಿಂದ ದೇವರಿಗೆ ಪೂಜಿಸುತ್ತಾರೆ. ಬಾಳೆ ಎಲೆಯಲ್ಲಿ ಅವಲಕ್ಕಿ ಬೆಲ್ಲದ ನೈವೇದ್ಯ ಮಾಲೆ ತೆಂಗಿನಕಾಯಿ ನೀಡಿ ಪೂಜಿಸುತ್ತಾರೆ. ನಂತರ ದೇವರಿಗೆ ನಮಸ್ಕರಿಸಿ ತಮ್ಮ ಇಷ್ಟಾರ್ಥ ಸಿದ್ದಿಗಾಗಿ ಹರಕೆಯನ್ನು ಮಾಡಿಕೊಳ್ಳುತ್ತಾರೆ. ಮಳೆ,ಬೇಳೆ ಸಮೃದ್ದಿಯು ಸೇರಿದಂತೆ ಕುಟುಂಬದ ಹಿತ ಕಾಯುವ ಮನೆಯವರ ರೋಗ ರುಜಿನಗಳು, ದೂರವಾಗಲು ಜಾನುವಾರುಗಳಿಗೆ ಯಾವುದೇ ರೋಗ ಭಾಧೆ ಬಾರದಂತೆ, ಸಂತಾನಫಲ, ಮಕ್ಕಳ ಶಿಕ್ಷಣ, ಉದ್ಯೋಗ, ವಿವಾಹ ಸಂಬಂಧಗಳು ಸೇರಿದಂತೆ ಇನ್ನಿತರ ಯಾವುದೇ ರೀತಿಯ ಹರಕೆಗಳನ್ನಾದರೂ ಮಾಡಿಕೊಳ್ಳಬಹುದು.ಈ ಪುರುಷರ ವೇಷದ ಸಮಯದಲ್ಲಿ ಭಕ್ತಿಯಿಂದ ಪೂಜಿಸಿ ಮಾಡಿಕೊಂಡ ಬೇಡಿಕೊಂಡ ಹರಕೆ ಈಡೇರುತ್ತದೆ. ಎಂಬ ನಂಬಿಕೆ ಇಲ್ಲಿನ ಜನರಲ್ಲಿದೆ. ಈ ವೇಷಗಳ ಜೊತೆಯಲ್ಲಿ ತುಳುನಾಡಿನ ದೈವಗಳ ಆರಾಧನೆ ಸಹ ಇರುತ್ತದೆ. ಕಿಟ್ಟ ಮಲೆಕುಡಿಯ ಕೊಡಮಣಿತ್ತಾಯ ದೈವದ ವೇಷವನ್ನು ಹಾಕಿರುತ್ತಾರೆ. ಇಲ್ಲಿ ಹಾಕಿರುವ ಪ್ರತಿಯೊಂದು ವೇಷದ ಪ್ರದರ್ಶನಕ್ಕೆ ಮನೆಯವರು ದಾನವಾಗಿ ಹಣ, ತೆಂಗಿನಕಾಯಿ, ಎಳೆನೀರು ನೀಡುತ್ತರೆ. ಇಲ್ಲಿ ಮನೆಮನೆಯವರು ನೀಡಿದ ದಾನ ಧರ್ಮದ ಹಣ, ವಸ್ತುಗಳನ್ನು ಕೊನೆಯ ದಿನದಲ್ಲಿ ಅನ್ನದಾಸೋಹಕ್ಕೆ ಬೆಳೆಸುತ್ತಾರೆ. ಕೊನೆಯದಿನದ ಪೂಜೆ ನಂತರ ಅನ್ನದಾನದ ವ್ಯವಸ್ಥೆ ಇರುತ್ತದೆ. ಪುರುಷರ ಪೂಜೆ ಇರುತ್ತದೆ. ಪ್ರಸಾದ ಇರುತ್ತದೆ. ಈ ಪುರುಷರ ಕೂಟದಲ್ಲಿರುವ ವೇಷಗಳು ತುಳುನಾಡಿನ ಜನಪದ ಹಿನ್ನೆಲೆಯನ್ನು ಆಧಾರಿಸಿದ ವೇಷಗಳಾಗಿವೆ. ಈ ಕೂಟದಲ್ಲಿ ಭಾಗವಹಿಸಿದವರು ಯಾರು ಪ್ರತಿಫಲವನ್ನು ಬಯಸುವುದಿಲ್ಲ. ಸ್ವಯಂ ಪ್ರೇರಿತದಿಂದ ವೇಷ ಹಾಕುತ್ತಾರೆ. ಭಕ್ತಿ ದಾನ ಮಾತ್ರವಲ್ಲದೆ ಸೇವಾ ಮನೋಭಾವ ಇವರಲ್ಲಿರುತ್ತದೆ. 'ಪುರುಷರು ಕೂಟ'ದಿಂದ ಬಂದ ಹಣದಿಂದಲೇ ವೇಷ ಬಣ್ಣಗಾರಿಕೆ, ಪರಿಕರಗಳನ್ನು ಹಾಗೂ ಬಾದ್ಯಗಳನ್ನು ಖರೀದಿಸಲಾಗುತ್ತದೆ. ಕೊನೆಯ ದಿನದಲ್ಲಿ ನಿಗದಿಪಡಿಸಲಾದ ಪುರುಷರ ಪೂಜೆಗೆ ಬಂದವರೆಲ್ಲರಿಗೂ ಅವರು ಹಾಜರಾತಿಗೆ ಅನುಗುಣವಾಗಿ ಅವಲಕ್ಕಿ ಪ್ರಸಾದವನ್ನು ನೀಡಲಾಗುತ್ತದೆ. ೫ ದಿನಗಳಲ್ಲಿ ಹಾಜರಾತಿಯನ್ನು ಸಹ ನಿರ್ವಹಿಸಲಾಗುತ್ತದೆ. ಬ್ರಾಹ್ಮಣೇತರ ಸಮುದಾಯದ ಕೃಷಿಕರು ಮಾತ್ರ ಇದಕ್ಕೆ ಪೂಜೆ ಸಲ್ಲಿಸಿ ದಾನ ನೀಡುತ್ತಾರೆ. ಬ್ರಾಹ್ಮಣ ಕೃಷಿಕರು ಇದಕ್ಕೆ ಪೂಜೆಸಲ್ಲಿಸುವುದಿಲ್ಲ ಎಂಬುದನ್ನು ವಸಂತ ಮಲೆಕುಡಿಯ ಹೇಳುತ್ತರೆ. ನಮ್ಮ ವೇಷಗಾರಿಕೆಯಲ್ಲಿರುವವರು ಬ್ರಾಹ್ಮಣರ ವೇಷ ಹಾಕಿರುತ್ತಾರಷ್ಟೇ ಎಂದು ಹೇಳುತ್ತಾರೆ. ಇದರ ಮಾಹಿತಿಯು ಸಾಕ್ಷ್ಯ ಚಿತ್ರದಿಂದ ಲಭ್ಯವಾಗುತ್ತದೆ ಎಂದು ಇವರು ತಯಾರಿಸಿದ ಡಿ.ವಿ.ಡಿ.ಯನ್ನು ನೀಡಿ ನನ್ನ ಅಧ್ಯಯನಕ್ಕೆ ಸಹಕರಿಸಿರುತ್ತಾರೆ. ಅಲಂಕೃತಗೊಂಡ ಕದ್ರಿ ಮಂಜುನಾಥ ದೇವರನ್ನು ಹೊತ್ತ ಸವಾರಿಯ ಮೆರವಣಿಗೆಯ ಮುಂದೆ ವಾದ್ಯ ಮೇಳಕ್ಕೆ ಪುರುಷ ಕೂಟದ ವೇಷಧಾರಿಗಳು ಕುಣಿಯುತ್ತಾ ನಡೆಯುತ್ತಾರೆ. ರೈತರ ಮನೆ ಮುಂದೆ ಅಂಗಳದಲ್ಲಿ ದೇವರ ಬಲಿ ನಡೆದ ನಂತರ ನೆರೆದವರು ಎಲ್ಲರೂ ಲಕ್ಷ್ಮಿವೆಂಕಟರಮಣ ಹರಿ ಗೋವಿಂದ ಗೋವಿಂದ ಎಂದು ಕೂಗುತ್ತಾರೆ. ಮುಸ್ಲಿಂ ಸಮುದಾಯದ ಸಾಹೇಬರ ವೇಷ ಧರಿಸಿದ ವೇಷಧಾರಿಗಳು ಕುರ್ತಾ, ಪೈಜಾಮ್ ಹಾಕಿ ಗಡ್ಡ, ತಲೆ

ಮೇಲೆ ಟೋಪಿ ಹಾಕಿಕೊಂಡು ಬಲಕೈಯಲ್ಲಿ ಒಂದು ಉದ್ದವಾದ ಬಿದಿರಿನ ಕೋಲು ಹಿಡಿದುಕೊಂಡಿರುತ್ತಾರೆ. ಹರಿ ಬಿದಿರಿನ ಮೇಲಿನ ತುದಿಯನ್ನು ಸಣ್ಣದಾಗಿ ಹೋಳು ಹೋಳು ಮಾಡಿ ಸೀಳಿರುತ್ತಾರೆ. ಕೈಯಲ್ಲಿನ ಬಿದಿರಿನ ಕೋಲನ್ನು ಅಲುಗಾಡಿಸಿದಾಗ ಈ ಸೀಳು ಮಾಡಿದ ಕಡ್ಡಿಗಳಿಂದ ಒಂದು ರೀತಿಯ ವಿಶಿಷ್ಟವಾದ ನಾದದ ಶಬ್ದ ಪಟಪಟ ಅಂತ ಬರುತ್ತದೆ. ಇದನ್ನು ಹಿಡಿದು ಇವರು ವಾದ್ಯ ಮೇಳಕ್ಕೆ ತಕ್ಕಂತೆ ಹೆಜ್ಜೆ ಹಾಕುವುದು ಒಂದು ಆಕರ್ಷಕವಾಗಿರುತ್ತದೆ. ಅಂತೆಯೇ ಹುಲಿವೇಷಧಾರಿಗಳಲ್ಲಿ ಮಕ್ಕಳು ಸಹ ಇರುತ್ತಾರೆ. ಕರಡಿ ವೇಷ ಎಲ್ಲವೂ ತುಂಬ ಜನಪದೀಯ ಸೊಗಡನ್ನು ಪ್ರತಿಬಿಂಬಿಸುತ್ತವೆ. ಪ್ರತಿ ವೇಷದ ಕುಣಿತಕ್ಕೆ ಮನೆಯವರು ಹಣ ಕೊಡುತ್ತಾರೆ.[೨೧]

**ಮಲೆಕುಡಿಯರಲ್ಲಿ ದೀಪಾವಳಿ ಆಚರಣೆ– ಬಲಿಯೇಂದ್ರ ಪೂಜೆ**

ಮಲೆ ಕುಡಿಯ ಸಮುದಾಯದವರು ಆಚರಣೆ ಮಾಡುವ ಹಬ್ಬಗಳಲ್ಲಿ ದಿಪಾವಳಿ ಪ್ರಮುಖ ವಾಗಿದೆ. ಕುಟುಂಬದ ಮನೆ ಮಂದಿಯವರೆಲ್ಲರೊ ಸೇರಿ ಮೊರುದಿನಗಳ ಕಾಲ ಆಚರಿಸುವ ಈ ಹಬ್ಬ ಒಂದು ಸಾಂಪ್ರದಾಯಕ, ಸಂಭ್ರಮದ ವಿಶಿಷ್ಟ ಆಚರಣೆಯಾಗಿದೆ, ವೈವಿಧ್ಯಮಯವಾಗಿ ಆಚರಿಸುವ ಈ ಹಬ್ಬದ ಕೊನೆಯ ದಿನ ಬಲೀಂದ್ರ ಪೊಜೆ ನಡೆಯುತ್ತದೆ. ಬಲೀಂದ್ರ ಮರವನ್ನು ಶೃಂಗರಿಸಿ ಅದಕ್ಕೆ ಮನೆಯವರೆಲ್ಲರೂ ಸೇರಿ ಸಂಜೆಯ ವೇಳೆ ಪೊಜೆ ಸಲ್ಲಿಸಿ, “ಹರಿ ಹರಿ ಬಲಿಯೇಂದ್ರ, ಸಿರಿ ಸಿರಿ ಬಲಿಯೇಂದ್ರ” ಆ ಊರಿನ ಪೊಲಿ ತೆಗೆದುಕೊಂಡು ಬಂದು ಈ ಊರಿನ ಕಲಿ ತೆಗೆದುಕೊಂಡು ಹೋಗು, ಕೂ ಬಲಿಯೇಂದ್ರ ಎಂದು ಕೊಗು ಹಾಕುತ್ತಾರೆ. ಈ ರೀತಿಯ ಕೂಗು ಸಮೃದ್ಧಿಯನ್ನು ಬೇಡುವ ಸಂಪ್ರದಾಯವಾಗಿದೆ. ಈ ರೀತಿ ಕೂಗುವ ಸಂಪ್ರದಾಯವು ಕೆಲವು ವರ್ಷಗಳಿಂದ ಕಡಿಮೆಆಗುತ್ತಾ ಬಂದಿದೆ. ಆಧುನಿಕ ಜೀವನ ಪದ್ಧತಿಯ ಪರಿಣಾಮದಿಂದಾಗಿ ಇವರಲ್ಲಿ ಆಚರಣೆಯಲ್ಲಿರುವ ಹಲವಾರು ಸಂಪ್ರದಾಯಗಳು ಮರೆಯಾಗುತ್ತಾ ಬಂದಿವೆ ಅಂತೆಯೇ ಬಲೀಂದ್ರನಿಗೆ ಕೂಗು ಹಾಕುವ ಪದ್ಧತಿಯು ಸಹ ಮರೆಯಾಗುತ್ತಿದೆ ಎಂಬುದನ್ನು ಇಲ್ಲಿನ ಹಿರಿಯರು ಹೇಳುತ್ತಾರೆ. ಬುಡಕಟ್ಟು ಸಮುದಾಯದ ನಂಬಿಕೆ, ಸಂಪ್ರದಾಯಗಳನ್ನು ಪ್ರತಿ ಬಿಂಬಿಸುವ ಈ ವಿಶಿಷ್ಟ ಆಚರಣೆಯು ಪೌರಾಣಿಕ ಹಿನ್ನೆಲೆಯನ್ನು ಹೊಂದಿದೆ. ಬಲಿಚಕ್ರವರ್ತಿಯನ್ನು ವಿಷ್ಣು ತನ್ನ ವಾಮನ ಅವತಾರದಿಂದ ಪಾತಾಳಕ್ಕೆ ತುಳಿದ ನಂತರ ಬಲಿಚಕ್ರವರ್ತಿ ಮೂರು ದಿನಗಳ ದೀಪಾವಳಿ ಸಂದರ್ಭದಲ್ಲಿ ಭೂಲೋಕಕ್ಕೆ ಬರುತ್ತಾನೆ ಎಂಬ ನಂಬಿಕೆ ಇದೆ.ಆಶ್ವಿಜ ಮಾಸದ ಅಮವಾಸ್ಯೆಯ ಹಿಂದಿನ ದಿನ ನರಕಚತುರ್ದಶಿಯೊಂದಿಗೆ ಆರಂಭವಾಗುವ ದೀಪಾವಳಿ ಬೆಳಿಗ್ಗೆ ಅಭ್ಯಂಜನ ಸ್ನಾನ, ಬಳಿಕ ಸಿಹಿ ಅವಲಕ್ಕಿ, ದೋಸೆ ತಿನ್ನುವ ಸಂಪ್ರದಾಯವಿದೆ. ಅಮವಾಸ್ಯೆಯ ದಿನ ಕುಟುಂಬದಲ್ಲಿ ನಿಧನ ಹೊಂದಿದ ಹಿರಿಯರಿಗೆ ಎಡೆ ಹಾಕಿ ಪೂಜೆ ಸಲ್ಲಿಸುತ್ತಾರೆ. ಮರುದಿನ ಮನೆ ಮುಂದೆ ಪಾಲೆ ಮರದ ಕೊಂಬೆಯನ್ನು ನಡಲು ಸಿದ್ಧತೆಗಳನ್ನು ಮಾಡುತ್ತಾರೆ. ಸಂಜೆ ಯಾಗುತ್ತಿದ್ದಂತೆ ಮನೆಯ ಹಿರಿಯರು ಮನೆಯ ಎದುರಿನ ತುಳಸಿಕಟ್ಟೆಯ ಬಳಿ ಪಾಲೆಮರದ ಕೊಂಬೆಯನ್ನು ತಂದು ನಡುತ್ತಾರೆ. ಕೆಲವರು ಒಂದು ಕೊಂಬೆಯನ್ನು ನೆಟ್ಟರೆ, ಕೆಲವರು ಜೋಡಿ ಕೊಂಬೆಯನ್ನು ನೆಡುತ್ತಾರೆ. ಇದಕ್ಕೆ ಭತ್ತದ ತೆನೆ, ತಾರೆ ಹೂ, ಅಂಬಳಕಾಯಿ, ನರಿಕೊಂಬು, ಸೀತಾ ಹೂ, ಕೇವಿ ಹಣ್ಣು, ಪೊಲಿಬಳ್ಳಿ, ನೆಲಗುಬ್ಬಿ, ಹಣ್ಣು, ಸೌತೆ ಹೂ, ಇತ್ಯಾದಿಗಳನ್ನು ಇಟ್ಟು ಚೆಂಡು ಹೂವಿನಿಂದ ಅಲಂಕಾರ ಮಾಡಿ ಶೃಂಗರಿಸುತ್ತಾರೆ. ಅಂದು ಹೆಣ್ಣು ಮಕ್ಕಳಿಗೆ ಹೂ ಹಾರ ಪೋಣಿಸುವುದೇ ಒಂದು ಕೆಲಸವಾಗಿರುತ್ತದೆ.

ಹೀಗೆ ಶೃಂಗಾರ ಮಾಡಿದ ಪಾಲೆಮರವನ್ನು 'ಬಳ್ಳಕ್ಕೆ ಮರ'(ಬಳಕ್ಕೆ ಮರ) ಎಂದು ಕರೆಯುತ್ತಾರೆ. ಬಲೀಂದ್ರನನ್ನು ಶೃಂಗರಿಸಲು ಚೆಂಡುಹೂವನ್ನು ಬಳಸುತ್ತಾರೆ. ಪ್ರಭಾವಳಿಗೆ ಕೋಳಿಜುಟ್ಟು ಹೂವನ್ನು ಬಳಸುತ್ತಾರೆ. ರಾತ್ರಿಗೆ ಎಲ್ಲರೂ ಸ್ನಾನ ಮಾಡಿ ಬಂದು ಶೃಂಗರಿಸಿದ ಬಳಕ್ಕೆ ಮರದ ಬಳಿ ಬಲಿಯೇಂದ್ರನಿಗೆ ಅಕ್ಕಿ, ತೆಂಗಿನಕಾಯಿ, ವೀಳ್ಯದೆಲೆ ಇಟ್ಟು ಪೂಜೆ ಮಾಡಿ ಪ್ರಾರ್ಥಿಸುತ್ತಾರೆ. ಇದನ್ನು 'ಬಲಿಯೇಂದ್ರ ಪೂಜೆ' ಎಂದು ಕರೆಯುತ್ತಾರೆ. ಬಳಿಕ ಮನೆಮಂದಿಗೆಲ್ಲಾ ಹಬ್ಬದ ಊಟದ ವ್ಯವಸ್ಥೆ ಇರುತ್ತದೆ. ಬಲಿಪಾಡ್ಯದ ದಿನ ನಗರದ ಜನರು ತಮ್ಮ ಅಂಗಡಿ ವ್ಯಾಪಾರ, ಹೋಟೇಲ್‌ಗಳಲ್ಲಿ ಲಕ್ಷ್ಮೀ ಪೂಜೆ ಮಾಡುತ್ತಾರೆ, ಆದರೆ ಗ್ರಾಮೀಣ ಪ್ರದೇಶ ಹಾಗೂ ಮಲೆಕುಡಿಯ ಬುಡಕಟ್ಟು ಸಮುದಾಯದಲ್ಲಿ ರಾತ್ರಿ ಗೋ ಪೂಜೆಯನ್ನು ಮಾಡುತ್ತಾರೆ. ಗೋ ಪೂಜೆ ನಂತರ ಶೃಂಗಾರಗೊಂಡ ಬಲೀಂದ್ರನಿಗೆ ಬಿಡಿಸಿದ ಕೊಡೆಯನ್ನು ಕಟ್ಟುತ್ತಾರೆ. ಪೂಜೆ, ಪ್ರಾರ್ಥನೆ ನಂತರ ಕೂ ಬಲಿಯೇಂದ್ರ, ಕೂ ಬಲಿಯೇಂದ್ರ ಎಂದು ಮನೆಯವರು ಎಲ್ಲರೂ ಸೇರಿ ಕೂಗು ಹಾಕುತ್ತಾರೆ. ಈ ಮೂರು ದಿನಗಳಲ್ಲಿ ನಡೆಯುವ ಆಚರಣೆಗಳು ಬಹುತೇಕವಾಗಿ ರಾತ್ರಿಯಲ್ಲಿ ಆಚರಿಸುವ ಆಚರಣೆಗಳಾಗಿವೆ.

**ಚೌತಿಯಲ್ಲಿ ಆಚರಿಸುವ "ಕೊರಳಹಬ್ಬ" ಹೊಸ್ತಾ ರೋಗಣೆ "ಕದಿರು" ಆಚರಣೆ**

ತುಳುನಾಡಿನಲ್ಲಿ ಆಚರಿಸುವ ವಿಶಿಷ್ಟ ಆಚರಣೆಗಳಲ್ಲಿ ಗಣೇಶ ಚತುರ್ದಶಿಯು ಚೌತಿಯದಿನ ಕೊರಳ ಹಬ್ಬವನ್ನೂ ಆಚರಿಸುತ್ತಾರೆ. ಕುಕ್ಕೆ ಸುಬ್ರಮಣ್ಯ ದೇವಸ್ಥಾನದಲ್ಲಿ ಸಹ ಮಲೆಕುಡಿಯರು ಹಾಗೂ ಊರಿನ ಜನರು ಸೇರಿ ಈ ಆಚರಣೆಯನ್ನು ಮಾಡುತ್ತಾರೆ. ಇದನ್ನು 'ಹೊಸ್ತಾರೋಗಣೆ' ಎಂದು ಕರೆಯುತ್ತಾರೆ. ತುಳುನಾಡಿನ ಕೃಷಿಕರು ತಮ್ಮ ಹೊಲಗದ್ದೆಹಳಲ್ಲಿ ಬೆಳೆದ ಭತ್ತ ತೆನೆಯನ್ನು ಈ ದಿನ ತಂದು ದೇವರಿಗೆ ಅರ್ಪಿಸುತ್ತಾರೆ. ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿದ ನಂತರ ಭಕ್ತರಿಗೆ ಈ ಭತ್ತದ ತೆನೆಯನ್ನು ಕೊಡುತ್ತಾರೆ. ಇದಕ್ಕೆ 'ಕದಿರು' ಎಂದು ಕರೆಯುತ್ತದೆ, ಭತ್ತದ ತೆನೆಯನ್ನು ಸಂಪತ್ತು ಎಂದು ಹೋಲಿಸುತ್ತಾರೆ. ಇದು ಸಂಪತ್ತಿನ ಪ್ರತಿರೂಪವಾದ ಲಕ್ಷ್ಮಿ ಎಂಬ ಭಾವನೆ ಇಲ್ಲಿನ ಜನರಲ್ಲಿದೆ. ಈ ದಿನ ಹೊಸ ಭತ್ತದ ಅಕ್ಕಿಯಿಂದ ಅನ್ನವನ್ನು ಮಾಡಿ, ದೇವರಿಗೆ ನೈವೇದ್ಯ ಮಾಡುತ್ತಾರೆ. ಇದನ್ನೂ ಮಲೆಕುಡಿಯರು 'ಹೊಸಕ್ಕಿ ಅನ್ನ' ಎಂದು ಕರೆಯುತ್ತಾರೆ. ಬಿದುರಿನ ಅಕ್ಕಿಯನ್ನು ಸಹ ಈ ದಿನ ತಯಾರಿಸುತ್ತಾರೆ. ಈ ಹೊಸ ಅಕ್ಕಿ ಅನ್ನದ ಪ್ರಸಾದವನ್ನು ಈ ದಿನ ನೀಡಲಾಗುತ್ತದೆ. ಊರಿನ ಜನರು ತಟ್ಟೆಯಲ್ಲಿ ಬಾಳೆಎಲೆ, ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ಮತ್ತು ಮುಳ್ಳುಸೌತೆಯೊಂದಿಗೆ ಮಾವಿನೆಲೆ, ಹಲಸಿನ ಎಲೆ, ಬಿದಿರಿನ ಎಲೆ, ರಥಪುಷ್ಪದ ಎಲೆ, ಅರಸಿನ ಎಲೆಯೊಂದಿಗೆ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿದ ನಂತರ, ದೇವಸ್ಥಾನದಲ್ಲಿ "ದಡ್ಡಾಲು ಮರದ(ದಡ್ಡೇಳಿ ಮರ) ನಾರಿನೊಂದಿಗೆ, ಬಿದಿರು ಸೊಪ್ಪು, ಅಶ್ವತ ಎಲೆ, ಭತ್ತದ ತೆನೆಯನ್ನು ಕಟ್ಟಿ ಕೊಡುತ್ತಾರೆ.ಕದಿರು ಎನ್ನುತ್ತಾರೆ ಇದನ್ನು ಬೆಲೆಬಾಳುವ ಮನೆಗಳಿಗೆ ಕಟ್ಟಿ ಮನೆ ತುಂಬಿಸಿಕೊಳ್ಳುತ್ತಾರೆ ಇದರಿಂದ ಮನೆಯಲ್ಲಿ ಸಂಪತ್ತು ವೃಧಿಯಾಗುತ್ತದೆ ಎಂಬ ನಂಬಿಕೆ ಇದೆ. ಹಿಂದೆ ಮಲೆಕುಡಿಯರು ಬಿದಿರಿನ ಅಕ್ಕಿಯನ್ನು ತಯಾರಿಸಿ ಈದಿನ ಅನ್ನವನ್ನು ತಿನ್ನುತ್ತಿದ್ದರು ಇದನ್ನು 'ಹೊಸಕ್ಕಿ ಅನ್ನ' ಎಂದು ಕರೆಯುತ್ತಿದ್ದರು, ಈಗ ಇದು ಭತ್ತದ ಅಕ್ಕಿಯಿಂದ ತಯಾರಿಸುತ್ತಿದ್ದಾರೆ ಇದನ್ನು ಸಹ ಹೊಸಕ್ಕಿ ಅನ್ನವೆಂದು ಕರೆಯುತ್ತಾರೆ.

ಪ್ರತಿವರ್ಷ ಗಣೇಶ ಚೌತಿಯಲ್ಲಿ ಈ ಆಚರಣೆ ಕಂಡುಬರುತ್ತದೆ. ನಾನು ಕ್ಷೇತ್ರಕಾರ್ಯಕ್ಕೆ ಹೋದಾಗ ಮಲೆಕುಡಿಯರ ಮನೆಯ ಬಾಗಿಲಿನ ಮೇಲೆ ಎದುರಿಗೆ ಕಾಣುವಂತೆ ದಡ್ಡಾಲು ಮರದ ನಾರಿನೊಂದಿಗೆ ಭತ್ತದ ತೆನೆಯನ್ನು ಕಟ್ಟಿದ ಭತ್ತದ ಎಸಳುಗಳನ್ನು ಕಟ್ಟಿರುತ್ತಾರೆ. ಇದನ್ನು ಈ ದಿನದಲ್ಲಿ ತಂದು ಪೂಜಿಸಿ ಕಟ್ಟುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಇದನ್ನು 'ಕದಿರು' ಎಂದು ಕರೆಯುತ್ತಾರೆ. ಇದಕ್ಕೆ ಕೊರಳಹಬ್ಬ, 'ಹೊಸ್ತಾರೋಗಣೆ' ಎಂದು ಕರೆಯುತ್ತಾರೆ. ಈ ಆಚರಣೆಯನ್ನು ಮನೆ ತುಂಬುವುದು ಎಂದು ಕರೆಯಲಾಗುವುದು. ಇದನ್ನು ಫಲದ ವಸ್ತುಗಳಾದ ತೆಂಗಿನ ಮರ, ಹಲಸಿನ ಮರ, ತುಳಸಿಗಿಡ, ಮನೆ ಬಾಗಿಲು, ದೇವರ ಫೋಟೋ ಭೂತಸ್ಥಾನಕ್ಕೆ ಕದಿರು ಕಟ್ಟುತ್ತಾರೆ.ಹೊಸ ಭತ್ತ ಬೇಯಿಸುವಾಗ ಅದರ ಮೂಟೆಗೆ ಪೊಳಿ ಬಳ್ಳಿಯನ್ನು, ಹಲಸಿನ ಎಲೆ, ಇಟ್ಟೋಸೊಪ್ಪು, ಮಾವಿನ ಎಲೆ, ಬಲಿಪ್ಪ ಬಳ್ಳಿ, ಬಿದಿರು ಸೊಪ್ಪು, ಪಲಾಶ ಸೊಪ್ಪು ಇವುಗಳನ್ನು ಭತ್ತದ ತೆನೆಜೊತೆಗೆ ಕಟ್ಟಿ ದಡ್ಡಾಲು ನಾರಿನೊಂದಿಗೆ ಬಿಗಿಯುತ್ತಾರೆ. ಈ ಭತ್ತವನ್ನು ಬೇಯಿಸಿ ಒಣಗಿಸಿ, ಕುಟ್ಟಿ ಅಕ್ಕಿಯನ್ನು ತಯಾರಿಸಿ ಇದರಿಂದ ಹೊಸಕ್ಕಿ, ಅನ್ನ ಮಾಡುತ್ತಾರೆ.

**"ತುಪ್ಪೆ-ಮುಡಿ"**

ಜಿಲ್ಲೆಯಲ್ಲಿ ಭತ್ತದ ಬೆಳೆ ದಕ್ಷಿಣ ಕನ್ನಡ ಕೊಯ್ಲಾದ ಮೇಲೆ ,ಭತ್ತವನ್ನು ತೂರಿ ಪರಿಷ್ಕರಿಸಿದ ಮೇಲೆ ಭತ್ತದ ರಾಶಿ ಭತ್ತದ ರಾಶಿಯನ್ನು ಸಂಗ್ರಹಿಸುವುದಕ್ಕೆ ಒಣಗಿಸಿ ಭತ್ತದ ಹುಲ್ಲನ್ನು ಬಳಸುತ್ತಾರೆ. ಈ ಹುಲ್ಲಿನಿಂದ ಹಗ್ಗ ತಯಾರಿಸಿ ಒಣಗಿದ ಭತ್ತದ ಹುಲ್ಲಿನಲ್ಲಿ ೩೮ ಕಿ.ಲೋ ತೂಕದ ಭತ್ತವನ್ನು ಹಾಕಿ, ಭತ್ತದ ಹುಲ್ಲಿನಿಂದಲೇ ಸುಂದರಾಕೃತಿಯನ್ನು ಕಟ್ಟುತ್ತಾರೆ. ಇದನ್ನು ತುಪ್ಪೆ ಎಂದು ಕರೆಯುತ್ತಾರೆ.೩೮ ಕಿ.ಲೋ. ತೂಕದ ಅಕ್ಕಿ- ಭತ್ತವನ್ನು ಕೂಡಿಡಲು ಹುಲ್ಲು ಮತ್ತು ಹಗ್ಗಗಳಿಂದ ಕಟ್ಟಿ ಮಾಡಲಾದ ವೃತ್ತಾಕಾರದ ಮೂಟೆಯನ್ನು ಮುಡಿ ಎಂದು ಕರೆಯಲಾಗುತ್ತದೆ. ಈ ಪದ್ದತಿ ಒಂದು ವಿಶಿಷ್ಟವಾದ ದಾನ್ಯ ಸಂಗ್ರಹಣೆಯ ವಿಧಾನವಾಗಿದೆ.ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಭತ್ತ, ಹಾಗೂ ದ್ವಿದಳ ಧಾನ್ಯಗಳಾದ ಉದ್ದು, ಹೆಸರು, ಬಾಳೆ, ಅನಾನಸ್ಸು, ಗೆಣಸು, ಸೌತೆ, ಸೊಪ್ಪು, ತರಕಾರಿ ಇತರ ಹಣ್ಣು ಬೆಳೆಯುತ್ತಾರೆ. ವಾಣಿಜ್ಯ ಬೆಳೆಗಳಾದ ಅಡಿಕೆ, ತೆಂಗು, ಗೇರು, ಬೆಳೆಗಳು ಇಲ್ಲಿನ ಪ್ರಥಮ ಬೆಳೆಗಳಾಗಿವೆ. ಉಪ್ಪಿನಂಗಡಿ ಸಮೀಪದ ಕೊಯಿಲದಲ್ಲಿ ಪಶುಪಲನಾ ಕೇಂದ್ರವಿದರೆ.ಅಲ್ಲಿ ಹಂದಿ ಸಾಕಾಣಿಕೆ, ಕೋಳಿ ಸಾಕಾಣಿಕೆ ಕೇಂದ್ರಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಲು ಉತ್ಪಾದನೆ, ಹೈನುಗಾರಿಕೆ ಹೆಚ್ಚು ಆದ್ಯತೆ ನೀಡಲಾಗಿದೆ. ಮಂಗಳೂರು, ಪುತ್ತೂರಿನಲ್ಲಿ ಹಾಲು ಶೀತಲಿಕರಣ ಘಟಕಗಳಿವೆ.ಸುಬ್ರಮಣ್ಯದ ಕುಲಕುಂದದಲ್ಲಿ ಪ್ರತಿ ವರ್ಷ ಜಾನುವಾರು ಜಾತ್ರೆ ನಡೆಯುತ್ತದೆ. ಸುಬ್ರಮಣ್ಯದ ರಥ ಬೀದಿಯಲ್ಲಿ ಕಂಬಳಿ ಮಾರಾಟ ,ಹತ್ತಿ ಬಟ್ಟೆ ವ್ಯಾಪಾರ ಹಿಂದಿನಿಂದಲೂ ನಡೆಯುತ್ತಾ ಬಂದಿದೆ.

**ಭತ್ತದ ಕಣಜ 'ತೀರಿ'**

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಪರಿಸರದಲ್ಲಿ ಹಲವಾರು ಸಾಂಪ್ರದಾಯಿಕ ಪದ್ಧತಿಗಳು ಆಚರಣೆಯಲ್ಲಿವೆ. ಕೃಷಿಗೆ ಪೂರಕವಾದ ಈ ಪದ್ಧತಿಗಳು ವಿಶಿಷ್ಟವಾದ ಕೌಶಲ್ಯತೆಗಳ ಪ್ರತೀಕವಾಗಿವೆ. ಭತ್ತವನ್ನು ಸಂಗ್ರಹಿಸಿ ಇಡಲು ಭತ್ತದ ಕಣಜವನ್ನು ತೀರಿ ಎಂದು ಕರೆಯಲಾಗುತ್ತದೆ. ಕೃಷಿಕರಲ್ಲಿ

ಅಡಗಿರುವ, ಪ್ರತಿಭೆಗಳನ್ನು ನಾವು ಈ ತೀರಿಗಳ ತಯಾರಿಕೆಯಲ್ಲಿ ಕಾಣುತ್ತೇವೆ. ಭತ್ತದ ಕೊಯಿಲು ಆದ ಬಳಿಕ ಭತ್ತದಲ್ಲಿನ ತೇವಾಂಶ, ಅದರಲ್ಲಿನ ಧೂಳು, ಒಣಗಿದ ನಂತರ ಭತ್ತವನ್ನು ಕೆಡದಂತೆ ಸಂಗ್ರಹ ಮಾಡುವ ಕಣಜಗಳನ್ನೂ ತೀರಿ ಎಂದು ಕರೆಯಲಾಗುತ್ತದೆ. ಮಲೆನಾಡು ಪ್ರದೇಶ ಮತ್ತು ಕುಂದಾಪುರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇದನ್ನು 'ಬಡಗು' ಎಂದು ಕರೆಯಲಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಸುತ್ತಮುತ್ತಲಿನ 'ತೆಂಕು' ಪ್ರದೇಶಗಲಲ್ಲಿ ಇದಕ್ಕೆ 'ಕದಿಕೆ' ಎಂದು ಕರೆಯುತ್ತಾರೆ. ಇದರಲ್ಲಿ ಒಣಗಿದ ಭತ್ತ, ಅಡಿಕೆಯನ್ನು ಸಹ ಸಂಗ್ರಹಿಸುತ್ತಾರೆ. ಭತ್ತದ ಬೆಳೆ ಈಗ ಕಡಿಮೆಯಾಗಿರುವುದರಿಂದ ಇದಕ್ಕೆ ಅಡಿಕೆ ಹಾಕುವ ಸಾಧ್ಯತೆ ಇಲ್ಲಿದೆ. ಈಗ ಕಾಣುವುದು ಅಪರೂಪವಾಗಿದೆ. ಈಗ ಭತ್ತ ಕೊಯಿಲು ಆದ ಕೂಡಲೇ ನೇರವಾಗಿ ಮಿಲ್‌ಗೆ ಸಾಗುತ್ತದೆ. ಒಣಗಿದ ಭತ್ತದ ಹುಲ್ಲನ್ನು ಬಳಸಿ ಆಕರ್ಷಿಕವಾಗಿ ತಯಾರಿಸುವ 'ತೀರಿ' ಇದು ಪರಿಣಿತರಿಂದ ಮಾತ್ರ ಸಾಧ್ಯವಾಗುತ್ತದೆ. ಒಂಗಿದ ಭತ್ತದ ಹುಲ್ಲಿನ ಹಗ್ಗ ಹಾಗೂ ಒಣ ಹುಲ್ಲು ಬಳಸಿ ಪದರು, ಪದರಾಗಿ, ಹುಲ್ಲು ಹಾಸಿ ಅದರಲ್ಲಿ ಒಣಗಿದ ಭತ್ತವನ್ನು ರಾಶಿ ಹಾಕುತ್ತಾರೆ. ನಂತರ ಅದರ ಸುತ್ತಲೂ ಹುಲ್ಲಿನ ಹಗ್ಗಗಳನ್ನು ಬಿಗಿದು ಭದ್ರಗೊಳಿಸುತ್ತಾರೆ.ಹುಲ್ಲಿನ ಹಗ್ಗದ ಬಿಗಿ ಹೆಚ್ಚಾಗಲು ಕಾವಿನ ಕೋಲುಗಳನ್ನು ಬಳಸುತ್ತಾರೆ. ಭತ್ತವನ್ನು ತೀರಿಗೆ ಸುರಿದ ನಂತರ ಮೇಲಿನ ಭಾಗ ಮುಚ್ಚಲು ಸಹ ಬಗಿದ ಉದ್ದನೆಯ ಹುಲ್ಲನ್ನು ಬಲಸಿ ಟೊಪ್ಪಿಗೆ ತಯಾರಿಸಿ ಮುಚ್ಚುತ್ತಾರೆ.ಈ ತೀರಿಯಲ್ಲಿ ಸಂಗ್ರಹವಾದ ಭತ್ತ ೬-೭ ತಿಂಗಳ ಬಳಿಕಹೊರ ತೆಗೆದು ಭತ್ತವನ್ನು ಅಕ್ಕಿ ಮಾಡಲು ಹಳಾಗದೆ ಸಂಗ್ರಹಣೆ ಮಾಡುವ ವಿಧಾನ ಇದುವಾಗಿದೆ. ಈ ಭತ್ತಕ್ಕೆ ಗೆದ್ದಲು ಹುಳಬಾರದಂತೆ ನೆಲಕ್ಕೆ ಬೂದಿ, ಮರಳು ಹಾಕುತ್ತಾರೆ. ಇಲ್ಲವೇ ಕೀಟ ನಾಶಕಗಳನ್ನು ಈ ಸ್ಥಳದಲ್ಲಿ ಹಾಕುತ್ತಾರೆ. ಭತ್ತದ ಕೊಯಿಲು ಮಾಡಿದ ನಂತರ ಭತ್ತದ ಗಿಡಗಳನ್ನು ತೆಗೆದು ತೆನೆಸಮೇತ ಮನೆಗೆ ಹೊತ್ತು ತಂದುಕಟ್ಟುಗಳನ್ನಾಗಿ ಮಾಡಿ ಪಡಿ ಮಂಚದ ಮೇಲೆ ಬಡಿದುಹುಲ್ಲು ಹಾಗು ಭತ್ತವನ್ನು ಬೇರೆ ಮಾಡುತ್ತಾರೆ. ನಂತರ ಭತ್ತದ ಕಣಜ ತೀರಿಗೆ, ತಯಾರಿಸಿ ಒಣಗಿದ ಭತ್ತವನ್ನು ತಿರಿಗೆ ಭರ್ತಿ ಮಾಡಲಾಗುತ್ತದೆ. ಈ ಪದ್ಧತಿಯು ಮಲೆಕುಡಿಯ ಸಮುದಾಯದಲ್ಲಿ ಸಹ ಕಂಡುಬರುತ್ತದೆ.

### ಕುಲ್ಕುಂದ ಜಾನುವಾರು ಜಾತ್ರೆ

ಕುಕ್ಕೆ ಸುಬ್ರಮಣ್ಯದಿಂದ ೩ ಕಿ.ಮೀ. ದೂರವಿರುವ ಕುಲ್ಕುಂದದಲ್ಲಿ ೪೦ ದಿನಗಳ ಜಾನುವಾರು ಜಾತ್ರೆ ನಡೆಯುತ್ತದೆ. ಈ ಕುಲ್ಕುಂದದಲ್ಲಿ ಸುಮಾರು ೪೦ ಮಲೆಕುಡಿಯ ಕುಟುಂಬಗಳಿವೆ. ಈ ವರ್ಷ ೨೦೦೯ ನವೆಂಬರ್ ೨ರಿಂದ ೧೧ರವರೆಗೆ ಈ ಜಾತ್ರೆ ನಡೆಯುತ್ತದೆ. ಈ ಪ್ರದೇಶದಲ್ಲಿ ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದ ಜಾತ್ರೆಯಾಗಿದೆ. ಹತ್ತು ದಿನಗಳು ನಡೆಯುವ ಈ ಜಾತ್ರೆಗೆ ದೂರದ ಊರುಗಳಿಂದ ಜಾನುವಾರು ಖರೀದಿಗೆ ಜನರು ಬರುತ್ತಾರೆ. ಮಾರಾಟಕ್ಕೆ ಜಾನುವಾರುಗಳನ್ನು ತರುತ್ತಾರೆ. ಸುಬ್ರಮಣ್ಯ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದ ಈ ಕುಲ್ಕುಂದಕ್ಕೆ ಬರುವ ಖರೀದಿದಾರರು ಸ್ಥಳದ ಗುರುತುಚೀಟಿ, ಜಮೀನು ಪಹರೆ ಪತ್ರ, ಮನೆ ತೆರಿಗೆ ರಸೀದಿ ಹಾಜರುಪಡಿಸಬೇಕು. ಜಾತ್ರೆಗೆ ಮಾರಾಟಕ್ಕೆ ಬರುವ ಸ್ಥಳೀಯ ಜಾನುವಾರುಗಳನ್ನು ಜಾತ್ರೆ ಪ್ರಾರಂಭವಾದ ಬಳಿಕ ೫ ದಿನಗಳ ಒಳಗೆ ಕುಲ್ಕುಂದಕ್ಕೆ ತರುವುದು(ನವೆಂಬರ್ ೬ರ). ನಂತರ ಸ್ಥಳೀಯರು ಜಾನುವಾರುಗಳನ್ನು ತರುವಂತಿಲ್ಲ ಎಂಬ ನಿಬಂಧನೆ ವಿಧಿಸಲಾಗಿದೆ. ಜಾತ್ರೆಯಿಂದ ದೂರದ ಊರುಗಳಿಗೆ ಜಾನುವಾರುಗಳನ್ನು ಸಾಗಿಸುವುದಕ್ಕೆ ಸಹ

ನಿಯಮಗಳಿವೆ. ವಾಹನದ ಮಿತಿಗಿಂತ ಹೆಚ್ಚಾಗಿ ತುಂಬಿ ಸಾಗಿಸುವಂತಿಲ್ಲ. ದೊಡ್ಡ ಲಾರಿಗಳಲ್ಲಿ ೬ರಿಂದ ೮ ಮಿನಿಲಾರಿಗಳಲ್ಲಿ ೪-೭ ಪಿಕಪ್‌ನಲ್ಲಿ, ಟೆಂಪೋ/ರಿಕ್ಷಾದಲ್ಲಿ, ಕೇವಲ ೧ ಜಾನುವಾರು ಮಾತ್ರ ಸಾಗಿಸಲು ಅವಕಾಶವಿದೆ. ಈ ಜಾತ್ರೆಯಲ್ಲಿ ಮಲೆಕುಡಿಯ ಸಮುದಾಯದವರು ಸಕ್ರಿಯವಾಗಿ ಭಾಗವಹಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಕುಕ್ಕೆ ಸುಬ್ರಮಣ್ಯದ ಕುಲ್ಕುಂದದಲ್ಲಿ ಜಾನುವಾರು ಜಾತ್ರೆ ಪ್ರತಿ ವರ್ಷ ನಡೆಯುತ್ತದೆ. ವಿವಿಧ ತಳಿಯ ದನ, ಕರು, ಎಮ್ಮೆ, ಕೋಣ, ಎತ್ತುಗಳು ಇಲ್ಲಿಗೆ ಬರುತ್ತವೆ. ಸುಬ್ರಹ್ಮಣ್ಯ-ಉಪ್ಪಿನಂಗಡಿ ಮಾರ್ಗದ ಮಧ್ಯದಲ್ಲಿ ಸುಬ್ರಮಣ್ಯದಿಂದ ೩ ಕಿ.ಮೀ.ದೂರದಲ್ಲಿ ಕುಲ್ಕುಂದ ಪ್ರದೇಶದಲ್ಲಿ ಈ ಜಾತ್ರೆ ನಡೆಯುತ್ತದೆ. ಈ ಸ್ಥಳವನ್ನು 'ಮಜಲಿ' ಎಂದು ಕರೆಯುತ್ತಾರೆ. ಈ ಜಾತ್ರೆಗೆ ನೂರಾರು ವರ್ಷಗಳ ಇತಿಹಾಸವಿದೆ. ಈ ಜಾತ್ರೆ ಸುಬ್ರಮಣ್ಯ ದೇವರಿಗೆ ಸೇರಿದೆ. ಕುಲ್ಕುಂದದ ಮಜಲಿನಲ್ಲಿ ನಡೆದ ಈ ಜಾತ್ರೆ ನಡೆದ ೧೫ ದಿನಗಳ ನಂತರ ಸುಬ್ರಮಣ್ಯ ದೇವರ ವಾರ್ಷಿಕ ಬ್ರಹ್ಮರಥೋತ್ಸವ ಆರಂಭವಾಗುತ್ತದೆ. ಕೃಷಿ ಪ್ರಧಾನವಾದ, ಆರ್ಥಿಕ ವ್ಯಾಪಾರ ವ್ಯವಹಾರಗಳ ಸಂಕೇತವಾದ ಈ ಜಾತ್ರೆ ಸ್ವಾತಂತ್ರ್ಯ ಪೂರ್ವದ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ನಡೆಯುತ್ತಾ ಬಂದಿದೆ. ೧೯೮೦ ರವರೆಗೆ ೨೦-೩೦ ಸಾವಿರ ಜಾನುವಾರುಗಳು ಈ ಜಾತ್ರೆಗೆ ಬರುತ್ತಿದ್ದವು. ನಂತರ ಇದರ ಸಂಖ್ಯಾ ಪ್ರಮಾಣ ಕುಸಿಯುತ್ತಾ ಬಂದಿದೆ. ಇದೀಗ ೫-೬ ಸಾವಿರ ಮಾತ್ರ ಬರುತ್ತವೆ. ಹಿಂದೆ ಇದ್ದ ಜಾತ್ರೆಯ ವೈಭವ ಈಗ ಕಂಡುಬರುತ್ತಿಲ್ಲ.ಹಾಸನ, ಸಕಲೇಶಪುರ, ಕುಶಾಲನಗರ, ಮಂಡ್ಯ, ಮೈಸೂರು, ತಮಿಳುನಾಡು, ಕೇರಳ, ಆಂಧ್ರಪ್ರದೇಶದಿಂದ ಎತ್ತು, ಹೋರಿ, ಹಸು, ಎಮ್ಮೆ, ಕೋಣಗಳನ್ನು ಈ ಜಾತ್ರೆಗೆ ತರುತ್ತಾರೆ. ಇಲ್ಲಿಂದ ಖರೀದಿಸಿಲಾದ ಹೋರಿ, ಹಸು, ಎಮ್ಮೆ, ಕೋಣಗಳು ತುಂಬಾ ಪ್ರಾಧಾನವಾರುತ್ರವೆ. ಇಲ್ಲಿ ಖರೀದಿಸಿಲಾದ ಕೃಷಿಗೆ ಬೇಕಾಗಿರುವ ಜೋಡಿ ಎತ್ತು, ಹೋರಿ, ಮತ್ತು ಕೋಣಗಳನ್ನು ಕುಲಕುಂದ ಜೋಡಿ ಎಂದು ಕರೆಯುತ್ತಾರೆ. ದಕ್ಷಿಣಕನ್ನಡ ಮತ್ತು ಕೇರಳದ ಕೃಷಿಗೆ ಕೋಣಗಳನ್ನು ಬಳಸುತ್ತಾರೆ ಅಲ್ಲದೆ ಈ ಕೋಣಗಳನ್ನು ಕಂಬಳಕ್ಕೆ ಬಳಸುತ್ತಾರೆ. ಕುಕ್ಕೆ ಸುಬ್ರಮಣ್ಯ ದೇವರ ವಾರ್ಷಿಕ ಜಾತ್ರೆಯ ಬ್ರಹ್ಮರಥೋತ್ಸವಕ್ಕಿಂತ ೧೫ ದಿನಗಳು ಮೊದಲು ನಡೆಯುವ ಈ ಜಾತ್ರೆ ಧಾರ್ಮಿಕ ಪ್ರಾಧಾನ್ಯತೆಯನ್ನು ಪಡೆದಿರುವುದರಿಂದ ಈ ಜಾತ್ರೆಗೆ ಹೆಚ್ಚಿನ ಮಹತ್ವವಿದೆ. ಈ ಜಾತ್ರೆಯ ಪೂರ್ವ ಸಿದ್ಧತೆಗಳು ಸೇರಿದಂತೆ ಇದರ ಯಶಸ್ಸಿಗೆ ಇಲ್ಲಿನ ಆಡಳತ ವ್ಯವಸ್ಥೆ, ಗ್ರಾಮ ಪಂಚಾಯಿತಿ, ದೇವಸ್ಥಾನ ಸಮಿತಿ, ಪಶುವೈದ್ಯ ಇಲಾಖೆಯ ಜೊತೆಗೆ ಕುಲಕುಂದ ಕಾಲೋನಿಯ ಮಲೆಕುಡಿಯ ಸಮುದಾಯದವರು ಇಲ್ಲಿ ಕೆಲಸ ಮಾಡುತ್ತಾರೆ. ಪಶುವೈದ್ಯ ಇಲಾಖೆಯಿಂದ ಉತ್ತಮ ತಳಿಯ ರಾಸುಗಳ ಜೋಡಿಗೆ ಪ್ರಶಸ್ತಿಯನ್ನು ನೀಡಲಾಗುತ್ತದೆ.

**ನಾಗಾರಾಧನೆ**

ತುಳುನಾಡಿನಲ್ಲಿ ನಾಗಾರಾಧನೆಗೆ ಪ್ರಾಧಾನ್ಯತೆ ಇದೆ. ನಾಗಬನಗಳು ಈ ಪ್ರದೇಶದಲ್ಲಿ ಪೂಜಾ ಸ್ಥಳಗಳಾಗಿವೆ. ಪರಶುರಾಮನ ಸೃಷ್ಟಿಯ ಪ್ರತೀಕಗಳಾದ ಈ ನಾಗಬನಗಳು ತುಳುನಾಡಿನಲ್ಲಿ ಕಂಡುಬರುತ್ತವೆ. ತುಳುನಾಡಿನ ಭೂಪ್ರದೇಶವನ್ನು ನಾಗನ ನೆಲ ಎಂತಲೇ ಕರೆಯುತ್ತಾರೆ. ಇಲ್ಲಿ ಎಲ್ಲಾ ದೇವಸ್ಥಾನಗಳಲ್ಲಿ ನಾಗಬನಗಳ ಆರಾಧನೆ ಇರುತ್ತದೆ. ನಾಗರಪಂಚಮಿಯ ದಿನದಂದು ನಾಗನಿಗೆ ಹಾಲೆರೆದು ಅರಸಿನ ನೈವೇದ್ಯ ಇಟ್ಟು ಸಂಭ್ರಮದಿಂದ ಆಚರಿಸುವ ಈ ನಾಗರಪಂಚಮಿ ಹಬ್ಬದಿಂದಲೇ ತುಳುವರ ಇತರ ಹಬ್ಬಗಳು ಪ್ರಾರಂಭವಾಗುತ್ತವೆ. ನಾಗನಿಗೆ ಹಾಲೆರೆದು ಸೀಯಾಳಾಭಿಷೇಕ ಮಾಡಿದ ಮೇಲೆ ತಮ್ಮ ತಮ್ಮ

ಮನೆಗಳಲ್ಲಿ ಪಾಯಸದ ಸಿಹಿ ಊಟವಲ್ಲದೆ ಅರಸಿನ ಎಲೆಯಿಂದ ವಿಶಿಷ್ಟವಾಗಿ ತಯಾರಿಸಲಾದ ಔಷಧೀಯ ಗುಣದ ಅರಸಿನ ಎಲೆಯ ಗಟ್ಟಿ ತುಂಬಾ ರುಚಿಕರವಾಗಿರುತ್ತದೆ. ಇದನ್ನು ತುಳುವಿನಲ್ಲಿ 'ಅಡ್ಯೆ' ಎಂದು, ಕೊಟ್ಟಿಗೆ ಗಣಸಾಲೆ ಎಂದೂ ಕರೆಯುತ್ತಾರೆ.

**ಸೀಯಾಳಾಭಿಷೇಕ:** ತೆಂಗಿನ ಎಳನೀರನ್ನು 'ಸೀಯಾಳ' ಎಂದು ಕರೆಯಲಾಗುತ್ತದೆ. ನಾಗರಪಂಚಮಿಯಲ್ಲಿ ನಾಗನಿಗೆ ಹಾಲಿನೊಂದಿಗೆ ಈ ಸೀಯಾಳ ಅಭಿಷೇಕ ತುಂಬಾ ಪ್ರಿಯ ವಾದುದಾಗಿದೆ. ಅದರಲ್ಲೂ ಕೆಂಪು ಕೆಂಪಾದ ಕೆಂದಾಳಿ ಸೀಯಾಳಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಇದಲ್ಲದೆ ಸಿಂಗಾರ ಹೂ, ಕೇದಿಗೆ, ಸಂಪಿಗೆ ನಾಗನಿಗೆ ಹೆಚ್ಚು ಪ್ರಿಯವಾದ ಹೂಗಳಾಗಿವೆ. ಆದ್ಧರಿಂದ ಈ ಹೂಗಳಿಗೆ ನಾಗರಪಂಚಮಿ ಹಬ್ಬದಲ್ಲಿ ಮಾರುಕಟ್ಟೆಯಲ್ಲಿ ತುಂಬಾ ಬೇಡಿಕೆ ಇರುತ್ತದೆ.

**ಮಹಿಳೆಯರ ಹಬ್ಬ:** ತುಳುನಾಡಿನ ಮಹಿಳೆಯರಿಗೆ ಪ್ರಮುಖವಾದ ಹಬ್ಬವಾಗಿದೆ. ನಾಗರಪಂಚಮಿ ಹಬ್ಬ ಬಂದಿತೆಂದರೆ ಮಹಿಳೆಯರಿಗೆ ಎಲ್ಲಿಲ್ಲದ ಉತ್ಸಾಹ ಕಂಡುಬರುತ್ತದೆ. ನಾಗರಪಂಚಮಿ ಹಬ್ಬವನ್ನು ಮಹಿಳೆಯರ ಹಬ್ಬವೆಂದೇ ಕರೆಯಲಾಗುವುದು. ಶ್ರಾವಣ ಶುಕ್ಲ ಪಂಚಮಿ ದಿನ, ಸರ್ವಧಾರಿ ಸಂವತ್ಸರದ ದಿನ ನಾಗರಪಂಚಮಿಯ ದಿನವಾಗಿದೆ. ನಾಗನನ್ನು ಭಯ ಭಕ್ತಿಯಿಂದ ಪೂಜಿಸುವ ಪವಿತ್ರ ದಿನವಾಗಿದೆ. ನಾಗಪ್ರತಿಷ್ಠೆ, ನಾಗತಂಬಿಲ, ಆಶ್ಲೇಷ ಬಲಿ, ನಾಗಮಂಡಲ, ನಾಗದರ್ಶನ, ಸರ್ಪಸಂಸ್ಕಾರ ಹೀಗೆ ನಾನಾ ವಿಧದ ಆರಾಧನೆಗಳು ಅನಾದಿ ಕಾಲದಿಂದಲೂ ಆಚರಣೆ ಮಾಡಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ತುಳುನಾಡಿನ ವಿಶಿಷ್ಟ ಸಂಸ್ಕೃತಿಯಾದ ನಾಗನ ಆರಾಧನೆ, ಸುಖ, ಸಮೃದ್ಧಿ, ಶಾಂತಿ, ನೆಮ್ಮದಿ, ಸಂತಾನಫಲ ನೀಡುವ ಪ್ರತೀಕವಾಗಿ ಪೂಜಿಸಲ್ಪಟ್ಟಿದೆ. 'ನಾಗರಪಂಚಮಿ ನಾಡಿಗೆ ಬಂದಿದೆ, ನಾರಿಯರೆಲ್ಲ ಕುಣಿದಾಡಿ' ಎಂಬ ಒಂದು ಜಾನಪದ ಹಾಡು ಇದೆ. ಈ ಉಲ್ಲೇಖದಲ್ಲಿ ಹೆಣ್ಣುಮಕ್ಕಳ ಸಡಗರದ ಚಿತ್ರಣವಿದೆ. ಇದಕ್ಕೆ ಒಂದು ಕಥೆಯ ಹಿನ್ನೆಲೆಯೂ ಇದೆ.

**ಕಥೆಯ ಹಿನ್ನಲೆ:** ಶ್ರೀಮಂತ ಗಂಡಿನ ಮನೆಯಲ್ಲಿದ್ದ ತನ್ನ ತಂಗಿಯನ್ನು ತವರಿಗೆ ಕರೆದುಕೊಂಡು ಬರುತ್ತಿದ್ದ ಅಣ್ಣನಿಗೆ ತನ್ನ ತಂಗಿಯ ಮೈಮೇಲೆ ಧರಿಸಲಾದ ಬೆಲೆಬಾಳುವ ಬಂಗಾರದ ಒಡವೆಗಳು, ಮುತ್ತು, ರತ್ನಗಳ ಮೇಲೆ ಆಸೆಯಾಗುತ್ತದೆ. ಆತ ಈ ಒಡವೆಗಳ ಮೇಲಿನ ಆಸೆಯಿಂದಾಗಿ ತಂಗಿ ಎಂಬ ಮಮಕಾರವಿಲ್ಲದೆ ಆಕೆಯನ್ನು ಕೊಲ್ಲಲು ಒಂದು ಕಲ್ಲನ್ನು ಎತ್ತಲು ಹೋದಾಗ ಆ ಕಲ್ಲಿನ ಅಡಿಯಲ್ಲಿದ್ದ ನಾಗರಹಾವು ಅವನನ್ನು ಕಚ್ಚಿ ಸಾಯಿಸುತ್ತದೆ. ಆಗ ಅವನ ತಂಗಿ ನಾಗದೇವನನ್ನು ಪೂಜಿಸಿ ತನ್ನ ಅಣ್ಣನನ್ನು ಬದುಕಿಸಿಕೊಳ್ಳುತ್ತಾಳೆ. ಅಂದಿನಿಂದ ನಾಗನ ಆರಾಧನೆ ಅಸ್ತಿತ್ವಕ್ಕೆ ಬಂದಿತು ಎಂಬುದನ್ನು ಲೇಖಕರಾದ ನಾರಾಯಣ ರೈ ಕುಕ್ಕುವಳ್ಳಿಯವರು ಈ ಕಥೆಯನ್ನು ಹೇಳುತ್ತಾರೆ.[೨೨]

**ನಾಗರಪಂಚಮಿ ಹಬ್ಬದ ಇತಿಹಾಸಕ್ಕೆ ಪುರಾಣದ ಐತಿಹ್ಯ**

ಜನಮೇಜಯ ರಾಜನು ಆಸ್ತಿಕ ಋಷಿಗೆ ನೀಡಿದ ವರದ ಪ್ರಕಾರ ಸರ್ಪಯಜ್ಞವನ್ನು ನಿಲ್ಲಿಸಿದ ದಿನ ಪಂಚಮಿಯಾಗಿತ್ತು. ಆದ್ಧರಿಂದ ನಾಗರಪಂಚಮಿಯನ್ನು ಆಚರಿಸಲಾಗುತ್ತಿದೆ ಎಂಬ ನಂಬಿಕೆಯಿದೆ. ಈ ದಿನ ಅರಸಿನ ಮತ್ತು ರಕ್ತಚಂದನದಿಂದ ಮಣೆಯ ಮೇಲೆ ನವನಾಗರನ ಆಕೃತಿಯನ್ನು ಬಿಡಿಸಿ ಹಾಲು ಮತ್ತು ಅರಶಿನದ ನೈವೇದ್ಯ ಮಾಡಲಾಗುತ್ತದೆ. ಈ ದಿನ ಯಾವುದನ್ನೂ ಕೊಯ್ಯಬಾರದು. ಕೀಳಬಾರದು.

ಕದಿಯಬಾರದು ಎಂಬ ನಂಬಿಕೆ ತುಳುವರಲ್ಲಿದೆ. ಭಾರತದ ಮೂಲ ನಿವಾಸಿಗಳಾದ ದ್ರಾವಿಡರು ನಾಗನ ಆರಾಧಕರಾಗಿದ್ದರು. ಭಾರತಕ್ಕೆ ಬಂದ ಆರ್ಯರು ನಾಗಪೂಜೆಯನ್ನು ಮುಂದುವರೆಸಿ ಜನಪ್ರಿಯಗೊಳಿಸಿದರು. ವೇದ, ಉಪನಿಷತ್ತು, ಮಹಾಕಾವ್ಯ, ಪುರಾಣಗಳಲ್ಲಿ ನಾಗಪೂಜೆಯ ಉಲ್ಲೇಖವಿದೆ. ತುಳುನಾಡು ಪರಶುರಾಮನ ಕ್ಷೇತ್ರವಾಗಿದೆ. ವಾಸುಕಿ, ತಕ್ಷಕ, ಕಾಳೀಯ, ಮಣಿಭದ್ರ, ಕಾರ್ಕೋಟಕ ಮುಂತಾದ ಪ್ರಮುಖ ಪೌರಾಣಿಕ ನಾಗದೇವ ದೇವತೆಗಳಿವೆ. ಈ ಪ್ರತಿಮೆಗಳಿಗೆ ಕ್ಷೀರಾಭಿಷೇಕ ಮಾಡಿದರೆ ನಾಗನ ವಿಷದಿಂದ ಪ್ರಾಣಾಪಾಯವಾಗುವುದು ತಪ್ಪುತ್ತದೆ ಎಂಬ ನಂಬಿಕೆ ತುಳುನಾಡಿನಲ್ಲಿ ಇದೆ.

**ನಾಗಬನ:** ಪರಿಸರದ ರಕ್ಷಣೆಗೆ ನಾಗಾರಾಧನೆಯು ಒಂದು ವರದಾನವಾಗಿದೆ. ನಾಗಗಳ ರಕ್ಷಣೆಗೆ, ವಾಸಕ್ಕೆ ಅರಣ್ಯ, ಸಸ್ಯ ಸಂಪತ್ತು ಅವಶ್ಯಕ. ಇಲ್ಲಿ ನಾಗರಹಾವುಗಳು ವಾಸವಾಗಿರುತ್ತವೆ. ಆದ್ದರಿಂದ ಇಲ್ಲಿ ಯಾವುದೇ ಸಸ್ಯ, ಗಿಡ, ಮರಗಳನ್ನು ಕಡಿಯುವುದು ಅಪರಾಧವಾಗುತ್ತದೆ. ಕಾಡು ಕಡಿದರೆ ನಾಗಗಳ ರಕ್ಷಣೆಗೆ ಕುತ್ತಾಗುತ್ತದೆ. ಆದ್ದರಿಂದಲೇ 'ನಾಗಬನಗಳು' ಇಲ್ಲಿ ಆರಾಧನಾ ಸ್ಥಳಗಳಾಗಿವೆ. ತುಳುನಾಡಿನ ಜನರು ನಾಗರಹಾವು ನೋಡಿದರೆ ಯಾವುದೋ ತಪ್ಪು ಮಾಡಿದ್ದಕ್ಕಾಗಿ ಕಂಡಿದೆ ಎಂದು ಭಾವಿಸಿ ಶ್ರೀಕ್ಷೇತ್ರ ಸುಬ್ರಹ್ಮಣ್ಯಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಸರ್ಪದೋಷ ನಿವಾರಣೆಗೆ ವಿಶೇಷ ಪೂಜೆ ಸಲ್ಲಿಸಿ ಬರುತ್ತಾರೆ. ನಾಗರಹಾವು ಕಂಡರೆ ಒಂದು ಕಲ್ಲು, ಕಟ್ಟಿಗೆ, ಹುಲ್ಲು ಕಡ್ಡಿ ಇರಲಿ, ಆ ಕಡೆ ಕೈಯನ್ನು ಸಹ ತೋರಿಸುವುದಿಲ್ಲ. ಆಕಸ್ಮಿಕವಾಗಿ ಸತ್ತಿರುವ ನಾಗರಹಾವು ಕಂಡರೆ ಅದಕ್ಕೆ ಧಾರ್ಮಿಕ ವಿಧಿ-ವಿಧಾನಗಳ ಪ್ರಕಾರ ಪೂಜೆ ಸಲ್ಲಿಸಿ ಸಂಸ್ಕಾರ ಮಾಡಿ ಅನ್ನ ಸಂತರ್ಪಣೆಯನ್ನು ಏರ್ಪಡಿಸುತ್ತಾರೆ. ಪರಶುರಾಮನ ಕ್ಷೇತ್ರವಾದ ತುಳುನಾಡಿನ ಪರಿಸರ ಸಮೃದ್ಧಿಯಾಗಿ ಬೆಳೆಯಲು ಹಾಗೂ ಉಳಿಯಲು ನಾಗಾರಾಧನೆ ಸಂಸ್ಕೃತಿಯ ಹಿನ್ನಲೆ ಇದೆ. ಅರಣ್ಯ ಸಂಪತ್ತು ಯಥೇಚ್ಛವಾಗಿರುವುದರಿಂದ ಇಲ್ಲಿ ಉತ್ತಮ ಮಳೆಯು ಆಗುತ್ತದೆ. ಈ ಭಾಗದಲ್ಲಿ ಬರಗಾಲದ ಬಿಸಿ ಕಂಡುಬಂದ ಆಧಾರಗಳಿಲ್ಲ. ಈ ಹಿನ್ನಲೆಯಲ್ಲಿ ನಾಗರಪಂಚಮಿ ಹಬ್ಬ ಪ್ರಾಮುಖ್ಯತೆಯನ್ನು ಪಡೆದಿದೆ. ಕಂಡಕಂಡಲ್ಲಿ ಹಾವುಗಳನ್ನು ಕಂಡರೆ ಸಾಕು ಕಲ್ಲು ಹಾಕುವ, ಹೊಡೆದು, ಬಡಿದು, ಸಾಯಿಸುವ ಸಂಸ್ಕೃತಿ ಇಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ತುಳುನಾಡಿನ ಈ ಸಂಸ್ಕೃತಿಯ ಆಚರಣೆ ಮಲೆಕುಡಿಯ ಬುಡಕಟ್ಟು ಸಮುದಾಯದ ಕಂಡು ಬರುತ್ತದೆ. ಮಲೆಕುಡಿಯ ಸಮುದಾಯದ ಜನರು ಶ್ರೀಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯ ದೇವರ ಆರಾಧಕರು ಹಾಗೂ ಪರಮ ಭಕ್ತರು, ಸೇವಕರೂ ಆಗಿರುವುದು ಕಂಡುಬರುತ್ತದೆ. ಇದು ಇವರು ನಾಗಾರಾಧಕರು ಎಂಬುದಕ್ಕೆ ಪುಷ್ಟಿ ನೀಡುತ್ತದೆ. ದೇವರ ರಥೋತ್ಸವದಲ್ಲಿ ಬಿದಿರಿನ ಅಲಂಕಾರ ಮಾಡುವುದು ಸೇರಿದಂತೆ ಎಲ್ಲಾ ಉತ್ಸವದ ದಿನಗಳಲ್ಲಿ ಇವರ ಸೇವೆ ಅತ್ಯವಶ್ಯಕವಾಗಿವೆ. ತುಳುನಾಡಿನ ಜನರಲ್ಲಿ 'ತೆಂಗಿನ ಮರಕ್ಕೆ' ಪವಿತ್ರ ಸ್ಥಾನವಿದೆ. ಇದನ್ನು ಕಲ್ಪವೃಕ್ಷವೆಂದು ಗೌರವಿಸಲಾಗುವುದು. ಈ ತೆಂಗಿನ ಮರವನ್ನು ಕಡಿಯುವುದಿಲ್ಲ. ಇದನ್ನು ತೆಗೆಯುವುದು ಅನಿವಾರ್ಯವಾದರೆ ತೆಂಗಿನ ಸಸಿಗಳನ್ನು ಬೇರೆ ಸ್ಥಳದಲ್ಲಿ ನೆಟ್ಟು ತೆಂಗಿನ ಮರವನ್ನು ಬುಡಸಮೇತ ಅಗೆದು ಇದನ್ನು ಬೇರೆ ಸ್ಥಳಕ್ಕೆ ಹಾಗೆಯೇ ಸ್ಥಳಾಂತರಿಸುವ ವಿಧಾನ ಇಲ್ಲಿ ಕಂಡುಬರುತ್ತದೆ. ಈ ಸ್ಥಳಾಂತರ ವಿಧಾನವನ್ನು ಗ್ರಾಮೀಣ ಜನತೆ, ಮಲೆಕುಡಿಯ ಸಂಪ್ರದಾಯದವರು ತುಂಬಾ ನೈಪುಣ್ಯತೆ, ಚಾಕುಚಕ್ಯತೆಯಿಂದ ಮಾಡುತ್ತಾರೆ. ಬೆಳೆದು ಹೆಮ್ಮರವಾಗಿರುವ ಇಡೀ ತೆಂಗಿನ ಮರವನ್ನು ಇಡೀ ಬುಡ ಸಮೇತ ಹಾಗೆಯೇ ತೆಗೆದು ಬೇರೆ ಸ್ಥಳಕ್ಕೆ ಅಥವಾ ಅದರ ಬದಿಯಲ್ಲಿಯೇ ಸ್ಥಳಾಂತರಿಸುವ ಕೆಲಸ ತುಂಬಾ ವಿಸ್ಮಯಕರವಾಗಿರುತ್ತದೆ.

## ಮಲೆಕುಡಿಯರಲ್ಲಿ ಮೊಸರು ಕುಡಿಕೆ ಉತ್ಸವ

ಕುಕ್ಕೆಸುಬ್ರಹ್ಮಣ್ಯ ದೇವಸ್ಥಾನದ ಪ್ರದೇಶಗಳಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದವರು ಸಹ ಶ್ರೀ ಕೃಷ್ಣಜನ್ಮಾಷ್ಟಮಿಯನ್ನು ಆಚರಿಸುತ್ತಾರೆ. ಇದು ಇವರ ವಿಶಿಷ್ಟ ಆಚರಣೆಗಳಲ್ಲಿ ಒಂದಾಗಿದೆ. ಶ್ರೀ ಕೃಷ್ಣನನ್ನು ಸುಬ್ರಹ್ಮಣ್ಯದ ಕಾಶಿಕಟ್ಟೆಯಿಂದ ಇಲ್ಲಿನ ಆರಾಧ್ಯ ದೈವ ಸುಬ್ರಹ್ಮಣ್ಯ ದೇವಸ್ಥಾನಕ್ಕೆ ತಂದು ಇಲ್ಲಿ ಪೂಜೆ ಸಲ್ಲಿಸಿ ದೇವಸ್ಥಾನದ ರಥಬೀದಿಯಲ್ಲಿ ಶ್ರೀ ಕೃಷ್ಣನನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಮೆರವಣಿಗೆಯಲ್ಲಿ ಉತ್ಸವ ರಥಬೀದಿಯಲ್ಲಿ ಸಾಗುತ್ತದೆ. ಈ ಉತ್ಸವದಲ್ಲಿ ಮಲೆಕುಡಿಯ ಸಮುದಾಯದ ಪುರುಷ, ಮಹಿಳೆಯರು ಭಾಗವಹಿಸುತ್ತಾರೆ. ಇವರ ಜೊತೆಗೆ ಆ ದಿನ ಬಂದ ಪ್ರವಾಸಿಗಳು ಸಹ ಭಾಗವಹಿಸುತ್ತಾರೆ. ಈ ಪಲ್ಲಕ್ಕಿ ಉತ್ಸವ ದೇವಸ್ಥಾನದ ರಥಬೀದಿಯಲ್ಲಿ ಸಾಗಿ ಕಾಶಿಕಟ್ಟೆಯನ್ನು ತಲುಪುತ್ತದೆ. ಪಲ್ಲಕ್ಕಿ ಉತ್ಸವ ಸಾಗುವ ರಥಬೀದಿಯ ಎರಡೂ ಬದಿಯಲ್ಲಿ ಮೊಸರು ಕುಡಿಕೆಗಳನ್ನು ಕಟ್ಟಿರುತ್ತಾರೆ. ಈ ಮೊಸರು ಕುಡಿಕೆಗಳನ್ನು ಮಲೆಕುಡಿಯ ಜನಾಂಗದ ಮಹಿಳೆಯರು ಹೊಡೆದುಕೊಂಡು ಸಾಗುತ್ತಾರೆ. ಈ ಆಚರಣೆ ಕಾಶಿಕಟ್ಟೆಯವರೆಗೆ ಮುಂದುವರಿಯುತ್ತದೆ. ಮೆರವಣಿಗೆ ಕಾಶಿಕಟ್ಟೆ ತಲುಪಿದ ನಂತರ ಇಲ್ಲಿ ಪೂಜೆ ಸಲ್ಲಿಸುವುದರ ಮೂಲಕ ಮುಕ್ತಾಯವಾಗುತ್ತದೆ. ದಕ್ಷಿಣಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಪಿರಮಿಡ್ಡನ್ನು ಮಾಡುವುದರ ಮೂಲಕ ಎತ್ತರದಲ್ಲಿ ಕಟ್ಟಿರುವ ಮೊಸರು ಕುಡಿಕೆಯನ್ನು ಹೊಡೆದು ಸಾಹಸ ಪ್ರದರ್ಶಿಸುತ್ತಾರೆ. ಆದರೆ ಮಲೆಕುಡಿಯರ ಮೊಸರು ಕುಡಿಕೆಯಲ್ಲಿ ಎತ್ತರದ ಪಿರಮಿಡ್ಡಿನ ವ್ಯವಸ್ಥೆ ಇರುವುದಿಲ್ಲ. ಅದರ ಬದಲಾಗಿ ರಥಬೀದಿಯ ಎರಡು ಬದಿಗಳಲ್ಲಿ ಕಟ್ಟಿರುವ ಮೊಸರು ಕುಡಿಕೆಗಳನ್ನು ಮಲೆಕುಡಿಯ ಮಹಿಳೆಯರು ಹೊಡೆಯುತ್ತಾರೆ. ಈ ಆಚರಣೆಯಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಪ್ರಧಾನವಾಗಿ ಕಂಡುಬರುತ್ತದೆ. ಪಿರುಮಿಡ್ಡಿನ ಸಾಹಸದಲ್ಲಿ ಯುವಕರು ಪ್ರಧಾನವಾಗಿ ಭಾಗವಹಿಸುತ್ತಾರೆ. ಆದರೆ ಮಲೆಕುಡಿಯರ ಈ ಉತ್ಸವದಲ್ಲಿ ಪುರುಷರು ಪಲ್ಲಕ್ಕಿಯನ್ನು ಹೊತ್ತು ಸಾಗುತ್ತಾರೆ. ಮಹಿಳೆಯರು ಮೊಸರು ಕುಡಿಕೆಗಳನ್ನು ಹೊಡೆಯುತ್ತಾ ಸಾಗುತ್ತಾರೆ. ಇದು ಇವರ ವಿಶಿಷ್ಟವಾದ ಷಷ್ಠಿ ಆಚರಣೆ ಪದ್ಧತಿಯಾಗಿದೆ. ದಿನಾಂಕ ೨೪.೮.೧೯೦೮ ರಂದು ಭಾನುವಾರ ಈ ಆಚರಣೆ ನಡೆದಿರುತ್ತದೆ.

## ೧.೩. ಸಾಮಾಜಿಕ ಹೋರಾಟಗಳು

ಮಲೆಕುಡಿಯ ಬುಡಕಟ್ಟು ಸಮುದಾಯದ ಸಾಮಾಜಿಕ ಹೋರಾಟಗಳಲ್ಲಿ ತುಂಬಾ ಪರಿಣಾಮ ಕಾರಿಯಾದ ಮತ್ತು ವಿರೋಧಗಳನ್ನು ಎದುರಿಸಲು ಶ್ರೀಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ನಡೆಯುತ್ತಿರುವ ಮಡೆಸ್ನಾನ ಆಚರಣೆ ಮತ್ತು ನಿಶೇಷಧ ವಿರುದ್ಧ ನಡೆಯುತ್ತಿರುವ ಹೋರಾಟವು ಒಂದು ಸಾಮಾಜಿಕ ಹೋರಾಟವಾಗಿದೆ. ಇವರ ಮೂಲ ಸಂಸ್ಕೃತಿ ಉಡುಪು ವಿವಾಹಪದ್ಧತಿ ಆಚರಣೆಗಳು ಸಾಮಾಜಿಕ ಪರಂಪಡೆಯ ಆಧಾರಗಳಾಗಿವೆ. ಹಿಂದೆ ಇದ್ದ ತಮ್ಮ ಸಾಂಪ್ರದಾಯಿಕ ಪದ್ಧತಿ ಮಾಯವಾಗಿ ಆಧುನಿಕ ಬದಲಾವಣೆಗೆ ಒಗ್ಗಿಕೊಂಡಿದ್ದಾರೆ. ಸರಳ ವಿವಾಹಗಳು, ಅಂತರ್ಜಾತಿ ವಿವಾಹಗಳು ಈಗ ಇವರಲ್ಲಿ ನಡೆಯುತ್ತವೆ. ಧರ್ಮಸ್ಥಳದಲ್ಲಿ ೪ ಅಂತರ್ಜಾತಿ ವಿವಾಹಗಳು ನಡೆದಿವೆ. ಮೆದಿನಾದಲ್ಲಿ ವಯಸ್ಸು ಮೀರಿ ವಿವಾಹವಾಗದೇ ಇರುವ ಮಹಿಳೆಯರು ಮತ್ತು ಪುರುಷರು ಈ ಸಮುದಾಯದಲ್ಲಿದ್ದಾರೆ. ಅಳಿಯ ಕಟ್ಟು ಮತ್ತು ಮಕ್ಕಳ ಕಟ್ಟುವಿನ ನಡುವಿನ ವೈವಾಹಿಕ ಸಂಬಂಧಗಳು ಹಿಂದೆ ನಿರ್ಬಂಧಿತವಾಗಿದ್ದವು. ಈಗ ಸಡಿಲವಾಗುತ್ತಿವೆ. ಬೆಂಗಳೂರಿನಲ್ಲಿ ವಕೀಲರಾಗಿರುವ ವೆಂಕಟೇಶ್‌ರವರು ಮಕ್ಕಳಕಟ್ಟು

ಸಂತತಿಯವರಾದರೂ ಅಳಿಯ ಸಂತಾನಕ್ಕೆ ಸೇರಿದ ಕುಟುಂಬದವರೊಂದಿಗೆ ವಿವಾಹವಾಗಿದ್ದಾರೆ. ಬಾಂಜಾರು ಮಲೆಯಲ್ಲಿ ಮಾತ್ರ ಹಳೆಯ ತಲೆಮಾರಿನ ವೃದ್ಧಾಪ್ಯ ಮಹಿಳೆಯರು ಸೀರೆ ಸೆರಗಿಗೆ ಗಂಟು ಹಾಕುವ ಪದ್ಧತಿ ಕಂಡು ಬರುತ್ತದೆ.

### ೧. ಸುಬ್ರಹ್ಮಣ್ಯದ ಮಡೆಸ್ನಾನ

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿರುವ ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಸೇರಿದಂತೆ ಎಲ್ಲಾ ಸಮುದಾಯ ಜಾತಿ ವರ್ಗಗಳು ನಿರ್ವಹಿಸುವ ಕೆಲಸ ಕಾರ್ಯಗಳ ಜವಾಬ್ದಾರಿ ಹೊಣೆಗಾರಿಕೆಯನ್ನು ಕುರಿತು ವೀರೆಂದ್ರ ಹೆಗ್ಗಡೆಯವರು ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು(ಪೊಲಿ-೨೦೦, ಪುಟ.೨೯೫,೩೦೨)ರಲ್ಲಿ ವಿವರಿಸಿದ್ದಾರೆ.[೨೩] ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದವರಿಗೆ ಸಾಮಾಜಿಕ, ಆರ್ಥಿಕ ರೀತಿಯ ಆಧಾರವಾಗಿರುವ ದೇವಾಲಯಗಳಿವೆ. ನ್ಯಾಯಾದಾನ ಪದ್ದತಿ ಇಲ್ಲಿದೆ. ಇವರು ಹೇಳುವ ಪ್ರಕಾರ,

ದಕ್ಷಿಣ ಕನ್ನಡ ಜಿಲ್ಲೆಯ ಗೆಜೆಟಿಯರ್ ಕರ್ನಾಟಕ ಸರಕಾರ ೧೯೭೩ ಪುಟ.೭೩೧ರಲ್ಲಿ ಸರಕಾರದ ದಾಖಲೆಗಳ ಪ್ರಕಾರ ಒಂದು ನ್ಯಾಯಾಲಯದಂತೆ ನ್ಯಾಯದಾನ್ನೂ ಮಾಡುವ ದೇವಾಲಯಗಳು ನಮ್ಮ ದೇಶದಲ್ಲಿ ಎರಡು ಮಾತ್ರ ಇವೆ. ಒಂದು ಧರ್ಮಸ್ಥಳದ ಮಂಜುನಾಥೇಶ್ವರ ದೇವಾಲಯ ಮತ್ತು ಒರಿಸ್ಸಾ ರಾಜ್ಯದ ಸ್ವಾಮಿಗೋಪಾಲ ದೇವಾಲಯಗಳಾಗಿವೆ. ಈ ಎರಡು ದೇವಾಲಯಗಳಲ್ಲಿ ಎಲ್ಲಾ ಜಾತಿ ಧರ್ಮ್ದ ಜನರಿಗೆ ಸಂಬಂಧಪಟ್ಟ ಸಿವಿಲ್ ದಾವೆಗಳನ್ನು ತಿರ್ಮಾನಿಸುವ ವ್ಯವಸ್ಥೆ ಇತ್ತು. ಈ ತೀರ್ಮಾನವು ದಾವಿಗೆ ಸಂಬಂಧಿಸಿದ ಎರಡು ಪಕ್ಷಗಳಿಗೆ ಅನ್ಯಾಯವಾಗುತ್ತದೆ. ಬ್ರಟಿಷರ ಆಳ್ವಿಕೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ನ್ಯಾಯಾಲಯಗಳಿಂದ ಸಿವಿಲ್ ದಾವೆಗಳನ್ನು ಧರ್ಮಸ್ಥಳಕ್ಕೆ ಕಳಿಸಿ ಇಲ್ಲಿ ಆದ ತೀರ್ಮಾನಗಳನ್ನು ಅವರು ಅಂಗೀಕರಿಸಿ ಸಂವಿದಾನಾತ್ಮಕ ಬೆಂಬಲವನ್ನು ಕೊಟ್ಟ ಹಲವು ಉದಾಹರಣೆಗಳು ಧರ್ಮಸ್ಥಳದ ಪ್ರಾಚೀನ ದಾಖಲೆಗಳಲ್ಲಿ ಸಿಗುತ್ತವೆ ಎಂಬುದನ್ನು ವೀರೇಂದ್ರ ಹೆಗ್ಗಡೆಯವರು ಪೊಲಿ ೨೦೦ರ ಪುಟ. ೨೯ರಲ್ಲಿ ತಿಳಿಸಿದ್ದಾರೆ.[೨೪] ಇದಕ್ಕೆ ಹೊರತಾಗಿ ಸಾರ್ವಜನಿಕರು ತನ್ನ ದೂರು ಅಹವಾಲುಗಳನ್ನು ಪತ್ರದ ಮೂಲಕ ಪ್ರಾರ್ಥನೆಯೊಂದಿಗೆ ಇಲ್ಲಿನ ದೇವರ ಸನ್ನಿಧಿಗೆ ಒಪ್ಪಿಸುವ ವ್ಯವಸ್ಥೆ ಈಗಲೂ ಸಹ ಕಂಡುಬರುತ್ತದೆ. ಇದನ್ನು ಹೊಯಿಲು ಕೊಡುವುದು ಎಂದು ಕರೆಯುತ್ತಾರೆ. ಈ ಹೊಯಿಲು ಕೊಟ್ಟ ನಂತರ ಇದಕ್ಕೆ ಸಂಬಂಧಿಸಿದಂತೆ ಎರಡು ಕಡೆಯವರಿಗೆ ದೇವಾಲಯದಿಂದ ಪತ್ರ ಹೋಗುತ್ತದೆ. ಇದಕ್ಕೆ ಅನುಸಾರವಾಗಿ ಎರಡು ಕಡೆಯವರು ಬರುತ್ತಾರೆ. ಎರಡು ಕಡೆಯಿಂದ ಅಹವಾಲನ್ನು ಆಲಿಸಿದ ನಂತರ ಹೆಗ್ಗಡೆಯವರು ತೀರ್ಪು ಕೊಡುತ್ತಾರೆ. ಈ ತೀರ್ಪನ್ನು ಎರಡು ಕಡೆಯವರು ಒಪ್ಪಿಕೊಳ್ಳುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯ ದೇವಾಲಯಗಳು ಮಲೆಕುಡಿಯ ಸಮುದಾಯದವರು ಸೇರಿದಂತೆ ಎಲ್ಲಾ ಜಾತಿ ಜನರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವುದರ ಮೂಲಕ ಇಲ್ಲಿನ ಈ ಜನ ಜೀವನದ ಆಧಾರಕ್ಕೆ ಸಹ ಅವಕಾಶ ಕಲ್ಪಿಸಿರುವುದು ಕಂಡುಬರುತ್ತದೆ. ದಕ್ಷಿಣ ಭಾರತದ ದೇವಾಲಯಗಳಲ್ಲಿ ಕ್ರಿ.ಶ ೧೮೦೦ರಲ್ಲಿ ತಾಂಜಾವೂರಿನ ಬೃಹದೀಶ್ವರ ದೇವಾಲಯದಲ್ಲಿ ಸುಮಾರು ೬೦೦ ಜನರು ಉದ್ಯೋಗಗಳು ಇದ್ದರೆಂಬುದು

ಇತಿಹಾಸದಿಂದ ತಿಳಿದು ಬರುತ್ತದೆ(ಪುಟ. ೩೦೦, ಪೊಲಿ ೨೦೦). ಅವರನ್ನು "ಕೋಯಿಲ್ ಪರಿವಾರಂಗಳ್" ಎಂದು ಕರೆಯಲಾಗುತ್ತಿತ್ತು. ಮೂರನೇ ಕುಲೋತ್ತುಂಗ ಚೋಳನ ಕಾಲದಲ್ಲಿ ಕ್ರಿ.ಶ.೧೨೧೩ರ ಶಾಸನದಲ್ಲಿ ಕಾಂಚಿಯ ವರದರಾಜ ಸ್ವಾಮಿಯ ದೇವಾಲಯದಲ್ಲಿ ೨೦೦ ಜನರು ಮಹಿಳೆಯರು ಉದ್ಯೋಗದಲ್ಲಿದ್ದಾರೆಂಬ ಮಾಹಿತಿ ಇದೆ. ದೇವಾಲಯದ ವತಿಯಿಂದ ಇವರಿಗೆ ವಾಸಿಸಲು ಮನೆಗಳನ್ನು ಕಟ್ಟಿ ಕೊಟ್ಟಿರುವುದು ತಿಳಿದುಬರುತ್ತದೆ. ಅಂತೆಯೇ ಈಗಲೂ ಸಹ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಮಲೆಕುಡಿಯರಿಗೆ ಇಲ್ಲಿನ ದೇವಾಲಯಗಳು ಉದ್ಯೋಗಾವಕಾಶ ಕಲ್ಪಿಸಿಕೊಡುವುದರ ಮೂಲಕ ಆರ್ಥಿಕ ಸ್ಥಿತಿಗೆ ಆಧಾರವಾಗಿವೆ ಎಂಬ ಉಲ್ಲೇಖವಿದೆ.

ವೀರೇಂದ್ರ ಹೆಗ್ಗಡೆಯವರು ದಕ್ಷಿಣ ಕನ್ನಡದ ಜಿಲ್ಲೆಯ ದೇವಾಲಯಗಳಲ್ಲಿ ಕೆಲಸ ಮಾಡುವ ಉದ್ಯೋಗಿಗಳನ್ನು ನಾಲ್ಕು ರೀತಿಯಲ್ಲಿ ವರ್ಗೀಕರಿಸಲಾಗಿದೆ(ಪೊಲಿ ೨೦೦, ಪುಟ ೩೦೦). ವೈದಿಕರು. ಆಡಳಿತಗಾರರು ಆಡಳಿತ ಮುಕ್ತೇಸರರು. ನಿತ್ಯ ಸೇವೆ ಮಾಡುವವರು. ಸಾಂಧರ್ಬಿಕ ಉದ್ಯೋಗ ಪಡೆಯುವವರು ಎಂಬ ನಾಲ್ಕು ಪ್ರಕಾರಗಳಿವೆ. ಈ ನಾಲ್ಕು ವರ್ಗಗಳಲ್ಲಿ ಕೆಲಸ ಮಾಡುವವರು ವಿವಿಧ ಜಾತಿ ಸಮುದಾಯಗಳಿಗೆ ಸೇರಿದವರಾಗಿದ್ದಾರೆ. ವೈದಿಕರಲ್ಲಿ ಅರ್ಚಕರು, ತಂತ್ರಿಗಳು, ಕೀಳ್ ಶಾಂತಿಯವರು, ಮುಟ್ಟು ಶಾಂತಿಯವರು, ಉಪಾಧಿವಂತರು, ಪಾರಕರು, ಘಂಟಾನಾದ ಮಾಡುವವರು ಇತ್ಯಾದಿ ಇದ್ದಾರೆ."

ಆಡಳಿತಗಾರರು: ದೇವಾಲಯದ ಆಡಳಿತವನ್ನು ನೋಡಿಕೊಳ್ಳುವವರನ್ನು ಆಡಳಿತ ಮುಕ್ತೇಸರರು ಎಂದು ಕರೆಯಲಾಗಿರುತ್ತದೆ. ಈ ವರ್ಗದಲ್ಲಿ ಮುಕ್ತೇಸರರು ಮಣಗಾರರು, ಪಾರುಪತ್ಯ ಗಾರರು, ಕೊಠಾರಿಗಳು, ಶ್ಯಾನುಭಾಗರು, ಉಗ್ರಾಣದವರು, ಕಾರ್ಯಂತರು ಅನ್ನದಾನ ಮುಂತಾದ ಧಾನಗಳ ವ್ಯವಸ್ಥಾಪಕರು ಪಹರೆಯವರು, ಇತ್ಯಾದಿಗಳಿದ್ದಾರೆ. ನಿತ್ಯ ಸೇವೆ ಮಾಡುವವರು: ದೇವಾಲಯದಲ್ಲಿ ದಿನ ನಿತ್ಯದ ಸೇವೆ ಮಾಡುವವರು ಇದ್ದಾರೆ. ಪದಾರ್ಥಿಗಳು: ವಾದ್ಯದವರು, ಪುರಾಣವಚನ ಮಾಡುವವರು, ಪಂಚಾಂಗ ಶ್ರವಣ ಮಾಡುವವರು, ಉರುಳುಸೇವೆ ಮಾಡುವವರು, ದ್ವಾರಪಾಲಕರು, ದೀಪದ ವ್ಯವಸ್ಥೆ ನೋಡುವವರು, ಬೋಜನಾಲಯದಲ್ಲಿ ಕೆಲಸ ಮಾಡುವವರು, ಪಾತ್ರ ತೊಳೆಯುವವರು, ನೈರ್ಮಲ್ಯ ಸ್ವಚ್ಚ ಸ್ವಚ್ಚತೆ ಮಾಡುವವರು. ಇತ್ಯಾದಿಗಳು ಇದ್ದಾರೆ. ಸಾಂಧರ್ಬಿಕ ಉದ್ಯೋಗ ಮಾಡುವವರು: ಕೆಲವು ಜನರು ಸಾಂಧರ್ಬಿಕವಾಗಿ ದೇವಾಲಯಗಳಲ್ಲಿ ಸೇವೆ ಮಾಡುತ್ತಾರೆ. ಅವರಲ್ಲಿ ಮುಖ್ಯರಾದವರೆಂದರೆ ಛತ್ರಿ, ಧ್ವಜ, ಬಿರುದು ಚಾವಲಿ ಹಿಡಿಯುವವರು, ರಥಕಟ್ಟುವವರು, ರಥ ಎಳೆಯುವವರು, ಚಿನ್ನದ ಕೆಲಸ ಮಾಡುವವರು, ಕಬ್ಬಿಣ, ಕಂಚು, ತಾಮ್ರ, ಹಿತ್ತಳೆ, ಕೆತ್ತನೆ ಮರದ ಕೆಲಸ ಮಾಡುವವರು, ಶಿಲ್ಪಿಗಳು, ಧ್ಥಪತಿಗಳು, ಅಡಿಗೆ ಮಾಡುವವರು, ಮಡಿವಾಳರು, ಅಲಂಕಾರಗೊಳಿಸುವವರು ಕಲಾವಿದರು, ಇದ್ದಾರೆ. ಈ ವ್ಯವಸ್ಥೆಯು ಈ ಜಾತಿ ಸಮುದಾಯಗಳ ಸಾಮಾಜಿಕ ಆರ್ಥಿಕ ಸಂಬಂಧಗಳನ್ನು ಸೂಚಿಸುತ್ತದೆ. ಈ ಮೇಲಿನ ನಾಲ್ಕು ವರ್ಗಗಳಲ್ಲಿ ಮಲೆಕುಡಿಯರು ಒಂದಲ್ಲ ಒಂದು ರೀತಿಯಲ್ಲಿ ಕೆಲಸ ಮಾಡುತ್ತಾರೆ. ಇಲ್ಲಿ ಇವರ ಊಳಿಗ ಪರಂಪರೆ ಕಂಡುಬರುತ್ತದೆ.

ಇಲ್ಲಿ ಸೂಚಿಸಿರುವ ಸೇವಾ ಕಾರ್ಯಗಳಲ್ಲಿ ಮಲೆಕುಡಿಯ ಸಮುದಾಯದವರು ಉಗ್ರಾಣಿ ಸಹಾಯಕರಾಗಿ, ಧಾನ್ಯ ಸಂಗ್ರಹಕಾರರಾಗಿ, ಅಡಿಗೆ ಸಹಾಯಕರಾಗಿ, ಅಲಂಕಾರಗೊಳಿಸುವ ಕಲಾವಿದರಾಗಿ,

ರಥಕಟ್ಟುವ ಮತ್ತು ಅಲಂಕಾರ ಮಾಡುವವರಾಗಿ, ಮೆರವಣಿಗೆ ಉತ್ಸವಗಳಲ್ಲಿ ನಿಶಾನೆ, ಛತ್ರಿ ಚಾಮರಗಳನ್ನು ಹಿಡಿದು ಸಾಗುವವರು ಆಗಿದ್ದಾರೆ. ಇದು ಇವರು ಅನಾದಿಕಾಲದಿಂದಲೂ ಮುಂದುವರೆಸಿಕೊಂಡು ಬಂದ ಸೇವೆಯಾಗಿದೆ. ಈ ಸೇವೆಗಳಲ್ಲಿ ಹಲವಾರು ವಿಧಗಳಿವೆ.

**ಉರುಳುಸೇವೆ ಹರಕೆಗಳು**

ಬ್ರಹ್ಮರಥೋತ್ಸವದ ಆಚರಣೆಯ ಅಂಗವಾಗಿ ಹಲವಾರು ಭಕ್ತರು ಇಲ್ಲಿ ಹರಕೆಯನ್ನು ಹೊತ್ತು ತೀರಿಸುತ್ತಾರೆ. ಇವರ ಹರಕೆಗಳಲ್ಲಿ ಉರುಳುಸೇವೆಯ ಹರಕೆಗಳು ಇಲ್ಲಿ ಪ್ರಧಾನವಾಗಿವೆ. ಈ ಉರುಳು ಸೇವೆಯಲ್ಲಿ ಮೂರು ವಿಧಗಳಿವೆ.

೧. ಬೀದಿ ಮಡೆಸ್ನಾನದ ಉರಳು ಸೇವೆ.

೨. ಮೂಲೆ ಮಡೆಸ್ನಾನ ಉರಳು ಸೇವೆ.

೩. ಮಡೆ ಮಡೆಸ್ನಾನ ಉರಳು ಸೇವೆ. ಎಂಬ ಮೂರು ರೀತಿಯ ಉರಳು ಸೇವೆಗಳು ಇವೆ.

೧. ಬೀದಿ ಮಡೆಸ್ನಾನದ ಉರುಳುಸೇವೆಯನ್ನು ಮಾಡುವ ಭಕ್ತರು ದೇವಸ್ಥಾನದಿಂದ ೨ ಕಿ.ಮೀ. ದೂರದಲ್ಲಿರುವ ಕುಮಾರಧಾರಾ ನದಿಯಲ್ಲಿ ಸ್ನಾನ ಮಾಡಿ ವ್ರತಾಚರಣೆಯ ಮೂಲಕ ಮಡಿಯಲ್ಲಿ ಬೀದಿಯಲ್ಲಿ ಉರುಳುತ್ತಾ ಬರುತ್ತಾರೆ. ಈ ಸೇವೆಯಲ್ಲಿ ಪುರುಷರು, ಸ್ತ್ರೀಯರು, ಯುವಕರು, ಮುದುಕರು ಇರುತ್ತಾರೆ. ಇವರ ಸಹಾಯಕ್ಕೆ ಹರಕೆಹೊತ್ತವರ ಸಂಬಂಧಿಕರಿರುತ್ತಾರೆ. ಇವರು ಗೋವಿಂದ ಗೋವಿಂದ ಎಂಬ ಘೋಷಣೆಯನ್ನು ಕೂಗುತ್ತಾ ಕೈಯಲ್ಲಿ ನಾಗರಬೆತ್ತವನ್ನು ಹಿಡಿದುಕೊಂಡು ಉರುಳುಸೇವೆ ಮಾಡುವವರೆಗೆ ನೆರವಾಗುತ್ತಾರೆ. ಮುಂದೆ ನಾಗರ ಬೆತ್ತವನ್ನು ಹಿಡಿದ ಒಬ್ಬ ವ್ಯಕ್ತಿ ಬೆತ್ತದಿಂದ ಸದ್ದು ಮಾಡುತ್ತಾ ಉರುಳುತ್ತಿರುವವರಿಗೆ ಮುಂದೆ ಸಾಗಲು ದಾರಿ ತೋರಿಸುತ್ತಾ ಸೂಚನೆ ಕೊಡುತ್ತಾರೆ. ಅನ್ನದಾತ ಸುಬ್ಬಪ್ಪನ ಪಾದದಿಂದ ಗೋವಿಂದ ಗೋವಿಂದ ಸುಬ್ರಮಣ್ಯ ದೇವರ ಪಾದಕ್ಕೆ ಗೋವಿಂದ ಹೀಗೆ ರಾಗ ಲಯಬದ್ಧವಾಗಿ ಗುಣಗಾಣ ಮಾಡುತ್ತಾ ಶಂಕವನ್ನು ಊದುತ್ತಿರುವ ದಾಸಯ್ಯ ಸಹ ಇರುತ್ತಾನೆ.

೨. ಮಡೆಸ್ನಾನ: ದೇವಸ್ಥಾನದ ಹೊರಾಂಗಣ ಮತ್ತು ಒಳಾಂಗಣದಲ್ಲಿ ಮಡಿಯಲ್ಲಿ ಉರುಳುತ್ತಾ ಹರಕೆ ತೀರಿಸುವುದು ಮಡೆಸ್ನಾನ. ಮಧ್ಯಾಹ್ನದ ಅನ್ನ ಸಂತರ್ಪಣೆಯ ನಂತರ ಬ್ರಾಹ್ಮಣರು ಉಂಡ ಎಂಜೆಲೆಲೆಯ ಮೇಲೆ ಉರುಳು ಸೇವೆ ಮಾಡುತ್ತಾ ಹರಕೆ ತೀರಿಸುವ ಪದ್ಧತಿಯನ್ನು ಮಡೆಸ್ನಾನ ಎಂದು ಕರೆಯಲಾಗುವುದು.

೩. ಮೂಲೆ ಮಡೆಸ್ನಾನದ ಹರಕೆಯು ಮೂಲೆ ಮೂಲೆಗಳಲ್ಲಿ ಉರುಳುತ್ತಾ ಸಲ್ಲಿಸುವ ಸೇವೆಯಾಗಿದೆ. ಚೌತಿ, ಪಂಚಮಿ, ಷಷ್ಠಿ(ಡಿಸೆಂಬರ್ ೨, ೩, ೪) ಈ ಮೂರು ದಿನಗಳಲ್ಲಿ ದೇವಸ್ಥಾನದ ಅಂಗಳದಲ್ಲಿ ಮಧ್ಯಾಹ್ನ ಸಾವಿರಾರು ಭಕ್ತರು ಉಂಡ ಎಲೆಗಲ ಮೇಲೆ ಮಡೆಸ್ನಾನ ಮಡುತ್ತಾರೆ. ಇದು ಇಲ್ಲಿ ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಈ ಹರಕೆ ಸೇವೆ ಸಲ್ಲಿಸುವುದರಿಂದ ಚರ್ಮರೋಗ ನಿವಾರಣೆಯಾಗುತ್ತದೆ ಎಂಬ ನಂಬಿಕೆಯಿದೆ.

## ಕುಕ್ಕೆ ಮತ್ತು ಲಿಂಗದ ಐತಿಹ್ಯ

ಕುಕ್ಕೆ ಮತ್ತು ಲಿಂಗ ಎಂಬ ಮಲೆಕುಡಿಯರು ಕುಮಾರ ಪರ್ವತದ ಕಡೆಗೆ ಬೇಟೆಗೆ ಹೋದಾಗ ಕಾಡಿಗೆ ಬೆಂಕಿ ಬಿದ್ದಿತ್ತು. ಒಂದು ಬಿದಿರಿನ ಪೊದೆಯಲ್ಲಿ ಸರ್ಪವೊಂದು ಬೆಂಕಿಯ ತಾಪವನ್ನು ತಾಳಲಾರದೆ ಮರಣ ಸಂಕಟದಲ್ಲಿ ಒದ್ದಾಡುತ್ತಾ ತನ್ನನ್ನು ರಕ್ಷಿಸಿ ಎಂದು ಹೇಳುತ್ತಿತ್ತು. ಇದನ್ನು ಕಂಡ ಕುಕ್ಕೆ ಮತ್ತು ಲಿಂಗರು ತಮ್ಮಲ್ಲಿದ್ದ ಬಿಲ್ಲಿನ ತುದಿಯನ್ನು ಸರ್ಪದ ಹತ್ತಿರ ತಂದಾಗ ಸರ್ಪವು ಅದರ ಮೇಲೆ ಬಂದು ಆಸರೆ ಪಡೆಯಿತು. ಇದನ್ನು ಇಬ್ಬರು ಹೊತ್ತುಕೊಂಡು ಬರುತ್ತಿರುವಾಗ ಸರ್ಪವು ಹೀಗೆಂದಿತು, ನಾನು ನಿಮಗೆ ಎಲ್ಲಿ ತಲುಪುವಾಗ ಬಾರವಾಗುತ್ತೇನೋ ಅಲ್ಲಿ ನನ್ನನ್ನು ಬಿಡಿ ಎಂದು ಹೇಳುತ್ತಾ ಸಾಗುತ್ತಿರುವಾಗ, ಅವರು ಈಗಿನ ಆದಿಸುಬ್ರಹ್ಮಣ್ಯದ ಬಳಿ ತಲುಪುವಾಗ ಅವರಿಗೆ ತಿ ಭಾರವಾಗುತ್ತದೆ. ಆದ್ದರಿಂದ ಕುಕ್ಕೆ ಮತ್ತು ಲಿಂಗರು ಸರ್ಪವನ್ನು ಅಲ್ಲೇ ಬಿಡುತ್ತಾರೆ. ಆಗ ಸರ್ಪವು ಕುಕ್ಕ ಮತ್ತು ಲಿಂಗರಲ್ಲಿ ನೀವು ನನ್ನನ್ನು ಪೂಜಿಸುತ್ತಾ ಬನ್ನಿ ಎಂದು ಹೇಳಿತು. ಹೀಗೆ ಅವರು ಪೂಜೆಪುರಸ್ಕಾರಗಳನ್ನು ಮಾಡುತ್ತಿರಲು ಒಂದು ದಿನ ಪೂಜೆಯನ್ನು ಮಾಡಲು ಅವರಿಗೆ ಕಷ್ಟವಾದಾಗ ಕೊಕ್ಕಡದಿಂದ ಒಬ್ಬ ಬ್ರಾಹ್ಮಣ ಕುಟುಂಬಸ್ಥರೇ ವಂಶಪರಾಂಪರ್ಯ ವಾಗಿ ಸುಬ್ರಹ್ಮಣ್ಯನನ್ನು ಪೂಜಿಸುತ್ತಾ ಬಂದಿದ್ದಾರೆ .ಆದರೆ ಈಗಿನ ಆಡಳಿತ ವ್ಯವಸ್ಥೆಯಲ್ಲಿ ಎಡ ಪಡಿತ್ತಾಯ ಕುಟುಂಬದವರನ್ನು ತಿರಸ್ಕರಿಸಿ ಸುಬ್ರಹ್ಮಣ್ಯ ದೇವಳದ ಸಂಪ್ರದಾಯ ಮುರಿದು ಯಾವುದೇ ಹಿನ್ನೆಲೆ ಇಲ್ಲದ ಜೋಗಿತ್ತಾಯರೆಂಬ ಅರ್ಚಕರು ಪೂಜೆಯನ್ನು ಈಗ ಮಾಡುತ್ತಿದ್ದಾರೆ. ಸುಬ್ರಹ್ಮಣ್ಯ ದೇವಸ್ಥಾನದ ಮೊದಲ ಜಾತ್ರೆ ಶ್ರೀಕೃಷ್ಣ ಜನ್ಮಾಷ್ಠಮಿಯಂದು ದೇವರ ಮೂರ್ತಿ ಪ್ರಥಮಬಾರಿಗೆ ಪಲ್ಲಕ್ಕಿ ಮೂಲಕ ರಥಬೀದಿಗೆ ಬರುತ್ತದೆ. ಶ್ರೀಕೃಷ್ಣ ದೇವರ ವಿಗ್ರಹವನ್ನು ದೇವಳದ ಒಳಗಡೆ ಪ್ರತಿಷ್ಠಾಪಿಸಿ ವಿಟ್ಲಪಿಂಡಿಯಂದು ಅದನ್ನು ಮೊಸರು ಕುಡಿಕೆ ಉತ್ಸವದ ಮೂಲಕ ಕಾಶಿಕಟ್ಟೆಯವರಗೆ ತರಲಾಗುವುದು. ಸುಬ್ರಹ್ಮಣ್ಯದ ಮಲೆಕುಡಿಯ ಜನಾಂಗಕ್ಕೂ ಶ್ರೀಕೃಷ್ಣ ಜನ್ಮಾಷ್ಟಮಿ– ವಿಟ್ಲಪಿಂಡಿಗೂ ವಿಶೇಷ ನಂಟು. ಕೃಷ್ಣ ದೇವರ ವಿಗ್ರಹವನ್ನು ಅಚ್ಚರು ಪಲ್ಲಕ್ಕಿಯಲ್ಲಿರಿಸಿದರೆ ಪಲ್ಲಕ್ಕಿಯನ್ನು ಮಲೆಕುಡಿಯರು ಹೊತ್ತುಕೊಂಡು ರಥಬೀದಿಯಲ್ಲಿ ಸಾಗಿ ಕಾಶಿಕಟ್ಟೆಯವರೆಗೆ ಬರುತ್ತಾರೆ. ಬೇರೆಲ್ಲಾ ಜಾತ್ರೆಗಳಲ್ಲಿ ಪಲ್ಲಕ್ಕಿಯನ್ನು ವೈದಿಕರು ಹೊತ್ತು ಸಾಗಿದರೆ ಶ್ರೀಕೃಷ್ಣ ಜನ್ಮಾಷ್ಟಮಿ ಯಂದು ಮಲೆಕುಡಿಯರಿಗೆ ವಿಶೇಷ ಪ್ರಾಶಸ್ತ್ಯ. ಕುಕ್ಕೆ ಶ್ರೀ ಸುಬ್ರಹ್ಮಣ್ಯದಲ್ಲಿ ಕಾರ್ತಿಕ ಮಾಸದ ಬಹುಳ ದ್ವಾದಶಿಯಿಂದ ಮಾರ್ಗಶಿರ ಶುದ್ದ ದ್ವಾದಶಿಯವರೆಗೆ ನಡೆಯಲಿರುವ ಜಾತ್ರೆಗೆ ಮಲೆಕುಡಿಯ ರಿಂದ ಚಿತ್ರದ ತೇರುಗಳು ಸಿದ್ದಗೊಳ್ಳಲು ಜನುವಾರು ಹುಣ್ಣಿಮೆಯ ದಿನ ರಥಕ್ಕೆ ಉಪಯೋಗಿಸುವ ಕಂಬಗಳಿಗೆ ಪೂಜೆ ಸಲ್ಲಿಸಿದ ಬಳಿಕ ದೇವಾಲಯದವರು ರಥ ನಿರ್ಮಾಣಕ್ಕೆ ಮಲೆಕುಡಿಯರನ್ನು ಆಹ್ವಾನಿಸುತ್ತಾರೆ. ಅವರಿಗೆ ಪ್ರಸಾದ ನೀಡುತ್ತಾರೆ. ಬಳಿಕ ಸುಮಾರು ೩೦–೪೦ ಮಲೆಕುಡಿಯರು ೨೦ ದಿನ ಅವಿರತ ಶ್ರಮದಿಂದ ತೇರುಗಳನ್ನು ಜಾತ್ರೆಗೆ ಸಿದ್ದಗೊಳಿಸಲುಬೇಕಾದ ಚಿತ್ರ ಬಿದಿರುಗಳನ್ನು ಕುಮಾರಪರ್ವತಗಳ ದಟ್ಟಾರಣ್ಯದಿಂದ ತಲೆಹೊರೆಯಲ್ಲಿ ತಂದು, ಕೊಟ್ಟಿಗೆಯಿಂದ ನಿಶ್ಚಿತ ಮೂಹೂರ್ತ ದಲ್ಲಿ ರಥ ಹೊರತಂದು ಮರದ ಅಟ್ಟಳಿಕೆ ಹಾಕಿ 'ಲ'ರ ಆಕಾರದಲ್ಲಿ ಚಿತ್ರವನ್ನು ಸುರುಳಿ ಸುತ್ತಿ ಕೊಂಡು ಹೊರಗೆ ಬಿದಿರಿನ ಸಲಾಕೆಯಿಂದ ಗೂಡು ಕಟ್ಟಿ ನಂತರ ಇದನ್ನು ಬಣ್ಣದ ಪತಾಕೆಗಳಿಂದ ಶೃಂಗರಿಸುತ್ತಾರೆ. ಈ ರೀತಿ ಮಲೆಕುಡಿಯ ಜನಾಂಗದವರಿಗೆ ಚಿತ್ತ– ಬಿದಿರುಗಳಿಂದ ರಥ ಕಟ್ಟುವ ಕಲೆ ಕರತಲಾಮಲಕವಾಗಿ ಸಿದ್ದಿಯಾಗಿದೆ.

ಇಂತಹ ವೈಶಿಷ್ಟ್ಯ ಪೂರ್ಣವಾದ ಹಿನ್ನೆಲೆಯುಳ್ಳ ಜನಾಂಗದವರಲ್ಲಿ ಸಂಘಟನೆಯು ಬೆಳೆಯ ಲಾರಂಬಿಸಿದೆ. ಬೆಳೆದು ನಿಲ್ಲುವ ಸಂಘಕ್ಕೆ ಸಹಕಾರಿಯಾಗಿ ಮಲೆಕುಡಿಯ ಸಮುದಾಯವು ಸಹಕರಿಸ ಬೇಕಾಗಿದೆ, ಈ ಜನಾಂಗದ ಜನರು ಸರಕಾರಿ ನೌಕರಿ, ಇನ್ನಿತರ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವುದು ಬಹಳ ವಿರಳವಾಗಿರುವುದಲ್ಲದೆ ಈ ಜನರಲ್ಲಿ ಅನೇಕರು ವಿದ್ಯಾವಂತರು ಇದ್ದರೂ ರಾಜಕೀಯ ವ್ಯವಸ್ಥೆಯಲ್ಲಿ ಹಾಗೂ ಆರ್ಥಿಕವ್ಯವಸ್ಥೆಯಲ್ಲಿ ಬಹಳಷ್ಟು ನೊಂದಿರುವ ಇವರನ್ನು ಸರಕಾರವು ಗುರುತಿಸಿ ಇವರಿಗೆ ಸೂಕ್ತವಾದ ಸರಕರದ ಯಾವುದೇ ಇಲಾಖೆಯಲ್ಲಿ ಮಿಸಲಾತಿಯಲ್ಲಿ ಅನ್ಯಾಯವಾಗದೆ ಇವರಿಗೆ ಕೆಲಸವನ್ನು ಕೊಡುವಲ್ಲಿ ಸರಕಾರವು ಗಮನಿಸಬೇಕಾಗಿದೆ.

ಅನಾದಿಕಾಲದಿಂದಲೂ ಸುಬ್ರಹ್ಮಣ್ಯ ದೇವಾಲಯಕ್ಕೂ ಮಲೆಕುಡಿಯರಿಗೂ ಇರುವ ನಂಟು ನಿನ್ನೆ ಮೊನ್ನೆಯದಲ್ಲ. ಪ್ರತಿಯೊಂದು ದೇವಳದ ಕಾರ್ಯಕ್ಕೂ ಮಲೆಕುಡಿಯರು ಬೇಕೆ ಬೇಕು. ದಿನಕೂಲಿ ನೌಕರರಾಗಿ ದುಡಿಯುವ ಇವರುಗೆ ನೌಕರಿಯಲ್ಲಿ ಭಡ್ತಿ, ಕಾಯಮತಿ ಹಾಗೂ ದೇವಳದ ಆಡಳಿತ ಮಂಡಳಿ ಸದಸ್ಯತ್ವಕ್ಕೆ ಅಗತ್ಯವಾಗಿ ಆದ್ಯತೆ ನೀಡಬೇಕೆಂಬುದು ಮಲೆಕುಡಿಯರ ಸಂಘದ ಬೇಡಿಕೆಯಾಗಿದೆ.

**ಮಕರಸಂಕ್ರಾಂತಿಯಲ್ಲಿ ಸುಬ್ರಮಣ್ಯದ ಮಲೆಕುಡಿಯರ ಕುಕ್ಕೆಲಿಂಗ ದೇವರ ಜಾತ್ರೆ**

ಸುಬ್ರಹ್ಮಣ್ಯ ದೇವಸ್ಥಾನದ ಸುತ್ತ ಮುತ್ತಲಿನ ಪರಿಸರದಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯದವರಿಗೆ ಮಕರಸಂಕ್ರಾಂತಿಯಲ್ಲಿ ಇವರ ಆರಾಧ್ಯ ದೈವ ಕುಕ್ಕೆಲಿಂಗ ದೇವರ ಉತ್ಸವವನ್ನು ಆಚರಿಸುತ್ತಾರೆ. ಇದನ್ನು ಇವರು ಕುಕ್ಕೆಲಿಂಗ ಜಾತ್ರೆ ಎಂತಲೇ ಕರೆಯುತ್ತಾರೆ. ಸುಮಾರು ೧೫ ವರ್ಷಗಳಿಂದ ಈ ದೇವಸ್ಥಾನದಲ್ಲಿ ಭದ್ರತಾ ಸಿಬ್ಬಂಧಿಯಾಗಿ ಕೆಲಸ ಮಾಡುತ್ತಿರುವ ಮಲೆಕುಡಿಯ ಸಮುದಾಯದ ನಾಗೇಶ್ ಹೇಳುವ ಪ್ರಕಾರ 'ಕುಕ್ಕೆಲಿಂಗ ನಮ್ಮ ದೇವರು, ನಮಗೆ ಸೇರಿದ ದೇವರು. ಆದ್ದರಿಂದ ಸಂಕ್ರಾಂತಿಯಲ್ಲಿ ನಾವು ಕುಕ್ಕೆಲಿಂಗ ದೇವರ ಜಾತ್ರೆ ಮಾಡುತ್ತೇವೆ. ಆ ದಿನ ದೇವಸ್ಥಾನದ ದೇವರ ಉತ್ಸವ ನಡೆಯುತ್ತದೆ. ನಾವು ನಮ್ಮ ಜನಾಂಗದ ಲೆಕ್ಕದಲ್ಲಿ ೨೫೦ ರೂ. ಕೊಟ್ಟು ರಶೀದಿ ಮಾಡಿಸುತ್ತೇವೆ, ಪೂಜೆ ನಡೆಯುತ್ತದೆ, ರಾತ್ರಿ ೭.೩೦ ಗಂಟೆಗೆ ದೇವಸ್ಥಾನದ ಮುಂದೆ ರಂಗಪೂಜೆ ನಡೆಯುತ್ತದೆ. ಇದು ನಮ್ಮ ಲೆಕ್ಕದ ಪೂಜೆ ಆದ ನಂತರ ದೇವರ ಉತ್ಸವ ನಡೆಯುತ್ತದೆ, ಭೂತ ಬರುತ್ತದೆ. ರಾತ್ರಿಲ್ಲಿ ಮಹಾಪೂಜೆ, ದೇವಸ್ಥಾನದ ಒಳಗೆ ದೇವರ ಪಲ್ಲಕಿ ಉತ್ಸವ, ಬಂಡಿ ಉತ್ಸವ ನಡೆಯುತ್ತದೆ. ನಾಳೆ ಅಂದರೆ ದಿನಾಂಕ ೧೪.೦೧.೨೦೦೯ರಂದು ಬೆಳಿಗ್ಗೆ ೭.೩೦ ಗಂಟೆಗೆ ಶಿವ ಮತ್ತು ಸುಬ್ರಹ್ಮಣ್ಯ ಎರಡು ದೇವರನ್ನು ಪಂಚಮಿ ರಥದಲ್ಲಿ ಕೂರಿಸಿ ರಥೋತ್ಸವ ನಡೆಯುತ್ತದೆ. ಈ ರಥ ರಥಬೀದಿಯಲ್ಲಿ ಸಾಗಿ ಬರುತ್ತದೆ. ನಂತರ ಸವಾರಿ ಮಂಟಪದಲ್ಲಿ ದೇವರಿಗೆ ಕಟ್ಟೆಪೂಜೆ ನಡೆಯುತ್ತದೆ. ಈ ದಿನ ಬೆಳಿಗ್ಗೆ ಇಲ್ಲಿನ ಪರವರು ಭೂತದ ವೇಷ ಹಾಕಿ ಉತ್ಸವದ ಮುಂದೆ ಸಾಗುತ್ತದೆ' ಎಂಬ ವಿವರಣೆ ನೀಡಿದರು. ಈ ಉತ್ಸವದಲ್ಲಿ ಮಲೆಕುಡಿಯ ಜನಾಂಗದವರು ತಮ್ಮ ದಿನನಿತ್ಯದ ಸೇವಾಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ದೇವರ ಉತ್ಸವದಲ್ಲಿ ಬೆಳ್ಳಿಯಿಂದ ತಯಾರಿಸಿದ ಮಕರಾಭರಣ, ಎಲೆ ಆಕಾರದಲ್ಲಿರುವುದು, ಮಧ್ಯದಲ್ಲಿ ಗಂಟೆ ಇರುತ್ತದೆ. ೧೦ ಅಡಿ ಉದ್ದದ ಇದನ್ನು ಬಣ್ಣ ಹಾಕಿದ ಅಲಂಕಾರಿಕ ಕೋಲಿಗೆ ಕಟ್ಟಿ ದೇವರ ಮುಂದೆ ಸಾಗುತ್ತಾರೆ. ಬೆಳ್ಳಿ ಕತ್ತಿಗೆ, ಬೆಳ್ಳಿ ಕೊಡೆ, ಬಟ್ಟೆ ಕೊಡೆಗಳನ್ನು ಹಿಡಿದು ಸಾಗುವವರು ಇದೇ ಜನಾಂಗದವರಾಗಿದ್ದಾರೆ. ಪೂಜೆಗೆ ಭರಾಣಿ ಹಿಡಿದು, ಸೀಯಾಳ ತಂದು ಕೊಡುವುದು, ಪಂಚ

ದೀವಟಿಕೆಯನ್ನು ಹಿಡಿದು ಸಾಗುವುದು, ರಥದ ಸಿದ್ಧತೆ, ಏಣಿ ಸಾಗಿಸುವುದು, ಬೆಳ್ಳಿ ಬಿರುದಾವಳಿ, ಬಾವುಟ, ಪಟಗಳನ್ನು, ಗ್ಯಾಸ್‌ಲೈಟ್‌ಗಳನ್ನು ಹಿಡಿದು ಇವರು ಉತ್ಸವದಲ್ಲಿ ಸಾಗುತ್ತಾರೆ. ಇದು ಇವರ ಪ್ರತಿ ವರ್ಷದ ಜಾತ್ರೆಯಲ್ಲಿ ಮಾಡುವ ಸೇವಾ ಕಾರ್ಯಗಳಾಗಿವೆ. ಇದು ಇವರ ಬದ್ಧತೆ ಜೊತೆಗೆ ಇವರ ಜೀವನದ ಆಧಾರ ಮೂಲವೂ ಆಗಿದೆ.

**ಕುಮಾರಪರ್ವತದ ಬೆತ್ತದ ಪ್ರಸಾದ**

ಸುಬ್ರಮಣ್ಯದಿಂದ ೧೨ ಕಿ.ಮೀ. ದೂರವಿರುವ ಕುಮಾರ ಪರ್ವತವು ಇಲ್ಲಿ ಪ್ರಸಿದ್ಧವಾಗಿ ಒಂದು ಪೌರಾಣಿಕ ಹಿನ್ನಲೆಯುಳ್ಳ ಪರ್ವತ ಪ್ರದೇಶವಾಗಿದೆ. ಇದನ್ನು ಸುಬ್ರಮಣ್ಯ ಬೆಟ್ಟ ಸುಬ್ರಹ್ಮಣ್ಯ ಕಾಡು ಎಂತಲೇ ಕರೆಯುತ್ತಾರೆ. ಇಲ್ಲಿ ಬದುರು, ಬೆತ್ತ ಹೇರಳವಾಗಿ ಬೆಳೆದಿರುತ್ತದೆ. ಇಲ್ಲಿಂದಲೇ ಮಲೆಕುಡಿಯ ಸಮುದಾಯದವರು ಪ್ರತಿ ವರ್ಷ ರಥದ ನಿರ್ಮಾಣಕ್ಕೆ ಬೇಕಾದ ಬೆತ್ತವನ್ನು ಕಡಿದು ತಲೆ ಮೇಲೆ ಹೊತ್ತು ತರುತ್ತಾರೆ. ಸಣ್ಣ ಪಂಚಮಿ ರಥಕ್ಕೆ ಎರಡು ೧೨ ಅಡಿ ಉದ್ದದ ಕೈಯಲ್ಲಿ ಹಿಡಿಯುವಷ್ಟು ದಪ್ಪದ ಬೆತ್ತ ಬಳಸುತ್ತಾರೆ. ದೊಡ್ಡ ರಥ ಬ್ರಹ್ಮರಥಕ್ಕೆ ಎಂಟು ಬೆತ್ತವನ್ನು ಬಳಸುತ್ತಾರೆ. ಈ ಎರಡೂ ರಥಗಳಿಗೆ ರಥ ಎಳೆಯುವುದಕ್ಕೆ ಈ ಬೆತ್ತಗಳೇ ಆಧಾರ, ಇಲ್ಲಿ ಹಗ್ಗವನ್ನು ಬಳಸುವುದಿಲ್ಲ. ಈ ಬೆತ್ತ ಸೇರಿದಂತೆ ಒಟ್ಟು ೨೧ ಬೆತ್ತಗಳನ್ನು ಮಲೆಕುಡಿಯರು ತರುತ್ತಾರೆ. ಉಳಿದಂತೆ ರಥದ ಮೇಲಿನ ಅಲಂಕಾರಕ್ಕೆ ಬೇಕಾದ ಬೆತ್ತವನ್ನು ಸಹ ಈ ಕುಮಾರ ಪರ್ವತದಿಂದಲೇ ತಂದು ರಥ ಕಟ್ಟುತ್ತಾರೆ. ಈ ಬ್ರಹ್ಮರಥೋತ್ಸವದ ಬಳಿಕ, ಬ್ರಹ್ಮರಥಕ್ಕೆ ಎಳೆಯಲು ಕಟ್ಟಿದ ಈ ಬೆತ್ತವನ್ನು ಇಲ್ಲಿನ ಭಕ್ತರಿಗೆ ಕತ್ತರಿಸಿ ಕೊಡಲಾಗುತ್ತದೆ. ಈ ಬ್ರಹ್ಮ ರಥೋತ್ಸವದಲ್ಲಿ ರಥ ಎಳೆಯಲು ಬಳಸಿದ ಬೆತ್ತವನ್ನು ಭಕ್ತರು ಕೈಯಲ್ಲಿ ಹಿಡಿಯುತ್ತಾರೆ. ಅವರು ತಮ್ಮ ತಮ್ಮ ಕೈಯಲ್ಲಿ ಹಿಡಿದುಕೊಂಡಿರುವ ಬೆತ್ತವನ್ನು ಅವರಿಗೆ ಕತ್ತರಿಸಿ ಕೊಡಲಾಗುತ್ತದೆ. ಪ್ರಸಾದ ರೂಪದಲ್ಲಿ ಈ ಬೆತ್ತವನ್ನು ಪಡೆದ ಭಕ್ತರು ಇದನ್ನು ತಮ್ಮ ಮನೆಗಳಲ್ಲಿ ಇಟ್ಟುಕೊಂಡು ಪೂಜಿಸುತ್ತಾರೆ. ಇದರಿಂದ ಸರ್ಪ ನಾಗದೋಷ ನಿವಾರಣೆಯಾಗುತ್ತದೆ. ಹಾಗೂ ನಾಗನ ಕಾಟ ಇರುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಒಂದು ವೇಳೆ ಹಾವು ಕಚ್ಚಿದರೆ ಈ ಬೆತ್ತವನ್ನು ಲೇಪನ ಮಾಡಿದರೆ ಕಡಿದ ಹಾವಿನ ವಿಷ ಮೇಲೇರದೆ ನಿವಾರಣೆಯಾಗುತ್ತದೆ ಎಂಬ ಅಚಲ ನಂಬಿಕೆ ಇಲ್ಲಿನ ಭಕ್ತರಲ್ಲಿದೆ. ಮಲೆಕುಡಿಯರು ಈ ಬೆತ್ತವನ್ನು ಕತ್ತರಿಸಿ ಕೊಡುವ ದೃಶ್ಯ ರಥೋತ್ಸವದ ನಂತರ ಕಂಡುಬರುತ್ತದೆ. ಯಾರು ಎಷ್ಟು ತಮ್ಮ ಕೈಯಲ್ಲಿ ಬೆತ್ತ ಹಿಡಿಯುತ್ತಾರೋ ಅಷ್ಟು ಬೆತ್ತವನ್ನು ಅವರಿಗೇ ಕತ್ತರಿಸಿ ಕೊಡುತ್ತಾರೆ. ಇದಕ್ಕೆ ಪ್ರತಿಯಾಗಿ ಭಕ್ತರು ತಮ್ಮ ಶಕ್ತಿಯನುಸಾರ ದಕ್ಷಿಣೆಯನ್ನು ಕಾಣಿಕೆಯಾಗಿ ನೀಡುತ್ತಿರುವುದು ಕಂಡುಬರುತ್ತದೆ. ಕುಮಾರ ಪರ್ವತವು ಚಾರಣಪ್ರಿಯರಿಗೆ ಒಂದು ಪ್ರವಾಸಿ ತಾಣವಾಗಿದೆ. ನವೆಂಬರ್‌ನಿಂದ ಮೇ ವರೆಗೆ ಇಲ್ಲಿ ಚಾರಣ ನಡೆಯುತ್ತದೆ. ಈ ಪರ್ವತದ ಮಧ್ಯೆ 'ಗಿರಿಗದ್ದೆ' ಎಂಬ ಪ್ರದೇಶವಿದೆ. ಇಲ್ಲಿರುವ ಒಂದು ರೈತಾಪಿ ಕೃಷಿಕರ ತೋಟದ ಮೂಲೆಯಲ್ಲಿ ಚಾರಣಕ್ಕೆ ಬಂದವರಿಗೆ ಊಟ, ತಂಪು ಪಾನೀಯದ ಉಪಚಾರ ದೊರೆಯುತ್ತದೆ. ಇಲ್ಲಿರುವ ಕುಮಾರ ಪರ್ವತಮುಖಿಯಲ್ಲಿ ಮಲೆಕುಡಿಯ ಜನಾಂಗದವರು ನೆಲೆಸಿದ್ದಾರೆ. ಈ ಭಾಗದ ಮಲೆಕುಡಿಯರ ಆಶ್ರಯ ತಾಣವೇ ಈ ಕುಮಾರ ಪರ್ವತವಾಗಿದೆ. ಅರಣ್ಯವಾಸಿಗಳಾದ ಮಲೆಕುಡಿಯರ ಬದುಕು ಈ ಕುಮಾರ ಪರ್ವತದೊಂದಿಗೆ ಬೆಸರಯಲ್ಪಟ್ಟಿದೆ. ಇಲ್ಲಿನ ಪರ್ವತದ ನೆಲವನ್ನು ಕೈಯಲ್ಲಿ ಅಗೆದರೆ ನಾಲ್ಕುಮುಖದ, ಆರುಮುಖದ ಲಿಂಗವನ್ನು ಹೋಲುವ

ನಯವಾದ ಕಲ್ಲುಗಳು ದೊರೆಯುತ್ತವೆ. ಇವುಗಳನ್ನು ಕುಮಾರಲಿಂಗ ಎಂದು ಕರೆಯಲಾಗುತ್ತದೆ. ಅರಣ್ಯ ಇಲಾಖೆಯವರು ಪ್ರವಾಸಿಗಳಿಗೆ ಚಾರಣಪ್ರಿಯರಿಗೆ ಪ್ರಕೃತಿಯ ಸವಿಯನ್ನು ಸವಿತಲು ಗೋಪುರವನ್ನು ನಿರ್ಮಿಸಿದ್ದಾರೆ. ಇದನ್ನು 'ಬಸಿಲೆ ಬ್ಯೂಟಿ ಸ್ಪಾಟ್' ಎಂದು ಕರೆಯುತ್ತಾರೆ. ಇಲ್ಲಿ ನಿಂತು ನೋಡಿದರೆ ಪ್ರಕೃತಿಯ ರಮಣೀಯ ದೃಶ್ಯ ಕಾಣುತ್ತದೆ. ಈ ಪರ್ವತಶ್ರೇಣಿಗಳಿಂದ ಹರಿದು ಬರುವ ಜಲಧಾರೆಯೇ ಕುಮಾರಧಾರ ನದಿಯಾಗಿದೆ.

ಈ ಮಡೆಸ್ನಾನವು ಮಡಿಯಲ್ಲಿ ವ್ರತಾಚರಣೆಯೊಂದಿಗೆ ನಡೆಯುತ್ತದೆ. ಕೆಲವು ಭಕ್ತರಿಗೆ ಇದು ತುಂಬ ಕಷ್ಟಕರವಾದ ಸ್ಥಿತಿ ಕಂಡುಬರುತ್ತದೆ. ಅದರಲ್ಲಿ ಮಹಿಳೆಯರು, ಅಶಕ್ತರ ಸ್ಥಿತಿ ತುಂಬಾ ಕರುಣಾಜನಕವಾಗಿರುತ್ತದೆ. ಇವರು ಈ ಸೇವೆಯನ್ನು ಮುಂದುವರೆಸಿಕೊಂಡು ಬರಲು ಬಲವಾದ ಹಿನ್ನಲೆ ಮತ್ತು ಕಾರಣವು ಇದೆ. ಸುಬ್ರಹ್ಮಣ್ಯದ ಮಲೆಕುಡಿಯರಿಗೂ ಮತ್ತು ಇಲ್ಲಿನ ದೇವಸ್ಥಾನಕ್ಕೂ ನಿರಂತರವಾದ ಸಂಬಂಧವಿದೆ ಮತ್ತು ಇವರು ಈ ದೇವಸ್ಥಾನವನ್ನು ಅವಲಂಬಿಸಿದ್ದಾರೆ. ಇದಕ್ಕೆ ಇವರು ಕೊಡುವ ಕಾರಣವೆಂದರೆ ಇಲ್ಲಿರುವ ಕುಕ್ಕೆಲಿಂಗ ದೇವರನ್ನು ತಂದವರು ನಾವು ಇದು ನಮ್ಮ ದೇವರು ಇದಕ್ಕೆ ಕುಕ್ಕೆ ಸುಬ್ರಮಣ್ಯ ದೇವಸ್ಥಾನದ ಪಶ್ಚಿಮಾಭಿಮುಖವಾದ ಮುಖ್ಯ ದ್ವಾರದಲ್ಲಿ ಪ್ರವೇಶವಾದ ಕೂಡಲೇ ಎದುರಿನಲ್ಲಿ ಒಂದು ಸಣ್ಣ ಗುಡಿ ಕಂಡುಬರುತ್ತದೆ. ಇದಕ್ಕೆ ಕುಕ್ಕೆಲಿಂಗೇಶ್ವರ ಎಂಬ ನಾಮಫಲಕವಿದೆ. ನಂತರ ಮಕರ ಸಂಕ್ರಾಂತಿಯ ಉತ್ಸವದಲ್ಲಿ ಪ್ರತಿ ವರ್ಷ ಇದಕ್ಕೆ ಇವರು ವಿಶೇಷವಾದ ಪೂಜೆಯನ್ನು ಸಲ್ಲಿಸುತ್ತಾರೆ. ಮತ್ತು ಸುಬ್ರಮಣ್ಯದ ರಥೋತ್ಸವದ ಏಕಾದಶಿಯ ದಿನ ಗರ್ಭಗುಡಿಯಲ್ಲಿರುವ ಆದಿಶೇಷ ವೃತ್ತದಿಂದ ಮೂರು ಹಿಡಿ ಮಣ್ಣನ್ನು ತೆಗೆಯುತ್ತಾರೆ. ಇದಕ್ಕೆ ಮೃತ್ತಿಕೆ ಮಣ್ಣು ಎಂದು ಕರೆಯುತ್ತಾರೆ. ಈ ಮೂರು ಹಿಡಿ ಮಣ್ಣಿನಲ್ಲಿ ಮೊದಲ ಹಿಡಿ ಮಣ್ಣನ್ನು ಕುಡಿಯರಿಗೆ ಎಂದು ಕೊಡುವ ಪದ್ಧತಿ ಇದೆ. ಎರಡನೆ ಹಿಡಿ ಮಣ್ಣನ್ನು ಬ್ರಾಹ್ಮಣರಿಗೆ ಮೂರನೆ ಹಿಡಿ ಮಣ್ಣನ್ನು ಯಾತ್ರಾರ್ಥಿಗಳೆಂದು ಕೊಡುತ್ತಾರೆ. ಇದರಿಂದ ಇಲ್ಲಿ ಮಲೆಕುಡಿಯರಿಗೆ ಮೊದಲ ಆದ್ಯತೆ ಇರುವುದು ಕಂಡು ಬರುತ್ತದೆ. ಈ ಮೃತ್ತಿಕೆ ಪ್ರಸಾದವನ್ನು ಬೇರೆಯವರು ಹಣ ತೆಗೆದುಕೊಳ್ಳಬೇಕು. ಇವರು ಕೊಡುವ ಮತ್ತೊಂದು ಕಾರಣವೆಂದರೆ ಇಲ್ಲಿ ದೇವರನ್ನು ಒಯ್ಯುವ ಪಲ್ಲಕ್ಕಿಯು ಬಿಲ್ಲಿನಾಕಾರದಲ್ಲಿರುತ್ತದೆ. ಅದರ ಕೆಳಭಾಗಕ್ಕೆ ತೊಟ್ಟಿಲಿನಂತೆ ಕಾಣುವ ಒಂದು ಆಸನವನ್ನು ತೂಗಿ ಬಿಟ್ಟಿರುತ್ತಾರೆ. ಅದನ್ನು ಹೊರುವವರು ಮತ್ತು ಊರಿಕೊಳ್ಳುವ ಆಧಾರ ಕೋಲುಗಳು 'ಕೂವೆ' ದಂಟಿನಂತೆ ಅಲಂಕೃತವಾಗಿರುತ್ತವೆ. ಇಲ್ಲಿರುವ ಬಿಲ್ಲಿನ ಆಕಾರದ ರಚನೆ ಇದು ಮಲೆಕುಡಿಯರ ಸಂಕೇತವು ಆಗಿದೆ. ನಂತರ ಜಾತ್ರೆಯ ಮೊದಲನೇ ದಿನ ಇಲ್ಲಿಯ ಮಲೆಕುಡಿಯ ರೆಲ್ಲರೂ ಸ್ನಾನ ಮಾಡಲು ಎಣ್ಣೆ ಮತ್ತು ಹೊಸ ಸಮವಸ್ತ್ರಗಳನ್ನು ದೇವಸ್ಥಾನದ ವತಿಯಿಂದ ನೀಡಲಾಗುತ್ತದೆ. ಅವರಿಗೆಂದೇ ಪ್ರತ್ಯೇಕವಾದ ಊಟದ ವ್ಯವಸ್ಥೆ ಮಾಡಿರುತ್ತಾರೆ. ಒಂದು ತಿಂಗಳ ಕಾಲ ದೇವಸ್ಥಾನದ ರಥ ಸಿದ್ಧತೆಯಲ್ಲಿ ಕೆಲಸ ಮಾಡಿದ ಇವರಿಗೆ ಕೇವಲ ಒಂದು ರೂಪಾಯಿ ಒಂದು ಸೇರು ಅಕ್ಕಿ ಮಾತ್ರ ಕೊಡುತ್ತಾರೆ. ನಂತರ ಜಾತ್ರೆಯಲ್ಲಿ ಈ ಹೊಸ ಬಟ್ಟೆಗಳನ್ನು ಕೊಡುವ ಪದ್ಧತಿ ಇದೆ. ಈ ಎಲ್ಲಾ ಬದ್ಧತೆಗಳು ಮತ್ತು ಸಂಬಂಧಗಳು ಇವರ ಜೊತೆ ಜೊತೆಗೆ ಬೆಳೆದುಕೊಂಡು ಬಂದಿವೆ.

ಇಲ್ಲಿ ಇರುವ ಕುಕ್ಕೆ ಲಿಂಗ ದೇವರ ವಾರಸುದಾರರು ಮತ್ತು ಹೊಣೆಗಾರರು ಇಲ್ಲಿನ ಮಲೆಕುಡಿಯ ರಾಗಿದ್ದಾರೆ. ಪ್ರತಿದಿನ ಬೆಳಿಗ್ಗೆಯಿಂದ ಸಂಜೆಯವರೆಗೆ ಬ್ರಹ್ಮ ರಥೋತ್ಸವದ ಆರಂಭದಿಂದ ಕೊನೆಯವರೆಗೆ

ಇವರನ್ನು ಹೊರತುಪಡಿಸಿ ಯಾವುದೇ ಕಾರ್ಯ ನಡೆಯುವುದಿಲ್ಲ. ಈ ಹರಕೆಯು ಭಕ್ತಿ ಸೇವೆಯ ಪ್ರತೀಕವಾಗಿದ್ದರೂ ಸಹ ಇಲ್ಲಿ ಸಂಪ್ರದಾಯದ ಜೊತೆಗೆ ಮೌಢ್ಯತೆಯ ಕರಿನೆರಳು ವ್ಯಕ್ತವಾಗುತ್ತದೆ. ಇದು ಜನರಲ್ಲಿರುವ ಮೌಢ್ಯತೆಯ ಪರಮಾವಧಿಯಾಗಿದ್ದು, ಇದು ಅವೈಜ್ಞಾನಿಕ ಎಂಬುದು ಸ್ಪಷ್ಟವಾಗುತ್ತದೆ. ಈ ಪದ್ಧತಿ ನಿಷೇಧವಾಗಬೇಕು ಬದಲಾದ ಕಾಲಘಟ್ಟಕನುಗುಣವಾಗಿ ಮಲೆಕುಡಿಯ ಸಮುದಾಯವೂ ಸಹ ಈ ಪದ್ಧತಿಯಿಂದ ದೂರ ಉಳಿಯಬೇಕು ಮತ್ತು ಸುಧಾರಣೆ ಯಾಗಬೇಕು. ಹಿಂದುಳಿದ ವರ್ಗಗಳ ಜಾಗೃತಿ ವೇದಿಕೆಯ ಅಧ್ಯಕ್ಷರಾದ ಶಿವರಾಂರವರ ಹೋರಾಟ ಮತ್ತು ಇವರ ಮೇಲೆ ನಡೆದ ಹಲ್ಲೆ ಪ್ರಯತ್ನಗಳು, ಈಗಾಗಲೇ ಪರ ವಿರೋಧಗಳ ನಡುವೆ ಮಡೆಸ್ನಾನ ಪದ್ಧತಿಯನ್ನು ನಿಶೇಷಿಧಿಸಲು ಸರ್ಕಾರ ತೆರೆಮರೆಯ ಪ್ರಯತ್ನ ನಡೆಸುತ್ತಿದೆ. ಒಂದು ಕಡೆ ಸರ್ಕಾರದ ಪ್ರಯತ್ನ ಇನ್ನೊಂದು ಕಡೆ ಈ ಪ್ರಕರಣ ನ್ಯಾಯಾಲಯದ ಮೆಟ್ಟಿಲೇರಿದೆ. ಈ ಕಾಯಿದೆಯ ಜಾರಿಯಾದಲ್ಲಿ ಮುಂದಿನ ಸಾಧಕ ಬಾಧಕಗಳು ಈ ಸಮುದಾಯದ ಸವಾಲುಗಳ ಪಟ್ಟಿಯಲ್ಲಿ ಒಂದಾಗಿ ಪರಿಗಣಿತವಾಗುತ್ತವೆ. ಈ ಸಮುದಾಯದವರು ಇದನ್ನು ವಿರೋಧಿಸಲು ಇವರು ಈ ದೇವಸ್ಥಾನದೊಂದಿಗಿರುವ ಬದ್ಧತೆ ಮತ್ತು ಜೀವನ ಆಧಾರದ ಮೂಲ ಪರಂಪರೆಯೇ ಮುಖ್ಯ ಕಾರಣವಾಗಿದೆ. ಪ್ರಗತಿಪರ ಚಳುವಳಿ, ಚಿಂತಕರ ವಿರೋಧಗಳು ಆಧುನಿಕ ಬದುಕಿನ ಬದಲಾವಣೆಯ ದಿಕ್ಸೂಚಿಗಳಾಗಿವೆ. ಇದನ್ನು ಒಪ್ಪಿಕೊಂಡು ಉಳಿದೆಲ್ಲ ವ್ಯವಸ್ಥೆಗಳನ್ನು ಮುಂದುವರೆಸಿ ಕೊಂಡು ಹೋಗುವುದು ಮಲೆಕುಡಿಯ ಸಮುದಾಯದ ಬದಲಾವಣೆಯನ್ನು ಸೂಚಿಸುತ್ತದೆ.

ಕಾಡಿನಿಂದ ನಾಡಿಗೆ ಬಂದ ಇವರಿಗೆ ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುವ ತವಕ ಒಂದು ಕಡೆಯಾದರೆ ಮಡೆ ಸ್ನಾನ ನಿಷೇಧದ ನಂತರ ಎಲ್ಲಿ ನಮ್ಮ ಪರಂಪರೆ ಮತ್ತು ನಮ್ಮ ಹಕ್ಕು ಬಾಧ್ಯತೆಗಳು ಮತ್ತು ದೇವಸ್ಥಾನದ ಮೇಲಿರುವ ನಮ್ಮ ಬದ್ಧತೆ ತಪ್ಪಿ ನಮ್ಮ ಬದುಕಿಗೆ ಗಂಡಾಂತರ ಬರುತ್ತದೆಯೋ ಎಂಬ ಆತಂಕ ಇವರದ್ದಾಗಿದೆ. ಬುಡಕಟ್ಟು ಸಮುದಾಯದ ವರ್ತಮಾನದ ಸವಾಲು ಮತ್ತು ಸಮಸ್ಯೆಗಳಲ್ಲಿ ಇದು ಒಂದಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನದಿಂದ ಒಕ್ಕಲೆಬ್ಬಿಸುವಿಕೆಯಿಂದಾದ ಅತಂತ್ರ ಸ್ಥಿತಿ ಒಂದು ಕಡೆಯಾದರೆ ಇಲ್ಲಿಂದ ಹೊರ ಹಾಕುವಂತಹ ಭಯದ ವಾತಾವರಣ ಇವರಿಗಿದೆ. ಇವರಿಗಾಗಿ ಇಲ್ಲಿ ಭೂಮಿ ಇಲ್ಲ. ಇರುವ ಅಲ್ಪಸ್ವಲ್ಪ ಭೂಮಿ ದೇವಸ್ಥಾನದ ಸ್ವಾಧೀನದಲ್ಲಿದೆ. ಮತ್ತು ಇವರಿಗೆ ಇದುವರೆಗೂ ಭೂ ದಾಖಲೆಗಳು ದೊರೆತಿಲ್ಲ. ಇಲ್ಲಿರುವವರೆಲ್ಲರೂ ದೇವಸ್ಥಾನದ ಒಂದಲ್ಲ ಒಂದು ಕೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇಲ್ಲಿನ ದೇವಸ್ಥಾನ ಸರ್ಕಾರದ ಮುಜರಾಯಿ ಇಲಾಖೆಯ ಅಧೀನದಲ್ಲಿದ್ದು, ಇಲ್ಲಿ ಕೆಲಸ ಮಾಡುವವರಿಗೆ ಖಾಯಂ ಆಗುತ್ತದೆ ಎಂಬ ಆಸೆಯು ಸಹ ಮುಖ್ಯ ಕಾರಣವಾಗಿರುತ್ತದೆ. ಇದನ್ನು ನಂಬಿಕೊಂಡು ಬಹಳಷ್ಟು ಜನರು ದೇವಸ್ಥಾನದ ಕೆಲಸ ಮಾಡಿಕೊಂಡು ಬರುತ್ತಿದ್ದಾರೆ. ಈಗ ಇದರಿಂದ ನಮಗೆಲ್ಲ ತೊಂದರೆಯಾಗುತ್ತದೆಯೋ ಎಂಬ ಭಯ ಇವರದ್ದಾಗಿದೆ. ಒಂದು ವೇಳೆ ಈ ಸಂಬಂಧಗಳೆಲ್ಲವೂ ನಿಂತು ಹೋದರೆ ಇದಕ್ಕೆ ಪರ್ಯಾಯವಾಗಿ ಯಾವ ಕ್ರಮಗಳನ್ನು ಕೈಗೊಳ್ಳಬೇಕು ಮುಂದಿನ ದಾರಿ ಗತಿ ಏನು ಎಂಬೆಲ್ಲ ಪ್ರಶ್ನೆಗಳು ಇವರಲ್ಲಿ ಕಾಡುತ್ತವೆ.

ಮಡೆಸ್ನಾನ ಪದ್ಧತಿಯನ್ನು ನಿಷೇಧಿಸಬೇಕು. ಸರ್ಕಾರ ಮಡೆಸ್ನಾನವನ್ನು ನಿಷೇಧ ಮಾಡಿ ಆದೇಶ ಮಾಡಿದ ನಂತರ ಇವರಿಗೆ ಇಲ್ಲಿನ ಮೂಲ ಸಂಸ್ಕೃತಿ ಸಂಬಂಧಗಳನ್ನು ಮತ್ತು ಬದುಕಿನ ಆಧಾರವಾದ

ಇವರ ಪಾರಂಪಾರಿಕ ಆದಾಯದ ಮೂಲಗಳನ್ನು ಉಳಿಸಿಕೊಂಡು ಹೋಗಲು ಅವಕಾಶ ಮಾಡಿಕೊಡಬೇಕು. ಇದೆಲ್ಲದಕ್ಕಿಂತಲೂ ಮುಖ್ಯವಾಗಿ ದೇವಸ್ಥಾನದಲ್ಲಿ ಕೆಲಸ ಮಾಡುವ ಎಲ್ಲರನ್ನೂ ಖಾಯಂ ಮಾಡಬೇಕು.ಇವರ ಉದ್ಯೋಗಕ್ಕೆ ಭದ್ರತೆಯನ್ನು ಕೊಡವುದು ಸೂಕ್ತ ಇದರಿಂದ ಇವರಲ್ಲಿರುವ ಭಯ ಆತಂಕ ದೂರವಾಗಲು ಸಾಧ್ಯವಾಗುತ್ತದೆ. ಇವರು ವಾಸವಾಗಿರುವ ಜಾಗ ಮತ್ತು ಭೂಮಿಗಳಿಗೆ ಇದುವರೆಗೂ ದಾಖಲೆಗಳನ್ನು ಕೊಟ್ಟಿಲ್ಲ. ಸರ್ಕಾರ ಈ ಜಾಗ ಮತ್ತು ಭೂಮಿಗಳಿಗೆ ಹಕ್ಕು ಪತ್ರ ದಾಖಲೆಗಳನ್ನು ಕೊಡಬೇಕು. ಮೂಲ ಭೂತ ಸೌಲಭ್ಯಗಳನ್ನು ಒದಗಿಸಬೇಕು. ಇಲ್ಲಿನ ಮಕ್ಕಳ ಶಿಕ್ಷಣ ಅರ್ಧಕ್ಕೆ ನಿಲ್ಲುವ ಸ್ಥಿತಿ ಹೆಚ್ಚಿದೆ. ಇದನ್ನು ಗಮನಹರಿಸಿ ಶಿಕ್ಷಣ ಮುಂದುವರೆಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕು. ಇಲ್ಲಿನ ಅರಣ್ಯ ಉತ್ಪನ್ನ ಸಂಗ್ರಹದ ಗುತ್ತಿಗೆ ಲ್ಯಾಂಪ್ಸ್ ಮೂಲಕ ಬೇರೆ ಗುತ್ತಿಗೆದಾರರ ಪಾಲಾಗುತ್ತಿದೆ. ಈ ಒಂದು ಅವಕಾಶವನ್ನು ಇಲ್ಲಿನ ಮಲೆಕುಡಿಯರಿಗೆ ನೀಡಿದ್ದಲ್ಲಿ ಕಾಡುತ್ಪತ್ತಿ ಸಂಗ್ರಹದ ಮೂಲಕ ಜೀವನ ಸಾಗಿಸಲು ಸಾಧ್ಯವಾಗುತ್ತದೆ. ಇವರಿಗೆ ಸರ್ಕಾರ ಆರ್ಥಿಕ ಸಹಾಯ ಮಾಡಿ, ಸಾಲ ಸೌಲಭ್ಯಗಳನ್ನು ಒದಗಿಸಬೇಕು.

## ಟಿಪ್ಪಣಿಗಳು

೧. ಪ್ರಭಾಕರ ಎ.ಎಸ್(ಸಂ)., **ಬುಡಕಟ್ಟು ಅಧ್ಯಯನ–೪,** 'ರಾಷ್ಟ್ರೀಯ ಆದಿವಾಸಿ ನೀತಿ: ಒಂದು ಪ್ರತಿಕ್ರಿಯೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೩೯–೧೪೨, ೨೦೦೫.

೨. ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ವಾರ್ಷಿಕ ಕ್ರಿಯಾ ಯೋಜನೆ, ೨೦೧೦–೧೧.

೩. ಪ್ರಭಾಕರ ಎ.ಎಸ್(ಸಂ)., **ಆದಿವಾಸಿ ಆಖ್ಯಾನ,** 'ಕರ್ನಾಟಕದ ಆದಿವಾಸಿ ರೈತ ಹೋರಾಟಗಳ ಸ್ವರೂಪ', ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ಪುಟ. ೩೮೨, ೨೦೦೬.

೪. ಅದೇ ಪುಟ. ೩೮೩, ೨೦೦೬.

೫. ಅದೇ ಪುಟ. ೩೮೩, ೨೦೦೬.

೬. ಅದೇ ಪುಟ. ೩೮೩, ೨೦೦೬.

೭. ಅದೇ ಪುಟ. ೩೮೪, ೨೦೦೬.

೮. ಅದೇ ಪುಟ. ೩೯೨, ೨೦೦೬.

೯. ಅದೇ ಪುಟ. ೩೮೩, ೨೦೦೬.

೧೦. ಕಪಿಲ್‌ಮೋಹನ್(ಸಂ)., **ಪೊಲಿ ಕೆನರಾ ೨೦೦,** 'ಚಳುವಳಿಯ ನೆನಪುಗಳು', ಮಂಗಳೂರು ಜಿಲ್ಲಾಡಳಿತ, ಮಂಗಳೂರು, ಪುಟ. ೬೯, ೨೦೦೦.

೧೧. ಅದೇ ಪುಟ. ೬೯, ೨೦೦೬.

೧೨. ಅದೇ ಪುಟ. ೭೧, ೨೦೦೬.

೧೩. ಭಾಗ್ಯಲಕ್ಷ್ಮಿ ಎಂ(ಸಂ)., **ಗಣಿಗಾರಿಕೆ ಮತ್ತು ಅಭಿವೃದ್ಧಿ,** ಅನಿತರತ್ನಂ, 'ಗಣಿಗಾರಿಕೆ ಜಾಗತಿಕ ಪ್ರಕ್ರಿಯೆ' ಸಖಿ ಪ್ರಕಾಶನ, ಹೊಸಪೇಟೆ, ಪುಟ. ೯, ೨೦೦೭.

೧೪. ತುಂಗಭದ್ರ ಹೋರಾಟ ಒಕ್ಕೂಟ, ಕುದುರೆಮುಖ ಗಣಿಗಾರಿಕೆ ಪಂಚಮಹಾ ಸುಳ್ಳುಗಳು, ಪುಟ. ೩, ೨೦೦೨.

೧೫. ಶಿವರಾಮಯ್ಯ., **ಕುದುರೆಮುಖ,** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ಪುಟ.೬೦, ೨೦೦೩.

೧೬. ಶಂಕರನಾರಾಯಣ ಎಸ್.ಪಿ., **ಸ್ವಾತಂತ್ರ ಗಂಗೆಯ ಸಾವಿರ ತೊರೆಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪುಟ. ೧೫೫. ೧೯೯೧.

೧೭. ಪ್ರಭಾಕರ ಎ.ಎಸ್(ಸಂ)., **ಬುಡಕಟ್ಟು ಅಧ್ಯಯನ,** ಉಮೇಶ್ ಸೂರಮ್ಮನಹಳ್ಳಿ, 'ಕುದುರೆಮುಖ ಏನದು ಕಾನನದ ಕಿಚ್ಚು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೨೬, ೨೦೦೪.

೧೮. ಅದೇ ಪುಟ. ೧೧೬, ೨೦೦೪.

೧೯. ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳ ಮಾನ್ಯ ಮಾಡುವ) ಅಧಿನಿಯಮ, ೨೦೦೬(೨೦೦೭) ಮತ್ತು ನಿಯಮ, ೨೦೦೮.

೨೦. ಅದೇ ೨೦೦೮.

೨೧. ವಸಂತ ಕೊಕ್ಕಡ, ಪುರುಷಕೂಟ, ಕೊಕ್ಕಡ.

೨೨. ನಾರಾಯಣ ರೈ ಕುಕ್ಕುವಳ್ಳಿ, ಶಿಕ್ಷಕರು, ಸ.ಪ.ಪೂ. ಕಾಲೇಜು, ಪುತ್ತೂರು.

೨೩. ಕಪಿಲ್‌ಮೋಹನ್(ಸಂ)., **ಪೊಲಿ ಕೆನರಾ ೨೦೦,** ವೀರೇಂದ್ರ ಹೆಗ್ಗಡೆ ಡಿ, 'ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು', ಪುಟ.೨೯೫-೩೦೨, ೨೦೦೦.

೨೪. ಅದೇ ಪುಟ. ೨೯೯, ೨೦೦೦.

೨೫. ಅದೇ ಪುಟ. ೩೦೦, ೨೦೦೦.

# ಅಧ್ಯಾಯ ಐದು

## ವರ್ತಮಾನದ ಸಾಮಾಜಿಕ, ಆರ್ಥಿಕ ಸ್ಥಿತಿಗಳು ಮತ್ತು ಸವಾಲುಗಳು

೫.೧. ಸಾಮಾಜಿಕ ಅನನ್ಯತೆ
೫.೨. ಸಮುದಾಯಕ ಅನನ್ಯತೆಯ ತೊಂದರೆ
೫.೩. ಭೂಮಿ ಸಮಸ್ಯೆ
೫.೪. ಸ್ಥಳಾಂತರ ಸಮಸ್ಯೆ
೫.೫. ನಿರ್ವಸಿತ-ನಿರಾಶ್ರಿತರ ಸಮಸ್ಯೆ
೫.೬. ಕಾನೂನು ಸಮಸ್ಯೆ
೫.೭. ರಾಜಕೀಯ ಪರಾಧೀನತೆ-ಪ್ರಾತಿನಿಧ್ಯ ಸಮಸ್ಯೆ
೫.೮. ನಕ್ಸಲ್ ಹೋರಾಟದ ಪ್ರದೇಶಗಳ ಸಮಸ್ಯೆ ಮತ್ತು ಸವಾಲುಗಳು

## ವರ್ತಮಾನದ ಸಾಮಾಜಿಕ, ಆರ್ಥಿಕ ಸ್ಥಿತಿಗಳು ಮತ್ತು ಸವಾಲುಗಳು

ಮಲೆಕುಡಿಯ ಸಮುದಾಯದ ವರ್ತಮಾನದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಇವರ ಬದುಕಿನ ಸವಾಲುಗಳಾಗಿವೆ. ಬೆಳ್ತಂಗಡಿ ತಾಲೂಕು ನೆರಿಯಾ ಗ್ರಾಮದ ಕೋಲೋಡಿಯಲ್ಲಿ ವಾಸವಾಗಿರುವ ಎಲ್ಯಣ್ಣ ಕೆ. ತಂದೆ ಕೆ. ಮುದರ ಹೆಬ್ರಿಯ ಸರಕಾರಿ ಪದವಿ ಕಾಲೇಜಿನಲ್ಲಿ ಬಿ.ಎ. ಪದವಿಯನ್ನು ಮುಗಿಸಿ ಈಗ ತನ್ನ ತೋಟದಲ್ಲಿ ಕೃಷಿ ಮಾಡಿಕೊಂಡಿದ್ದಾರೆ. ತಮ್ಮ ಮಲೆಕುಡಿಯ ಸಮುದಾಯದ ಕುರಿತು ಸಂಘಟನಾಶಕ್ತಿ ಇದೆ. ಮಲೆಕುಡಿಯ ಸಂಘದಲ್ಲಿ ಸಂಘಟನಾ ಕಾರ್ಯದರ್ಶಿಯಾಗಿರುವ ಎಲ್ಯಣ್ಣ ಕುದುರೇಮುಖರಾಷ್ಟ್ರೀಯ ಉದ್ಯಾನವನ ವಾಸಿಗಳ ಹಕ್ಕು ಸಂರಕ್ಷಣಾ ಸಮಿತಿಯಲ್ಲಿದ್ದಾರೆ. ಎಲ್ಯಣ್ಣ ಹೇಳುವ ಪ್ರಕಾರ ಮಲೆಕುಡಿಯರ ವರ್ತಮಾನದ ಸ್ಥಿತಿಗತಿ ಸಮಸ್ಯೆಗಳೆಂದರೆ, ನಮ್ಮ ಜನಾಂಗ ಸಮುದಾಯದಲ್ಲಿ ಬೇರೆ ಬೇರೆ ಹೆಸರುಗಳಿವೆ, ಶಿರ್ಲಾದಿಂದ ಕುಂದಾಪುರದವರೆಗೆ ಗೌಡ ಎಂದು ಕರೆಯುತ್ತಾರೆ. ಇತರ ಕಡೆ ಬೇರೆ ಇದೆ. ನಮ್ಮ ಸಂಸ್ಕೃತಿ, ಜೀವನ, ಪರಂಪರೆ, ಸಂಬಂಧಗಳಲ್ಲಿ ವ್ಯತ್ಯಾಸವಿಲ್ಲ. ಎಲ್ಲವೂ ಒಂದೇ ಇರುವಾಗ ಈ ಭಿನ್ನತೆ ಏಕೆ? ಇದು ಹೋಗಬೇಕು, ಒಂದೇ ಹೆಸರು ಇರಬೇಕು ಎನ್ನುತ್ತಾರೆ. ಈ ಸಮುದಾಯದವರನ್ನು ಗುರುತಿಸುವುದರಲ್ಲಿರುವ ಮಾನದಂಡ ಸಹ ಬೇರೆ ಬೇರೆ ರೀತಿಯಲ್ಲಿದೆ. ಇದು ಸರಿಯಲ್ಲ. ಅಂದರೆ ನಮ್ಮನ್ನು ಒಂದೇ ಹೆಸರಿನಲ್ಲಿ ಗುರುತಿಸಬೇಕು ಎನ್ನುತ್ತಾರೆ. ಧರ್ಮಸ್ಥಳದಲ್ಲಿ ನಮ್ಮನ್ನು ಮಲೆಕುಡಿಯರು ಎಂದು ಕರೆಯುವುದಿಲ್ಲ, ಹಿಂದಿನ ಕಾಲದಿಂದ ಇಲ್ಲಿನ ಈ ಮನೆತನದಲ್ಲಿ ಬರ್ಕೆ ಎಂದು ಕರೆಯುತ್ತಾರೆ. ಈ ಬರ್ಕೆಯವರು ಹಿಂದೆ ಮಾಡುತ್ತಿದ್ದ ಕುಮರಿ ಬೆಳೆ ಬೆಳಸುತ್ತಾರೆ ಜೊತೆಗೆ ದೇವರ ಸೇವೆ ಅಂದರೆ ಉತ್ಸವದಲ್ಲಿ ಆರತಿ, ಧ್ವಜ, ಪತಾಕೆ, ಛತ್ರಿ, ಚಾಮರ ಹಿಡಿಯುವುದು, ದೇವರ ಪೂಜೆ, ಉತ್ಸವಕ್ಕೆ ಸಲಕರಣೆಗಳನ್ನು ಒದಗಿಸುವುದು ಇತ್ಯಾದಿ. ನೆರಿಯಾದಲ್ಲಿರುವ ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ನಿಶಾನೆ ಹಿಡಿಯುವುದು, ಪೂಜೆಗೆ ನಿತ್ಯ ಪರಿಕರಗಳನ್ನು ಒದಗಿಸುವುದು, ಧ್ವಜ ಹಿಡಿಯುವುದು, ಭಂಡಾರ ಹೊರುವುದು ಈ ಜನಾಂಗದವರ ಕೆಲಸ. ಇಲ್ಲಿ ತೇರು ಕಟ್ಟುವುದಿಲ್ಲ ಎಂದು ಎಲ್ಯಣ್ಣ ಹೇಳುತ್ತಾರೆ. ಸಮುದಾಯದ ಅಭಿವೃದ್ಧಿ ಕುರಿತು ಇದುವರೆಗೆ ಅಂಥ ಪ್ರಯತ್ನ, ಹೋರಾಟಗಳ ಮುಂಚೂಣಿಯಲ್ಲಿರುವ ಎಲ್ಯಣ್ಣ, ನೆರಿಯಾದ ಭೂಮಾಲಿಕ ಹೆಬ್ಬಾರರ ಹಿಡಿತದಲ್ಲಿದ್ದ

ಅವರ ಬಾಗಿಲು ತೆರೆಸಲು ಮಾಡಿದ ಹೋರಾಟದ ಚಿತ್ರಣವನ್ನು ಬಿಚ್ಚಿಡುತ್ತಾರೆ. ಈಗ ಈ ತೋಟದ ಬಾಗಿಲು ನಾವು ಓಡಾಡುವಂತಾಗಿದೆ ತೊಂದರೆ ಇಲ್ಲ ಎನ್ನುತ್ತಾರೆ. ಇಲ್ಲಿ ನಮಗೆ ಆಗಿರುವ ದೊಡ್ಡ ತೊಂದರೆ ಎಂದರೆ:

೧. ಭೂಮಾಲೀಕರಿಂದ ಅಂದರೆ ಪ್ಲಾಂಟರ್ಸ್‌ನಿಂದ

೨. ಈಗ ಇರುವ ಪ್ಲಾಂಟರ್ಸ್ ಆ್ಯಕ್ಟ್ ೧೯೫೬

೩. ಒಕ್ಕಲೆಬ್ಬಿಸುತ್ತಿರುವುದು

ನಮಗೆ ಅರಣ್ಯ ಕಾಯಿದೆಗಿಂತ ದೊಡ್ಡ ಅಪಾಯಕಾರಿಯಾಗಿರುವುದು ಈ ಪ್ಲಾಂಟರ್ಸ್ ಕಾಯಿದೆ ೧೯೫೬ ಎಂದು ಎಲ್ಯಣ್ಣ ಹೇಳುತ್ತಾರೆ. ಸರ್ವೆ ನಂ.೧೪೬–೫೭Bಯಲ್ಲಿ ೮ ಸಾವಿರ ಎಕರೆ ಭೂಮಿಯಿದೆ. ಇದರಲ್ಲಿ ೧೧೫ ಎಕರೆ ಭೂಮಿ ಭೂಸುಧಾರಣೆ ಕಾಯಿದೆ ಪ್ರಕಾರ ಮಂಜೂರಾಗಿ ಬಂದಿದೆ ಇದಕ್ಕೆ ಆರ್.ಟಿ.ಸಿ. ಇದೆ. ಈ ಕುರಿತು ವಿವಾದ ಸರಕಾರ ಮತ್ತು ಇಲ್ಲಿನ ಪ್ಲಾಂಟರ್ಸ್ ನಡುವೆ ಈಗಲೂ ನಡೆಯುತ್ತಿದೆ. ಎಂದು ಎಲ್ಯಣ್ಣ ಹೇಳುತ್ತಾರೆ. ಸರ್ವೆ ನಂ.೧೪೬ರಲ್ಲಿನ ೫೭ ನಲ್ಲಿರುವ ಸಾವಿರ ಎಕರೆ ಭೂಮಿಯ ವ್ಯಾಪ್ತಿಯಲ್ಲಿ ಬಾಂಜಾರು ಮಲೆ, ಕೋಲೋಡಿ, ಅಂಬಟೆ ಮಲೆ, ಪ್ರದೇಶಗಳು ಬರುತ್ತವೆ. ಈ ಪ್ರದೇಶವು ಅರಣ್ಯ ಕಾಯಿದೆ ವ್ಯಾಪ್ತಿಗೆ ಬರುವುದಿಲ್ಲ. ಇಲ್ಲಿ ಪ್ಲಾಂಟರ್ಸ್ ಕಾಯಿದೆ ೧೯೫೬ ಇದೆ, ಇದು ಇಲ್ಲಿನ ಜನರಿಗೆ ಅಡ್ಡಿ ಮಾಡುತ್ತಿದೆ. ಇಲ್ಲಿರುವ ದೊಡ್ಡ ಪ್ರಮಾಣದ ಪ್ಲಾಂಟೇಶನ್ ಇಲ್ಲಿನವರಿಗೆ ತೊಂದರೆ ಮಾಡುತ್ತಿದೆ. ನಾವೂರಿನ ಪ್ರದೇಶವು ಅರಣ್ಯ ಕಾಯಿದೆ ವ್ಯಾಪ್ತಿಗೆ ಬರುತ್ತದೆ. ಇಲ್ಲಿನ ಆರು ಕುಟುಂಬಗಳನ್ನು ಮಾತ್ರ ಒಕ್ಕಲೆಬ್ಬಿಸುತ್ತಿದ್ದಾರೆ. ಇವರು ತುಂಬಾ ಗ್ರಾಮೀಣ ಪ್ರದೇಶದಲ್ಲಿದ್ದಾರೆ, ಇವರಿಗೆ ಇಲ್ಲಿ ಯಾವುದೇ ಸೌಲಭ್ಯಗಳನ್ನು ಒದಗಿಸಲಾಗುತ್ತಿಲ್ಲ. ಆದ್ಧರಿಂದ ಇವರನ್ನು ಒಕ್ಕಲೆಬ್ಬಿಸುವ ಪ್ರಯತ್ನಕ್ಕೆ ಕೈ ಹಾಕಿದ್ದಾರೆ. ಇವರಲ್ಲಿ ಯಾರಿಗೆ ಸರಿಯಾದ ದಾಖಲೆಗಳಿವೆಯೋ ಅವರಿಗೆ ಮಾತ್ರ ಪರಿಹಾರ ಸಿಗುತ್ತದೆ. ದಾಖಲೆಗಳು ಇಲ್ಲದವರಿಗೆ ಪರಿಹಾರ ಅನ್ವಯವಾಗುವುದಿಲ್ಲ. ದಾಖಲೆಗಳು ಇಲ್ಲದೇ ಇದ್ದು ಕೃಷಿ ಇದ್ದರೆ ಸಹಾನುಭೂತಿಯ ಪರಿಹಾರ ಸಿಗುತ್ತದಷ್ಟೇ ಎಂಬುದನ್ನು ಎಲ್ಯಣ್ಣ ಹೇಳುತ್ತಾರೆ. ಅರಣ್ಯ ಪ್ರದೇಶದ ವ್ಯಾಪ್ತಿಗೆ ಬರುವ ಕುಟುಂಬಗಳಲ್ಲಿ ಅರಣ್ಯ ಕಾಯಿದೆಗೆ ಒಳಪಡುವ ಕುಟುಂಬಗಳು ಅರಣ್ಯ ಇಲಾಖೆಯ ತೊಂದರೆಗೆ ಒಳಗಾಗುತ್ತಿದ್ದಾರೆ. ಆದರೆ ಇಲ್ಲಿ ಖಾಸಗಿ ಭೂಮಾಲಿಕರು ಹಾಗೂ ಸರಕಾರದ ನಡುವೆ ಯುದ್ಧ ನಡೆಯುತ್ತಿದೆ. ಈ ಖಾಸಗಿಯವರು ಸರಕಾರ ಮತ್ತು ರಾಜಕಾರಣಿಗಳ ಮೇಲೆ ಒತ್ತಡ ಹಾಕುತ್ತರೆ. ಈಗ ಈ ಖಾಸಗಿಯವರು ನಮಗೆ ತೊಂದರೆ ಕೊಡುತ್ತಾರೆ ಇದರಿಂದಾಗಿ ಇಲ್ಲಿ ಯಾವುದೇ ಅಭಿವೃದ್ಧಿ, ರಸ್ತೆ, ನೀರು, ಬೆಳಕು ಮುಂತಾದ ಸೌಲಭ್ಯಗಳು ಆಗುತ್ತಿಲ್ಲ ಎನ್ನುತ್ತಾರೆ. ಈ ಭೂಮಿ ಹಕ್ಕು ಕುರಿತು ವಿವಾದ ಇದೆ. ಈ ವಿವಾದ ಇರುವ ಭೂಮಿಯನ್ನು ಸರಕಾರ ವಶಕ್ಕೆ ತೆಗೆದುಕೊಂಡು ಇಲ್ಲಿನ ನಿವಾಸಗಳಿಗೆ ಹಂಚಬೇಕು ಎಂಬ ಬೇಡಿಕೆ ಎಲ್ಯಣ್ಣರವದ್ದಾಗಿದೆ.

ಇಲ್ಲಿ ಈ ಪ್ರದೇಶದಲ್ಲಿರುವ ನಮಗೆ ಶಿಕ್ಷಣ ಸೌಲಭ್ಯದ ಕುರಿತು ಹೇಳಬೇಕೆಂದರೆ. ಇಲ್ಲಿ ಕೇವಲ ಆಶ್ರಯ ಶಾಲೆಗಳಾದ ಗಿರಿಜನ ವಸತಿ ನಿಲಯಗಳು ಮಾತ್ರ ಇವೆ. ಇಲ್ಲಿ ಶಿಕ್ಷಣ ಮುಗಿಸಿ ಮುಂದಕ್ಕೆ ಶಿಕ್ಷಣ ಮುಂದುವರೆಸಲು ಹೋದರೆ ಈ ವಸತಿ ಸೌಲಭ್ಯ ಇಲ್ಲ. ನೀವೇ ನೋಡಿ. ಈ ಎಸ್.ಸಿ/ಎಸ್.ಟಿ

ಗಳಿಗೆ ಮೆಟ್ರಿಕ್ ನಂತರದ ಹಾಸ್ಟಲ್ ಸೌಲಭ್ಯ ಎಲ್ಲಿದೆ ಅಂತ ಎಲ್ಯಣ್ಣ ಹೇಳುತ್ತಾರೆ. ಇದು ಸತ್ಯವೂ ಆಗಿದೆ. ದಕ್ಷಿಣಕನ್ನಡ ಜಿಲ್ಲೆಯ ಮಂಗಳೂರು ಸೇರಿದಂತೆ ಯಾವ ತಾಲೂಕಿನಲ್ಲಿಯೂ ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ ಸೌಲಭ್ಯ ಇರುವುದಿಲ್ಲ, ಕೇವಲ ಬಿಸಿಎಂ ಹಾಸ್ಟೆಲ್ ಮಾತ್ರ ಇದೆ. ತಾಲೂಕಿನಲ್ಲೇ ೧. ಧರ್ಮಸ್ಥಳ ೨. ನೆರಿಯಾ ೩. ಶಿಶಿಲ ೪. ನಾರಾವಿಯಲ್ಲಿ ಗಿರಿಜನ ವಿದ್ಯಾರ್ಥಿನಿಲಯಗಳಿವೆ. ಈ ವಿದ್ಯಾರ್ಥಿನಿಲಯಗಳ ಸ್ಥಿತಿಯನ್ನು ಅಲ್ಲಿ ಹೋಗಿ ನೋಡಿದರೆ ಗೊತ್ತಾಗುತ್ತದೆ. ಅಲ್ಲಿ ಪೂರ್ಣಕಾಲಿಕ ಸಿಬ್ಬಂದಿ ಇಲ್ಲ, ಅಡಿಗೆ ಮಾಡುವುದಕ್ಕೆ ಸಿಬ್ಬಂದಿಗಳಿಲ್ಲ. ಇನ್ನು ಸೌಚಾಲಯದ ಸ್ಥಿತಿಯನ್ನು ನೋಡಲೂ ಸಾಧ್ಯವೇ ಇಲ್ಲದಂತಾಗಿದೆ. ಇದು ನಮ್ಮ ಶಿಕ್ಷಣ ಸೌಲಭ್ಯದ ಸ್ಥಿತಿ ಎಂದು ಎಲ್ಯಣ್ಣ ಕಳವಳದಿಂದ ಹೇಳುತ್ತಾರೆ.

**೩.೧. ಸಾಮಾಜಿಕ ಅನನ್ಯತೆ**

ಮಲೆಕುಡಿಯ ಬುಡಕಟ್ಟು ಸಮುದಾಯ ತನ್ನನ್ನು ಗುರುತಿಸಿಕೊಳ್ಳಲು ಸಾಮಾಜಿಕವಾಗಿ ಹಲವಾರು ಸವಾಲುಗಳನ್ನು ಎದುರಿಸುತ್ತಿದೆ. ಈ ಪ್ರದೇಶದ ಮೂಲ ನಿವಾಸಿಗಳಾದ ಈ ಸಮುದಾಯಕ್ಕೆ ಸಾಮಾಜಿಕವಾಗಿ ಸ್ಥಾನ ಮಾನ ಗುರುತಿಸಿಕೊಳ್ಳುವಲ್ಲಿ ತೀವ್ರ ಪೈಪೋಟಿಯನ್ನು ಎದುರಿಸುವ ಸ್ಥಿತಿ ಇದೆ. ತಮ್ಮ ಮೂಲ ನೆಲೆಗಳಲ್ಲಿ ಭೂ ಒಡೆತನಕ್ಕಾಗಿ ನಡೆಸಿಕೊಂಡು ಬಂದ ಹೋರಾಟದ ಫಲವಾಗಿ ಭೂಸುಧಾರಣೆ ಕಾಯಿದೆ ಇವರಿಗೆ ಒಂದು ವರದಾನವಾಯಿತು. ಬಾಂಜಾರು ಮಲೆ, ಅಂಬಟಮಲೆ, ಇಳಿಮಲೆ ಮತ್ತು ಕೋಲೋಡಿ, ಶಿಶಿಲ, ಹಾಲಾಂಗಾಯ್‌ಗಳಲ್ಲಿ ಡಿಕ್ಲರೇಷನ್ ಮೂಲಕ ಭೂ ಒಡೆತನದ ಹಕ್ಕು ದೊರೆತಿದೆ. ಇವರು ಇಲ್ಲಿ ಸ್ಥಿರವಾಗಿ ನೆಲೆ ನಿಲ್ಲಲು ಮತ್ತು ಸಾಮಾಜಿಕ ಸ್ಥಾನಮಾನ ಹೊಂದಲು ಸಾಧ್ಯಾವಾಗಿದೆ. ಈ ಪ್ರದೇಶಗಳನ್ನು ಹೊರತುಪಡಿಸಿ ದಂತೆ ದಕ್ಷಿಣ ಕನ್ನಡ ಜಿಲ್ಲೆಯ ಉಳಿದ ಪ್ರದೇಶಗಳಲ್ಲಿ ವಾಸವಾಗಿರುವ ಈ ಸಮುದಾಯಕ್ಕೆ ಸಾಮಾಜಿಕವಾಗಿ ಗುರುತಿಸಿಕೊಳ್ಳುವ ಸ್ಥಿರತೆ ಇಲ್ಲದೇ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುವ ಇಲ್ಲವೇ ಸ್ಥಳಾಂತರಗೊಂಡು ಬದುಕುವ ಅನಿವಾರ್ಯತೆ ಇವರದ್ದಾಗಿದೆ. ಈ ಸಮುದಾಯದ ಅನನ್ಯತೆಯು ಇವರ ಸಾಮಾಜಿಕ ಜೀವನ ವಿಧಾನ ಆಹಾರ ಪದ್ಧತಿ ಕೃಷಿ ಉಡುಪು ಆಚರಣಾ ಪದ್ಧತಿಗಳು ಸಂಸ್ಕಾರಗಳು ಆಚರಣೆಗಳನ್ನು ಅವಲಂಬಿಸಿದೆ. ಇವು ಇವರ ಸಾಮಾಜಿಕ ಸ್ಥಾನ ಮಾನವನ್ನು ನಿರ್ಧರಿಸುತ್ತವೆ. ಇವರ ಸಾಮಾಜಿಕ ಅನನ್ಯತೆಯನ್ನು ನಿರ್ಧರಿಸುವ ಅಂಶಗಳೆಂದರೆ ಸಾಮಾಜಿಕ ಜೀವನ ಉಡುಪು ಭಾಷೆ ಆಹಾರ ಪದ್ಧತಿ ಕುಟುಂಬ ಪದ್ಧತಿ ವಿವಾಹ ಪದ್ಧತಿ ಸಂಸ್ಕಾರಗಳ, ಪ್ರತ್ಯೇಕವಾಸ, ವೃತ್ತಿ ಪರಂಪರೆ, ಸಾಮಾಜಿಕ ಸ್ಥಾನಮಾನ, ಸಾಮಾಜಿಕ ಅಂತರ, ಸರ್ಕಾರದ ಧೋರಣೆಗಳು, ನಕ್ಸಲ್ ಆರೋಪ ಮತ್ತು ಭದ್ರತೆಯು ಮಲೆಕುಡಿಯ ಸಮುದಾಯದವರು ಸಾಮಾಜಿಕವಾಗಿ ತಮ್ಮದೇ ಆದ ಸ್ಥಾನ ಮಾನವನ್ನು ಕಾಪಾಡಿಕೊಂಡು ಬಂದಿದ್ದಾರೆ. ಜೀತದಾಳುಗಳಾಗಿ, ಗೇಣಿದಾರರಾಗಿ, ಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಾ ಬಂದಿದ್ದಾರೆ. ಅಳಿಯ ಸಂತಾನ ಮಕ್ಕಳ ಸಂತಾನದ ಮೂಲಕ ಸಾಮಾಜಿಕವಾಗಿ ಸಂಪ್ರದಾಯಕವಾಗಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಜಾತಿಯ ಏಣಿ ಶ್ರೇಣಿಯಲ್ಲಿ ಸ್ಥಿಮಿತತೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಉಡುಪಿನಲ್ಲಿ ಹಿಂದೆ ಇವರು ತಮ್ಮದೇ ಆದ ವೈಶಿಷ್ಟತೆಯನ್ನು ಹೊಂದಿದ್ದರು. ನಾಲುಮಲೆಗಳಲ್ಲಿ ಗಂಡುಮಕ್ಕಳ ಶರ್ಟು, ಪಂಚೆ ಜೊತೆಗೆ ಕಿವಿಗೆ ಬೆಂಡೋಲೆ ಧರಿಸುತ್ತಿದ್ದರು. ತಲೆ ಹಿಂದೆ ಜುಟ್ಟು ಬಿಡುವ ಪದ್ಧತಿ ಇತ್ತು. ಬಾಂಜಾರುಮಲೆ ಹಳೆತಲೆಮಾರಿನವರಲ್ಲಿ ಈ ಉಡುಪು ಈಗಲೂ

ಕಂಡು ಬರುತ್ತದೆ. ಬಾಂಜಾರುಮಲೆಯ ಹೆಣ್ಣುಮಕ್ಕಳಲ್ಲಿ ಸೀರೆಗೆ ಗಂಟುಹಾಕಿ ಉಡುವ ಪದ್ಧತಿ ಕಂಡುಬರುತ್ತದೆ. ಕಿವಿಗೆ ಓಲೆ, ಮೂಗಿಗೆ ನತ್ತು, ಕೊರಳಿಗೆ ಮಣಿಸರ ಧರಿಸುವ ಮೂಲಕ ಇವರ ಉಡುಪಿನ ಪರಂಪರೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ಆದರೂ ಬದಲಾದ ಜೀವನಕ್ಕನುಗುಣವಾಗಿ ಇವರಲ್ಲಿಯೂ ತಮ್ಮ ಪಾರಂಪರಿಕ ಉಡುಪಿನ ಶೈಲಿ ಬದಲಾಗಿರುತ್ತದೆ. ಇತರೆ ಆದಿವಾಸಿ ಸಮುದಾಯಗಳಲ್ಲಿ ಕಂಡುಬರುವ ಉಡುಪು ಇವರಲ್ಲಿ ಈಗ ಕಂಡುಬರುತ್ತಿಲ್ಲ. ಇವರು ಮಾತನಾಡುವ ಭಾಷೆ ತುಳು ಆಗಿರುತ್ತದೆ. ನಾಲ್ಮಲೆಯವರಲ್ಲಿ ಹಳೆ ಸಾಂಪ್ರದಾಯಿಕ ತುಳು ಭಾಷೆ ಕಂಡು ಬರುತ್ತದೆ. ಇದು ಇತರೆಯವರು ಮಾತನಾಡುವ ತುಳುವಿಗಿಂತ ಭಿನ್ನವಾಗಿರುತ್ತದೆ. ಊರ್ಮಲೆಯವರು ಮಾತನಾಡುವ ತುಳು ಭಾಷೆಯು ತುಳು ನಾಡಿನ ಪರಂಪರೆಯ ಭಾಷೆಯಾಗಿದೆ. ಇದರಲ್ಲಿ ಏನು ಭಿನ್ನತೆ ಕಂಡುಬರುವುದಿಲ್ಲ ಒಟ್ಟಾಗಿ ಮಲೆಕುಡಿಯರು ಭಾಷೆ ತುಳು ಆಗಿರುತ್ತದೆ. ಇದು ಇವರ ಅನನ್ಯತೆಯನ್ನು ಸೂಚಿಸುತ್ತದೆ. ಈ ಸಮುದಾಯದ ಆಹಾರ ಪದ್ಧತಿಯು ಪ್ರಕೃತಿಯನ್ನಾಧರಿಸಿದ ತುಳುನಾಡಿನ ಪರಂಪರೆಯ ಆಹಾರ ಪದ್ಧತಿಯಾಗಿದೆ. ಗಂಜಿ ಊಟ ಇವರ ದಿನನಿತ್ಯದ ಸೇವನೆಯ ಆಹಾರವಾಗಿದೆ. ಅಲ್ಲದೆ ಆಯಾ ಕಾಲಮಾನಕ್ಕೆ ತಕ್ಕಂತೆ ಆಹಾರ ಪರಂಪರೆ ಇವರಲ್ಲಿ ಕಂಡುಬರುತ್ತದೆ. ಈ ಸಮುದಾಯದ ಕುಟುಂಬ ಪದ್ಧತಿಯು ಹಿಂದೆ ಅವಿಭಕ್ತ ಕುಟುಂಬವಾಗಿದ್ದು, ಈಗ ಇದು ಸರಳ ಹಾಗೂ ವಿಭಕ್ತ ಕುಟುಂಬ ಪದ್ಧತಿಯಾಗಿ ಪರಿವರ್ತನೆಯಾಗಿದೆ. ಅಳಿಯ ಕಟ್ಟು ಮತ್ತು ಮಕ್ಕಳಕಟ್ಟು ಕುಟುಂಬ ಪದ್ಧತಿಗಳು ಈ ಸಮುದಾಯದ ಪ್ರಮುಖ ಕುಟುಂಬ ಪದ್ಧತಿಗಳಾಗಿವೆ. ಇಲ್ಲಿ ವ್ಯತ್ಯಾಸಗಳಿದ್ದರೂ ಪುರುಷ ಪ್ರಾಧಾನ್ಯತೆಯ ಜೊತೆಗೆ ಮಹಿಳಾ ಸಹಭಾಗಿತ್ವ ಕಂಡುಬರುತ್ತದೆ. ಇದು ಇವರ ಸಾಮಾಜಿಕ ಅನನ್ಯತೆಯನ್ನು ಸೂಚಿಸುತ್ತದೆ ಈ ಸಮುದಾಯದಲ್ಲಿ ಹಿಂದೆ ಒಳಬಾಂಧವ್ಯ ಪದ್ಧತಿ ಪ್ರಧಾನವಾಗಿದ್ದರೂ, ಈಗ ಹೊರಬಾಂಧವ್ಯ ವಿವಾಹ ಪದ್ಧತಿಗೂ ಅವಕಾಶವಿದೆ. ಬರಿಗಳನ್ನಾಧರಿಸಿದ ರಕ್ತ ಸಂಬಂಧಗಳು ಇವರಲ್ಲೇರ್ಪಡುತ್ತವೆ. ಮಕ್ಕಳ ಸಂತಾನ ಮತ್ತು ಅಳಿಯ ಸಂತಾನಕ್ಕನುಗುಣವಾಗಿ ವಿವಾಹ ಸಂಬಂಧಗಳು ಏರ್ಪಡುತ್ತವೆ. ಈ ಎರಡು ಪಂಗಡಗಳ ನಡುವೆ ವಿವಾಹ ಸಂಬಂಧ ನಿಷೇಧವು ಇರುತ್ತದೆ. ಪ್ರಾಪ್ತ ವಯಸ್ಸಿನ ನಂತರವೇ ವಿವಾಹವಾಗುವ ಇವರಲ್ಲಿ ಬಾಲ್ಯ ವಿವಾಹಕ್ಕೆ ಅವಕಾಶವಿರುವುದಿಲ್ಲ. ಅಂತಧರ್ಮ ಅಂತರ್ಜಾತಿ ವಿವಾಹಗಳು ನಡೆದರೂ ಇವುಗಳಿಗೆ ಮನ್ನಣೆ ಯನ್ನು ಕೊಡದೇ ಇರುವುದು ಕಂಡುಬರುತ್ತದೆ. ಈ ಸಮುದಾಯದ ಜನನ ನಾಮಕರಣ ಕಿವಿ ಚುಚ್ಚುವುದು ಋತುಮತಿ ವಿವಾಹ ಸೀಮಂತ ಉತ್ತರ ಕ್ರಿಯೆ ಮತ್ತು ಕುಲೆ ಮದುವೆಗಳು ನಡೆಯುತ್ತವೆ. ಅಗೇಲು, ಕೋಲ, ನೇಮ, ನಾಗಾರಾಧನೆ, ಶಿವಾರಾಧನೆ, ಸುಬ್ರಹ್ಮಣ್ಯ ಮತ್ತು ಮಂಜುನಾಥ ದೇವರ ಆರಾಧನೆಗಳು ಇವರ ಸಂಸ್ಕಾರದ ಭಾಗವಾಗಿವೆ. ಈ ಸಮುದಾಯದ ವಾಸದ ಪ್ರದೇಶಗಳು ಗುಡ್ಡಗಾಡು ಗಿರಿಶಿಖರ ಅರಣ್ಯ ಪ್ರದೇಶಗಳಾಗಿವೆ. ಅಲ್ಲದೆ ಕುದುರೆಮುಖ ರಾಷ್ಟ್ರೀಯ ಉದ್ಯಾನ ವನ ಕಾಯ್ದಿಟ್ಟ ಅರಣ್ಯ ಪ್ರದೇಶವಾಗಿದೆ. ಈ ಪ್ರದೇಶಗಳಲ್ಲಿ ಇವರು ಅನಾದಿಕಾಲದಿಂದಲೂ ತಮ್ಮದೇ ಆದ ಸಂಸ್ಕೃತಿ ಪರಂಪರೆಯೊಂದಿಗೆ ಜೀವನ ಸಾಗಿಸುತ್ತಾ ಬಂದಿರುವುದರಿಂದ ಇವರಿಗೆ ನಾವು ಇತರರಿಗಿಂತಲೂ ಭಿನ್ನ ಎಂಬ ಪ್ರತ್ಯೇಕತೆಯ ಭಾವನೆ ಮೂಡಿದೆ. ಇದು ಇವರ ಅನನ್ಯತೆಯನ್ನು ಗುರುತಿಸುತ್ತದೆ. ನಾಲುಮಲೆಕುಡಿಯರು ತಮ್ಮ ಮಲೆಗಳ ಮೇಲೆ ಹೊಂದಿರುವ ನಿಷ್ಟೆ ಮತ್ತು ಅಭಿಮಾನವು ಇವರ ಅನನ್ಯತೆಯನ್ನು ಸೂಚಿಸುತ್ತದೆ. ಅಂತೆಯೇ ಊರುಮಲೆಯ ಮಲೆಕುಡಿಯರು ತುಳುನಾಡಿನ ಸಂಸ್ಕೃತಿಯ

ಭಾಗವಾಗಿದ್ದರೂ ಇವರು ಗ್ರಾಮ ನಗರ ಜೀವನಕ್ಕೆ ಹೊಂದಿಕೊಂಡಿದ್ದಾರೆ. ಇವರದೇ ಸಮುದಾಯದ ನಾಲ್ಕಲೆ ಕುಡಿಯರನ್ನು ಇವರು ನಮಗಿಂತ ಭಿನ್ನ ಎಂಬ ಭಾವನೆಯೂ ಸಹ ಇವರಲ್ಲಿ ಮೂಡಿದೆ. ಈ ಸಮುದಾಯದ ಪಾರಂಪರಿಕ ವೃತ್ತಿ ಕೃಷಿ ಮತ್ತು ಕಾಡುತ್ಪತ್ತಿ ಸಂಗ್ರಹವಾಗಿದೆ. ಹಿಂದೆ ಕುಮರಿ ಬೇಸಾಯವನ್ನು ಅವಲಂಬಿಸಿದ ಈ ಸಮುದಾಯ ಈಗ ಇದರಿಂದ ದೂರವಾಗಿದ್ದು, ಕೃಷಿಯನ್ನೇ ಅವಲಂಬಿಸಿದೆ. ಇದರ ಜೊತೆಗೆ ಕೂಲಿ ಕಾರ್ಮಿಕರಾಗಿ ಮತ್ತು ಆಧುನಿಕ ದುಡಿಮೆ ಮೂಲಗಳನ್ನು ಇವರು ಅವಲಂಭಿಸಿದ್ದಾರೆ. ಈ ಸಮುದಾಯದ ಸಾಮಾಜಿಕ ಸ್ಥಾನಮಾನವು ಮೇಲ್ಜಾತಿಯ ಸಾಮಾಜಿಕ ಅಂತಸ್ತಿನ ಅಧೀನದಲ್ಲಿರುವುದು ಕಂಡು ಬರುತ್ತದೆ. ನೆರಿಯಾದ ಹೆಬ್ಬಾರರು ಮತ್ತು ಭೂ ಮಾಲೀಕರ ಅಧೀನದಲ್ಲಿ ತಮ್ಮ ಜೀವನವನ್ನು ರೂಪಿಸಿಕೊಂಡಿರುವ ಇವರು ತಮ್ಮ ಧಣಿಗಳಲ್ಲಿ ಸದಾ ನಿಷ್ಠೆಯನ್ನು ತೋರಿಸುತ್ತಲೇ ಬಂದಿದ್ದಾರೆ. ಈ ಸಮುದಾಯಗಳಿಗೆ ಬದ್ಧರಾಗಿ ಇವರು ವಹಿಸಿರುವ ಕೆಲಸ ಕಾರ್ಯಗಳನ್ನು ಮುಗಿಸಿಕೊಡುತ್ತಲೇ ತಮ್ಮ ಸೇವೆಯನ್ನು ಸಲ್ಲಿಸುವ ಇವರು ಸಾಮಾಜಿಕವಾಗಿ ಗೌಡ ಮತ್ತು ಪೂಜಾರಿಗಳಿಗೆ ಸಮನಾಗಿ ತಮ್ಮ ಸಾಮಾಜಿಕ ಸ್ಥಾನಮಾನ ಕಾಪಾಡಿಕೊಂಡು ಬರುವಲ್ಲಿ ಮುಂದಾಗಿದ್ದಾರೆ. ಈ ಸಮುದಾಯದ ಸಾಮಾಜಿಕ ಏಣಿ ಶ್ರೇಣಿಯಲ್ಲಿ ಇವರು ರೈತಾಪಿ ಜನವರ್ಗವಾಗಿದ್ದು, ಮೇಲ್ಜಾತಿಯ ಭೂ ಮಾಲೀಕರ ನಿಕಟ ಸಂಪರ್ಕದೊಂದಿಗೆ ತಮ್ಮದೇ ಆದ ಅಂತರವನ್ನು ಕಾಯ್ದುಕೊಂಡು ಬಂದಿದ್ದಾರೆ. ಮಕ್ಕಳ ಕಟ್ಟು ಮತ್ತು ಅಳಿಯಕಟ್ಟಿನ ನಡುವೆ ಅಂತರ ಈಗಲೂ ಹಾಗೆಯೇ ಮುಂದುವರೆಯುತ್ತಾ ಬಂದಿದೆ. ಭೂ ಮಾಲೀಕರ ಅಧೀನದಲ್ಲಿ ಜೀತದಾಳುಗಳಾಗಿ, ಗೇಣಿದಾರರಾಗಿ ಈಗ ಕೃಷಿಕೂಲಿ ಕಾರ್ಮಿಕರಾಗಿ ತಮ್ಮ ಅಂತರವನ್ನು ಕಾಯ್ದುಕೊಂಡು ಬಂದಿದ್ದಾರೆ. ಇದು ಬುಡಕಟ್ಟು ಸಮುದಾಯ ವಾಗಿದ್ದರೂ ಸಹ ಹಿಂದೂ ಧರ್ಮದ ಪ್ರಭಾವಕ್ಕೊಳಗಾಗಿ ಜಾತೀಯ ಸ್ವರೂಪವನ್ನು ಪಡೆದು ಕೊಂಡಿದೆ. ಕಾಡಿನಿಂದ ಸ್ಥಳಾಂತರಗೊಂಡು ಗ್ರಾಮವಾಸಿಗಳಾದ ಇವರು ಇತರೆ ಮೇಲ್ಜಾತಿಯ ಸೇವೆಗಳನ್ನು ಮಾಡುತ್ತಾ ಬಂದಿದ್ದಾರೆ. ಅಲ್ಲದೆ ತಮ್ಮ ಆರಾಧ್ಯ ದೈವ ಮತ್ತು ದೇವಸ್ಥಾನಗಳಲ್ಲಿ ಅನಾದಿಕಾಲದಿಂದಲೂ ದುಡಿಯುತ್ತಾ ಬಂದಿದ್ದಾರೆ. ಆದರೂ ಸಾಮಾಜಿಕ ಸಮಾನತೆ ಇಲ್ಲದೆ ಇತರರಿಂದ ಸ್ವತಃ ಶೋಷಣೆ ಮತ್ತು ನಿಕೃಷ್ಟತೆಗೆ ಒಳಗಾಗಿರುವುದು ಇವರು ಮಾಡುತ್ತಿರುವ ಆರಾಧನಾ ಪದ್ಧತಿಗಳಲ್ಲಿ ಕಂಡುಬರುತ್ತದೆ. ಒಂದು ಕಡೆ ಬದಲಾವಣೆಯನ್ನು ಬಯಸದ ಮತ್ತು ತಮ್ಮ ಮೂಲ ಪರಂಪರೆಯನ್ನು ಬಿಡದೆ ಇರುವ ಸಂದಿಗ್ಧ ಪರಿಸ್ಥಿತಿಯಲ್ಲಿ ಪರೋಕ್ಷವಾಗಿ ಜಾತೀಯತೆಯ ಕರಿನೆರಳಲ್ಲಿ ಬದುಕುವ ಸ್ಥಿತಿ ಇವರದ್ದಾಗಿದೆ. ದೇವಸ್ಥಾನಗಳಲ್ಲಿ ಇವರು ಸೇವೆ ಸಲ್ಲಿಸಿದರೂ ಇವರ ಸೇವೆ ಗರ್ಭಗುಡಿಯಿಂದ ಹೊರತಾಗಿಯೇ ಇರುತ್ತದೆ. ಇದರಲ್ಲಿ ಇವರ ಜಾತೀಯತೆಯ ದುಸ್ಥಿತಿ ಕಂಡುಬರುತ್ತದೆ. ಸರ್ಕಾರ ಬುಡಕಟ್ಟು ಪುನರ್ವಸತಿ ನೀತಿ ಅರಣ್ಯ ನೀತಿ ಮತ್ತು ಇತರ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದರೂ ಇವರ ಪಾಲಿಗೆ ಇವು ಗಗನ ಕುಸುಮಗಳಾಗಿವೆ. ಈ ಯೋಜನೆಗಳು ಇವರಿಗೆ ತಲುಪದೇ ಇರುವಂತಹ ಸ್ಥಿತಿ ಇವರದ್ದಾಗಿದೆ. ಯಾವುದೇ ಯೋಜನೆಯನ್ನು ಪಡೆಯಬೇಕಾದರೆ ಬಡತನದ ರೇಖೆಯಲ್ಲಿರಬೇಕು. ವಾಸದ ಪ್ರಮಾಣಪತ್ರ ಮನೆ ಮತ್ತು ಭೂ ದಾಖಲೆಗಳನ್ನು ಹೊಂದಿರಬೇಕು. ಅನಾದಿಕಾಲದಿಂದ ಇವರದ್ದೇ ನೆಲದಲ್ಲಿ ಇವರು ವಾಸ ಮಾಡುತ್ತಾ ಬಂದರೂ ಇವರಿಗೆ ಸರ್ಕಾರ ಜಾಗಕ್ಕೆ ಮತ್ತು ಭೂಮಿಗೆ ದಾಖಲೆಗಳನ್ನು ಕೊಡದೇ ಇರುವುದರಿಂದ ಸರ್ಕಾರದಿಂದ ಸಿಗುವ ಮೂಲ ಭೂತ ಸೌಲಭ್ಯಗಳು ಇವರ ಕೈ ತಪ್ಪುತ್ತಿವೆ. ಪಾರಂಪರಿಕ ಅರಣ್ಯ ಕಾಯಿದೆ ಅಡಿಯಲ್ಲಿ ಭೂ ಮಂಜೂರಾತಿಗೆ

ಅರ್ಜಿ ಸಲ್ಲಿಸಿ ಮಂಜೂರಾತಿಗೆ ಪ್ರಯತ್ನಿಸಿದರೂ ಇಲ್ಲಿರುವಂತಹ ಗೊಂದಲಗಳು ಈ ಸಮುದಾಯಕ್ಕೆ ಯಾವುದೇ ಪ್ರಯೋಜನವಾಗುತ್ತಿಲ್ಲ. ಇವರು ವಾಸವಾಗಿರುವ ಪ್ರದೇಶ ಮತ್ತು ಭೂಮಿ ಕಂದಾಯ, ಅರಣ್ಯ ಮತ್ತು ಸಂರಕ್ಷಿತ ಅರಣ್ಯ ಪ್ರದೇಶಗಳಾಗಿದ್ದು, ಇವರು ಯಾವ ನೆಲೆಯಲ್ಲಿದ್ದಾರೆಂದು ನಿರ್ಧರಿಸುವ ಮಾನದಂಡಗಳು ಈಗಲೂ ಇಲ್ಲದಿರುವುದರಿಂದ ಇವರು ಸಲ್ಲಿಸಿರುವ ಬಹುತೇಕ ಅರ್ಜಿಗಳು ತಿರಸ್ಕೃತಗೊಂಡಿವೆ. ಮತ್ತು ಸರ್ಕಾರ ತಂದಿರುವ ಕಾನೂನುಗಳು ಇವರ ವರ್ತಮಾನದ ಬದುಕಿನ ಸವಾಲುಗಳಾಗಿವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನದ ವ್ಯಾಪ್ತಿಯಲ್ಲಿರುವ ಮಲೆಕುಡಿಯ ಕುಟುಂಬಗಳು ನಕ್ಸಲ್ ಆರೋಪದ ಪಟ್ಟಿಯೊಂದಿಗೆ ಬದುಕುವ ಸ್ಥಿತಿ ಇದೆ. ಇದರಿಂದಾಗಿ ಇತರೆ ಸಮುದಾಯದವರ ದೂಷಣೆಗೆ ಕಾರಣವಾಗಿದೆ. ನಕ್ಸಲ್ ಹಣೆಪಟ್ಟಿಯನ್ನು ಹೊಂದಿದ್ದಾರೆ ಎಂಬ ಕಳಂಕ ಈ ಸಮುದಾಯದ ಅನನ್ಯತೆಗೆ ಒಂದು ಸವಾಲಾಗಿದೆ. ಸದಾ ಸ್ಥಳಾಂತರಗೊಳ್ಳುತ್ತಾ ಬಂದಿರುವ ಈ ಸಮುದಾಯ ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ನೆಲೆ ನಿಲ್ಲಬೇಕಾದರೆ ನಿರಂತರವಾದ ಹೋರಾಟವನ್ನೇ ಮಾಡಬೇಕಾಗಿದೆ. ಹತ್ಯಡ್ಕದ ಮಲೆಕುಡಿಯರು ಅರಣ್ಯ ಪ್ರದೇಶದ ಅಂಚಿನಲ್ಲಿರುವುದರಿಂದ ಅವರಿಗೆ ಈಗಲೂ ಭದ್ರತೆ ಎಂಬುದು ಮರೀಚಿಕೆಯಾಗಿದೆ. ಅಂತೆಯೇ ರಾಷ್ಟ್ರೀಯ ಉದ್ಯಾನವನದ ಒಕ್ಕಲೆಬ್ಬಿಸುವಿಕೆಯ ನೀತಿ ಇವರನ್ನು ಅತಂತ್ರರನ್ನಾಗಿಸಿದೆ. ತಮ್ಮ ಉಳಿವಿಗಾಗಿ ಇವರು ಹೋರಾಟ ಮಾಡುವ ಅನಿವಾರ್ಯತೆಯನ್ನು ಕಂಡುಕೊಂಡಿದ್ದಾರೆ.

**೫.೨. ಸಮುದಾಯಕ ಅನನ್ಯತೆಯ ತೊಂದರೆ**

ಈ ಸಮುದಾಯ ಸಾಮಾಜಿಕವಾಗಿ ತನ್ನನ್ನು ತಾನು ಗುರುತಿಸಿಕೊಳ್ಳಲು ಹಲವಾರು ತೊಂದರೆಗಳನ್ನು ಎದುರಿಸಬೇಕಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಇತರೆ ಬುಡಕಟ್ಟು ಸಮುದಾಯ ಗಳಾದ ಕೊರಗ ಮತ್ತು ಮರಾಠಿ ನಾಯಕ ಸಮುದಾಯಗಳಿಗೆ ತನ್ನದೇ ಆದ ಸಾಮಾಜಿಕ ಭದ್ರತೆ ಮತ್ತು ಅನನ್ಯತೆ ಇದೆ. ಈ ಸಮುದಾಯಗಳಿಗೆ ಹೋಲಿಸಿದಲ್ಲಿ ಮಲೆಕುಡಿಯ ಸಮುದಾಯ ಸಾಮಾಜಿಕ ಅನನ್ಯತೆಯ ಸವಾಲುಗಳನ್ನು ಎದುರಿಸಬೇಕಾಗಿದೆ. ಹೆಸರಿನ ಅನನ್ಯತೆಈ ಸಮುದಾಯ ವನ್ನು ಒಂದೇ ಹೆಸರಿನಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ವಿವಿಧ ಹೆಸರುಗಳಿಂದ ಕರೆಯಲ್ಪಡುವ ಈ ಸಮುದಾಯಕ್ಕೆ ಒಂದೇ ಹೆಸರಿನಿಂದ ಗುರುತಿಸಿದರೆ ಸಾಮಾಜಿಕ ಭದ್ರತೆ ಮತ್ತು ಸ್ಥಿರತೆಗೆ ಅವಕಾಶವಾಗುತ್ತದೆ.ಸಾಂಸ್ಕೃತಿ ಅನನ್ಯತೆ ಈ ಸಮುದಾಯಕ್ಕೆ ಪ್ರದೇಶ, ಹೆಸರು, ಭಾಷೆ, ಉಡುಪುನಲ್ಲಿ ವೈವಿಧ್ಯತೆಗಳಿವೆ. ಪ್ರತಿಯೊಂದು ಬುಡಕಟ್ಟು ಸಮುದಾಯುಕ್ಕೂ ಇರುವ ಸಾಂಸ್ಕೃತಿಕ ಕುಣಿತ ಮತ್ತು ವಾದ್ಯ ಈ ಸಮುದಾಯದಿಂದ ಮಾಯವಾಗಿರುವುದರಿಂದ ಸಾಂಸ್ಕೃತಿಕ ಅನನ್ಯತೆ ಉಂಟಾಗಿದೆ. ಈ ಸಾಂಸ್ಕೃತಿಕ ಗುರುತಿಸುವಿಕೆ ನಾವು ಬಾಂಜಾರು ಮಲೆಯ ಮಾರಿ ಹಬ್ಬದಲ್ಲಿ ಮಾತ್ರ ನೋಡಲು ಸಾಧ್ಯ. ಸಾಮಾಜಿಕ ಸ್ಥಾನ ಮಾನಈ ಸಮುದಾಯ ಸಾಮಾಜಿಕವಾಗಿ ತನ್ನದೇ ಆದ ಅಂತಸ್ತನ್ನು ಹೊಂದಿದೆ. ಸಮಾಜದಲ್ಲಿ ದೈವ ಕಾರ್ಯಗಳನ್ನು ಮಾಡುವುದರ ಮೂಲಕ ಇವರು ಇಲ್ಲದೇ ಇಲ್ಲಿನ ದೇವಾಲಯಗಳ ಜಾತ್ರೆ ಉತ್ಸವ ಆರಾಧನೆಗಳು ನಡೆಯುವುದಿಲ್ಲ.ಪಾರಂಪರಿಕ ವೃತ್ತಿ ವೈವಿಧ್ಯತಈ ಸಮುದಾಯದ ಪ್ರಾಚೀನ ಪಾರಂಪರಿಕ ವೃತ್ತಿಗಳಾದ ಬೇಸಾಯ ಕಾಡುತ್ಪತ್ತಿ ಸಂಗ್ರಹ ಮತ್ತು ದೇವಾಲಯಗಳ ಸೇವೆ ಕಾರ್ಯಗಳು ಇವರ ಪಾರಂಪರಿಕ ವೃತ್ತಿ ಪರಿಣಿತಿಯನ್ನು ಸೂಚಿಸುತ್ತವೆ. ಉದ್ಯೋಗ ಅನನ್ಯತೆಈ ಸಮುದಾಯವು ಹಿಂದೆ ಕುಮರಿ ಬೇಸಾಯ.

ಕಾಡುತ್ಪತ್ತಿ ಪದ್ಧತಿಯನ್ನು ಅವಲಂಬಿಸಿ ಜೀವನ ಮಾಡುತ್ತಿದ್ದು, ಈಗ ತಮ್ಮ ಉದ್ಯೋಗವನ್ನು ಕೃಷಿ ಪ್ರಧಾನ ಮತ್ತು ಕೃಷಿ ಪೂರಕವಾದ ಕೂಲಿ ಕಾರ್ಮಿಕ, ಇತರೆ ವೃತ್ತಿಗಳಲ್ಲಿ ತೊಡಗಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ.ಆರಾಧನೆಯಲ್ಲಿನ ಅನನ್ಯತೆಈ ಸಮುದಾಯಕ್ಕೆ ಆರಾಧನೆ ಪರಂಪರೆ ಹಿನ್ನಲೆ ಇದೆ ಮೂಲತಃ ಶೈವ ಪರಂಪರೆಯ ಆರಾಧಕರಾದ ಇವರು ಬದಲಾದ ಕಾಲಘಟ್ಟಕನುಗುಣವಾಗಿ ವೈಷ್ಣವ ಪರಂಪರೆಯ ಆರಾಧಕರೂ ಆಗಿದ್ದಾರೆ. ಭೂತ, ನೇಮ ಕೋಲಗಳಲ್ಲಿ ನಂಬಿಕೆಯನ್ನು ಹೊಂದಿರುವ ಇವರು ಶಕ್ತಿ ಪಂಥ, ನಾಗಾರಾಧಕರೂ ಆಗಿದ್ದಾರೆ.ಕುಟುಂಬ ಪದ್ಧತಿಯಲ್ಲಿನ ಅನನ್ಯತೆಕುಟುಂಬ ಪದ್ಧತಿಯಲ್ಲಿ ಹಿಂದೆ ಅವಿಭಕ್ತ ಕುಟುಂಬ ಪ್ರಧಾನವಾಗಿದ್ದರೂ ಈಗ ಇವರಲ್ಲಿ ವಿಭಕ್ತ ಕುಟುಂಬ ಪದ್ಧತಿ ಪ್ರಧಾನವಾಗಿದೆ. ಈ ಕುಟುಂಬಗಳಲ್ಲಿ ಪಿತೃ ಪ್ರಧಾನ ಮತ್ತು ಮಾತೃ ಪ್ರಧಾನ ಪರಂಪರೆಯ ಪ್ರಧಾನತೆಯನ್ನು ಸೂಚಿಸುವ ಮಕ್ಕಳ ಕಟ್ಟು ಮತ್ತು ಅಳಿಯ ಕಟ್ಟು ಕುಟುಂಬಗಳಲ್ಲಿನ ವೈವಿಧ್ಯತೆಗಳು ಭಿನ್ನತೆಗಳು ಕುಟುಂಬ ಪದ್ಧತಿಯ ಅನನ್ಯತೆಗೆ ತೊಡಕಾಗಿದೆ. ಮಹಿಳಾ ಸ್ಥಾನ ಮಾನ ಈ ಸಮುದಾಯದಲ್ಲಿ ಮಹಿಳೆಗೆ ಪ್ರಾಧಾನ್ಯತೆಯನ್ನು ನೀಡಲಾಗಿದೆ. ಅಳಿಯ ಸಂತಾನ ಕುಟುಂಬ ಪದ್ಧತಿಯಲ್ಲಿ ಮಹಿಳೆ ಪ್ರಧಾನತೆ ಕಂಡುಬರುತ್ತದೆ. ಆದರೂ ಪುರುಷ ಮತ್ತು ಮಹಿಳೆಯರಲ್ಲಿನ ಸಾಮರಸ್ಯ ಮತ್ತು ಹೊಂದಾಣಿಕೆ ಇಲ್ಲಿ ಕಂಡುಬರುತ್ತದೆ. ಕುಟುಂಬದ ನಿರ್ವಹಣೆ ಕೃಷಿ ಚಟುವಟಿಕೆಗಳು ಆರ್ಥಿಕ ಹೊಣೆಗಾರಿಕೆ ಮತ್ತು ಉತ್ಸವ ಆರಾಧನೆಗಳಲ್ಲಿ ಮಹಿಳೆಯ ಸ್ಥಾನಮಾನ ಪ್ರಧಾನವಾಗಿದೆಭಾಷಾ ಅನನ್ಯತೆ ಈ ಸಮುದಾಯದ ಮೂಲ ಮತ್ತು ಪಾರಂಪರಿಕ ಭಾಷೆ ತುಳು ಆಗಿದೆ. ಬಾಂಜಾರು ಮಲೆ ಅಂಬಟಮಲೆ ಇಳಿಮಲೆಗಳಲ್ಲಿ ವಾಸವಾಗಿರುವ ಸಮುದಾಯದ ಭಾಷೆ ಹಳೆ ಸಾಂಪ್ರದಾಯಿಕ ಭಾಷೆಯಾಗಿದೆ. ಈ ಭಾಷೆ ಬುಡಕಟ್ಟು ಭಾಷೆಯಾಗಿದ್ದು ಇತರ ತುಳುಗಿಂತ ಭಿನ್ನವಾಗಿದೆ. ಅಳಿಯ ಸಂತಾನಕ್ಕೆ ಸೇರಿದವರು ಮಾತನಾಡುವ ತುಳುವಿಗೂ ಮಕ್ಕಳ ಸಂತಾನಕ್ಕೆ ಸೇರಿದವರು ಮಾತನಾಡುವ ತುಳುವಿಗೂ ಭಿನ್ನತೆಗಳಿವೆ ಇದರಿಂದಾಗಿ ಇವರು ಸಂಘಟಿತರಾಗದೇ ದೂರವಾಗಿಯೇ ಉಳಿಯುವಂತಹ ಸ್ಥಿತಿ ಇದೆ. ಸಂಘಟನೆಯ ಅನನ್ಯತೆಸಂಘಟನೆಗೆ ಸಂಬಂಧಿಸಿದಂತೆ ಈ ಸಮುದಾಯದಲ್ಲಿ ಕೊರತೆ ಕಂಡುಬರುತ್ತದೆ. ಈ ಸಮುದಾಯದಲ್ಲಿ ಕಂಡುಬರುವ ಪ್ರಾದೇಶಿಕ, ಕೌಟುಂಬಿಕ ಭಾಷಾ ವೈವಿಧ್ಯತೆಗಳಿಂದಾಗಿ ಸಂಘಟನೆಗೆ ತೊಡಕಾಗಿದೆ. ಆದರೂ ಈಗ ಮಲೆಕುಡಿಯ ಸಂಘದ ಅಡಿಯಲ್ಲಿ ಸಂಘಟಿತರಾಗುತ್ತಿರುವ ಬೆಳವಣಿಗೆಗಳು ಕಂಡುಬರುತ್ತವೆ. ಕುದುರೆ ಮುಖ ರಾಷ್ಟ್ರೀಯ ಉದ್ಯಾನದ ಒಕ್ಕಲೆಬ್ಬಿಸುವಿಕೆ ವಿರುದ್ದದ ಹೋರಾಟಗಳು ಸಂಘಟನೆಯ ಅನನ್ಯತೆಯನ್ನು ಸೂಚಿಸುತ್ತವೆ. ಹೋರಾಟದ ಅನನ್ಯತೆಈ ಸಮುದಾಯಕ್ಕೆ ತನ್ನದೇ ಆದ ಹೋರಾಟದ ಹಿನ್ನಲೆ ಇದೆ. ಕುಮರಿ ಬೇಸಾಯದ ಹೋರಾಟ, ಸ್ಥಳಾಂತರ ಹೋರಾಟ, ಜೀತ ಪದ್ಧತಿ, ಗೇಣಿ ಪದ್ಧತಿಗಳ ಹೋರಾಟಗಳನ್ನು ಹಿನ್ನೆಲೆಯನ್ನು ಹೊಂದಿದ್ದ ಈ ಸಮುದಾಯ ಈಗ ಒಕ್ಕಲೆಬ್ಬಿಸುವಿಕೆ ವಿರುದ್ದ ಹೋರಾಟ ಮಾಡುತ್ತಾ ಬಂದಿದೆ. ಮೀಸಲಾತಿ ಅನನ್ಯತೆಈ ಸಮುದಾಯ ಪರಿಶಿಷ್ಟ ಪಂಗಡಗಳ ಅಡಿಯಲ್ಲಿ ಮೀಸಲಾತಿಯನ್ನು ಪಡೆದಿದ್ದರೂ ಮೀಸಲಾತಿಯ ಸೌಲಭ್ಯಗಳನ್ನು ಪಡೆಯುವಲ್ಲಿ ಅವಕಾಶಗಳು ದೊರೆತಿಲ್ಲ. ಇಲ್ಲಿನ ಮರಾಠಿ ನಾಯಕ ಸಮುದಾಯದೊಡನೆ ನರಂತರವಾದ ಪೈಪೋಟಿಯಲ್ಲಿ ತೊಡಗಿರುವುದು ಕಂಡುಬರುತ್ತದೆ. ರಾಜಕೀಯ ಪ್ರಾತಿನಿಧ್ಯ ಈ ಸಮುದಾಯವು ರಾಜಕೀಯವಾಗಿ ಮೊದಲಿನಿಂದಲೂ ಕಾಂಗ್ರೆಸ್ ಪಕ್ಷದೊಂದಿಗೆ ಪ್ರಯೋಜನವನ್ನು ಪಡೆದು ಈ ಪಕ್ಷಕ್ಕೆ ನಿಷ್ಠೆ ಮತ್ತು ಬದ್ಧತೆಯನ್ನು ಸೂಚಿಸುತ್ತಾ ಬಂದಿದೆ. ಇತ್ತೀಚೆಗೆ

ಆದ ಬೆಳವಣಿಗೆಗಳಿಂದಾಗಿ ಈ ಸಮುದಾಯದ ಮತ ಬ್ಯಾಂಕನ್ನು ಓಲೈಸಿಕೊಳ್ಳಲು ಬಿಜೆಪಿಯ ಪ್ರಯತ್ನಿಸಿರುವುದರಿಂದ ಇಲ್ಲಿ ರಾಜಕೀಯ ಪ್ರಾತಿನಿಧ್ಯಕ್ಕಾಗಿ ಪೈಪೋಟಿ ಆರಂಭವಾಗಿದೆ. ಅವಿರೋಧವಾಗಿ ಆಯ್ಕೆಯಾಗುವುದರ ಮೂಲಕ ತಮ್ಮ ಅನನ್ಯತೆಯನ್ನು ಪ್ರದರ್ಶಿಸುತ್ತಾ ಬಂದಿರುವ ಈ ಸಮುದಾಯ ಈಗ ಪೈಪೋಟಿಯನ್ನು ಎದುರಿಸಬೇಕಾಗಿದೆ. ಈ ಸಮುದಾಯದ ಗುರುತಿಸುವಿಕೆಯು ಇವರ ಅನನ್ಯತೆಯನ್ನು ಸೂಚಿಸುತ್ತದೆ. ಈ ಸಮುದಾಯದ ಅನನ್ಯತೆಯಲ್ಲಿ ಹಲವಾರು ತೊಂದರೆಗಳು ಗೋಚರವಾಗುತ್ತವೆ. ಪ್ರತ್ಯೇಕತಾ ಭಾವನೆ, ಒಕ್ಕಲೆಬ್ಬಿಸುವಿಕೆ, ಸರ್ಕಾರದ ಭೀತಿ, ವರ್ತಮಾನದ ಆತಂಕಗಳಾಗಿವೆ. ಈ ಸಮುದಾಯದ ಜೀವನ ಪರಂಪರೆಯು ಇತರೆ ಸಮುದಾಯಗಳಿಗಿಂತ ಭಿನ್ನವಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಬುಡಕಟ್ಟು ಸಮುದಾಯವು ಇಲ್ಲಿನ ಮೂಲನಿವಾಸಿಗಳೆಂದು ಪರಿಗಣಿಸಿದ್ದರೂ ಇವರ ಅನನ್ಯತೆ ವಿಷಯದಲ್ಲಿ ಗೊಂದಲಗಳಿಗೆ ಒಳಗಾಗಿರುವುದು ಗೋಚರವಾಗುತ್ತದೆ.ಇವರನ್ನು ಒಂದೇ ಹೆಸರಿನಲ್ಲಿ ಗುರುತಿಲಾಗದೇ ಇರುವುದ ರಿಂದ ಅನನ್ಯತೆಯ ಸ್ಥಿತಿ ಅತಂತ್ರತೆಯನ್ನು ಸೂಚಿಸುತ್ತದೆ. ಈ ಅನನ್ಯತೆಯ ಗೊಂದಲಗಳಿಂದಾಗಿ ಸರ್ಕಾರದಿಂದ ಇವರಿಗೆ ಸಿಗಬೇಕಾದ ಮೂಲ ಭೂತ, ನಾಗರೀಕ ಮತ್ತು ಮೀಸಲಾತಿ ಸೌಲಭ್ಯಗಳು ದೊರೆಯದೇ ಇರುವಂತ ಸ್ಥಿತಿ ಇದೆ. ಇವರು ವಾಸವಾಗಿರುವ ಮೂಲ ನೆಲೆ,ಪ್ರದೇಶಗಳಿಗೆ ಇವರೇ ವಾರಸುದಾರರಾದರೂ ಇವರಿಗೆ ಇದುವರೆವಿಗೂ ಭೂಮಿಯ, ಜಾಗದ ಹಕ್ಕುದಾಖಲೆಗಳು ದೊರೆಯದೇ ಇರುವ ಅತಂತ್ರ ಸ್ಥಿತಿಯಿಂದಾಗಿ ಇವರದೇ ಆದ ಮೂಲ ನೆಲೆಯಲ್ಲಿ ಇಂದು ಇವರು ಅಕ್ರಮವಾಸಿಗಳೆಂದು ಕರೆಸಿಕೊಳ್ಳಬೇಕಾದ ಸ್ಥಿತಿ ಒದಗಿದೆ. ಈ ಸಮುದಾಯವು ಇತರ ಸಮುದಾಯದ ಜನಾಂಗಗಳೊಂದಿಗೆ ಹೊಂದಿಕೊಂಡು ಬಾಳುವ ಸಮನ್ವತೆಯನ್ನು ಸಾಧಿಸುವುದರ ಮೂಲಕ ಆಧುನಿಕ ಸಾಮಾಜಿಕ ಬದುಕಿನೊಂದಿಗೆ ಬದಲಾವಣೆ ಬಯಸುತ್ತಿರುವುದು ಕಂಡುಬರುತ್ತದೆ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ, ಕುಣಿತ, ವಾದ್ಯ ಇರುತ್ತದೆ. ಆದರೆ ಬಂಜಾರುಮಲೆಯಲ್ಲಿನ ಮಾರಿ ಹಬ್ಬದ ಕುಣಿತದ ಹೊರತುಪಡಿಸಿದರೆ ಇತರ ಯಾವುದೇ ಪ್ರದೇಶದಲ್ಲಿ ಮಲೆಕುಡಿಯ ಸಮುದಾಯದ ಕುಣಿತ ಇಲ್ಲವೆ ವಾದ್ಯ ಪರಂಪರೆ ಕಂಡುಬರುವುದಿಲ್ಲ. ಈ ಸಮುದಾಯವು ತುಳುನಾಡಿನ ಸಂಸ್ಕೃತಿ, ಜೀವನಪದ್ಧತಿ, ಆಚರಣೆಗಳ ಒಂದು ಭಾಗವಾಗಿದೆ. ಕೃಷಿ ಪ್ರಧಾನತೆಯನ್ನು ಹೊಂದಿರುವ ಈ ಸಮುದಾಯವು ಹಿಂದೆ ಜೀತಪದ್ಧತಿ, ಗೇಣಿಪದ್ದತಿ, ಧಣಿಒಕ್ಕಲು ವ್ಯವಸ್ಥೆಯಿಂದ ಬದಲಾಗಿ ಈಗ ಕೃಷಿ ಕೂಲಿಕಾರ್ಮಿಕ ರಾಗಿದ್ದಾರೆ. ಪ್ರಾದೇಶಿಕವಾಗಿ ಈ ಸಮುದಾಯ ವೈವಿಧ್ಯತೆ ಹಾಗೂ ಸ್ಥಳಾಂತರಗಳಿಂದಾಗಿ ಹಲವಾರು ಹೊಸ ಸವಾಲುಗಳನ್ನು ಎದುರುಸುತ್ತಿದೆ. ಒಂದು ಕಡೆ ಅರಣ್ಯಹಕ್ಕು ಕಾಯ್ದೆ, ಇನ್ನೊಂದು ಕಡೆ ಪ್ಲಾಂಟೇಶನ್ ಕಾಯ್ದೆಗಳು ಇವರ ಬದುಕಿನ ದಿಕ್ಕನ್ನೇ ಬದಲಾಯಿಸಿವೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವರ ವ್ಯಾಪ್ತಿಯಲ್ಲಿನ ಮಲೆಕುಡಿಯ ಸಮುದಾಯವು ತಮ್ಮ ಸ್ಥಿರತೆಗಾಗಿ ನಿರಂತರವಾದ ಹೋರಾಟವನ್ನು ಮಾಡುತ್ತಾಬಂದಿರುವುದರ ಪರಿಣಾಮವಾಗಿ ಇಂದು ಇವರು ಭವಿಷ್ಯದ ಬದುಕಿನ ಭಯದ ನೆರಳಲ್ಲಿ ಜೀವಿಸಬೇಕಾದ ಸ್ಥಿತಿಯಿದೆ. ಈ ಪ್ರದೇಶದಿಂದ ಹೊರಬರಲಾಗದೇ ಇರುವ ಸ್ಥಿತಿ, ಮತ್ತೊಂದು ಬದಲಾವಣೆಯನ್ನು ಬಯಸುವ ಪ್ರಯತ್ನಕ್ಕಾಗಿ ಇಲ್ಲಿಂದ ಒಕ್ಕಲೆಬ್ಬಿಸುವ ನೀತಿಗಳಿಂದಾಗಿ ಇವರು ಇಂದು ಆತಂಕ ಮತ್ತು ನಿರಾಶ್ರಿತ ಕರಿನೆರಳಿನಲ್ಲಿ ಬದುಕುತ್ತಿದ್ದಾರೆ.

ಇವರದೇ ಆದ ಮೂಲನೆಲಕ್ಕಾಗಿ ಇವರು ನಡೆಸಿದ ನಿರಂತರ ಹೋರಾಟದ ಫಲವಾಗಿ ಇವರ ಹೋರಾಟದ ದಿಕ್ಕನ್ನು ಬದಲಾಯಿಸಿದೆ. ಕಾಡಿನಿಂದ ನಾಡಿಗೆ ಬಂದ ಈ ಸಮುದಾಯ ತಾವು ವಾಸಿಸುವ ಪರಿಸರದ ದೇವಾಲಯ ಗಳಲ್ಲಿ ಸೇವೆ ಸಲ್ಲಿಸುವುದರ ಮೂಲಕ ತಮ್ಮ ಬದ್ದತೆಯನ್ನು ಇದುವರೆವಿಗೂ ಇವರು ಕಾಪಾಡಿಕೊಂಡು ಬಂದಿದ್ದಾರೆ. ಇದು ಇವರ ಜೀವನ ನಿರ್ವಹಣೆಯ ಮೂಲವಾಗಿದೆ. ತಮ್ಮ ಬದುಕಿನ ಅಸ್ತಿತ್ವಕ್ಕಾಗಿ ಇವರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸ್ಥಳಾಂತರಗೊಂಡರೂ ಅ ಪ್ರದೇಶಗಳಲ್ಲಿ ಹಲವರ ವಿರೋದಗಳನ್ನು ಹೆದಿರುಸುತ್ತಾ ಬಂದಿದ್ದಾರೆ. ಸಾಕ್ಷರತೆಯ ಪ್ರಮಾಣ ಕಡಿಮೆ ಇರುವ ಈ ಸಮುದಾಯದಲ್ಲಿ ಪ್ರಾಥಮಿಕ ಪ್ರೌಢಶಿಕ್ಷಣಕ್ಕೆ ಸ್ಥಗಿತಗೊಳಿಸಬೇಕಾದ ಸ್ಥಿತಿಗಳಿವೆ. ಈ ಸಮುದಾಯದಲ್ಲಿನ ಸಂಘಟನೆ ಮತ್ತು ನಾಯಕತ್ವ ಕೊರತೆಯಿಂದಾಗಿ ಒಂದೊಂದು ರಾಜಕೀಯ ಪಕ್ಷಗಳು ಈ ಸಮುದಾಯವನ್ನು ಒಲಿಸಿಕೊಳ್ಳುವುದಕ್ಕಾಗಿ ಹಲವಾರು ಸವಾಲುಗಳನ್ನು ಸೃಷ್ಠಿಸಿದೆ. ಸರ್ಕಾರದಿಂದ ದೊರೆಯುವ ಮೀಸಲಾತಿ ಸೌಲಭ್ಯದಲ್ಲಿ ಈ ಸಮುದಾಯಕ್ಕೆ ಸರಿಯಾದ ಪ್ರಾತಿನಿಧ್ಯ ದೊರೆತಿಲ್ಲ. ಈ ಸಮುದಾಯದ ಮೂಲ ನೆಲೆಗಳಲ್ಲಿ ವಾಸವಾಗಿರುವವರನ್ನು ಒಕ್ಕಲೆಬ್ಬಿಸದೆ ಅವರನ್ನು ಅಲ್ಲಿಯೇ ಅಭಿವೃದ್ಧಿಪಡಿಸಲಾಗದೇ, ಇವರಿಗಾಗಿ ಕೈಗೊಂಡ ಪುನರ್ವಸತಿ ಯೋಜನೆಗಳು ಇವರಿಗೆ ಹೊಸ ಸವಾಲುಗಳನ್ನು ಸೃಷ್ಠಿಸಿವೆ. ಕಾಡನ್ನು ನಂಬಿರುವ, ಪ್ರಕೃತಿಯ ಆರಾಧಕರಾದ ಇವರನ್ನು ಅಲ್ಲಿಂದ ಒಕ್ಕಲೆಬ್ಬಿಸಲು ಅವರಿಗೆ ಕೊಡುವ ಹತ್ತು ಲಕ್ಷ ರೂ.ಗಳ ಪರಿಹಾರ ಇವರನ್ನು ಅತಂತ್ರರನ್ನಾಗಿಸಿದೆ. ಈ ಸಮುದಾಯದ ಬದುಕಿಗೆ ಬೇಕಾಗಿರುವುದು ಇವರ ವಾಸವಾಗಿರುವ ಜಾಗ ಮತ್ತು ಭೂಮಿಗೆ ಹಕ್ಕು ದಾಖಲೆಗಳು,ಇದು ಈಡೇರದೇ ಇರುವುದು ಈ ಸಮುದಾಯದ ಸಾಮಾಜಿಕ ಆರ್ಥಿಕ ದುಸ್ಥಿತಿಯನ್ನು ಸೂಚಿಸುತ್ತದೆ.

### ೫.೩. ಭೂಮಿ ಸಮಸ್ಯೆ

ಎ.ಎಸ್. ಪ್ರಭಾಕರರವರು ತಮ್ಮ ಬುಡಕಟ್ಟು ಅಭಿವೃದ್ಧಿ ಮಹಾಶ್ವೇತಾದೇವಿಯವರ ಚಿಂತನೆಗಳು ಕುರಿತಂತೆ "ಈ ಕಾಡಿನ ನೆಲವೆಲ್ಲ ಮತ್ತೆ ನಮಗೆ ದಕ್ಕುತ್ತದೆ. ಈ ಭೂಮಿ ಮೊದಲು ಹಸುಗೂಸಿನ ಶರೀರದಂತೆ ಲಾಸ್ಯವಾಡುತ್ತಿತ್ತು. ಈಗ ಮತ್ತೆ ಹಾಗೆಯೇ ಇರುತ್ತದೆ. ಈ ಭೂಮಿಯ ಮೇಲೆ ಬಡ್ಡಿ ವ್ಯಾಪಾರಿಗಳಿರುವುದಿಲ್ಲ. ದಿಕೂ ಸಾವುಕಾರ್ರು ಇರುವುದಿಲ್ಲ. ಬಿಳಿದೊರೆಗಳಿರುವುದಿಲ್ಲ. ಕಾಡೆಲ್ಲ ನಮ್ಮದೇ, ಬೆಟ್ಟಗಳೆಲ್ಲ ನಮ್ಮವೇ" ಇದು ಮಹಾಶ್ವೇತಾದೇವಿಯವರ ಕಥೆ-ಕಾದಂಬರಿಗಳ ಮುಖ್ಯ ವಸ್ತು, ಆದಿವಾಸಿಗಳು ತಾವು ಕಳೆದುಕೊಂಡ ಕೃಷಿ ಭೂಮಿಯನ್ನು ಮತ್ತು ಪಾರಂಪರಿಕವಾಗಿ ತಾವು ಅವಲಂಬಿಸಿಕೊಂಡು ಬಂದಿದ್ದ ಅರಣ್ಯವನ್ನು ಮರಳಿ ಪಡೆಯಲು ನಡೆಸುವ ಹೋರಾಟಗಳು. ಮಹಾಶ್ವೇತಾದೇವಿ ಆದಿವಾಸಿಗಳು ತಾವು ಕಳೆದುಕೊಂಡ ಭೂಮಿಯನ್ನು ಮರಳಿ ಪಡೆಯಲು ನಡೆಸುವ ಯಾವುದೇ ಹೋರಾಟವನ್ನು ಮಾನ್ಯ ಮಾಡುತ್ತಾರೆ. ಆದಿವಾಸಿಗಳು ಪಾರಂಪರಿಕವಾಗಿ ಅವಲಂಬಿಸಿಕೊಂಡು ಬಂದಿದ್ದ ಅವರ ಜಮೀನು ಅವರಿಗೆ ದಕ್ಕಬೇಕು. ಅದಕ್ಕೆ ಅವರ 'ಯಾರದೀ ಕಾಡು' ಕಾದಂಬರಿಯ ಬಿರ್ಸಾಮುಂಡಾ ಬುಡಕಟ್ಟು ಸಮುದಾಯವನ್ನು ಕುರಿತ ಚಿಂತನೆಯು ಭೂಮಿ ಸಮಸ್ಯೆಯನ್ನು ಕುರಿತ ಹೋರಾಟವಾಗಿದೆ ಎಂಬ ಪರಿಕಲ್ಪನೆಯನ್ನು ಭೂಮಿ ಅಥವಾ ಕಾಡು ಆದಿವಾಸಿಗಳ ಪಾರಂಪರಿಕ ಸ್ವತ್ತು. ಆದರೆ ಕಾನೂನುಗಳು

ಬಲಗೊಂಡ ಮೇಲೆ ಕಾಡಿನ ಮೇಲಿನ ಅಧಿಕಾರ ಸರಕಾರಕ್ಕೆ ಹಸ್ತಾಂತರಿಸಲ್ಪಟ್ಟಿತು. ರಾಷ್ಟ್ರೀಯ ಉಧ್ಯಾನ ಮತ್ತು ಕಾಯ್ದಿಟ್ಟ ಅರಣ್ಯಗಳ ಹೆಸರಲ್ಲಿ ಆದಿವಾಸಿಗಳನ್ನು ಕಾಡಿನಿಂದ ಬಲವಂತವಾಗಿ ಅನಾಮತ್ತಾಗಿ ಒಕ್ಕಲೆಬ್ಬಿಸುವುದನ್ನು ಮಹಾಶ್ವೇತಾದೇವಿ ವಿರೋಧಿಸುತ್ತಾರೆ. ಅರಣ್ಯ ಆದಿವಾಸಿಗಳದು. ಕಾಡಿನ ಮೇಲಿನ ಅವರ ಅಧಿಕಾರ ಪಾರಂಪರಿಕವಾದದ್ದು. ಅರಣ್ಯವನ್ನು ವಶಪಡಿಸಿಕೊಳ್ಳುವ ಅಧಿಕಾರವನ್ನು ಸರಕಾರಕ್ಕೆ ಕೊಟ್ಟಿದ್ದು ಯಾರು? ಎಂದು ಮಹಾಶ್ವೇತಾದೇವಿರವರು ಪ್ರಶ್ನಿಸಿದ್ದಾರೆ(ಪುಟ. ೩೩೨, ೩೩೩).[೧]

ನಾವು ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗಲೆಲ್ಲ ಮಲೆಕುಡಿಯ ಸಮುದಾಯದವರ ಮುಂದೆ ನಿಂತಾಗ ಅವರಿಂದ ಮೊದಲ ಪ್ರಶ್ನೆ ನಿಮ್ಮಿಂದ ನಮಗೇನು ಪ್ರಯೋಜನವಾಗುತ್ತದೆ. ನಾವು ಕೂತ ಮನೆ ಜಾಗಕ್ಕೆ ಮತ್ತು ಭೂಮಿಗೆ ರೆಕಾರ್ಡ್ ಮಾಡಿಕೊಡಕ್ಕಾಗುತ್ತಾ ಎಂಬ ಪ್ರಶ್ನೆಗಳ ಸುರಿಮಳೆ ಹೋದಲ್ಲೆಲ್ಲ ನಮ್ಮನ್ನು ಕಾಡಿದವು. ಎಷ್ಟೋ ವರ್ಷಗಳ ಹಿಂದೆ ಇವರದೇ ಆದ ನೆಲದಲ್ಲಿ ಇವರಿಗೆ ಈಗಲೂ ಭದ್ರತೆ ಇಲ್ಲದಿರುವ ಸ್ಥಿತಿಯಿಂದಾಗಿ ಇವರಿಗೆ ಈ ಪ್ರಶ್ನೆಗಳು ಬರಲು ಸಾಧ್ಯವಾಗಿದೆ. ಇದಕ್ಕೆ ಮೂಲ ಕಾರಣ ಭೂಮಿ ಸಮಸ್ಯೆ ಎಂಬುದು ಗೊತ್ತಾಗುತ್ತದೆ. ಈ ಸಮುದಾಯದ ಮೂಲ ಭೂತ ಸಮಸ್ಯೆಗಳಲ್ಲಿ ಇದು ಅತ್ಯಂತ ಸೂಕ್ಷ್ಮ ಮತ್ತು ಅಷ್ಟೇ ಪ್ರಧಾನವಾದ ವಿಚಾರವಾಗಿದೆ. ಈ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಯ ಮೂಲ ಕೇಂದ್ರಬಿಂದು ಇವರ ಭೂಮಿ ಒಡೆತನದ ಸಮಸ್ಯೆಯಾಗಿದೆ. ಬಾಂಜಾರು ಮಲೆ, ಅಂಬಟಮಲೆ, ಇಳಿಮಲೆ, ಶಿಶಿಲ ಪ್ರದೇಶಗಳಲ್ಲಿ ಮಾತ್ರ ಭೂ ಸುಧಾರಣೆ ಕಾಯಿದೆ ಪ್ರಕಾರ ಇವರಿಗೆ ಭೂ ಒಡೆತನ ದೊರೆತಿದೆ. ಇದನ್ನು ಹೊರತು ಪಡಿಸಿ ಬೇರೆ ಪ್ರದೇಶಗಳಲ್ಲಿ ಈಗಲೂ ತಮ್ಮ ಮೂಲನೆಲೆಗಳಲ್ಲಿ ತಮ್ಮದೇ ಭೂ ಪ್ರದೇಶಕ್ಕೆ ವಾರಸುದಾರರಾದ ಇವರು ಅರಣ್ಯ ಕಾಯಿದೆ, ಪ್ಲಾಂಟೇಷನ್ ಕಾಯಿದೆ ಪ್ರಭಾವದಿಂದಾಗಿ ಇಂದು ಭೂ ಒಡೆತನದಿಂದ ವಂಚಿತರಾಗಿದ್ದಾರೆ. ಇವರು ಸಾಗುವಳಿ ಮಾಡುತ್ತಾ ಬಂದಿರುವ ಭೂಮಿಗಳಿಗೆ ಭೂ ದಾಖಲೆ ಹಕ್ಕು ಪತ್ರಗಳು ಸಿಗದೇ ಇರುವುದು ವರ್ತಮಾನ ಕಾಲದ ಸಾಮಾಜಿಕ ಆರ್ಥಿಕ ದುಸ್ಥಿತಿಗೆ ಕಾರಣವಾಗಿದೆ. ೧೯೯೭ರಲ್ಲಿ ಭಾರತ ಸರ್ವೋಚ್ಚ ನ್ಯಾಯಾಲಯ ಸಮತಾ ಪ್ರಕರಣದಲ್ಲಿ ಆದಿವಾಸಿಗಳ ಭೂ ಒಡೆತನ ಕುರಿತು ಅತ್ಯಂತ ಚಾರಿತ್ರಿಕ ಮತ್ತು ಸುದೀರ್ಘ ತೀರ್ಪೊಂದನ್ನು ನೀಡಿತ್ತು. ಭೂಮಿ ಆದಿವಾಸಿಗಳಿಗೆ ಸಹಜವಾಗಿ ದತ್ತವಾದ ಅತ್ಯಂತ ಬೆಲೆ ಬಾಳುವ ಆಸ್ತಿ ಅದು ಆದಿವಾಸಿಗಳ ಸ್ಥಿರಾಸ್ತಿ, ಭೂ ಒಡೆತನದಿಂದ ಆದಿವಾಸಿಗಳು ಸಾಮಾಜಿಕ ಘನತೆ ಸಮಾನತೆ ಮತ್ತು ಆರ್ಥಿಕ ಸಬಲತೆಯನ್ನು ಹೊಂದುತ್ತಿದ್ದಾರೆ. ಈ ಕಾರಣಕ್ಕಾಗಿ ಆದಿವಾಸಿಗಳ ಭೂಮಿಯನ್ನು ಸಂವಿಧಾನ ರಕ್ಷಿಸಬೇಕು(ಪುಟ ೧೧೪, ಆದಿವಾಸಿಗಳ ಅಸ್ತಿತ್ವದ ಪ್ರಶ್ನೆ).[೨]

ರಾಷ್ಟ್ರೀಯ ಆದಿವಾಸಿ ನೀತಿ ಒಂದು ಪ್ರತಿಕ್ರಿಯೆಯಲ್ಲಿ ಡಾ.ಎ.ಎಸ್. ಪ್ರಭಾಕರರವರು ಆದಿವಾಸಿಗಳ ಭೂಒಡೆತನ ಎನ್ನುವುದ ಅವರ ಅಸ್ತಿತ್ವದ ಪ್ರಶ್ನೆಯಾಗಿದೆ. ಭೂಮಿ ಮತ್ತು ಅರಣ್ಯ ಅವರ ಪಾರಂಪರಿಕ ಆಯ್ಕೆಗಳು ಆದರೆ ವರ್ತಮಾನದಲ್ಲಿ ಸರ್ಕಾರಗಳು ಜನ ತಂತ್ರ ವ್ಯವಸ್ಥೆಯಲ್ಲಿ ಸಹಜವಾಗಿಯೇ ರಕ್ಷಿಸ ಬೇಕಾಗಿದ್ದ ದುರ್ಬಲವರ್ಗದ ಹಕ್ಕುಗಳನ್ನು ಧ್ವಂಸ ಮಾಡುತ್ತಿವೆ. ಮಾನವ ಹಕ್ಕುಗಳ ಮೇಲೆ ದೌರ್ಜನ್ಯ ನಡೆದಾಗಲೆಲ್ಲ ಸರ್ಕಾರಗಳು ರಾಷ್ಟ್ರೀಯ ಹಿತಾಸಕ್ತಿ ಎಂಬ ಗುರಾಣಿಯನ್ನು ಅಡ್ಡ ಹಿಡಿದುಕೊಳ್ಳುತ್ತವೆ. ಅದರಲ್ಲೂ ಭಾರತದಲ್ಲಿನ ವೈವಿಧ್ಯಮಯ ದಟ್ಟ ಅರಣ್ಯಗಳನ್ನು ಮತ್ತು ಅಲ್ಲಿ ವಾಸ ಮಾಡುವ ಆದಿವಾಸಿಗಳನ್ನು ಭಾರತದ ಬೃಹತ್ ಯೋಜನೆಗಳು ನುಂಗಿ ಹಾಕಿವೆ[೩](ಪುಟ. ೧೪೫) ಎಂಬ ಮಾತು ಈಗ ಮಲೆಕುಡಿಯ

ಬುಡಕಟ್ಟು ಸಮುದಾಯದ ಭೂಮಿ ಸಮಸ್ಯೆಯಲ್ಲಿ ಅಕ್ಷರಸಹ ಸತ್ಯವಾಗಿದೆ. ರಾಷ್ಟ್ರೀಯ ಉದ್ಯಾನದ ಹೆಸರಿನಲ್ಲಿ ಗಣಿಗಾರಿಕೆ ಮಾಡಲು ಸರ್ಕಾರ ಕಂಪನಿಗಳಿಗೆ ಅವಕಾಶ ಮಾಡಿಕೊಡುತ್ತಿದೆ. ಅಭಯಾರಣ್ಯಗಳಲ್ಲಿ ತಾಜ್ ಹೋಟಲ್‌ಗಳನ್ನು ನಿರ್ಮಿಸಿ ಪ್ರವಾಸೋದ್ಯಮದ ಅಭಿವೃದ್ಧಿ ನೆಪದಲ್ಲಿ ಅಲ್ಲಿನ ಮೂಲನಿವಾಸಿಗಳಿಗೆ ತೊಂದರೆ ಮಾಡುವ ಸರ್ಕಾರ ಈ ಸಮುದಾಯಗಳ ಹಿತವನ್ನು ಕಾಪಾಡುವಲ್ಲಿ ಮುಂದಾಗದಿರುವುದು ಭೂ ಸಮಸ್ಯೆಯ ತೀವ್ರತೆಯನ್ನು ಸ್ಪಷ್ಟಪಡಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದಲ್ಲಿ ಕಂಡು ಬರುವ ಭೂ ಸಮಸ್ಯೆಗಳಲ್ಲಿ

೧. ಭೂ ಒಡೆತನದ ಸಮಸ್ಯೆ, ೨. ಭೂ ಮಂಜೂರಾತಿ ಸಮಸ್ಯೆ, ೩. ಕಾನೂನು ಸಮಸ್ಯೆ, ೪.ಸ್ಥಳಾಂತರ ಸಮಸ್ಯೆ, ೫. ಒತ್ತುವರಿ ಸಮಸ್ಯೆ, ೬. ಭೂಮಾಲೀಕರ ಪ್ರಭಾವಗಳು ಪ್ರಮುಖವಾಗಿವೆ.

ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ ಮತ್ತು ಬಾರಿಮಲೆಗಳಲ್ಲಿ ವಾಸವಾಗಿರುವ ಮಲೆಕುಡಿಯ ಸಮುದಾಯದವರು ತಮ್ಮ ಭೂಮಿಯನ್ನ ಪಡೆಯಲು ನೆರಿಯಾದ ಹೆಬ್ಬಾರರು ಇತರ ಭೂಮಾಲೀಕರೊಂದಿಗೆ ನಿರಂತರವಾದ ಹೋರಾಟ ಮಾಡಿದ ಫಲವಾಗಿ ಭೂ ಸುಧಾರಣೆ ಕಾಯಿದೆಯಲ್ಲಿ ಉಳುವವನೆ ಭೂಮಿಯ ಒಡೆಯ ಎಂಬ ನಿಯಮದ ಅನುಸಾರ ಇವರಿಗೆ ಭೂ ಒಡೆತನ ದೊರೆಯಿತು. ಪ್ಲಾಂಟೇಷನ್ ಕಾಯಿದೆಯ ಅಡಿಯಲ್ಲಿ ಈ ಎಲ್ಲಾ ಪ್ರದೇಶಗಳು ಒತ್ತುವರಿ ಸಮಸ್ಯೆಯನ್ನು ಎದುರಿಸುತ್ತಿವೆ. ಇವರು ವಾಸವಾಗಿರುವ ಭೂಮಿಯ ಸುತ್ತ ಪ್ಲಾಂಟೇಷನ್ ಗಳು ಆವರಿಸಿವೆ. ಇದರಿಂದಾಗಿ ಇವರಿಗೆ ಭೂಮಿಯ ಸಮಸ್ಯೆ ಎದುರಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯಲ್ಲಿರುವ ಮಲೆಕುಡಿಯ ಸಮುದಾಯಕ್ಕೂ ಸಹ ಭೂಮಿಯ ಸಮಸ್ಯೆ ಎದುರಾಗಿದೆ. ಈ ಯೋಜನೆಯ ಫಲವಾಗಿ ಇಲ್ಲಿನ ನಿವಾಸಿಗಳನ್ನು ಸ್ಥಳಾಂತರಗೊಳಿಸುವ ಪ್ರಯತ್ನದ ಫಲವಾಗಿ ಇದರ ವಿರುದ್ಧ ನಡೆದ ಹೋರಾಟಗಳು ಈ ಪ್ರದೇಶದಲ್ಲಿ ನಕ್ಸಲ್ ಚಳವಳಿಯ ಪ್ರಭಾವಕ್ಕೆ ಒಳಗಾಗಲು ಸಾಧ್ಯವಾಗಿದೆ. ಇದರ ಹೊರತಾಗಿ ಕಾಯ್ದಿಟ್ಟ ಅರಣ್ಯಗಳ ವ್ಯಾಪ್ತಿಯಲ್ಲಿರುವ ಮಲೆಕುಡಿಯರಿಗೆ ಸಹ ಭೂಮಿಯ ಸಮಸ್ಯೆ ಎದುರಾಗಿದೆ. ಅರಣ್ಯ ಕಾಯಿದೆಯ ಪರಿಣಾಮವಾಗಿ ಓಡಾಡಲು ದಾರಿಯೂ ಸಹ ಇಲ್ಲದೇ ಇರುವ ಸ್ಥಿತಿ ಒದಗಿದೆ. ಅಲ್ಲದೆ ಅರಣ್ಯ ಕಾಯಿದೆಯ ನೀತಿಯಿಂದ ವಿದ್ಯುತ್ ಸಂಪರ್ಕ, ರಸ್ತೆ, ಮನೆ ನಿರ್ಮಾಣ, ಬಸ್ ನಿಲ್ದಾಣ ಇನ್ನಿತರ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗಿಲ್ಲ. ಆದ್ದರಿಂದ ಇಲ್ಲಿ ಇವರಿಗೆ ಮೂಲಭೂತ ಸೌಲಭ್ಯಗಳು ದೊರೆಯದೇ ಇರುವ ಸ್ಥಿತಿ ಒದಗಿದೆ. ರಾಷ್ಟ್ರೀಯ ಆದಿವಾಸಿ ಕರಡು ನೀತಿಯ ಪ್ರಕಾರ ಸ್ಥಳಾಂತರ ಬೇಸಾಯ ಪದ್ಧತಿ ಮತ್ತು ಭೂ ಪರಾಧೀನತೆಗೆ ಅವಕಾಶವಿದೆ. ಭೂ ಪರಾಧೀನತೆಯನ್ನು ನಿಯಂತ್ರಿಸಲು ರಾಷ್ಟ್ರೀಯ ನೀತಿ ಸಹಾಯಕವಾಗಿದೆ. ಬುಡಕಟ್ಟು ಜನರು ಗ್ರಾಮೀಣ ಭೂ ದಾಖಲೆಯನ್ನು ಹೊಂದುವುದು ಭೂ ದಾಖಲೆಗಳನ್ನು ಪಂಚಾಯಿತಿಯಲ್ಲಿ ಪ್ರಕಟಿಸುವುದು ದಾಖಲೆಗಳ ಅನುಪಸ್ಥಿತಿಯಲ್ಲಿ ಮೌಖಿಕ ಆಧಾರಗಳನ್ನು ಎತ್ತಿ ಹಿಡಿಯುವುದು ಬುಡಕಟ್ಟು ಜನರ ಭೂಮಿ ಇತರರಿಗೆ ಹೋಗುವುದನ್ನು ತಪ್ಪಿಸುವುದು ಅವರ ಭೂಮಿಯನ್ನು ಸರ್ವೇ ಮಾಡಿಸುವುದು ವ್ಯವಸಾಯ ಮಾಡುವುದಕ್ಕೆ ರೈತರಿಗೆ ಪಟ್ಟ ವಿತರಿಸುವುದು. ಬುಡಕಟ್ಟು ಜನರ ಆಸ್ತಿಯನ್ನು ಮತ್ತು ಹಕ್ಕುಗಳನ್ನು ಕಾನೂನಾತ್ಮಕವಾಗಿ ಕಾಪಾಡಲು ಅವಕಾಶವಿದೆ.

### ೫.೪. ಸ್ಥಳಾಂತರ ಸಮಸ್ಯೆ

ಬುಡಕಟ್ಟು ಸಮುದಾಯಗಳ ಸ್ಥಳಾಂತರವು ಈ ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಒಂದಾಗಿದೆ. ಈ ಸಮುದಾಯವನ್ನು ಸ್ಥಳಾಂತರಿಸಲು ಈಗಾಗಲೇ ಸರ್ಕಾರ ಕುದುರೆಮುಖ ರಾಷ್ಟ್ರೀಯ ಉದ್ಯಾನ ಪುನರ್ವಸತಿ ಪ್ಯಾಕೇಜನ್ನು ಘೋಷಣೆ ಮಾಡಿದೆ. ಪ್ರತ್ಯೇಕತಾ ಸಿದ್ಧಾಂತದ ಪ್ರಕಾರ ಕಾಡಿನಲ್ಲಿ ವಾಸವಾಗಿರುವ ಆದಿವಾಸಿಗಳನ್ನು ಅವರ ಪಾಲಿಗೆ ವಾಸಮಾಡಲು ಬಿಟ್ಟು ಬಿಟ್ಟುಬಿಡಬೇಕು ಮತ್ತು ಅವರಿಗೆ ಮೂಲ ಭೂತ ಸೌಲಭ್ಯಗಳನ್ನು ಒದಗಿಸಬೇಕು. ಬುಡಕಟ್ಟು ಜೀವನಾಶೈಲಿಗೆ ತೊಂದರೆಯುಂಟು ಮಾಡಬಾರದು ಅವರ ಹಿತಾಸಕ್ತಿಯನ್ನು ಕಾಪಾಡಬೇಕು. ಆದರೆ ಇಲ್ಲಿ ಅರಣ್ಯವಾಸಿಗಳನ್ನು ಒಕ್ಕಲೆಬ್ಬಿಸುವ ಪ್ರಯತ್ನ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಬುಡಕಟ್ಟು ಜನರಲ್ಲಿ ಬದಲಾವಣೆ ಬೇಕೆಂದರೆ ಆ ಸಮುದಾಯಗಳು ತಮ್ಮ ಮೌಲ್ಯಗಳನ್ನು ಜೀವನ ಶೈಲಿಯನ್ನು ಅವರಿಗಾಗಿ ರೂಪಿಸಿರುವ ಅಭಿವೃದ್ಧಿ ನೀತಿಗಳನ್ನು ಸಂಪೂರ್ಣವಾಗಿ ಸ್ವೀಕರಿಸಬೇಕು ಎಂಬುದು ಸಮೀಕರಣ ಸಿದ್ಧಾಂತ. ಸರ್ಕಾರ ಪುನರ್ವಸತಿ ಕೇಂದ್ರಗಳನ್ನು ತೆರೆದು ಪರಿಹಾರ ನೀಡಿದರೂ ಏನು ಪ್ರಯೋಜನವಾಗದೇ ಇರುವ ಸ್ಥಿತಿ ಇದೆ. ಸ್ಥಳಾಂತರವನ್ನು ಒಪ್ಪಿಕೊಂಡು ಹೊಸ ಬದುಕಿಗೆ ಹೊಂದಿಕೊಂಡು ಬದುಕುವುದು ಸಮೀಕರಣ ಸಿದ್ಧಾಂತದ ಮೂಲ ತತ್ವವಾಗಿದೆ. ಅರಣ್ಯದ ಒಳಗೆ ಯಾವ ಬಗೆಯ ಮಾನವನು ವಾಸ ಮಾಡಬಾರದು ಇಲ್ಲಿ ವಾಸ ಮಾಡುವ ಪ್ರಾಣಿ ಸಸ್ಯ ಸಂಪತ್ತಿಗೆ ಹಾನಿಯಾಗಬಾರದು ಅರಣ್ಯ ವೈವಿಧ್ಯತೆ ಮತ್ತು ಪರಿಸರವನ್ನು ಸಂರಕ್ಷಿಸಬೇಕು ಎಂಬ ಉದ್ದೇಶದಿಂದ ಜಾರಿಗೆ ಬಂದ ಅರಣ್ಯ ನೀತಿಗಳು ಯೋಜನೆಗಳು ಇಲ್ಲಿನ ಬುಡಕಟ್ಟು ಸಮುದಾಯಗಳನ್ನು ಸ್ಥಳಾಂತರಗೊಳಿಸಲು ಅವಕಾಶ ಮಾಡಿಕೊಟ್ಟಿವೆ. ಮಲೆಕುಡಿಯ ಬುಡಕಟ್ಟು ಸಮುದಾಯದ ಅಭಿವೃದ್ಧಿ ವಿಷಯದಲ್ಲಿ ಈ ಯಾವ ಸಿದ್ಧಾಂತಗಳು ಪ್ರಯೋಜನವಾಗುತ್ತಿಲ್ಲ. ಸಮೀಕರಣ ಸಿದ್ಧಾಂತಕ್ಕಿಂತ ಪ್ರತ್ಯೇಕತಾ ಸಿದ್ಧಾಂತವೇ ಇಲ್ಲಿನ ಮಲೆಕುಡಿಯರಿಗೆ ಸೂಕ್ತವೆನ್ನಿಸುತ್ತವೆ. ಎಲ್ಯಣ್ಣ ಮಲೆಕುಡಿಯ ಹೇಳುವ ಪ್ರಕಾರ ಇಲ್ಲಿನ ಕಾಡು ಹಚ್ಚಹಸಿರಿನ ಪರಿಸರ ಗಾಳಿ ನೀರು ಎಲ್ಲವೂ ನಮಗೆ ಬೇಕು. ನಮಗೆ ಇದೇ ಬದುಕು ಸಾಕು. ನಮಗೆ ಕಾಡಿನಿಂದ ನಾಡಿಗೆ ಬರಲು ಇಷ್ಟವಿಲ್ಲ. ಇಲ್ಲಿಯೇ ನಾವು ನಮ್ಮ ನಮ್ಮ ಕೃಷಿ ಮಾಡಿಕೊಂಡು ಚನ್ನಾಗಿದ್ದೇವೆ ಎಂಬ ಮಾತು ಪ್ರತ್ಯೇಕತಾ ನೀತಿಯನ್ನು ಪ್ರತಿಪಾದಿಸುತ್ತದೆ. ಅಂತೆಯೆ ಕುದುರೆಮುಖ ರಾಷ್ಟ್ರೀಯ ಉದ್ಯಾನದ ಜನರ ಕೂಗು ಸಹ ಸ್ಥಳಾಂತರದ ವಿರುದ್ಧದ ಕೂಗಾಗಿರುತ್ತದೆ.[೪]

ಈ ಸಮುದಾಯ ಅನಾದಿಕಾಲದಿಂದಲೂ ತಮ್ಮ ವಾಸದ ನೆಲೆಗಳನ್ನು ಸ್ಥಳಾಂತರಿಸುವುದರ ಮೂಲಕ ಜೀವನ ನಡೆಸುತ್ತಾ ಬಂದಿದೆ. ತಮ್ಮ ಅಸ್ತಿತ್ವಕ್ಕಾಗಿ ಒಂದಲ್ಲ ಒಂದು ರೀತಿಯಲ್ಲಿ ಸ್ಥಳಾಂತರ ಸಮಸ್ಯೆಯನ್ನು ಎದುರಿಸುತ್ತಲೇ ಬಂದಿದೆ. ಇವರದೇ ಆದ ಮೂಲ ನೆಲೆಗೆ ಇವರೇ ವಾರಸುದಾರರಾಗಿದ್ದರೂ ಕಾನೂನಿನಿಂದ ಇವರು ದೂರವೇ ಉಳಿಯ ಬೇಕಾದ ಸ್ಥಿತಿ ಒದಗಿದೆ. ಕಾಡಿನಿಂದ ನಾಡಿಗೆ ಬಂದ ಈ ಸಮುದಾಯಕ್ಕೆ ಮತ್ತು ಇವರ ನೆಲೆಗಳಿಗೆ ಈಗಲೂ ಭೂ ದಾಖಲೆಗಳು ದೊರೆತಿಲ್ಲ. ಕನ್ಯಾನ, ಕೊಕ್ಕಡ, ಹತ್ಯಡ್ಕ, ಪಾಣಾಜೆ, ಸುಬ್ರಮಣ್ಯ ಈ ಪ್ರದೇಶಗಳಲ್ಲಿ ಭೂ ಸಕ್ರಮಕ್ಕಾಗಿ ಈಗಲೂ ಅಲೆದಾಡುತ್ತಿದ್ದಾರೆ.

**ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ನಿವಾಸಿಗಳ ತೆರವು ಯೋಜನೆ**

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಪಶ್ಚಿಮ ಘಟ್ಟ ಪ್ರದೇಶಕ್ಕೆ ಹೊಂದಿಕೊಂಡಿರುವ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯ ಸಮುದಾಯದ ಮತ್ತು ಇತರ ಕುಟುಂಬಗಳನ್ನು ತೆರವುಗೊಳಿಸಿ, ಇವರು ವಾಸವಗಿರುವ ಅರಣ್ಯ ಭೂಮಿಯನ್ನು ಸರ್ಕಾರ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಇಲ್ಲಿ ವಾಸಿಸುವ ಕುಟುಂಬಗಳಿಗೆ ಪರಿಹಾರವನ್ನು ನೀಡಿ, ಇವರಿಗೆ ಪುನರ್‌ವಸತಿ ಕಲ್ಪಿಸುವ ಯೋಜನೆ ರೂಪಿಸಲಾಗಿದೆ. ಇದಕ್ಕಾಗಿ ಸರಕಾರ ಕುದುರೆಮುಖ ಪುನರ್ವಸತಿ ಯೋಜನೆ ಅನುಷ್ಠಾನ ಸಮಿತಿಯನ್ನು ರಚಿಸಿದೆ. ಯೋಜನಾ ಅನುಷ್ಠಾನ ಸಮಿತಿ ವರದಿ ಪ್ರಕಾರ ದಕ್ಷಿಣ ಕನ್ನಡ, ಉಡುಪಿ, ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಗೆ ಸೇರಿದ ಪ್ರದೇಶಗಳು ಈ ಯೋಜನೆಯ ವ್ಯಾಪ್ತಿಗೆ ಬರುತ್ತವೆ. ಈ ಯೋಜನೆಯ ಪ್ರಕಾರ ೧೩.೭೯ ಎಕರೆ ಭೂ ಸ್ವಾಧೀನ ಮಾಡಿಕೊಳ್ಳಬೇಕಾಗಿದೆ. ೨೦೧೦ಕ್ಕೆ ೨.೫೦ ಕೋಟಿ ರೂ.ಗಳನ್ನು ಮೀಸಲು ಇಡಲಾಗಿದೆ. ಉಡುಪಿ ಜಿಲ್ಲೆಗೆ ಸೇರಿದ ಕಾರ್ಕಳ, ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿಯ ವನ್ಯಜೀವಿ ವಲಯದ ತಲಾ ೧೦ ಗ್ರಾಮ, ಕುದುರೆಮುಖ ವನ್ಯ ಜೀವಿ ವಲಯದ ೩, ಕೆರೆಕಟ್ಟೆ ವನ್ಯ ಜೀವಿ ವಲಯದ ೧೯ ಸೇರಿದಂತೆ ಒಟ್ಟು ೪೨ ಗ್ರಾಮಗಳು ಈ ಯೋಜನೆಯ ವ್ಯಾಪ್ತಿಗೆ ಬರುತ್ತವೆ. ಕುದುರೆಮುಖದ ೩೩೫, ಕೆರೆಕಟ್ಟೆಯ ೫೪೧ ಸೇರಿದಂತೆ ಒಟ್ಟು ೧೩೩೦ ಕುಟುಂಬಗಳು ಈ ಯೋಜನೆಯ ವ್ಯಾಪ್ತಿಗೆ ಬರುತ್ತವೆ. ಈ ಪ್ರದೇಶದ ವಾಸಿಗಳ ಒಟ್ಟು ಜನಸಂಖ್ಯೆ ೬೪೪ ಆಗಿದ್ದು ಇದರಲ್ಲಿ ಪರಿಶಿಷ್ಟ ಜಾತಿ ೧೧೪, ಪರಿಶಿಷ್ಟ ಪಂಗಡ ೨೬೫೫, ಇತರರ ಸಂಖ್ಯೆ ೩೪೭೫ ಇದೆ.

**ಯೋಜನೆ ಅನುಷ್ಠಾನದ ಬೆಳವಣಿಗೆ**

೨೦೦೩-೦೪ನೇ ಸಾಲಿನಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ೨೦೧ ಕುಟುಂಬಗಳಿಗೆ ಪುನರ್ವಸತಿಯನ್ನು ಕಲ್ಪಿಸಲು ೨೩.೧೯ ಕೋಟಿ ರೂ.ಗಳ ಅನುದಾನ ಕೋರಿ ಸರಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು. ನಂತರದಲ್ಲಿ ಹೆಚ್ಚುವರಿಯಾಗಿ ಮತ್ತೆ ೨೫ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸುವ ೭.೭೧ ಕೋಟಿ ರೂ.ಗಳಿಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಈ ವರ್ಷದ ಅವಧಿಯಲ್ಲಿ ೨೦೧ ಕುಟುಂಬಗಳಿಗೆ ಪುನರ್ವಸತಿ ಯೋಜನೆಗೆ ಸರಕಾರದ ಮಂಜೂರಾತಿ ದೊರತರೂ ಸಹ ಅನುದಾನದ ಬಿಡುಗಡೆ ಆಗಲಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಪ್ರಸ್ತುತಕೆರೆ, ಮುಡಬಾ, ಶೀರ್ಲು, ಭಲೆಕುಡಿ, ಶಿರ್ಲಾಲು, ಕುತ್ಲೂರು, ನಾವೂರು, ಗುಲುಗುಂಜಿನಮನೆ, ಮಲವಂತಿಗೆ ಗ್ರಾಮಗಳಲ್ಲಿರುವ ೩೧೭ ಕುಟುಂಬಗಳು ಸ್ವ ಇಚ್ಛೆಯಿಂದ ಕುದುರೆಮುಖ ಉದ್ಯಾನವನ್ನು ತೊರೆಯಲು ಅರ್ಜಿಯನ್ನು ಸಲ್ಲಿಸಿದ್ದಾರೆ. ಈ ಕುಟುಂಬಗಳಿಗೆ ಭೂ ಪರಿಹಾರದ ಮೌಲ್ಯವನ್ನು ನಿರ್ಧರಿಸಲು ಇವರ ಅರ್ಜಿಗಳನ್ನು ಕಂದಾಯ ಅಧಿಕಾರಿಗಳಿಗೆ ಕಳಿಸಿ, ನಂತರ ಪುನರ್ವಸತಿ ಸಮಿತಿ ಅನುಮೋದನೆ ಪಡೆಯಬೇಕು. ಚಿಕ್ಕಮಗಳೂರು ಜಿಲ್ಲೆ ವ್ಯಾಪ್ತಿಯಲ್ಲಿನ ೩೯ ಕುಟುಂಬಗಳು ಈ ಯೋಜನೆಯ ವ್ಯಾಪ್ತಿಗೆ ಬರುತ್ತವೆ. ಈ ೩೯ ಕುಟುಂಬಗಳ ಭೂಮಿಯ ಆಸ್ತಿ ಮೌಲ್ಯವನ್ನು ನಿರ್ಧರಿಸಿ ಜಿಲ್ಲಾಧಿಕಾರಿಗಳು ವರದಿಯನ್ನು ಸರಕಾರಕ್ಕೆ ಸಲ್ಲಿಸಿದ್ದಾರೆ. ಜಿಲ್ಲೆಯ ಈ ೩೯ ಕುಟುಂಬಗಳು ಸೇರಿ ಒಟ್ಟು ೭೯ ಕುಟುಂಬಗಳಿಗೆ ಪರಿಹಾರವನ್ನು ನೀಡುವುದಕ್ಕಾಗಿ ಸರಕಾರಕ್ಕೆ ೨.೫೦ ಕೋಟಿ ರೂ.ಗಳ ಅನುದಾನದ ಮಂಜೂರಾತಿಗೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ೨೦೦೯-೧೦ನೇ ಸಾಲಿನಲ್ಲಿ ಸ್ವ ಇಚ್ಛೆಯಿಂದ ಹೊರಬರುವ ಕುಟುಂಬಗಳಿಗೆ ಸೂಕ್ತ ಪರಿಹಾರವನ್ನು ಕಲ್ಪಿಸಲು

ಸರಕಾರ ಹೊಸ ಲೆಕ್ಕ ಶೀರ್ಷಿಕೆಯನ್ನು ಸೃಷ್ಟಿಸಿ, ೯೭.೪೨ ಲಕ್ಷ ರೂ.ಗಳ ಅನುದಾನವನ್ನು ಬಿಡುಗಡೆ ಮಾಡಿದೆ. ಈ ಯೋಜನೆಯ ಅನುಷ್ಠಾನಕ್ಕಾಗಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಅನುಷ್ಠಾನ ಸಮಿತಿ ಸದಸ್ಯರ, ಇತರ ಇಲಾಖೆಗಳ ಅಧಿಕಾರಿಗಳ ಸಮಿತಿ ರಚಿಸಿ, ದಿನಾಂಕ ೨೫-೧೨-೨೦೦೯ ರಂದು ಸರಕಾರದ ಆದೇಶವನ್ನು ಹೊರಡಿಸಿದೆ. ಈ ಸಮಿತಿ ಸಭೆ ನಡೆಸಿ, ಪುನರ್ವಸತಿ ಕೋರಿ ಅರ್ಜಿ ಸಲ್ಲಿಸಿದೆ. ಕುಟುಂಬಗಳೊಂದಿಗೆ ಸಭೆ ನಡೆಸಿದೆ. ಬೆಳ್ತಂಗಡಿ ತಾಲೂಕಿನ ಕುತ್ಲೂರು, ನಾವೂರು ಗ್ರಾಮಗಳ ಮೇಲಿನರಾಬೆ, ಆಳಿಂಬ, ಕುರಿಯಾಡಿ, ಬೆಲ್ಲ, ಎರ್ಮಾಳ, ಸುತ್ತುಗಟ್ಟು ಗ್ರಾಮಗಳ ಒಟ್ಟು ೧೨ ಕುಟುಂಬಗಳಿಗೆ ತಲಾ ೧೦ ಲಕ್ಷ ರೂಪಾಯಿಗಳ ಪರಿಹಾವನ್ನು ನೀಡಿ, ಒಟ್ಟು ೧೩.೭೯ ಎಕರೆ ಭೂಮಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಲಾಗಿದೆ. ಉಳಿದ ಕುಟುಂಬಗಳು ಸಹ ಅರಣ್ಯದಿಂದ ಹೊರ ಬರಲು ತಿಳಿಸಲಾಯಿತು. ಆದರೆ ಈ ಕುಟಂಬಗಳು ಇದಕ್ಕೆ ಒಪ್ಪದೆ, ಇಲ್ಲಿ ವಾಸವಾಗಿರುವ ಕುಟುಂಬಗಳಿಗೆ ರಸ್ತೆ, ವಿದ್ಯುತ್ ಇತ ಮೂಲಭೂತ ಸೌಲಭ್ಯಗಳನ್ನು ನೀಡಲು ಸರಕಾರಕ್ಕೆ ಬೇಡಿಕೆ ಸಲ್ಲಿಸುತ್ತಾರೆ.ಪರಿಸರ ರಕ್ಷಣೆ ಮತ್ತು ಅಭಿವೃದ್ಧಿ ಸೇರಿದಂತೆ ಇಲ್ಲಿನ ಜೀವ ವೈವಿಧ್ಯತೆಗಳನ್ನು ಕಾಪಾಡಲು ಇಲ್ಲಿ ವಾಸವಾಗಿರುವ ಕುಟುಂಬಗಳನ್ನು ಉದ್ಯಾನವನದ ವ್ಯಾಪ್ತಿಯಿಂದ ಹೊರ ಕಳಿಸಲೇಬೇಕಾಗಿದೆ ಎಂಬುದರಲ್ಲಿ ಸರಕಾರದ ಪರವಾಗಿ ಜಿಲ್ಲಾಧಿಕಾರಿಗಳು ತಿಳಿಸುತ್ತಾರೆ. ೨೦೧೦ನೇ ಸಾಲಿನಲ್ಲಿ ಸರಕಾರ ೨.೫೦ ಕೋಟಿ ರೂ. ಪುನರ್ವಸತಿಗೆ ಕಾದಿರಿಸಿದೆ. ಈ ಮೊತ್ತದಲ್ಲಿ ೬೨.೫೦ ಲಕ್ಷ ಖಜಾನೆಗೆ ಜಮಾ ಮಾಡಲಾಗಿದೆ. ೨೦೧೦-೧೧ನೇ ಸಾಲಿನಲ್ಲಿ ಪರಿಹಾರಕ್ಕೆ ಸ್ವೀಕೃತವಾದ ಅರ್ಜಿಗಳಲ್ಲಿ ಮಲವಂತಿಕೆ, ನಾವೂರು ಗ್ರಾಮಗಳ ಎಳನೀರು ಮತ್ತು ಮೇಲಿನರಬೆ ಸುತ್ತುಗಟ್ಟಿನ ೯ ಕುಟುಂಬಗಳ ಅರ್ಜಿಗಳನ್ನು ಕಂದಾಯ ಅಧಿಕಾರಿಗಳು ಮೌಲ್ಯಮಾಪನ ಮಾಡಿದ್ದಾರೆ. ಈ ಮೌಲ್ಯಮಾಪನದಲ್ಲಿ ಕಂದಾಯ, ಲೋಕೋಪಯೋಗಿ, ತೋಟಗಾರಿಕೆ ಇಲಾಖೆ ಅಧಿಕಾರಿಗಳು ನಿಗದಿಪಡಿಸಿದ ಪ್ರಕಾರ ಒಟ್ಟು ರೂ. ೭೩.೫೫ ಲಕ್ಷ ಅನುದಾನದ ಅಗತ್ಯವಿದೆ. ಈ ಕುಟುಂಬಗಳು ತಲಾ ೧೦ ಲಕ್ಷ ರೂ. ಪರಿಹಾರ ಪಡೆದು ಸ್ವ ಇಚ್ಛೆಯಿಂದ ಹೊರಬರಲು ಒಪ್ಪಿಗೆ ಸೂಚಿಸಿದ್ದಾರೆ. ದಿನಾಂಕ ೩೧-೦೬-೨೦೧೦ರಂದು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಬೆಳ್ತಂಗಡಿ ತಾಲೂಕು ಕಛೇರಿಯಲ್ಲಿ ಸಭೆ ನಡೆಯುತ್ತದೆ. ಜಿಲ್ಲಾ ಉಸ್ತುವಾರಿ ಸಚಿವರಾದ ಕೃಷ್ಣ ಪಾಲೇಮಾರ್‌ರವರು ಈ ಸಭೆಯಲ್ಲಿ ಭಾಗವಹಿಸಿರುತ್ತಾರೆ. ಅರಣ್ಯದಿಂದ ಹೊರಬರುವ ಕುಟುಂಬಗಳಿಗೆ ತಲಾ ೧೦ ಲಕ್ಷ ರೂ. ಪರಿಹಾರ ನೀಡಲು ಸರಕಾರ ಒಪ್ಪಿಗೆ ನೀಡಿದೆ. ಇದಕ್ಕಾಗಿ ಸರಕಾರ ೨.೫ ಕೋಟಿ ರೂ. ಮುಂಜೂರು ಮಾಡಿದೆ ಎಂಬುದನ್ನು ಸಭೆಯಲ್ಲಿ ತಿಳಿಸಿದಾಗ ಸಭೆಯಲ್ಲಿ ಭಾಗವಹಿಸಿದ ಕುಟುಂಬಗಳ ಸಂತ್ರಸ್ತರು ಇದಕ್ಕೆ ವಿರೋಧ ವ್ಯಕ್ತಪಡಿಸುತ್ತಾರೆ.

## ಪರಿಹಾರ ಯೋಜನೆಗೆ ವಿರೋಧ

ಅರಣ್ಯ ವಾಸಿಗಳಿಗೆ ಈ ಸರಕಾರ ನೀಡುವ ತಲಾ ೧೦ ಲಕ್ಷ ರೂ.ಗಳ ಪರಿಹಾರಕ್ಕೆ ಸಂತ್ರಸ್ತರು ಸಮ್ಮತಿ ನೀಡಲು ನಿರಾಕರಿಸುತ್ತಾರೆ. ನಾವು ಇಲ್ಲಿ ಹಲವಾರು ಮಾರ್ಗಗಳಿಂದ ಕೃಷಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದೇವೆ. ಸರಕಾರ ಇದಕ್ಕೆ ಸೂಕ್ತ ಪರಿಹಾರ ನೀಡಬೇಕು, ೧೦ ಲಕ್ಷ ರೂ. ಸಾಲುವುದಿಲ್ಲ. ಇದಕ್ಕೆ ಸಾಧ್ಯವಾಗದಿದ್ದರೆ ನಮ್ಮನ್ನು ಅಲ್ಲಿಯೇ ಬದುಕಲು ಬಿಡಿ. ನಮಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಎಂಬ ಬೇಡಿಕೆಯನ್ನು ಸಲ್ಲಿಸಿದರು. ಇದಕ್ಕೆ ಜಿಲ್ಲಾಧಿಕಾರಿಗಳು ಒಪ್ಪುವುದಿಲ್ಲ. ಈ ಬಾರಿ ತಾಲೂಕಿನಲ್ಲಿ ೨೫ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸುತ್ತೇವೆ. ಇಷ್ಟವಿರುವವರು ತಲಾ ೧೦ ಲಕ್ಷ

ಪರಿಹಾರ ಪಡೆದು ಹೊರಬಹುದು. ಹೊರ ಬರುವವರಿಗೆ ೧೦ ಲಕ್ಷ ಪರಿಹಾರದ ಜೊತೆಗೆ ಒಂದು ಎಕರೆ ಭೂಮಿ ನೀಡಲು ಸರಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಪ್ರಯತ್ನಿಸಲಾಗುವುದು ಎಂಬುದನ್ನು ಜಿಲ್ಲಾಧಿಕರಿ ಪೊನ್ನುರಾಜ್ ತಿಳಿಸುತ್ತಾರೆ. ಅರಣ್ಯದಿಂದ ಹೊರ ಬರುವವರಿಗೆ ಈಗ ಇದು ಒಂದು ಉತ್ತಮ ಅವಕಾಶವಾಗಿದೆ. ಮುಂದೆ ಯಾವ ರೀತಿಯ ಯೋಜನೆ ಬರುತ್ತದೆಯೆಂದು ಗೊತ್ತಿಲ್ಲ ಎನ್ನುತ್ತಾರೆ. ಆಗ ೩ ಕುಟುಂಬಗಳು ಇದಕ್ಕೆ ಒಪ್ಪಿಗೆ ನೀಡಿರುವುದನ್ನು ತಿಳಿಸುತ್ತಾರೆ. ಇದಕ್ಕೆ ಎಳನೀರು ಪ್ರದೇಶದಿಂದ ಬರದ ನಿವಾಸಿಗಳು ನಮಗೆ ೧೦ ಲಕ್ಷ ಬೇಡ, ನಮ್ಮ ಕೃಷಿ ಭೂಮಿಗೆ ಮೌಲ್ಯ ನಿರ್ಧರಿಸಿ, ಪರಿಹಾರ ನೀಡಿ ಎಂಬ ಬೇಡಿಕೆಯನ್ನು ಸಲ್ಲಿಸಿದರು. ಪ್ರತಿ ಎಕರೆಗೆ ೧೦ ಲಕ್ಷ ರೂ. ಪರಿಹಾರ ನೀಡಬೇಕು ಎಂಬ ಬೇಡಿಕೆ ಸಲ್ಲಿಸುತ್ತಾರೆ. ಸರಕಾರ ಪ್ರತಿ ಕುಟುಂಬಕ್ಕೆ ೧೦ ಲಕ್ಷ ರೂ. ಪರಿಹಾರ ನೀಡಲು ಮುಂದಾದರೆ ಎಳನೀರು ಪರಿಸರದವರು ಪ್ರತಿ ಎಕರೆಗೆ ೧೦ ಲಕ್ಷ ರೂ. ಪರಿಹಾರ ಕೇಳಿದ್ದರಿಂದ ಯೋಜನೆ ಜಾರಿಗೆ ತೊಡಕುಂಟಾಗುತ್ತದೆ. ಈ ಹಿಂದೆ ಈಗಾಗಲೇ ೧೦ ಲಕ್ಷ ರೂ. ಪರಿಹಾರ ಪಡೆದು ಹೊರ ಬಂದ ಕುಟುಂಬಗಳಿಗೆ ಸರಕಾರ ಇದೇ ರೀತಿ ಆಶ್ವಾಸನೆ ನೀಡಿ ೧ ಎಕರೆ ಭೂಮಿಯನ್ನು ಇದುವರೆಗೆ ನೀಡಿರುವುದಿಲ್ಲ. ಇದು ಕೇವಲ ಆಶ್ವಾಸನೆ ಮಾತ್ರವಾಗಿದೆ ಎಂಬ ಮಾತು ಬಂದಾಗ ಸಭೆಯಲ್ಲಿದ್ದ ಸಚಿವರು, ಶಾಸಕರು ಈ ಬಗ್ಗೆ ಸರಕಾರದ ಗಮನಕ್ಕೆ ತಂದು ಪ್ರಯತ್ನಿಸಲಾಗುವುದು ಎಂಬ ಆಶ್ವಾಸನೆ ನೀಡುತ್ತಾರೆ.

**ನಡ, ನಾವೂರು ಗ್ರಾಮ ಪಂಚಾಯತಿ ಸಭೆ**

ದಿನಾಂಕ ೫.೦೮.೨೦೧೧ರಂದು ಗುರುವಾರ ಬೆಳ್ತಂಗಡಿ ತಾಲೂಕಿನ ನಡ ಗ್ರಾಮ ಪಂಚಾಯತಿ ಸಭಾ ಭವನದಲ್ಲಿ ನಡ ಮತ್ತು ನಾವೂರು ಗ್ರಾಮಗಳ ಗಿರಿ ಜನರ ಅಭಯಾರಣ್ಯ ವಾಸಿಗಳ ಸಭೆಯನ್ನು ನಡೆಸಲಾಯಿತು. ಮೂಲಭೂತ ಸೌಲಭ್ಯಕ್ಕಾಗಿ ಇಲ್ಲಿನ ಗಿರಿಜನರ ನಿವಾಸಿಗಳು ಒತ್ತಾಯಿಸುತ್ತಾರೆ. ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿ ಬಿ.ಎಸ್. ರಾಮಪ್ರಸಾದ್ ಹೆಚ್ಚುವರಿ ಜಿಲ್ಲಾಧಿಕಾರಿ ಪ್ರಭಾಕರ, ಪುತ್ತೂರು ಉಪವಿಭಾಗಾಧಿಕಾರಿ ಡಾ. ಹರೀಶ್ ಕುಮಾರ್, ಕಾವೇರಿಯಪ್ಪ ಕೆ.ಟಿ, ಬೆಳ್ತಂಗಡಿ ತಹಶೀಲ್ದಾರ್ ಎಂ.ಕೆ ಹಾಗೂ ಪ್ರಮೀಳರವರು ಭಾಗವಹಿಸಿದ್ದರು. ಈ ಸಭೆಯಲ್ಲಿ ಈ ಪ್ರದೇಶದ ಗಿರಿಜನ ನಿವಾಸಿಗಳು ತನ್ನ ಸಮಸ್ಯೆಗಳ ಬಗ್ಗೆ ಮನವಿ ಸಲ್ಲಿಸಿದರು. ಅಭಿವೃದ್ಧಿ ಮೂಲಭೂತ ಸೌಲಭ್ಯ ಸೇರಿದಂತೆ ಕುದುರೆಮುಖದ ರಾಷ್ಟ್ರೀಯ ಉದ್ಯಾನವನದ ಪುನರ್ವಸತಿ ಯೋಜನೆಯ ಪರಿಹಾರ ಮೊತ್ತ ಕುರಿತು ಇಲ್ಲಿ ಚರ್ಚೆಯಾಯಿತು. ನಮಗೆ ರಸ್ತೆ, ವಿದ್ಯುತ್, ಶಾಲೆ, ಆಸ್ಪತ್ರೆ, ಇನ್ನತರ ಮೂಲಭೂತ ಸೌಲಭ್ಯ ಒದಗಿಸಬೇಕು. ಕೃಷಿ ತೋಟ, ಮನೆ, ನಮ್ಮ ಆಸ್ತಿಪಾಸ್ತಿಗೆ ಪರಿಹಾರ, ನಮಗೆ ಪುನರ್ವಸತಿ ಕಲ್ಪಿಸಿಕೊಡಿರಿ, ಇಲ್ಲವಾದಲ್ಲಿ ನಾವು ಅರಣ್ಯದಿಂದ ಹೊರಬರಲು ಆಗುವುದಿಲ್ಲ. ಇಲ್ಲಿ ಮೂಲಭೂತ ಸೌಲಭ್ಯಗಳಿಲ್ಲದಿದ್ದರೆ ನಾವು ಇಲ್ಲಿ ವಾಸ್ತವ್ಯ ಇರಲೂ ಸಾಧ್ಯವಿಲ್ಲ. ಹೀಗಾಗಿ ನಾವು ಇಂದು ಅತಂತ್ರ ಸ್ಥಿತಿಯಲ್ಲಿ ಇದ್ದೇವೆ ಎಂಬುದರ ಬಗ್ಗೆ ಸಭೆಯಲ್ಲಿ ಅಹವಾಲುಗಳು ಬರುತ್ತವೆ. ಸರಕಾರ ನನ್ನ ಆಸ್ತಿ, ಕೃಷಿಗೆ ೬೬ ಲಕ್ಷ ರೂ. ಮೌಲ್ಯ ನಗದಿ ಮಾಡಿದೆ. ಆದರೆ ಈ ಯೋಜನೆಯ ಪ್ರಕಾರ ಕೇವಲ ೧೦ ಲಕ್ಷ ರೂ. ಮಾತ್ರ ಪರಿಹಾರ ಪಡೆದು ನಾನು ಹೇಗೆ ಹೊರಬರಲಿ. ಕೃಷಿ ಮತ್ತು ಮಕ್ಕಳ ಶಿಕ್ಷಣಕ್ಕಾಗಿ ನಾನು ಸಾಕಷ್ಟು ಸಾಲ ಮಾಡಿದ್ದೇನೆ ಎಂದು ಪುಟ್ಟಣ್ಣ ಮಲೆಕುಡಿಯ ಸಭೆಯಲ್ಲಿ ತನ್ನ ಆಳಲನ್ನು ತೋಡಿಕೊಳ್ಳುತ್ತಾರೆ. ಸರಕಾರ ಪರಿಹಾರದ ಜೊತೆಗೆ

ಪುನರ್ವಸತಿ ಕಲ್ಪಿಸುತ್ತದೆ ಎಂದು ನಂಬಿ ಕೆಲವು ರೈತರು ತನ್ನ ಇದ್ದ ಕೃಷಿ ತೋಟವನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ. ಇತ್ತ ಪರಿಹಾರವೂ ಇಲ್ಲ. ಮತ್ತೊಂದು ಕಡೆ ಕಾಡು ಪ್ರಾಣಿಗಳ ಕಾಟ ತಡೆಯಲೂ ಆಗುತ್ತಿಲ್ಲ ಎಂದು ಪೂವಪ್ಪ ಮಲೆಕುಡಿಯ ಸಭೆಯಲ್ಲಿ ಮೊರೆ ಹೋಗುತ್ತಾರೆ. ನನ್ನ ಹತ್ತು ಎಕರೆ ಜಾಗದ ಕೃಷಿ ತೋಟವನ್ನು ಬಿಟ್ಟು ಕೇವಲ ೧೦ ಲಕ್ಷ ರೂ. ಪರಿಹಾರವನ್ನು ಪಡೆದು ನಾನು ಹೇಗೆ ಹೊರ ಬರಲು ಸಾಧ್ಯ? ಎಂದು ರಾಮಣ್ಣ ಮಲೆಕುಡಿಯ ಪ್ರಶ್ನಿಸುತ್ತಾರೆ. ಹಲವು ಶತಮಾನಗಳಾದ ಕಾಡಿನೊಳಗೆ ವಾಸಿಸುತ್ತಿರುವ ಮುಗ್ಧ ಜನರಿಗೆ ಹಕ್ಕು ಪತ್ರ ನೀಡಬೇಕು. ನಿಜವಾಗಿ ಅರಣ್ಯ ರಕ್ಷಕರು ನಾವು ಎಂದು ಭಾಗವಹಿಸಿದವರು ಸಭೆಯಲ್ಲಿ ವಿನಂತಿಸಿಕೊಳ್ಳುತ್ತಾರೆ. ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುವುದರ ಬಗ್ಗೆ ಉಸ್ತುವಾರಿ ಭರವಸೆ ಕಾರ್ಯದರ್ಶಿಗಳಿಂದ ದೊರೆಯುತ್ತದೆ.

### ಬೆಳ್ತಂಗಡಿ ಸಭೆ

ದಿನಾಂಕ ೩೧ ಜುಲೈ, ೨೦೧೦ರಂದು ಶನಿವಾರ ಬೆಳ್ತಂಗಡಿ ತಾಲೂಕು ಕಛೇರಿಯಲ್ಲಿ ಜಿಲ್ಲಾಧಿಕಾರಿ ವಿ. ಪೊನ್ನುರಾಜ್ ನೇತೃತ್ವದಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನವನ ನಿವಾಸಿಗಳ ಸಮಾಲೋಚನಾ ಸಭೆ ನಡೆಯಿತು. ಜಿಲ್ಲಾ ಉಸ್ತುವಾರಿ ಸಚಿವರಾದ ಕೃಷ್ಣ ಜೆ. ಪಾಲೆಮಾರ್, ಪುತ್ತೂರು ಸಹಾಯಕ ಆಯುಕ್ತರಾದ ಡಾ.ಕೆ. ಹರೀಶ್ ಕುಮಾರ್, ಮಂಗಳೂರಿನ ಎಸಿ ಕೆ.ಟಿ. ಕಾವೇರಿಯಪ್ಪ, ಬೆಳ್ತಂಗಡಿ ಶಾಸಕ ಕೆ. ವಸಂತ ಬಂಗೇರ, ತಹಶೀಲ್ದಾರ್ ಎಂ.ಕೆ. ಪ್ರಮೀಳಾ ಭಾಗವಹಿಸಿದ್ದ ಈ ಸಮಾಲೋಚನಾ ಸಭೆಯಲ್ಲಿ ಬೆಳ್ತಂಗಡಿ ತಾಲೂಕಿನ ಎಳನೀರು ಗ್ರಾಮದಿಂದ ಬಂದ ಗ್ರಾಮಸ್ಥರು ಸೇರಿದಂತೆ ಅರಣ್ಯದ ನಿವಾಸಿಗಳು ಭಾಗವಹಿಸಿದ್ದರು. "ರಾಷ್ಟ್ರೀಯ ಉದ್ಯಾನವನದ ಒಳಗೆ ವಾಸಿಸುವ ಜನರು ಸ್ವಯಂ ಪ್ರೇರಣೆಯಿಂದ ಹೊರ ಬರಲು ಮಾನಸಿಕವಾಗಿ ಸಿದ್ಧರಾಗಬೇಕು. ಸರಕಾರದಿಂದ ಅವರಿಗೆ ಹೆಚ್ಚಿನ ಪರಿಹಾರ ನೀಡಿ ಪುನರ್ವಸತಿ ಕಲ್ಪಿಸಲಾಗುವುದು. ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ಅರಣ್ಯದೊಳಗೆ ಅವರು ವಾಸ್ತವ್ಯ ಇರಲು ಸಾಧ್ಯವಿಲ್ಲ. ಅಲ್ಲದೆ ಮೂಲಭೂತ ಸೌಲಭ್ಯಗಳ ಕೊರತೆಯೂ ಇದೆ. ಹೀಗಾಗಿ ತಕ್ಷಣ ರಾಷ್ಟ್ರೀಯ ಉದ್ಯಾನವನದಿಂದ ಹೊರಬರಬೇಕು" ಎಂದು ಸಚಿವರಾದ ಕ್ರಷ್ಣ ಜೆ ಪಾಲೇಮಾರ್ ಹೇಳುತ್ತಾರೆ.

### ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವಾಸಿಗಳ ಪುನರ್ವಸತಿ ಯೋಜನೆ

ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ಬಹಳ ವರ್ಷಗಳಿಂದ ವಾಸವಾಗಿರುವ ನಿವಾಸಿಗಳಲ್ಲಿ ಮಲೆಕುಡಿಯ ಬುಡಕಟ್ಟು ಸಮುದಾಯದ ಮೂಲ ನಿವಾಸಿಗಳು ಇದ್ದಾರೆ. ಇಲ್ಲಿ ವಾಸವಾಗಿರುವ ನವಾಸಿಗಳನ್ನು ಅರಣ್ಯದಿಂದ ಒಕ್ಕಲೆಬ್ಬಿಸಿ ಪುನರ್ವಸತಿ ಕಲ್ಪಿಸುವ ರಾಜ್ಯ ಯೋಜನೆಗೆ ೨-೩ ಕೋಟಿ ರೂ.ಗಳ ಅನುದಾನ ಬಿಡುಗಡೆಯಾಗಿರುತ್ತದೆ. ಮೊದಲನೇ ಹಂತದಲ್ಲಿ ಹನ್ನೊಂದು ಮಲೆಕುಡಿಯ ಸಮುದಾಯದ ಕುಟುಂಬಗಳು ತಲಾ ಹತ್ತು ಲಕ್ಷ ರೂ.ಗಳ ಪರಿಹಾರವನ್ನು ಪಡೆದು ಈಗಾಗಲೇ ಅರಣ್ಯದಿಂದ ಹೊರಬಂದಿದ್ದಾರೆ. ಇನ್ನು ಹಲವು ಕುಟುಂಬಗಳು ತಮ್ಮ ಬೆಲೆಬಾಳುವ ಕೃಷಿ, ಭೂಮಿ, ತೋಟ ಬಿಟ್ಟು ಬರಲು ಒಪ್ಪದೆ ಹಾಗೆಯೇ ಇದ್ದಾರೆ. ಇನ್ನೂ ಬಾಕಿ ಉಳಿದಿರುವ ಈ ಕುಟುಂಬಗಳನ್ನು ಇಲ್ಲಿಂದ ಒಕ್ಕಲೆಬ್ಬಿಸಿ ಅವರಿಗೆ ಪುನರ್ವಸತಿ ಸೌಲಭ್ಯಗಳನ್ನು ಕಲ್ಪಿಸುವ ಸಲುವಾಗಿ ದಿನಾಂಕ ೩೧ ಜುಲೈ, ೨೦೧೦ರಂದು ಜಿಲ್ಲಾಧಿಕಾರಿಗಳಾದ ಪೊನ್ನುರಾಜ್‌ರವರ ನೇತೃತ್ವದಲ್ಲಿ ಬೆಳ್ತಂಗಡಿ ತಾಲೂಕು ಕಛೇರಿಯಲ್ಲಿ

ಅರಣ್ಯ ನಿವಾಸಿಗಳ ಹಾಗೂ ಅಧಿಕಾರಿಗಳ ಸಭೆಯನ್ನು ನಡೆಸಿದ್ದಾರೆ. ಜಿಲ್ಲಾ ಉಸ್ತುವಾರಿ ಸಚಿವರಾದ ಕೃಷ್ಣ ಜೆ. ಪಾಲೇಮಾರ್, ಬೆಳ್ತಂಗಡಿ ಶಾಸಕರಾದ ವಸಂತ ಬಂಗೇರರವರು ಭಾಗವಹಿಸಿದ್ದ ಈ ಸಭೆಯಲ್ಲಿ ಅರಣ್ಯವಾಸಿಗಳ ಸಮಸ್ಯೆಗಳ ಬಗ್ಗೆ ಚರ್ಚಿಸಿದರು. ಸರಕಾರ ನಿಗದಿ ಮಾಡಿರುವ ಪ್ರತಿ ಕುಟುಂಬಕ್ಕೆ ಹತ್ತು ಲಕ್ಷ ರೂ.ಗಳ ಪರಿಹಾರವನ್ನು ಪಡೆದು ಅರಣ್ಯದಿಂದ ಹೊರಬರಲು ಜಿಲ್ಲಾಧಿಕಾರಿಗಳು ತಿಳಿದಾಗ ಇದಕ್ಕೆ ಅರಣ್ಯ ವಾಸಿಗಳು ಒಪ್ಪದೆ ವಿರೋಧ ವ್ಯಕ್ತ ಪಡಿಸಿದ್ದಾರೆ. ಅರಣ್ಯ ವಾಸಿಗಳ ಬೇಡಿಕೆಗೂ ಮತ್ತು ಸರಕಾರದ ಈಗಿನ ತೀರ್ಮಾನಕ್ಕೂ ತಾಳೆ ಆಗುತ್ತಿಲ್ಲ. ಸರಕಾರ ಅರಣ್ಯ ವಾಸಿಗಳು ಈಗ ಹೊಂದಿರುವ ಕೃಷಿ ಭೂಮಿಗೆ ಪ್ರತಿ ಒಂದು ಎಕರೆಗೆ ಹತ್ತು ಲಕ್ಷ ರೂಪಾಯಿಗಳ ಪರಿಹಾರವನ್ನು ನೀಡಬೇಕು. ಹಾಗಾದರೆ ಮಾತ್ರ ನಾನು ಅರಣ್ಯದಿಂದ ಹೊರ ಬರಲು ಸಾಧ್ಯ ಎಂಬ ಬೇಡಿಕೆಯನ್ನು ಇಟ್ಟಿದ್ದಾರೆ. ಈಗ ಇವರು ಹೊಂದಿರುವ ಭೂಮಿಯಲ್ಲಿ ಬೆಳೆ ಬಾಳುವ ಅಡಿಕೆ, ತೆಂಗು, ಬಾಳೆ ಇತರೆ ಕೃಷಿ ಭೂಮಿ ಇರುವುದರಿಂದ ಇದಕ್ಕೆ ಸೂಕ್ತವಾದ ಪರಿಹಾರ ಕೊಡಬೇಕು. ಇದಕ್ಕೆ ಸರಕಾರ ಪರಿಹಾರ ನೀಡಲು ಸಾಧ್ಯವಾಗದಿದ್ದರೆ ನಮ್ಮನ್ನು ಅರಣ್ಯದಲ್ಲಿಯೇ ಬದುಕಲು ಬಿಡಿ. ಅಲ್ಲಿ ನಮಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಬೇಕೆಂಬ ಬೇಡಿಕೆಯನ್ನು ಅರಣ್ಯವಾಸಿಗಳು ಇಡುತ್ತಾರೆ. ಇದನ್ನು ಒಪ್ಪದ ಜಿಲ್ಲಾಧಿಕಾರಿಗಳು ಈ ಬಾರಿ ೨೫ ಕುಟುಂಬಗಳಿಗೆ ಸರಕಾರದ ವತಿಯಿಂದ ಪುನರ್ವಸತಿ ಕಲ್ಪಿಸುತ್ತೇವೆ. ಪ್ರತಿ ಕುಟುಂಬಕ್ಕೆ ಹತ್ತುಲಕ್ಷ ರೂ.ಗಳ ಪರಿಹಾರ ಕೊಡುತ್ತೇವೆ. ಇದಕ್ಕೆ ಒಪ್ಪಿ ಇಷ್ಟ ಇರುವವರು ಹೊರಬರಬಹುದು. ಹೀಗೆ ಹೊರ ಬಂದವರಿಗೆ ಸರಕಾರದಿಂದ ಒಂದು ಎಕರೆ ಸರಕಾರಿ ಭೂಮಿಯನ್ನು ನೀಡಲು ಪ್ರಯತ್ನಿಸುವುದಾಗಿ ಜಿಲ್ಲಾಧಿಕಾರಿಗಳು ತಿಳಿಸಿದ್ದಾರೆ. ಈಗ ಇರುವ ಅವಕಾಶವನ್ನು ನೀವು ಬಳಸಿಕೊಳ್ಳಿರಿ. ಇದು ಒಂದು ಉತ್ತಮ ಅವಕಾಶ. ಮುಂದೆ ಯಾವ ರೀತಿಯ ಪರಿಹಾರ ದೊರಕುತ್ತದೆ ಎಂದು ಹೇಳಲು ಸಾಧ್ಯವಿಲ್ಲ ಎನ್ನುತ್ತಾರೆ. ಈಗ ೨೫ ಕುಟುಂಬಗಳ ಪೈಕಿ ಮೂರು ಕುಟುಂಬಗಳು ತಲಾ ಹತ್ತು ಲಕ್ಷ ಪರಿಹಾರ ಪಡೆದು ಹೊರಬರಲು ಒಪ್ಪಿಕೊಂಡಿರುವುದಾಗಿ ತಿಳಿಸುತ್ತಾರೆ. ಸಭೆಯಲ್ಲಿದ್ದ ಸಚಿವರು ಈಗ ಇರುವ ಪರಿಹಾರವನ್ನು ಪಡೆದು ಅರಣ್ಯದಿಂದ ಹೊರಬನ್ನಿ. ನಂತರ ಇನ್ನೂ ಹೆಚ್ಚಿನ ಪರಿಹಾರ ಒದಗಿಸುವುದರ ಬಗ್ಗೆ ಸರಕಾರದ ಗಮನ ಸೆಳೆಯುವುದಾಗಿ ಭರವಸೆ ನೀಡುತ್ತಾರೆ. ಇಲ್ಲ ಅರಣ್ಯವಾಸಿಗಳ ಬೇಡಿಕೆ ಯಾವುದೇ ರೀತಿಯ ಸ್ಪಂದನೆ ಸಿಗುತ್ತಿಲ್ಲ. ಈಗಾಗಲೇ ಅರಣ್ಯದಿಂದ ಹೊರ ಬಂದ ಕುಟುಂಬಗಳಿಗೆ ಹತ್ತು ಲಕ್ಷ ರೂ. ಪರಿಹಾರದ ಜೊತೆಗೆ ಸರಕಾರ ಭೂಮಿ ನೀಡುವುದಾಗಿ ಘೋಷಿಸಿದ್ದರೂ ಸಹ ಈ ಕುಟುಂಬಗಳಿಗೆ ಹಣ ಮಾತ್ರ ದೊರೆಕಿದೆ, ಭೂಮಿ ಸಿಕ್ಕಿಲ್ಲ. ಇದು ಒಂದು ಗಮನಾರ್ಹವಾದ ಸಮಸ್ಯೆಯಾಗಿದೆ. ಸರಕಾರ ಕೇವಲ ಹತ್ತು ಲಕ್ಷ ರೂ.ಗಳ ಪರಿಹಾರವನ್ನು ಮಾತ್ರ ನೀಡಿ ಇಲ್ಲಿಂದ ಒಕ್ಕಲೆಬ್ಬಿಸುವಲ್ಲಿ ಕಾರ್ಯನಿರತವಾಗಿದೆ. ಈಗ ಇರುವ ೩ ಕುಟುಂಗಳಲ್ಲಿ ಮನೆ ಜಾಗ ಮತ್ತು ಕಡಿಮೆ ಭೂಮಿ ಹೊಂದಿರುವವರಿಗೆ ಹತ್ತು ಲಕ್ಷದ ಪರಿಹಾರ ಸಾಕಾಗುತ್ತದೆ. ಆದರೆ ಇನ್ನು ಕೆಲವು ೨೫ ಕುಟುಂಬಗಳಲ್ಲಿ ಹೆಚ್ಚು ಭೂಮಿ, ಕೃಷಿ, ತೋಟ ಇರುವುದರಿಂದಾಗಿ ಇದು ಇವರಿಗೆ ತುಂಬಲಾಗದ ನಷ್ಟವಾಗುತ್ತದೆ. ಇದಕ್ಕೆ ಸರಕಾರ ನೀಡುವ ಹತ್ತು ಲಕ್ಷ ರೂ.ಗಳ ಪರಿಹಾರ ಸಾಕಾಗುವುದಿಲ್ಲ. ಅದಕ್ಕಾಗಿ ಇವರು ಒಂದು ಎಕರೆಗೆ ಹತ್ತು ಲಕ್ಷ ರೂ. ಪರಿಹಾರ ನೀಡಲು ಒತ್ತಾಯಿಸುತ್ತಿದ್ದಾರೆ. ಇದು ಅರಣ್ಯ ವಾಸಿಗಳ ಪಾಲಿಗೆ ಬಿಸಿ ತುಪ್ಪವಾಗಿದೆ. ಈ ಸಮಸ್ಯೆಯ ಪರಿಹಾರಕ್ಕೆ ಮುಂದೆ ಯಾವ ರೀತಿಯ ತಂತ್ರಗಾರಿಕೆ ಒತ್ತಡ ಬರುತ್ತದೆಂಬ ಆತಂಕದಲ್ಲಿ ಇಲ್ಲಿನ ಅರಣ್ಯವಾಸಿಗಳು ದಿನ ಕಳೆಯುತ್ತಿದ್ದಾರೆ. ಇದು ಇಲ್ಲಿ ವಾಸವಾಗಿರುವ

ಮಲೆಕುಡಿಯ ಮೂಲ ನಿವಾಸಿಗಳ ಅತಂತ್ರ ಬದುಕಿನ ಸ್ಥಿತಿಗೆ ಕಾರಣವಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದಿಂದ ಸ್ವಯಂ ಪ್ರೇರಣೆಯಿಂದ ಹೊರ ಬರುವವರಿಗೆ ಸರಕಾರ ಪ್ರತಿ ಕುಟುಂಬಕ್ಕೆ ಹತ್ತು ಲಕ್ಷ ರೂ. ಪರಿಹಾರ ನೀಡಿ ಜೊತೆಗೆ ತಲಾ ಒಂದು ಎಕರೆ ಸರಕಾರಿ ಜಾಗವನ್ನು ನೀಡಲಾಗುವುದು. ಈಗಾಗಲೇ ಸರಕಾರದಿಂದ ೨೫ ಕುಟುಂಬಗಳಿಗಾಗಿ ಒಟ್ಟು ೨.೫ ಕೋಟಿ ರೂ. ಅನುದಾನ ಬಿಡುಗಡೆಯಾಗಿದೆ. ಇನ್ನು ನಾಲ್ಕು ಕುಟುಂಬಗಳು ಇದಕ್ಕೆ ಒಪ್ಪಿಗೆ ನೀಡಿ, ಹೊರಬರಲು ಸಮ್ಮತಿ ನೀಡಿವೆ. ಆದರೆ ಯಾರನ್ನೂ ಬಲತ್ಕಾರದಿಂದ ಅರಣ್ಯ ಪ್ರದೇಶದಿಂದ ಹೊರಗೆ ಕಳಿಸಲಾಗುವುದಿಲ್ಲ ಎಂಬುದನ್ನು ಜಿಲ್ಲಾಧಿಕಾರಿ ವಿ. ಪೊನ್ನುರಾಜ್‌ರವರು ಸಭೆಯಲ್ಲಿ ತಿಳಿಸಿದ್ದಾರೆ. ಎಳನೀರು ಗ್ರಾಮದಿಂದ ಬಂದ ಅರಣ್ಯವಾಸಿಗಳು ಇದಕ್ಕೆ ಸಮ್ಮತಿ ಸೂಚಿಸದೆ ತಮ್ಮ ವಿರೋಧವನ್ನು ವ್ಯಕ್ತಪಡಿಸುತ್ತಾರೆ. ನಮಗೆ ೧೦ಲಕ್ಷ ರೂ. ಪರಿಹಾರ ಸಾಲದು. ನಮ್ಮ ಕೃಷಿ ಭೂಮಿಗೆ ತಕ್ಕ ಮೌಲ್ಯ ನಿರ್ಧರಿಸಿ ಹೆಚ್ಚಿನ ಪರಿಹಾರ ನೀಡಬೇಕು ಎಂದು ಒತ್ತಾಯಿಸುತ್ತಾರೆ. ಇದಕ್ಕೆ ಎಳನೀರು ಗ್ರಾಮಕ್ಕೆ ಭೇಟಿ ನೀಡಿ ಸಭೆ ನಡೆಸಲು ತೀರ್ಮಾನಿಸಲಾಯಿತು.

**ಎಳನೀರು ಸಭೆ**

ಎಳನೀರು ಬಸದಿಯಲ್ಲಿ ದಿನಾಂಕ ೧೧.೮.೨೦೧೦ರಂದು ಬೆಳ್ತಂಗಡಿ ತಾಲೂಕಿನ ಎಳನೀರು ಹಾಗೂ ಗುಡ್ಯಡ್ಕ ಗ್ರಾಮಗಳಿಗೆ ಜಿಲ್ಲಾಧಿಕಾರಿಗಳು ಭೇಟಿ ನೀಡಿ ಅಲ್ಲಿನ ಅರಣ್ಯವಾಸಿಗಳ ಸಭೆ ನಡೆಸಿ, ಜನರ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಸಂವಾದ ನಡೆಸಿದರು. ಈ ಸಭೆಯಲ್ಲಿ ಜಿಲ್ಲಾಧಿಕಾರಿ ಗಳು ಪ್ರತ್ಯೇಕವಾದ ಯೋಜನೆ ರೂಪಿಸುವ ಬಗ್ಗೆ ಭರವಸೆ ನೀಡುವುದರ ಮೂಲಕ ಇಲ್ಲಿನ ಮೂಲ ನಿವಾಸಿಗಳ ಮನವೊಲಿಸುವ ಪ್ರಯತ್ನವನ್ನು ಮಾಡಿದ್ದಾರೆ. "ಸರಕಾರ ಈಗ ನೀಡುವ ೧೦ ಲಕ್ಷ ರೂ. ಪರಿಹಾರದ ಜೊತೆಗೆ ಹೆಚ್ಚು ಕೃಷಿ ಭೂಮಿ ಹೊಂದಿರುವವರಿಗೆ ಅನ್ಯಾಯವಾಗುವಂತೆ ಪ್ರತ್ಯೇಕ ಯೋಜನೆ ರೂಪಿಸಲು ಪ್ರಯತ್ನಿಸುವುದಾಗಿ ಸಭೆಯಲ್ಲಿ ಭರವಸೆ ದೊರೆಯುತ್ತದೆ.

**ಬೇಡಿಕೆಗಳು:** ಈ ಸಭೆಯಲ್ಲಿ ಮೂಲನಿವಾಸಿಗಳಿಂದ ಬಂದ ಬೇಡಿಕೆಗಳೆಂದರೆ:

೧. ಇಲ್ಲಿನ ರೈತರ ಕೃಷಿ ಭೂಮಿ ಮತ್ತು ಕೃಷಿಯ ಮೌಲ್ಯಮಾಪನ ನಡೆಸಬೇಕು.

೨. ಇದಕ್ಕೆ ಸಮರ್ಪಕವಾದ ಪರಿಹಾರ ನೀಡಲು ಕ್ರಮಕೈಗೊಳ್ಳಬೇಕು.

೩. ಅರಣ್ಯದಿಂದ ಹೊರಬರುವವರಿಗೆ ಒಂದು ಎಕರೆ ಕೃಷಿ ಭೂಮಿ ನೀಡಬೇಕು.

೪. ವಿದ್ಯಾರ್ಹತೆಗೆ ಅನುಗುಣವಾಗಿ ಕುಟುಂಬದ ಜನರಿಗೆ ಸರಕಾರ ಉದ್ಯೋಗ ನೀಡಬೇಕು.

೫. ಎಳನೀರು ಪ್ರದೇಶದ ಜಾಗ ಕಂದಾಯ ಇಲಾಖೆಗೆ ಸೇರಿದ ಜಾಗವಾಗಿದ್ದರೂ ಸಹ ಈ ಪ್ರದೇಶದ ರಸ್ತೆ ಅಭಿವೃದ್ಧಿ ಮತ್ತು ವಿದ್ಯುತ್ ಸೌಲಭ್ಯಕ್ಕೆ ಅರಣ್ಯ ಇಲಾಖೆಯವರು ಅನಗತ್ಯವಾಗಿ ತಡೆಯನ್ನು ಒಡ್ಡುತ್ತಿದ್ದಾರೆ. ಈ ಬಗ್ಗೆ ಪರಿಶೀಲಿಸಬೇಕು.

೬. ಪ್ರತಿ ಎರಡು ವಾರಕ್ಕೊಮ್ಮೆ ಎಳನೀರು ಗ್ರಾಮಕ್ಕೆ ಗ್ರಾಮಕರಣಿಕರು ಬಂದು ಜನರ ಸಮಸ್ಯೆಗಳನ್ನು ಆಲಿಸಬೇಕು.

ಈ ಮೇಲಿನ ಬೇಡಿಕೆಗಳು ಈ ಸಭೆಯಲ್ಲಿ ಇಲ್ಲಿನ ಜನರಿಂದ ಮೂಡಿಬಂದಾಗ ಇವೆಲ್ಲವುಗಳ ಪರಿಹಾರಕ್ಕೆ ಜಿಲ್ಲಾಧಿಕಾರಿಗಳಿಂದ ಭರವಸೆ ಬಂದಿತು. ಎಳನೀರು ಪ್ರದೇಶದ ಜನರಿಗಾಗಿ ೧೦ ಲಕ್ಷ ಪರಿಹಾರದ ಜೊತೆಗೆ ಹೆಚ್ಚಿನ ಪರಿಹಾರ ನೀಡುವ ವಿಶೇಷ ಪುನರ್ವಸತಿ ಯೋಜನೆ ರೂಪಿಸುವುದಾಗಿ ಎಂದು ಜಿಲ್ಲಾಧಿಕಾರಿಗಳು ಹೇಳಿದಾಗ, ಇಲ್ಲಿ ಹೊಸದಾದ ಗೊಂದಲಕ್ಕೆ ಅವಕಾಶವಾಯಿತು. ಈಗಾಗಲೇ ೧೦ ಲಕ್ಷ ಪರಿಹಾರ ಪಡೆದವರಿಗೇಕೆ ಈ ವಿಶೇಷ ಪರಿಹಾರವಿಲ್ಲ? ಎಳನೀರು ಗ್ರಾಮಕ್ಕೆ ಮಾತ್ರ ಈ ರೀತಿ ವಿಶೇಷ ಯೋಜನೆ ರೂಪಿಸುವುದಾದರೆ ಇತರರು ಮಾಡಿದ ತಪ್ಪೇನು? ಎಂದು ಇಲ್ಲಿನ ಇತರ ಸಂತ್ರಸ್ತರು ಪ್ರಶ್ನಿಸುತ್ತಾರೆ ಮತ್ತು ಆತಂಕ ಪಡುತ್ತಾರೆ. ಇಲ್ಲಿ ಕೇವಲ ಅರಣ್ಯದಿಂದ ಹೊರಹಾಕಲು ಬೇಕಾದ ಭರವಸೆಯನ್ನು ಮಾತ್ರ ನೀಡುತ್ತಾರೆಯೇ ವಿನಹ ಅರಣ್ಯದಿಂದ ಹೊರ ಬರುವವರಿಗೆ ೧೦ ಲಕ್ಷದ ಹೊರತಾಗಿ ಒಂದು ಎಕರೆ ಜಾಗ ಕೊಡಿಸುವ ಭರವಸೆ ನೀಡಲಾಗಿದೆ. ಆದರೆ ಈಗಾಗಲೇ ಹೊರ ಬಂದವರಿಗೆ ಇದುವರೆಗೂ ಭೂಮಿಯೇ ದೊರೆತಿಲ್ಲ. ಬದಲಿ ಭೂಮಿ ಒದಗಿಸುವ ಬಗ್ಗೆ ಅಗತ್ಯ ಕ್ರಮಕೈಗೊಂಡಿಲ್ಲ. ಕೇವಲ ಅರಣ್ಯದಿಂದ ಹೊರಬರುವುದನ್ನು ಮಾತ್ರ ಹೆಚ್ಚು ಒತ್ತು ನೀಡಲಾಗುತ್ತದೆ. ಮೂಲನಿವಾಸಿಗಳ ಬದುಕಿನೊಂದಿಗೆ ಚೆಲ್ಲಾಟ ವಾಡುತ್ತಿರುವುದನ್ನು ಸರಕಾರ ನಿಲ್ಲಿಸಿ, ಅಗತ್ಯ ಕ್ರಮಕೈಗೊಳ್ಳಬೇಕು ಎಂಬುದು ಇಲ್ಲಿನ ಸಂತ್ರಸ್ತರ ಬೇಡಿಕೆಯಾಗಿದೆ.

**ಗುತ್ಯಡ್ಕದ ಸಭೆ**

ದಿನಾಂಕ. ೧೧.೮.೨೦೧೧ರಂದು ಜಿಲ್ಲಾಧಿಕಾರಿಗಳು ಗುತ್ಯಡ್ಕ, ಒಡಮನೆ, ಬಂಗಾರತಳಿಕೆ ಪ್ರದೇಶದ ನಿವಾಸಿಗಳ ಸಭೆಯನ್ನು ಗುತ್ಯಡ್ಕದ ಶಾಲೆಯಲ್ಲಿ ನಡೆಸಿ, ಇಲ್ಲಿನ ಜನರ ಸಮಸ್ಯೆಗಳನ್ನು ಆಲಿಸಿದರು. ಗುತ್ಯಡ್ಕದಲ್ಲಿರುವ ಸುಮಾರು ೫೦ ಕುಟುಂಬಗಳಿಗೆ ಖಾತೆ ಬದಲಾವಣೆ ಆಗದೆ ಸಮಸ್ಯೆ ಏರುತ್ತಿರುವುದರ ಬಗ್ಗೆ ಜನರ ಸಭೆಯಲ್ಲಿ ಜಿಲ್ಲಾಧಿಕಾರಿಗಳ ಗಮನ ಸೆಳೆದಾಗ ಜಿಲ್ಲಾಧಿಕಾರಿಗಳು ಕ್ರಮಕೈಗೊಂಡು ಪರಿಹಾರ ನೀಡುವುದರ ಬಗ್ಗೆ ಭರವಸೆ ನೀಡುತ್ತಾರೆ. ರಸ್ತೆಯ ಅಭಿವೃದ್ಧಿ, ವಿದ್ಯುತ್ ಸೌಲಭ್ಯ, ಶಿಕ್ಷಕರಿಗೆ ವಸತಿ ಸೇರಿದಂತೆ ಇತರ ಸೌಲಭ್ಯಗಳ ಕುರಿತು ಇಲ್ಲಿ ಚರ್ಚೆ ನಡೆಯಿತು.

**ಹಕ್ಕುಪತ್ರ ವಿತರಣೆ**

ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯ ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ನೆಲೆಸಿರುವ ಅರಣ್ಯ ವಾಸಿಗಳಿಂದ ಹಕ್ಕುಪತ್ರ ಪಡೆಯಲು ಒಟ್ಟು ೧೬೦೦ ಅರ್ಜಿಗಳನ್ನು ಇತ್ಯರ್ಥಪಡಿಸಲಾಗಿದ್ದು, ಇದರಲ್ಲಿ ೨೬೮ ಅರ್ಜಿಗಳನ್ನು ಪುರಸ್ಕರಿಸಿ ದಿನಾಂಕ ೧೫.೮.೨೦೧೧ರಂದು ಹಕ್ಕುಪತ್ರಗಳನ್ನು ನೀಡಲಾಯಿತು. ಈ ೨೬೮ ಅರ್ಜಿದಾರರು ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದಾರೆ.

**ಕುದುರೆಮುಖ ರಾಷ್ಟ್ರೀಯ ಉದ್ಯಾನ ಪುನರ್ವಸತಿ ಯೋಜನೆಯ ಫಲಿತಾಂಶಗಳು**

ಈ ಯೋಜನೆಯೇ ನಮ್ಮ ಜನಾಂಗಕ್ಕೆ ಒಂದು ಉರುಳಾಗಿದೆ ಎಂದು ಮಲೆಕುಡಿಯ ಸಮುದಾಯದ ಹಿರಿಯರಾದ ಕೆ. ನಾರಾಯಣ ಶಿಶಿಲ ಹೇಳುತ್ತಾರೆ. ಇದರ ವಿರೋಧಕ್ಕಾಗಿ ಈ ಪ್ರದೇಶದಲ್ಲಿ ನಕ್ಸಲರ ಸಂಘಟನೆಗೆ ಮಲೆಕುಡಿಯ ಯುವಕರು ಸೇರಿದಂತಾಯಿತು. ಇದಕ್ಕೆ ಕುತ್ಯಾರು ವಸಂತ ಗೌಡರ ನಿದರ್ಶನವಿದೆ. ಈ ಹೋರಾಟದಿಂದ ಮಲೆಕುಡಿಯರಿಗೆ ತಮ್ಮ ಭೂಮಿ ಉಳಿಸಿಕೊಳ್ಳಲು ಆಗಲಿಲ್ಲ. ಕೊನೆಗೆ ಇಲ್ಲಿಂದ ಹೊರಬರಬೇಕಾದ ಅನಿವಾರ್ಯತೆ ಬರುತ್ತಿದೆ.

ಈ ಯೋಜನೆಯಿಂದ ಈಗಲೂ ಇಲ್ಲಿನ ಜನರಲ್ಲಿ ಭಯ, ಆತಂಕದ ಬದುಕು ಸಾಗಿಸುತ್ತಿದ್ದಾರೆ. ಸರಕಾರ ಒಂದು ಕುಟುಂಬಕ್ಕೆ ೧೦ ಲಕ್ಷ ಪರಿಹಾರ ಮಾತ್ರ ನೀಡುತ್ತಾರೆ. ಇವರ ಮುಂದಿನ ಬದುಕಿನ ಸ್ಥಿತಿ ಕುರಿತು ಏನನ್ನೂ ಹೇಳುವುದಿಲ್ಲ. ೧೦ ಲಕ್ಷ ರೂ. ಪರಿಹಾರ ಪಡೆದು ಹೊರ ಬಂದವರು ತಮಗಿಷ್ಟ ಬಂದ ಕಡೆ ಜೀವನ ಸಾಗಿಸಬಹುದು. ಇವರ ಭೂಮಿಗೆ ಬದಲಾಗಿ ಬೇರೆ ಕಡೆ ಭೂಮಿ ನೀಡಿದರೆ ಕೃಷಿ ಮಾಡಿಕೊಂಡಿರಬಹುದು. ಆದರೆ ಇದಕ್ಕೆ ಸರಕಾರ ಸ್ಪಂದಿಸುತ್ತಿಲ್ಲದೇ ಇರುವುದು ಇದಕ್ಕೆ ಯೋಜನೆಯಲ್ಲಿ ಅವಕಾಶವನ್ನು ನೀಡದೇ ಇರುವುದು ಇವರ ಪಾಲಿಗೆ ಮುಂದಿನ ದಿನಗಳಿಗೆ ದುರಂತವಾಗಿ ಪರಿಣಮಿಸಲಿದೆ. ಈ ೧೦ ಲಕ್ಷ ಪಡೆದವರು ಬೇರೆ ಕಡೆ ಕೃಷಿ ಭೂಮಿ ಪಡೆದು ಜೀವನ ಸಾಗಿಸಿದರೆ ಇವರಿಗೆ ಒಂದು ಜೀವನ ಆಧಾರವಾಗುತ್ತದೆ. ಇದು ಆಗದೆ ೧೦ ಲಕ್ಷ ರೂ.ಗಳು ಇರುವವರಿಗೆ ಜೀವನಕ್ಕೆ ತೊಂದರೆ ಇಲ್ಲ. ಈ ೧೦ ಲಕ್ಷ ರೂ. ಮುಗಿದ ನಂತರ ಅಂದರೆ ಖರ್ಚಾದ ನಂತರ ಅವರ ಮುಂದಿನ ಗತಿ ಏನು? ಮುಂದಿನ ದಿಕ್ಕು ಯಾವುದು? ಎಂಬ ಪ್ರಶ್ನೆಗಳು ಮೂಡಿಬರುತ್ತವೆ.

### ೫.೫. ನಿರ್ವಸಿತ-ನಿರಾಶ್ರಿತರ ಸಮಸ್ಯೆ

ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪುನರ್ವಸತಿ ಪ್ಯಾಕೇಜ್‌ನಂದ ಪರಿಹಾರವನ್ನು ಪಡೆದು ಸುಲ್ಕೇರಿಯ ನಾಯಿದ ಗುರಿಗೆ ಬಂದು ನೆಲೆಸಿರುವ ಕುತ್ಲೂರು ೬ ಮಲೆಕುಡಿಯ ಕುಟುಂಬಗಳನ್ನು ಒಕ್ಕಲೆಬ್ಬಿಸುವಲ್ಲಿ ನಡೆದ ಹೋರಾಟವು ನಿರ್ವಸಿತ- ನಿರಾಶ್ರಿತರ ಸಮಸ್ಯೆಯನ್ನು ಸೂಚಿಸುತ್ತದೆ. ದಿ. ೧೩.೧೧.೨೦೧೧ರಂದು ಗುರುವಾರ ಬೆಳ್ತಂಗಡಿ ತಾಲೂಕಿನ ಸುಲ್ಕೆರಿ ಗ್ರಾಮದ ವ್ಯಾಪ್ತಿಯಲ್ಲಿ ನಾಯ್ದಗುರಿ ಎಂಬಲ್ಲಿ ನೆಲೆಸಿದ ೬ ಮಲೆಕುಡಿಯರ ಬುಡಕಟ್ಟು ಜನರನ್ನು ಕಂದಾಯ ಇಲಾಖೆ ವತಿಯಿಂದ ಅವರು ವಾಸವಾಗಿರುವ ಸ್ಥಳದಿಂದ ಒಕ್ಕಲೆಬ್ಬಿಸುವ ಪ್ರಯತ್ನ ನಡೆದಿರುವುದು ಇಲ್ಲಾ ಮಾಧ್ಯಮಗಳಲ್ಲಿ ವರದಿಯಾಗುವುದರ ಮೂಲಕ ಜನರ ಗಮನ ಸೆಳೆದ ಪ್ರಕರಣ ನಡೆಯಿತು.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಮುಖ್ಯಮಂತ್ರಿ ಸಚಿವಾಲಯ, ವಿಧಾನಸೌಧ ಬೆಂಗಳೂರು ಮನವಿಯ ಪ್ರತಿ ಪತ್ರದ ಸಂಖ್ಯೆ-ಸಿ. ಎಂ./೫೧೪೭೪ ಆರ್‌ಇ ಪಿ-ಸಿ.ಇ.ಎನ್/೨೦೧೦ ದಿ.೯.೧೧.೨೦೧೦ರಂದು ಒಂದು ಪತ್ರ ಬಂದಿದೆ. ಬುಡಕಟ್ಟು ಜನಾಂಗದವರಿಗೆ ಭೂಮಿ ನೀಡುವ ಕುರಿತು ಸಂಜೀವ ಮಲೆಕುಡಿಯವರು ನೀಡಿದ ಮನವಿಗೆ ಸಂಬಂಧಿಸಿದಂತೆ ಸಚಿವಾಲಯದಿಂದ ಬಂದ ಉತ್ತರವೆಂದರೆ "ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ  ಸಲ್ಲಿಸಿರುವ ತಮ್ಮ ಮನವಿಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಜಿಲ್ಲಾಧಿಕಾರಿ ದ.ಕ. ಜಿಲ್ಲೆ ಸಂಖ್ಯೆ ಸಿಎಂ/೫೧೪೭೪/ಆರ್‌ಪಿ, ಸಿಇಎನ್, ೨೦೧೦, ದಿ. ೧೯.೧೧.೨೦೧೦ ಪತ್ರದ ಮೂಲಕ ಕಳುಹಿಸಲಾಗಿದೆ. ಈ ಕುರಿತು ಕೈಗೊಂಡ ಕ್ರಮದ ಬಗ್ಗೆ ನಮಗೆ ಮಾಹಿತಿ ನೀಡಲು ತಿಳಿಸಿದೆ. ಎಂಬ ಉತ್ತರವನ್ನು ಸಂಜೀವ ಮಲೆಕುಡಿಯ ಮಲೆಜಂಡ ಮನೆ ಕೂತ್ಲುರು ಗ್ರಾಮ ಅಂಚೆ ಬೆಳ್ತಂಗಡಿ ಇವರಿಗೆ ಬಂದಿದೆ. ನಂತರ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳು ಬೆಳ್ತಂಗಡಿ ತಹಸಿಲ್ದಾರರಿಗೆ ಪತ್ರ ಸಂಖ್ಯೆ ಎಸ್.ಎನ್.ಡಿ(೨) ೫೪೯/೨೦೧೦-೧೧/ಸಿ.೩೮೬೮೭.ಬಿ.೩ ದಿ. ೧೫.೧೧.೨೦೧೦ರಂದು ಒಂದು ಪತ್ರವನ್ನು ಬರೆಯುತ್ತಾರೆ. ಉಲ್ಲೇಖಿತ ಮನವಿಯನ್ನು ಲಗತ್ತಿಸಿದೆ. ವಿಷಯದ ಕುರಿತು ಈ ಕೂಡಲೇ ಪರಿಶೀಲನೆ ನಡೆಸಿ ನಿಯಾಮಾನುಸಾರ ಕ್ರಮ ಕೈಗೊಂಡು ಮನವಿದಾರರಿಗೆ ಸಮಂಜಸ ಉತ್ತರ ನೀಡಲು ತಿಳಿಸಿದೆ ಎಂಬ ಉತ್ತರವಿರುವ ಪತ್ರವನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ತಹಸಿಲ್ದಾರರಿಗೆ ಬಂದಿದೆ. ಇದರ ಪ್ರತಿ

ಅರ್ಜಿದಾರರಾದ ಸಂಜೀವ ಮಲೆಕುಡಿಯವರಿಗೆ ಬಂದಿದೆ. ಇದರ ಪ್ರತಿಯಲ್ಲಿ ಮನವಿದಾರರಿಗೆ ತಹಸಿಲ್ದಾರರು ಬೆಳ್ತಂಗಡಿ ಇವರನ್ನು ಸಂಪರ್ಕಿಸಲು ತಿಳಿಸಿದೆ. ಜಿಲ್ಲಾಧಿಕಾರಿಗಳ ಮತ್ತೊಂದು ಪತ್ರ-ಸರ್ವೆ-ಉಪ-ಎಸ್-ಡಿ-(೪)ಹೆಚ್.ಎಸ್. ೧೬೪/೧೦-೧೧/ಬಿ೫/೩೧೫೧೮ ದಿ. ೧೫.೧೧.೨೦೧೦ರಂದು ಬೆಳ್ತಂಗಡಿ ತಹಸಿಲ್ದಾರರು ಅವರಿಗೆ ಬಂದಿದೆ. ಬೆಳ್ತಂಗಡಿ ತಾ ಸುಲ್ಕೇರಿ ಗ್ರಾಮದ ಸರ್ವೆ ನಂ-೨೨೨/೨,೫೮/೧ ಮತ್ತು ೬೨/೧ರಲ್ಲಿ ಜಮೀನಿನಲ್ಲಿ ವಾಸವಿರುವ ಜನರಿಗೆ ಜಮೀನನ್ನು ಮಂಜೂರಾತಿ ಮಾಡುವ ಬಗ್ಗೆ ಲಕ್ಷ್ಮಣ ಮಲೆಕುಡಿಯ ಮತ್ತು ಇತರರು ದಿನಾಂಕ ೮-೧೦-೨೦೧೦ರಂದು ಸಲ್ಲಿಸಿರುವ ಮನವಿಗೆ ಸಂಭಂದಿಸಿದಂತೆ ಉಲ್ಲೇಖದ ಮನವಿ ಯನ್ನು ಲಗತ್ತಿಸಿದೆ. ವಿಷಯದ ಕುರಿತು ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಂಡು ಅರ್ಜಿದಾರರಿಗೆ ಸಮಂಜಸ ಉತ್ತರ ನೀಡಲು ಕಳುಹಿಸಿದೆ ಎಂಬ ಸೂಚನೆ ಬಂದಿದೆ. ಅರ್ಜಿದಾರರಾದ ೧.ಲಕ್ಷ್ಮಣ ಮಲೆಕುಡಿಯ ೨. ಸಂಜೀವ ಮಲೆಕುಡಿಯ ೩. ರಾಮ ಮಲೆಕುಡಿಯ ೪. ವಸಂತಿ ಮಲೆಕುಡಿಯ ೫.ಚಂದ್ರಯ್ಯ ಮಲೆಕುಡಿಯ ೬. ವಿಠ್ಠಲ ಮಲೆಕುಡಿಯ ಇವರಿಗೆ ಬೆಳ್ತಂಗಡಿ ತಹಸಿಲ್ದಾರರು ಇವರನ್ನು ಸಂಪರ್ಕಿಸಲು ಕೋರಿದೆ ಎಂದಿದೆ. ನಾಯಿದಗುರಿ ಇಡೀ ಪ್ರಕರಣದ ದಿಕ್ಕು ತಪ್ಪಿಸುವ ಕೆಲಸ ಇದರ ನಂತರ ನಡೆದಿದೆ. ಮುಖ್ಯವಾಗಿ ಜಿಲ್ಲಾಧಿಕಾರಿಗಳಿಂದ ತಹಸಿಲ್ದಾರರಿಗೆ ಮುಂದಿನ ಕ್ರಮಕ್ಕಾಗಿ ಇವರ ಅರ್ಜಿ ಬಂದ ನಂತರ ತಹಸೀಲ್ದಾರರು ಈ ೬ಕುಟುಂಬಗಳು ಮತ್ತು ಮುಖಂಡರನ್ನು ಸಭೆ ಕರೆದು ಇದರ ಮುಂದಿನ ಕ್ರಮ ಸಾದಕ ಬಾದಕಗಳ ಬಗ್ಗೆ ತಿಳಿಸುವುದು ಈಗಿನ ಸ್ಥಿತಿ ಬೆಳವಣಿಗೆಯನ್ನು ಕುರಿತು ಚರ್ಚಿಸುವುದನ್ನು ಬಿಟ್ಟು ಯಾವುದೇ ಮೂನ್ಸೂಚನೆ ತಿಳುವಳಿಕೆ ಪತ್ರ ನೀಡದೇ ಏಕಾಏಕಿ ಪೊಲೀಸ್ ರಕ್ಷಣೆಯೊಂದಿಗೆ ಕಂದಾಯ ಪರಿವೀಕ್ಷಕರು ಮತ್ತು ಗ್ರಾಮಲೆಕ್ಕಾಧಿಕಾರಿಗಳ ನೇತೃತ್ವದಲ್ಲಿ ಇವರನ್ನು ಇಲ್ಲಿಂದ ಬಲವಂತವಾಗಿ ಹೊರಹಾಕುವ ಕ್ರಮ ನಡೆದಿರುವುದು ಈ ಕುಟುಂಬಗಳ ಅತಂತ್ರ ಬದುಕಿಗೆ ಕಾರಣವಾಗಿದೆ. ಇಲ್ಲಿ ಜವದ್ಬಾರಿಯಿಂದ ವರ್ತಿಸಬೇಕಾದ ತಹಸಿಲ್ದಾರರು ಮೇಲಾಧಿಕಾರಿಗಳಾಗಲಿ, ಜನಪ್ರತಿನಿಧಿ ಗಳಾಗಲಿ ಇವರ ಬದುಕಿಗೆ ಆಸರೆಯಾಗುವಂತಹ ಕ್ರಮದ ಬಗ್ಗೆ ಯೋಚಿಸದೇ, ಜಾಣ ಕುರುಡರಾಗಿ ಜಾರಿಕೊಳ್ಳುವುದರ ಮೂಲಕ ಇಲ್ಲಿನ ಮೂಲ ನಿವಾಸಿಗಳನ್ನು ನಿರಾಶ್ರಿತರನ್ನಾಗಿ ಮಾಡುವಲ್ಲಿ ಕಾರಣಕರ್ತರಾಗಿರುವುದು ತಿಳಿದುಬರುತ್ತದೆ. ಪಕ್ಷ ವೈಷಮ್ಯ ಗುಂಪುಗಾರಿಕೆ ಸೇರಿದಂತೆ ಪಟ್ಟಭದ್ರ ಹಿತಾಸಕ್ತಿಗಳ ಕಾಣದ ಕೈಗಳ ಕೈವಾಡ ಇಲ್ಲಿದೆ. ಈ ಪ್ರದೇಶಕ್ಕೆ ಬಂದು ವಾಸಮಾಡಲು ಆರಂಭಿಸಿದ ಈ ಕುಟುಂಬಗಳು ಸರ್ಕಾರಿ ಜಾಗದಲ್ಲಿದ್ದಾರೆ. ಇಲ್ಲಿಗೆ ಬಂದವರು ತಮ್ಮ ಬದುಕನ್ನು ಕಟ್ಟಿಕೊಳ್ಳಲು ತಮಗೆ ಅಂತ ಒಮದು ಸೂರನ್ನು ಮಾಡಿಕೊಳ್ಳುವಾಗ ಯಮದೂತರಂತೆ ಬಂದ ಕಂದಾಯ ಇಲಾಖೆಯ ಸಿಬ್ಬಂದಿಯವರನ್ನು ಒಳಗೊಂಡ ಗುಂಪು ಇವರ ಮೇಲೆ ದೌರ್ಜನ್ಯ ಮಾತ್ರವಲ್ಲ ಇವರನ್ನು ಸರ್ವನಾಶ ಮಾಡುವಷ್ಟರಮಟ್ಟಿಗೆ ಮುಂದಾಗಿದ್ದನ್ನು ನೋಡಿದರೆ ಇದು ಒಂದು ಪೂರ್ವ ನೀಯೋಜಿತ ಒತ್ತಡದ ಕ್ರಮ ಎಂಬುದು ತಿಳಿದುಬರುತ್ತದೆ. ಇಲ್ಲಿಗೆ ಬಂದು ನೆಲೆಸಿದವರು ಕುತ್ಲೂರಿನವರಾಗಿದ್ದು ಇವರ ಹೋರಾಟದಲ್ಲಿ ಗಟ್ಟಿಗರಾಗಿದ್ದಾರೆ. ಇವರ ಬೆದರಿಕೆಗೆ ಹೆದರುವ ಸಾಮಾನ್ಯರು ಇವರಲ್ಲ. ಇವರ ಈಗಿನ ಸ್ಥಿತಿ ಇವರ ಈ ಅತಂತ್ರ ಸ್ಥಿತಿಗೆ ಇವರು ಹಾಕುವ ಓಟು ಸಹ ಒಂದು ಕಾರಣವಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿನ ೫೮ ಮಲೆಕುಡಿಯ ಬುಡಕಟ್ಟು ಸಮುದಾಯದ ಕುಟುಂಬಗಳು ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ವಾಸ ಮಾಡುವ

ಕಾಡು ಬಿಟ್ಟು ಹೊರಗೆ ಬರಲು ಒಪ್ಪಿಗೆ ನೀಡಿದ್ದಾರೆ. ಮಾರ್ಚ್ ೨/೨೦೧೧ರಂದು ಮಂಗಳವಾರ ನಿಗ್ರಹ ದಳದವರ ಗುಂಡಿಗೆ ನಕ್ಸಲ್ ವಸಂತ ಬಲಿಯಾಗಿ ಈತನ ಶವವು ಶವಾಗಾರದಲ್ಲಿರುವಾಗಲೇ ಇದೇ ದಿನ ಮಂಗಳವಾರ ಜಿಲ್ಲಾಧಿಕಾರಿಗಳಾದ ಪೊನ್ನುರಾಜ್‌ರವರು ತಮ್ಮ ಕಛೇರಿಯಲ್ಲಿ ಬೆಳ್ತಂಗಡಿ ತಾಲೂಕಿನ ಕುದುರೆಮುಖ ರಾಷ್ಟ್ರೀಯ ಉಧ್ಯಾನವನದಲ್ಲಿ ವಾಸವಾಗಿರುವ ೧೨ ಮಲೆಕುಡಿಯರ ಕುಟುಂಬಗಳೊಂದಿಗೆ ಸಮಾಲೋಚನೆ ಸಭೆಯನ್ನು ೨.೩.೨೦೧೧ರಂದು ಮಂಗಳವಾರ ನಡೆಸಿದ್ದಾರೆ. ಇಲ್ಲಿ ನೆಲೆಸಿರುವ ಮಲೆಕುಡಿಯರನ್ನು ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪರಿಹಾರ ಪ್ಯಾಕೇಜ್‌ನ ಅಡಿಯಲ್ಲಿ ೧೨ ಕುಟುಂಬಗಳು ಸರ್ಕಾರ ನೀಡುವ ಪರಿಹಾರವನ್ನು ಪಡೆದು ಕಾಡಿನಿಂದ ಹೊರಗೆ ಬುರುವುದಕ್ಕೆ ಸಂಬಂದಿಸಿದಂತೆ ಈ ಸಭೆಯಲ್ಲಿ ಸಮಾಲೋಚನೆ ನಡೆಸಲಾಗಿದೆ. ಇಲ್ಲಿನ ಜನರನ್ನು ಕಾಡಿನಿಂದ ಒಕ್ಕಲೆಬ್ಬಿಸುವುದಕ್ಕೆ ಸಂಬಂಧಿಸಿದಂತೆ ವಾದ-ವಿವಾದಗಳಾಗಿ ಈ ಭಾಗದಲ್ಲಿ ಇದು ಒಂದು ಸವಾಲಾಗಿದೆ. ಕಾಡಿನಲ್ಲಿರುವ ಜನರಿಗೆ ಅಧಿಕಾರಿಗಳು ಕಿರುಕುಳ ನೀಡಿ ಬಲವಂತವಾಗಿ ಒಕ್ಕಲೆಬ್ಬಿಸುತ್ತಾರೆ ಎಂಬ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳು ಈ ಸಭೆಯಲ್ಲಿ ಸಮಾಲೋಚನೆ ಮಾಡಿ ಚರ್ಚಸಿದಾಗ ಇಲ್ಲಿ ಭಾಗವಹಿಸಿದ್ದ ಮಲೆಕುಡಿಯ ಸಮುದಾಯದ ಕುಟುಂಬದ ಮುಖ್ಯಸ್ಥರು ತಾವು ಸ್ವಇಚ್ಚೆಯಿಂದ ಹೊರಬರು ತ್ತಿರುವುದಾಗಿ ಹೇಳಿದ್ದಾರೆ. ಪ್ರತಿ ಕುಟುಂಬದ ವಾಸದ ಜಾಗ, ಜಮೀನು, ತೋಟದ ಸರ್ವೆ ಮಾಡಿ ಇವರಿಗೆ ೧೦ ಲಕ್ಷ ರೂಪಾಯಿಗಳ ಪರಿಹಾರ ನೀಡಲು ಸರ್ಕಾರ ನಿರ್ಧರಿಸಿರುವುದನ್ನು ಇವರು ಒಪ್ಪಿಕೊಂಡಿದ್ದಾರೆ. ಇವರು ಇದಕ್ಕೆ ಒಪ್ಪಿಗೆ ನೀಡಲು ಇರುವ ಹಿನ್ನೆಲೆ ಎಂದರೆ ಇವರು ವಾಸವಾಗಿರುವ ಅರಣ್ಯ ಪ್ರದೇಶ ಈಗ ಕುದುರೆಮುಖ ರಾಷ್ಟ್ರೀಯ ಉಧ್ಯಾನವನ ಎಂದು ಘೋಷಣೆ ಮಾಡಿ ಅಧಿಸೂಚನೆಯನ್ನು ಹೊರಡಿಸಿದೆ. ಈಗ ಈ ಅರಣ್ಯ ಪ್ರದೇಶದ ವ್ಯಾಪ್ತಿಯಲ್ಲಿರುವ ಇವರ ಭೂಮಿಗೆ ಸರ್ಕಾರ ೨೫ ಲಕ್ಷದವರೆಗೆ ಮೌಲ್ಯ ನಿಗದಿ ಮಾಡಿದರೂ ಸಹ ಈ ಆಸ್ತಿಯನ್ನು ಮಾರಾಟ ಮಾಡಲು ಬೇರೆಯವರು ಕೊಳ್ಳುವುದೇ ಇಲ್ಲ ಎಂಬ ಆತಂಕ ಇವರಲ್ಲಿದೆ. ಇಲ್ಲಿ ವಾಸವಾಗಿರುವ ಕಾಡಿನಲ್ಲಿ ದಿನ ಬೆಳಗಾದರೆ ಕಡು ಪ್ರಾಣಿಗಳ ಕಟ ಕೆಲವೊಮ್ಮೆ ಮನೆಯ ಎದುರು ಕಾಡಾನೆ ಬಂದು ನಿಲ್ಲುತ್ತದೆ. ಇನ್ನೊಮ್ಮೆ ಮನೆಯ ಮುಂದಿನ ಅಂಗಳದಲ್ಲಿ ನಾಯಿ ಮಲಗುವ ಜಾಗದಲ್ಲಿ ಚಿರತೆ ಅಥವಾ ವಿಷಕಾರಿ ಹಾವುಗಳು ಮಲಗಿರುತ್ತವೆ. ಇನ್ನು ಕೃಷಿ ಮಾಡಿದರೆ ಕಾಡು ಪ್ರಾಣಿಗಳ ಕಾಟದಿಂದ ಹಾಳಾಗುತ್ತದೆ. ಇಲ್ಲಿ ವಿದ್ಯುತ್ ಇಲ್ಲ, ರಸ್ತೆ ಮಾಡುವಂತಿಲ್ಲ, ಮಕ್ಕಳಿಗೆ ಶಿಕ್ಷಣವಿಲ್ಲ, ಆರೋಗ್ಯ ಇತರ ಮೂಲಭೂತ ಸೌಲಭ್ಯಗಳಿಲ್ಲ. ಇಂತಹ ಅಪಯಕಾರಿ ಪರಿಸ್ಥಿತಿಯಲ್ಲಿ ನಾವು ಈಗ ಬುದುಕುವುದು ಬೇಡ, ನಮ್ಮ ಕಾಲವಂತೂ ಮುಗಿಯಿತು. ನಮ್ಮ ಮಕ್ಕಳು ನಾಗರೀಕ ಪ್ರಪಂಚದೊಂದಿಗೆ ಬದುಕಲಿ ಎಂಬುದು ಇವರ ವಾದವಾಗಿದೆ. ಇದು ಅಲ್ಲದೆ ರಾಷ್ಟ್ರೀಯ ಉದ್ಯಾನ ಎಂದು ಘೋಷಣೆಯಾದ ಬಳಿಕ ಇವರ ಇದುವರೆಗಿನ ಜೀವನ ಆಧಾರವಾಗಿದ್ದ ಕಾಡಿನ ಉತ್ಪನ್ನಗಳ ಸಂಗ್ರಹವನ್ನು ನಿರ್ಬಂಧಿಸಲಾಗಿದೆ. ಇಲ್ಲಿನ ಬದುಕು ಎಷ್ಟು ಕಷ್ಟ ಭೀಕರ ಎಂದರೆ ಇವರು ವಾಸವಾಗಿರುವ ಸ್ಥಳದಿಂದ ಕಾಡಿನಲ್ಲಿ ೧೦ ಕಿ.ಮೀ ದೂರ ನಡೆದು ಬರಬೇಕು. ಮನೆ ಸೇರಬೇಕಾಗಿದೆ. ಪ್ಯಾಕೇಜ್ ಪಡೆದು ಕಾಡಿನಿಂದ ಹೊರಬರುವುದಕ್ಕೆ ೧೭ ಕುಟುಂಬಗಳು ತೀರ್ಮಾನಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಿನಾಂಕ ೮.೩.೨೦೧೯ರಂದು ಸೋಮವಾರ ಈ ೧೧ ಕುಟುಂಬಗಳಿಗೆ ಭೂ ಮೌಲ್ಯದ ತಲಾ ೧೦ ಲಕ್ಷ ಪರಿಹಾರದ ಚಕ್ಕನ್ನು ವಿತರಣೆ ಮಾಡುವುದರ ಮೂಲಕ ಇವರನ್ನು ಇಲ್ಲಿಂದ ಒಕ್ಕಲೆಬ್ಬಿಸುವ ಕೆಲಸಕ್ಕೆ

ಚಾಲನೆ ನೀಡಲಾಯಿತು. ಬೆಳ್ತಂಗಡಿಯ ತಾಲೂಕು ಪಂಚಾಯತಿ ಸಭಾಂಗಣದಲ್ಲಿ ದ.ಕ ಜಿಲ್ಲಾಡಳಿತ ಮತ್ತು ಕುದುರೆಮುಖ ರಾಷ್ಟ್ರೀಯ ಉದ್ಯಾನವನ ಪುನರ್‌ವಸತಿ ಯೋಜನಾ ಅನುಷ್ಠಾನ ಸಮಿತಿ ವತಿಯಿಂದ ಮಲಕುಡಿಯ ೧೧ ಕುಟುಂಬಗಳಿಗೆ ಒಟ್ಟು ೯೧.೪೨ ಲಕ್ಷ ರೂ. ಪರಿಹಾರದ ಚೆಕ್ಕನ್ನು ಬೆಳ್ತಂಗಡಿ ಶಾಸಕರಾದ ಕೆ. ವಸಂತ ಬಂಗೇರರವರು ವಿತರಣೆ ಮಾಡಿದ್ದಾರೆ. ಒಟ್ಟು ೨೦ ಕುಟುಂಬಗಳು ಪರಿಹಾರಕ್ಕೆ ಅರ್ಜಿಯನ್ನು ಸಲ್ಲಿಸಿದ್ದಾರೆ. ಈ ೧೧ ಕುಟುಂಬಗಳು ಮಾತ್ರ ಅರಣ್ಯದಿಂದ ಹೊರಬಂದು ವಾಸಿಸಲು ಒಪ್ಪಿಕೊಂಡಿದ್ದಾರೆ. ಒಕ್ಕಲೆಬ್ಬಿಸುವುದರಲ್ಲಿ ಮದ್ಯವರ್ತಿಗಳು ಲಾಭ ಮಾಡುತ್ತಿದ್ದಾರೆಂದು ಕಂಡು ಬಂದಲ್ಲಿ ಕೂಡಲೇ ತನಿಖೆ ನಡೆಸಲಾಗುವುದು ಎಂದು ಪುತ್ತೂರು ಸಹಾಯಕ ಕಮೀಷನರ್ ಡಾ. ಹರೀಶ್ ಕುಮಾರ್‌ರವರು ಹೇಳಿದ್ದಾರೆ. ಪರಿಹಾರದ ಚೆಕ್ ವಿತರಣೆ ಮಾಡಿದ ಶಾಸಕರಾದ ಕೆ. ವಸಂತ್ ಬಂಗೇರರವರು ಜಮೀನಿನ ಮೌಲ್ಯಕ್ಕೆ ತಕ್ಕಂತೆ ಪರಿಹಾರ ಸಿಗಲಿಲ್ಲ ಎಂಬ ವಿಚಾರ ತಿಳಿದಿದೆ. ಈ ಬಗ್ಗೆ ಮುಖ್ಯಮಂತ್ರಿಯವರ ಗಮನ ಸೆಳೆಯುತ್ತೇನೆ. ಬೆಳ್ತಂಗಡಿಯಿಂದ ಎಡನೀರು, ಸಂಸ್ಥೆಗೆ ಹೋಗಲು ದಿಡುಪೆ ಮುಖಾಂತರ ಹತ್ತಿರದ ದಾರಿ ಇದೆ. ಈ ದಾರಿಗೆ ಅರಣ್ಯ ಇಲಾಖೆ ಅಡ್ಡಿಪಡಿಸುತ್ತದೆ. ಇನ್ನೂ ಅರಣ್ಯ ಇಲಾಖೆ ಕಾಡಿನೊಳಗೆ ವಾಸಿಸುವ ಜನರ ನೀರಾವರಿ ಪೈಪುಗಳನ್ನು ಕಿತ್ತು ಹಾಕುವುದು ಕಂಡುಬಂದರೆ ನಾನು ಸುಮ್ಮನಿರಲಾರೆ ಎಂದು ಎಂದಿದ್ದಾರೆ. ಒಕ್ಕಲೆಬ್ಬಿಸುವವರ ಪರವಾಗಿ ನಿರಂತರವಾಗಿ ಹೋರಾಟ ಮಾಡುತ್ತಿದ್ದ ಈ ಸಮುದಾಯದ ವಸಂತಿರವರು ಈ ಸಮುದಾಯದವರ ಪರವಾಗಿ ಮಾತನಾಡಿದ್ದಾರೆ. ಕಾಡಿನಲ್ಲಿ ಖಾಲಿಯಾದ ಮನೆಗಳು ಇನ್ನು ಮುಂದೆ ಅಕ್ರಮ ಮರಮುಟ್ಟುಗಳ ಸಂಗ್ರಹವಾಗುವ ಸಾಧ್ಯತೆ ಇದೆ. ಇದು ಅನೈತಿಕ ಚಟುವಟಿಕೆಗಳ ಗುಂಡಾಕೃತ್ಯಗಳ ತಾಣವಾಗಬಹುದು ಎಂದು ಎಚ್ಚರಿಸಿದ್ದಾರೆ. ಈ ಎಲ್ಲಾ ಬೆಳವಣಿಗೆಯನ್ನು ಅವಲೋಕಿಸಿ ಅಧ್ಯಯನ ಮಾಡಿದಾಗ ನನಗೆ ಕಂಡುಬರುವುದು ಇವರ ಸಾಮಾಜಿಕ ಆರ್ಥಿಕ ಸ್ಥಿತಿಯ ಸುಧಾರಣೆಗಾಗಿ ಇರುವರೆಗೆ ಇಲ್ಲಿನ ಪ್ರದೇಶದಲ್ಲಿದ್ದು ನಕ್ಸಲ್ ಸಂಘಟನೆಯಿಂದ ಇಲ್ಲಿನ ಜನರಿಗೆ ಯಾವುದೇ ಪ್ರಯೋಜನವಾಗದೇ ಇರುವುದು ತಿಳಿದುಬರುತ್ತದೆ. ಇದುವರೆಗೆ ಸರ್ಕಾರ ನಕ್ಸಲ್ ಪೀಡಿತ ಪ್ರದೇಶಗಳ ಅಭಿವೃದ್ದಿಗಾಗಿ ನೀಡಿದ ನಕ್ಸಲ್ ಪ್ಯಾಕೇಜ್ ಅನುದಾನ ಸರಿಯಾಗಿ ಬಳಕೆಯಾಗಿದೆಯೇ ಇಲ್ಲಿ ರಸ್ತೆ, ಕುಡಿಯುವ ನೀರು, ವಿದ್ಯುತ್ ಇನ್ನಿತರ ಮೂಲಭೂತ ಸೌಲಭ್ಯ ದೊರೆತಿವೆಯೇ ಎಂಬುದನ್ನು ಪರಿಶೀಲಿಸಿದಾಗ ಇದಕ್ಕೆ ಸಮಧಾನಕರವಾದ ಉತ್ತರ ದೊರೆಯುವುದಿಲ್ಲ. ಕೆಲವು ಪ್ರದೇಶಗಳಲ್ಲಿ ಮಲೆಕುಡಿಯರೇ ಸೇರಿಕೊಂಡು ತಮ್ಮ ಶ್ರಮದಾನದಿಂದಲೇ ರಸ್ತೆ ನಿರ್ಮಿಸಿಕೊಂಡಿದ್ದಾರೆ. ಕುಡಿಯುವ ನೀರಿನ ವಿಚಾರಕ್ಕೆ ಬಂದರೆ ಇವರು ತಮ್ಮ ತಮ್ಮ ಮನೆಗಳ ಮುಂದೆ ತೋಡಿಕೊಂಡ ರಿಂಗ್ ಬಾವಿಗಳೇ ಇವರಿಗೆ ಕುಡಿಯುವ ನೀರಿನ ಆಧಾರದ ಮೂಲವಾಗಿದೆ. ಇತ್ತೀಚೆಗೆ ಪಡಿತರ ಕಾರ್ಡ ಸೌಲಭ್ಯ ದೊರೆತಿದೆ. ವಿಶೇಷ ಎಂದರೆ ಎಲ್ಲರಿಗೂ ಮತದಾನದ ಗುರುತಿನ ಚೀಟಿ ಮಾತ್ರ ದೊರೆತಿವೆ. ಮತದಾನದ ಗುರುತು ಚೀಟಿ ಹೊಂದಿ, ಮತಚಲಾಯಿಸುವ ಹಕ್ಕು ಪಡೆದಿರುವ ಇವರಿಗೆ ಇವರು ಬದುಕಲು ಬೇಕಾದ ಮೂಲಭೂತ ಸೌಲಭ್ಯಗಳಾದ ರಸ್ತೆ ನೀರು, ಮನೆ, ವಿದ್ಯುತ್ ಸೌಲಭ್ಯ ನೀಡಬೇಕಾದರೆ ಇಲ್ಲಿ ಅರಣ್ಯ ಕಾಯಿದೆ ಇಲ್ಲವೇ ಪ್ಲಾಂಟೇಷನ್ ಕಾಯಿದೆ ಅಡ್ಡಿ ಬರುತ್ತದೆ. ಹಿಂದೆ ಇವರಿಗೆ ಪ್ಲಾಂಟೇಷನ್ ಕಾಯಿದೆ ಇವರಿಗೆ ಅಡ್ಡಿಯಾಗಿತ್ತು. ಈಗ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ಜನ ಮತ್ತು ಅರಣ್ಯ ಕಾಯಿದೆ ಇವರಿಗೆ ಅಪಾಯಕಾರಿಯಾಗಿದೆ. ಈ ಬದುಕಿನ ಸ್ಥಿತಿಯಿಂದ ತಮ್ಮನ್ನು

ರಕ್ಷಿಸಿಕೊಂಡು ತಲೆತಲಾಂತರಗಳಿಂದ ಇಲ್ಲಿ ಬದುಕು ಬಾಳಿದ ನೆಲೆಗಳನ್ನು ಉಳಿಸಿಕೊಂಡು ಹೋಗುವುದಕ್ಕಾಗಿ ಈ ಪ್ರದೇಶದಲ್ಲಿ ವಸಂತಗೌಡ ರವರು ನಕ್ಸಲ್ ಸಂಘಟನೆ ಸೇರಿಕೊಂಡರಾದರೂ ಇದರಿಂದೇನು ಪ್ರಯೋಜನವಾಗದೆ ಇಲ್ಲಿಂದ ಈಗ ಒಕ್ಕಲೆಬ್ಬಿಸಬೇಕಾದ ಅನಿವಾರ್ಯತೆ ಒದಗಿದೆ. ಇವರಿಗೆ ಈ ಒತ್ತಡ ಆತಂಕದ ಜೊತೆಗೆ ಭವಿಷ್ಯದ ಕನಸು ಇದೆ. ಇದಕ್ಕೆ ಇವರು ಆಯ್ಕೆ ಮಾಡಿಕೊಂಡ ದಾರಿ ನಕ್ಸಲ್ ಸಂಘಟನೆಯ ಹೋರಾಟದಿಂದ ದೂರ ಉಳಿದು, ಕಾಡನ್ನು ಬಿಟ್ಟು, ಅವರ ಭೂಮಿ ಭಾಗಕ್ಕೆ ಸರ್ಕಾರ ನಿಗದಿ ಪಡಿಸಿರಿವ ಮೌಲ್ಯವನ್ನು ಪಡೆದು ಹೊರಬರುವ ತೀರ್ಮಾನಕ್ಕೆ ಬಂದಿದ್ದಾರೆ. ಈ ತೀರ್ಮಾನಕ್ಕೆ ಬರುವ ಸಭೆ ನಡೆದಿದಾದರೂ ತುಂಬಾ ಸಂಕಟದ ಸ್ಥಿತಿಯ ದಿನವಾಗಿತ್ತು. ದಿನಾಂಕ ೨.೩.೨೦೧೧ರಂದು ಸೋಮವಾರ ಎನ್‌ಕೌಂಟರ್‌ಗೆ ಬಲಿಯಾದ ನಕ್ಸಲ್ ವಸಂತಗೌಡನ ಹೆಣ ಶವಾಗಾರದಲ್ಲಿದೆ. ಶವಪರೀಕ್ಷೆಯಾಗಿ ಶವಸಂಸ್ಕಾರವೂ ಆಗಿಲ್ಲ, ಉಡುಪಿಯಲ್ಲಿ ಈ ಶವ ಇಟ್ಟು ಕೊಂಡು ಮಂಗಳೂರಿನಲ್ಲಿ ಜಿಲ್ಲಾಧಿಕಾರಿಗಳು ಈ ಸಭೆ ಕರೆದು ಈ ಬಗ್ಗೆ ಸಮಾಲೋಚನೆ ಮಾಡಿ ತೀರ್ಮಾನ ಮಾಡುವುದರ ಮೂಲಕ ಇಲ್ಲಿನ ೧೧ ಕುಟುಂಬಗಳು ಈಗ ಹೊರಬರಲು ಸಾಧ್ಯವಾಗಿದೆ. ಇನ್ನು ಉಳಿದವರ ಸ್ಥಿತಿ ಗೊಂದಲದಲ್ಲಿದೆ. ಒಂದು ರೀತಿಯಲ್ಲಿ ಇದು ಅಂತ್ಯವಲ್ಲ ಆರಂಭವಷ್ಟೇ ಇದರಿಂದ ಬರುವ ಹೊಸ ಸವಾಲುಗಳು ಹೊಸ ಬದುಕಿನ ಸ್ಥಿತಿಗತಿಯನ್ನು ಸಂಕೇತಿಸುತ್ತವೆ. ತಮ್ಮ ಪ್ರಾಣ ರಕ್ಷಣೆಗೆ ತಮ್ಮ ನೆಲೆ ಭೂಮಿ ಬಿಟ್ಟು ಬರುವ ಅವರ ಆಂತರಿಕ ಮನಃಸ್ಥಿತಿ ಹೇಗಿರಬೇಕು? ಇದು ಸಾವು ಬದುಕಿನ ಹೋರಾಟವಾಗಿದೆ. ಒಂದು ಕಡೆ ತಮ್ಮ ಮೂಲನೆಲೆಯನ್ನು ಬಿಟ್ಟು ಬರಲಾಗದ ಸ್ಥಿತಿ, ಇನ್ನೊಂದು ಕಡೆ ಬದುಕಿನ ಸವಾಲುಗಳು ನಕ್ಸಲ್ ಸಂಘಟನೆಯ ಎನ್‌ಕೌಂಟರ್ ಭಯಾನಕತೆಗೆ ಬಲಿಯಾಗುತ್ತಿರುವ ಯುವಕರ ಪ್ರಾಣಗಳು. ಇದು ಇವರ ಸಾಮಾಜಿಕ ಆರ್ಥಿಕ ಸ್ಥಿತಿಯ ಭಯಾನಕತೆಯನ್ನು ಸೂಚಿಸುತ್ತದೆ.

**೫.೬. ಕಾನೂನು ಸಮಸ್ಯೆ**

೧೭೭೪ ಮತ್ತು ೧೮೭೧ರ ಕಾಲದ ಅವಧಿಯು 'ಭಾರತದ ಇತಿಹಾಸದ ಅತ್ಯಂತ ರಕ್ತಪಾತದಿಂದ ಕೂಡಿದ ಇತಿಹಾಸವಾಗಿದೆ' ಎಂದು ಎ.ಎಸ್. ಪ್ರಭಾಕರರವರು ಅಲೆಮಾರಿಗಳ ಶಾಪಗ್ರಸ್ತ ಪ್ರಯಾಣ ಬುಡಕಟ್ಟು ಅಧ್ಯಯನ ೩ ೨೦೦೫ರಲ್ಲಿ ಹೇಳಿದ್ದಾರೆ. ಈ ಅವಧಿಯಲ್ಲಿ ನಡೆದ ಯುದ್ಧಗಳು ಇದರ ಪರಿಣಾಮವಾಗಿ ೧೮೫೭ರಲ್ಲಿ ಸಿಪಾಯಿ ದಂಗೆಗಳು ಹಲವು ಸ್ಥಳೀಯ ಸಮುದಾಯ ನೆಲೆಗಳನ್ನು ಇಲ್ಲದಂತೆ ಮಾಡಿದವು. ಈ ಸಮುದಾಯಗಳು ಮುಂದೆ ಅಲೆಮಾರಿಗಳಾಗಿ ಪರಿವರ್ತನೆಯಾದವು ಎಂಬ ವಿಶ್ಲೇಷಣೆಯೊಂದಿಗೆ ಬ್ರಿಟಿಷ್ ಆಡಳಿತದ ಕಾಲದ ಅವಧಿಯಲ್ಲಿ ಜಾರಿಗೆ ತಂದ ಹಲವಾರು ಕಾನೂನುಗಳು ಮತ್ತು ಈ ಕಾನೂನಿನ ವಿರುದ್ಧ ತಿರುಗಿಬಿದ್ದ ಸಮುದಾಯಗಳನ್ನು ಕಾನೂನುಗಳ ಮೂಲಕ ಕೆಲವು ನೀತಿಗಳನ್ನು ರೂಪಿಸಿತು. ಈ ಹಂತದಲ್ಲಿಯೇ ಕ್ರಿಮಿನಲ್ ಟ್ರೈಬ್ ಆಕ್ಟ್ ಜಾರಿಗೆ ಬಂದಿತು. ಎಂದು ಕ್ರಿಮಿನಲ್ ಟ್ರೈಬ್ ಆಕ್ಟ್ ಜಾರಿಗೆ ಬಂದ ಸ್ಥಿತಿಯನ್ನು ವಿವರಿಸಿದ್ದಾರೆ. ೧೮೭೧ರಲ್ಲಿ ಕ್ರಿಮಿನಲ್ ಟ್ರೈಬ್ ಆಕ್ಟ್ ಜಾರಿಗೆ ಬಂದರೂ ಕಂಪನಿ ಸರ್ಕಾರವು ೧೭೯೩ರಲ್ಲಿಯೇ ಕೆಲವು ಸಮುದಾಯಗಳನ್ನು ಪಟ್ಟಿ ಮಾಡಿ ಇವು ಅಪಾಯಕಾರಿಗಳೆಂದು ಗುರುತಿಸಿತ್ತು. ಆ ಪಟ್ಟಿ ನಮಗೆ ಈಗ ಲಭ್ಯವಿಲ್ಲ ಎನ್ನುತ್ತಾರೆ(ಪುಟ.೧೧೭)."

೧೮೭೧ರಲ್ಲಿ ಕ್ರಿಮಿನಲ್ ಕಾಯ್ದೆ ಜಾರಿಗೆ ಬಂದ ನಂತರ ಈ ಪಟ್ಟಿಯಲ್ಲಿದ್ದ ಸಮುದಾಯಗಳನ್ನು ಕಂಪನಿ ಸರ್ಕಾರವು ಜನ್ಮತಃ ಅಪರಾಧಿಗಳೆಂದು ಪರಿಗಣಿಸಲ್ಪಟ್ಟಿತು. ಪೊಲೀಸರಿಗೆ ತರಬೇತಿ ಕೊಡುವ ಸಮಯದಲ್ಲಿ ಅಲ್ಲಿನ ಪಠ್ಯಕ್ರಮದಲ್ಲಿ ಅಪರಾಧಿ ಬುಡಕಟ್ಟುಗಳನ್ನು ಗುರುತಿಸುವುದು ಹಾಗೂ ಕಾನೂನು ಮೂಲಕ ಅವರನ್ನು ಹೇಗೆ ನಿಯಂತ್ರಿಸುವುದು ಎಂಬ ಪಾಠಗಳನ್ನು ಸೇರಿಸಿತು. ತಮಾಶೆ ಎಂದರೆ ಸ್ವಾತಂತ್ರ ನಂತರ ೧೯೫೨ರಲ್ಲಿ ಈ ಕಾಯ್ದೆ ರದ್ದಾದರೂ ಪೊಲೀಸ್ ಪಠ್ಯಕ್ರಮದಿಂದ ಅಪರಾಧಿ ಬುಡಕಟ್ಟು ಕಾಯ್ದೆಯ ಪಾಠಗಳು ತೊಲಗಲಿಲ್ಲ. ಅವರನ್ನು ಸ್ವತಂತ್ರ ಭಾರತದ ಸರ್ಕಾರವು ಪಾರಂಪರಿಕ ಅಪರಾಧಿ ಕಾಯ್ದೆಯ ಅಡಿಯಲ್ಲಿ ಗುರುತಿಸಬೇಕೆಂದು ತಮ್ಮ ಪೊಲೀಸರಿಗೆ ಬೋಧಿಸಲಾರಂಭಿಸಿತು. ಸ್ವಾತಂತ್ರ ಬಂದರೂ ಇವತ್ತು ಕೆಲವು ಸಮುದಾಯಗಳು ಅಮವಾಸ್ಯೆ ದಿನ ಪೊಲೀಸ್ ಠಾಣೆಗೆ ಹೋಗಿ ಮಲಗುವ ನಿಯಮಗಳು ಜಾರಿಯಲ್ಲಿವೆ' ಪುಟ.೧೯೯.[೬] ಇದರ ಪರಿಣಾಮವಾಗಿ ಹಲವಾರು ಕಾಯ್ದೆಗಳು ಜಾರಿಗೆ ಬಂದವು.

ಅನುಸೂಚಿತ ಪಂಗಡಗಳ ಮತ್ತು ಇತರೆ ಪರಂಪರಿಕ ಅರಣ್ಯ ನಿವಾಸಿಗಳ(ಅರಣ್ಯ ಹಕ್ಕು ಮಾನ್ಯತೆ) ಕಾಯ್ದೆ ೨೦೦೬-೨೦೦೭. ಈ ಕಾಯಿದೆಯು ಮಲೆಕುಡಿಯ ಸಮುದಾಯಗಳಿಗೆ ಪರಿಹಾರ ನೀಡುವ ಕಾಯಿದೆಯಾಗಿದ್ದರೂ ಸಹ ಇದರಲ್ಲಿರುವ ಹಲವಾರು ತೊಡಕುಗಳು ನ್ಯೂನತೆಗಳಿಂದಾಗಿ ಈ ಸಮುದಾಯಕ್ಕೆ ಈ ಕಾಯಿದೆಯಿಂದ ಅನುಕೂಲಕ್ಕಿಂತ ಅನಾನುಕೂಲಗಳೇ ಹೆಚ್ಚಾಗಿವೆ. ಈ ಕಾಯಿದೆ ಪ್ರಕಾರ ಸಲ್ಲಿಸಲಾದ ಅರ್ಜಿಗಳನ್ನು ವಿಲೇವಾರಿ ಮಾಡುವ ಮತ್ತು ಪರಿಶೀಲಿಸಿ ಕ್ರಮ ಕೈಗೊಳ್ಳುವ ಇಲಾಖೆಗಳ ಕಾರ್ಯ ನಿರ್ವಹಣೆಯಲ್ಲಿನ ನೀತಿ ನಿಯಮಗಳು ಈ ಕಾನೂನು ಜಾರಿಗೆ ತೊಡಕಾಗಿವೆ. ಕಂದಾಯ ಇಲಾಖೆ ಮತ್ತು ಅರಣ್ಯ ಇಲಾಖೆ ನಡುವಿನ ಗೊಂದಲಗಳಿಂದಾಗಿ ವಿಲೇ ಆಗದೇ ಬಾಕಿ ಉಳಿದಿವೆ. ಬೆಳ್ತಂಗಡಿ ತಾಲೂಕಿನ ವ್ಯಾಪ್ತಿಯಲ್ಲಿ ನೆಲೆಸಿರುವ ಅರಣ್ಯವಾಸಿಗಳಿಂದ ಹಕ್ಕುಪತ್ರ ಪಡೆಯಲು ಒಟ್ಟು ೧೬೦೦ ಅರ್ಜಿಗಳನ್ನು ಇತ್ಯರ್ಥಪಡಿಸಲಾಗಿದ್ದು, ಇದರಲ್ಲಿ ೨೬೮ ಅರ್ಜಿಗಳನ್ನು ಪುರಸ್ಕರಿಸಿ ದಿನಾಂಕ ೧೫.೮.೨೦೧೧ರಂದು ಹಕ್ಕುಪತ್ರಗಳನ್ನು ನೀಡಲಾಗಿದೆ. ಈ ೨೬೮ ಅರ್ಜಿದಾರರು ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಭಾರತದ ವಿವಿಧ ಅರಣ್ಯ ಪ್ರದೇಶಗಳಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯದ ಅರಣ್ಯ ವಾಸಿಗಳು ಸೇರಿದಂತೆ ಪಾರಂಪರಿಕ ಅರಣ್ಯವಾಸಿಗಳ ಹಿತರಕ್ಷಣೆ ಉದ್ದೇಶದಿಂದ ಕೇಂದ್ರ ಸರಕಾರ ಜಾರಿಗೆ ತಂದಿರುವ ಪಾರಂಪರಿಕ ಅರಣ್ಯ ಹಕ್ಕು ಕಾಯಿದೆ ಪ್ರಕಾರ ಇವರು ವಾಸವಾಗಿರುವ ಅರಣ್ಯ ಭೂಮಿಯ ಹಕ್ಕನ್ನು ಅವರಿಗೆ ನೀಡುವ ಉದ್ದೇಶದಿಂದಾಗಿ ಅರ್ಜಿಗಳನ್ನು ಪಡೆದು ಇದರ ಮಂಜೂರಾತಿ ಪ್ರಕ್ರಿಯೆ ನಡೆದಿರುತ್ತದೆ. ದ.ಕ.ಜಿಲ್ಲೆಯ ಅತಿ ದೊಡ್ಡ ಹೆಚ್ಚು ಅರಣ್ಯವಾಸಿ ಬುಡಕಟ್ಟು ಸಮುದಾಯದವರು ಹೊಂದಿರುವ ಬೆಳ್ತಂಗಡಿ ತಾಲೂಕಿನಲ್ಲಿ ಒಟ್ಟು ೧೩೮೧ ಅರ್ಜಿ ಬಂದಿದ್ದು, ಇದರಲ್ಲಿ ೧೨೮೨ ಅರ್ಜಿಗಳು ಉಪವಿಭಾಗ ಮಟ್ಟದಲ್ಲಿ ತಿರಸ್ಕೃತವಾಗಿರುತ್ತವೆ. ಇದರಲ್ಲಿ ಕೇವಲ ೯೯ ಅರ್ಜಿಗಳನ್ನು ಮಾತ್ರ ಅಂಗೀಕರಿಸಿ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಗೆ ಕಳುಹಿಸಲಾಗಿದೆ. ೧೨೮೨ ಅರ್ಜಿಗಳು ತಿರಸ್ಕೃತವಾಗಲು ಮುಖ್ಯ ಕಾರಣ ಅರಣ್ಯ ಇಲಾಖೆ ಆಕ್ಷೇಪಣೆಯಾಗಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದಲ್ಲಿ ವಾಸವಾಗಿರುವ ಅರ್ಜಿದಾರರು ಸಲ್ಲಿಸಿದ ಭೂಮಿ ಅರಣ್ಯ ಭೂಮಿಯಾಗಿರುವುದಿಲ್ಲ ಎಂಬುದು ಅರಣ್ಯ ಇಲಾಖೆ ನೀಡುವ ಆಕ್ಷೇಪಣೆಯಾಗಿದೆ. ಈ ಹಿಂದೆ ಇದೇ ಅರಣ್ಯ ಇಲಾಖೆಯವರು ಇಲ್ಲಿ

ವಾಸವಾಗಿರುವವರಿಗೆ ಅರಣ್ಯದಿಂದ ಹೊರಹೋಗುವಂತೆ ನೋಟೀಸು ನೀಡಿದೆ. ಈಗ ಇದು ಅರಣ್ಯ ಭೂಮಿಯಲ್ಲ ಎಂಬ ಆಕ್ಷೇಪಣೆ ನೀಡಿದೆ. ಈಗ ಅರಣ್ಯ ಇಲಾಖೆಯವರೇ ರಾಷ್ಟ್ರೀಯ ಉದ್ಯಾನವನದ ಭೂಮಿ ನಮ್ಮದಲ್ಲ ಎಂದು ಆಕ್ಷೇಪಣೆ ನೀಡಿದೆ.

ಬುಡಕಟ್ಟು ಸಮುದಾಯದ ಮೇಲೆ ಹಲವಾರು ಕಾಯಿದೆಗಳು ಪ್ರಭಾವ ಬೀರಿವೆ. ಈ ಕಾಯಿದೆಗಳೆಂದರೆ,

೧. ಕರ್ನಾಟಕದ ಪ್ರಾಣಿಬಲಿಗಳ ಪ್ರತಿಬಂಧಕ ಅಧಿನಿಯಮ-೧೯೫೩

೨. ಕರ್ನಾಟಕ ಅರಣ್ಯ(ತಿದ್ದುಪಡಿ) ಅಧಿನಿಯಮ -೧೯೬೩ ಮತ್ತು ೧೯೭೮

೩. ವನ್ಯಜೀವಿ ಸಂರಕ್ಷಣಾ ಅಧಿನಿಯಮ- ೧೯೭೨

೪. ಕರ್ನಾಟಕ ಮರಗಳ ಸಂರಕ್ಷಣಾ ಅದಿನಿಯಮ-೧೯೭೬

೫. ಕರ್ನಾಟಕ ಅರಣ್ಯ ಅಧಿನಿಯಮ-೧೯೭೬

೬. ಭಾರತ ಮೀನುಗಾರಿಕೆ ಅದಿನಿಯಮ-೧೯೮೭

೭. ಅಪರಾಧಿ ಬುಡಕಟ್ಟು(ತಿದ್ದುಪಡಿ) ಅದಿನಿಯಮ-೧೮೯೭

೮. ಅಪರಾಧಿ ಬುಡಕಟ್ಟು ಅದಿನಿಯಮ-೧೯೧೧

೯. ಅಪರಾಧಿ ಬುಡಕಟ್ಟು(ತಿದ್ದುಪಡಿ) ಅಧಿನಿಯಮ-೧೯೨೩

೧೦. ಅಪರಾಧಿ ಬುಡಕಟ್ಟು ಅದಿನಿಯಮ-೧೯೨೪

೧೧. ಅಪರಾಧಿ ಬುಡಕಟ್ಟು(ತಿದ್ದುಪಡಿ) ಅದಿನಿಯಮ-೧೯೪೭ ಈ ಕಾಯಿದೆಗಳು ಈ ಸಮುದಾಯದ ವರ್ತಮಾನದ ಕಾನೂನಿನ ಸಮಸ್ಯೆಗೆ ಎಡೆಮಾಡಿ ಕೊಟ್ಟಿವೆ.

**೫.೭. ರಾಜಕೀಯ ಪರಾಧೀನತೆ-ಪ್ರಾತಿನಿಧ್ಯ ಸಮಸ್ಯೆ**

ಮಲೆಕುಡಿಯ ಸಮುದಾಯದ ಅಭಿವೃದ್ಧಿಗಾಗಿ ಶ್ರಮಿಸಿದ ಕೆ. ನಾರಾಯಣ ಶಿಶಿಲ ಇವರು ಮಲೆಕುಡಿಯ ಸಮುದಾಯದ ರಾಜಕೀಯ ಪ್ರಾತಿನಿಧ್ಯವನ್ನು ಪಡೆದ ಮುಖಂಡರಾಗಿದ್ದಾರೆ. ಧರ್ಮಸ್ಥಳದ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾದ ಇವರು ಈ ಸಮುದಾಯದ ಅಭಿವೃದ್ಧಿಗಾಗಿ ಕಾರ್ಯನಿರ್ವಹಿಸಿದ್ದಾರೆ. ೧೯೮೧ರ ಕಾಲದ ಅವಧಿಯಲ್ಲಿ ದೆಹಲಿಯವರೆಗೆ ಈ ಸಮುದಾಯದ ಪ್ರತಿನಿಧಿಯಾಗಿ ಭಾಗವಹಿಸಿರುವ ರಾಜೀವಗಾಂಧಿ ಕಾಲದ ಅವಧಿಯಲ್ಲಿ ಚುನಾಯಿತ ಪ್ರತಿನಧಿಯಾದ ಇವರು ಕಾಂಗ್ರೇಸ್‌ನ ಪಕ್ಷದ ಸಕ್ರಿಯ ಕಾರ್ಯಕರ್ತನಾಗಿ ಬೆಳೆಯುತ್ತಲೇ ಹಂತ ಹಂತವಾಗಿ ವಿವಿಧ ಹುದ್ದೆಗಳನ್ನು ಅಲಂಕರಿಸುತ್ತಾ ರಾಜಕೀಯ ಪ್ರಾತಿನಿಧ್ಯವನ್ನು ಪಡೆದು ಕೊಂಡವರಾಗಿದ್ದಾರೆ. ಹಾಗೂ ಇವರ ಅವಧಿಯಲ್ಲಿ ಸೇವೆ ಸಲ್ಲಿಸಿದ ಹುದ್ದೆಗಳೆಂದರೆ;

೧೯೬೧ರಲ್ಲಿ ಮೈಸೂರು ಸರ್ಕಾರದಲ್ಲಿ ಗಿರಿಜನ ಕಲ್ಯಾಣ ಸಲಹಾಸಮಿತಿ ಸದಸ್ಯರಾಗಿ ನೇಮಕ ರಾಗುತ್ತಾರೆ. ೧೯೬೯ರಲ್ಲಿ ಬೆಳ್ತಂಗಡಿ ತಾಲೂಕು ಬೋರ್ಡ್‌ನ ಸದಸ್ಯರಾಗಿದ್ದಾರೆ. ೧೯೭೪ರಲ್ಲಿ ಬೆಳ್ತಂಗಡಿ ಭೂ ನ್ಯಾಯ ಮಂಡಳಿಯ ಸದಸ್ಯರಾಗಿ ನೇಮಕರಾಗಿದ್ದಾರೆ. ೧೯೭೪ರಲ್ಲಿ ಆರಂಭವಾದ LAMPS ಸ್ಥಾಪಕ ಅಧ್ಯಕ್ಷರಾಗಿದ್ದಾರೆ. ೧೯೮೭ರಲ್ಲಿ ಧರ್ಮಸ್ಥಳ ಕ್ಷೇತ್ರದ ಜಿಲ್ಲಾ ಪರಿಷತ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

೨೦೦೦ರಿಂದ ೨೦೦೫ರವರೆಗೆ ಮತ್ತೆ ಧರ್ಮಸ್ಥಳ ಕ್ಷೇತ್ರದ ಜಿಲ್ಲಾ ಪಂಚಾಯತಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಈ ಅವಧಿಯಲ್ಲಿ ಇವರು ಮಲೆಕುಡಿಯ ಸಮುದಾಯದವರಿಗಾಗಿ ಬೆಳ್ತಂಗಡಿ, ನಾರಾವಿ, ನೆರಿಯಾ, ಶಿಶಿಲಗಳಲ್ಲಿ ಗಿರಿಜನ ವಿದ್ಯಾರ್ಥಿನಿಲಯವನ್ನು ಮತ್ತು ಆಶ್ರಮ ಶಾಲೆಗಳನ್ನು ಸ್ಥಾಪಿಸಿತು. ಶಿಶಿಲದಲ್ಲಿ ಗಿರಿಜನರ ಪುನರ್ ವ್ಯವಸಾಯ ಕಲೋನಿ ರಚನೆಗೆ ಶ್ರಮಿಸಿದ್ದಾರೆ. ಭೂನ್ಯಾಯ ಮಂಡಳಿ ಸದಸ್ಯರಾಗಿದ್ದಾಗ ನೆರಿಯಾದಲ್ಲಿ ಭೂ ಹಂಚಿಕೆ ಮಾಡಲು ಹೋರಾಟ ಮಾಡಿದ್ದಾರೆ. ನೆರಿಯಾದ ಅಂಬಟೆಮಲೆ, ಬಾಂಜಾರು ಮಲೆ, ಪ್ರದೇಶಗಳಲ್ಲಿ ಡಿಕ್ಲರೇಷನ್ ಮೂಲಕ ಭೂಮಿ ಹಂಚಿಕೆ ಹೋರಾಟ ಮಾಡಿದ್ದಾರೆ. ನೆರಿಯಾದ ಹೆಬ್ಬಾರಿಂದ ಆಗುವ ತೊಂದರೆಯ ವಿರುದ್ದ ಮಲೆಕುಡಿಯ ಸಮುದಾಯದಲ್ಲಿ ಜಾಗೃತಿಯನ್ನುಂಟುಮಾಡಿ ಈ ಸಮುದಾಯಕ್ಕೆ ಇಲ್ಲಿ ಆಗುವ ಅನ್ಯಾಯವನ್ನು ಹೋಗಲಾಡಿಸುವಲ್ಲಿ ಶ್ರಮಿಸಿದ್ದಾರೆ. ಹೆಬ್ಬಾರರ ಗೇಟಿನ ಬಾಗಿಲು ತೆಗೆಸುವಲ್ಲಿನ ಹೋರಾಟ ಒಂದು ಮೈಲುಗಲ್ಲಾಗಿದೆ. ಸಮುದಾಯದ ಸಂಘಟಿತ ಹೋರಾಟದ ಫಲವಾಗಿ ಅಲ್ಲಿನ ಜೀತಪದ್ಧತಿ ಹೋಗಲಾಡಿಸಲು ಸಾಧ್ಯವಾಗಿದೆ. ಇವರು ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದಾಗ ಕೊಕ್ಕಡ ಅರಿಸಿನ ಮಗ್ಗಿಗೆ ಹೋಗುವ ಮುಖ್ಯ ರಸ್ತೆಯಿಂದ ಹತ್ಯಡ್ಕದ ಮೆದಿನಕ್ಕೆ ಹೋಗುವ ೧೧/೨ ಕಿ.ಮೀ ಉದ್ದದ ರಸ್ತೆ ನಿರ್ಮಾಣ ಮಾಡಿದ್ದಾರೆ.

ಶಿಶಿಲದ ಗಿರಿಜನ ಕಾಲೋನಿಗೆ ಸೇತುವೆ ಮಾಡಿದ್ದಾರೆ. ಗಿರಿಜನ ಪ್ರದೇಶಗಳಿಗೆ ಆರೋಗ್ಯ ಸೇವೆಗೆ ಸಂಚಾರಿ ಆಸ್ಪತ್ರೆ ಮಂಜುರಾತಿ ಮಾಡಿದ್ದಾರೆ. ಚಾರ್ಮಾಡಿಯ ಅನಾಶದ ಕಾಲೋನಿಯ ೨೦ ಕುಟುಂಬಗಳಿಗೆ ಭೂಮಿ ಹಂಚಿಕೆ ಮಾಡುವುದು ಸೇರಿದಂತೆ ಇಲ್ಲಿ ರೇಷ್ಮೆ ಕೃಷಿ ಕೇಂದ್ರ ಸ್ಥಾಪನೆಗೆ ಶ್ರಮಿಸಿದ್ದಾರೆ. ಶಿಶಿಲದಲ್ಲಿ ಕೈಗಾರಿಕಾ ಕೇಂದ್ರವನ್ನು ಸ್ಥಾಪಿಸಿ ಇಲ್ಲಿ ಬೆತ್ತ, ಬಿದಿರು, ಕುಶಲ ಕರ್ಮಿ ತರಬೇತಿಗೆ ಅವಕಾಶ ಮಾಡಲಾಗಿದೆ. ಶಿಶಿಲದಲ್ಲಿ ಹೆಣ್ಣು ಮಕ್ಕಳಿಗೆ ಹೊಲಿಗೆ ತರಬೇತಿ ಕೇಂದ್ರದ ಸ್ಥಾಪನೆ ಮಾಡಲಾಗಿದೆ. ಶಿಶಿಲದಲ್ಲಿ ಗಿರಿಜನರಿಗಾಗಿ ಚಾಮುಂಡೇಶ್ವರಿ ದೇವಸ್ಥಾನದ ನಿರ್ಮಾಣಕ್ಕೆ ಶ್ರಮಿಸಿದ್ದಾರೆ. ಶಿಶಿಲದಲ್ಲಿ ಮಲೆಕುಡಿಯರ ಗೇಣಿದಾರರಿಗೆ ಭೂಹಂಚಿಕೆಗೆ ಶ್ರಮಿಸಿದ್ದಾರೆ. ೧೯೬೦ರಲ್ಲಿ ಮಲೆಕುಡಿಯರ ಕಲ್ಯಾಣ ಕೇಂದ್ರಗಳ ಸ್ಥಾಪನೆ ನಂತರ ಇವು ಗಿರಿಜನ ಕಲ್ಯಾಣ ಕೇಂದ್ರಗಳಾದವು. ಈಗ ಆಶ್ರಮ ಶಾಲೆ, ಗಿರಿಜನರ ಹಾಸ್ಟೆಲ್‌ಗಳು ಆಗಿವೆ. ೧೯೬೨ರಿಂದ ೧೯೬೭ರವರೆಗೆ ಮೈಸೂರು ಸರ್ಕಾರದಲ್ಲಿ ಗಿರಿಜನ ಕಲ್ಯಾಣ ಸಮಿತಿಯ ಸದಸ್ಯರಾಗಿ ನೇಮಕವಾಗಿದ್ದಾರೆ, ಮೈಸೂರು ಸರ್ಕಾರದ ಆಗಿನ ಸಮಾಜ ಕಲ್ಯಾಣ ರಚನಕಾರರಾದ ಯಶೋಧರ ದಾಸಪ್ಪ ರವರು ಈ ಬೋರ್ಡ್‌ನ ಅಧ್ಯಕ್ಷರಾಗಿದ್ದರು. ಆಗ ಇವರನ್ನು ನೇರವಾಗಿ ನಾಮಕರಣ ಮಾಡಲಾಯಿತು, ೫ ವರ್ಷಗಳ ಅವಧಿವರೆಗೆ ೧೯೬೨ರಿಂದ ೧೯೬೭ರವರೆಗೆ ಕೆಲಸ ಮಾಡಿದ್ದಾರೆ. ಆ ಕಾಲದಲ್ಲಿ ಎಲ್.ಜಿ. ಹಾವನೂರರವರು ಗಿರಿಜನ ಕಲ್ಯಾಣ ಕೇಂದ್ರದ ವಿಶೇಷ ಅಧಿಕಾರಿಯಾಗಿದ್ದರು. ಅಲ್ಲದೆ ಸುಬ್ರನಾಯ್ಕ, ಮಡಿಕೇರಿಯ ಕೃಷ್ಣರವರು Director of social welfare Board ನ ಸದಸ್ಯರಾಗಿದ್ದಾರೆ. ಶಿಶಿಲದಲ್ಲಿ ಆಗ ೨೫–೨೬ ಕುಟುಂಬಗಳ ಸಂಖ್ಯೆ ಇದ್ದದ್ದು ಈಗ ಅದು ೫೦ಕ್ಕೆ ಜಾಸ್ತಿಯಾಗಿದೆ. ಆಗ ನೆರಿಯಾದ ಹೆಬ್ಬಾರರ ಭಟ್ಟರ ಮನೆಯಲ್ಲಿ ಕೂಲಿ ಕೆಲಸ ಮಾಡಿಕೊಂಡು, ಕಾಡುತ್ಪತ್ತಿ ಮೂಲಕ ಜೀವನ ಮಾಡುತ್ತಿದ್ದ ಮಲೆಕುಡಿಯರಿಗೆ ಸ್ವತಂತ್ರವಾದ ಜೀವನಕ್ಕೆ ಅಚಕಾಶವಿರಲಿಲ್ಲ. ನೆರಿಯಾದ ಹೆಬ್ಬಾರ ಮನೆಯಲ್ಲಿ ಜೀತದಾಳುಗಳಾಗಿ ಇವರು ಹೆಬ್ಬಾರ ಆಶ್ರಯದಲ್ಲಿ ಶೋಷಣೆಗೆ ಒಳಗಾಗಿದ್ದರು. ಈ ವಿಷಯ ಆಗಿನ Director of social welfare Board ನಲ್ಲಿ ಚರ್ಚೆಯಾಯಿತು. ಇದರ ಪರಿಣಾಮದಿಂದಾಗಿ ಕೇಂದ್ರ ಸರ್ಕಾರದಿಂದ 'NCRB Project' ಮಂಜೂರಾಯಿತು. ಇದರ

ಜೊತೆಗೆ ಒಟ್ಟು ೧೨ ಯೋಜನೆಗಳು ಮೈಸೂರು ರಾಜ್ಯಕ್ಕೆ ಆಗ ಮಂಜೂರಾದವು ಅವುಗಳಲ್ಲಿ ಬಿಳಿಗಿರಿ ರಂಗನ ಬೆಟ್ಟ ನಾಗರಹೊಳೆ, ಯಳಂದೂರು, ಕೊಳ್ಳೆಗಾಲ ಸೇರಿದಂತೆ ಬೆಳ್ತಂಗಡಿ ಎಲ್ಲಾ ಪ್ರದೇಶಕ್ಕೆ ಸಹ ಈ ಯೋಜನೆಗಳು ಜಾರಿಗೆ ಬಂದಿದ್ದವು. ಅಲ್ಲದೆ ಪಕ್ಕ ಕೃಷಿ ಪರಿವರ್ತನೆಗೆ ಅನುಕೂಲವಾಗುವ ಯೋಜನೆ ಇದಾಗಿತ್ತು ಎಂಬುದನ್ನು ಕೆ. ನಾರಾಯಣರವರು ಹೇಳಿದ್ದಾರೆ. ಈ MCRB project ಬೆಳ್ತಂಗಡಿಯ ಶಿಶಿಲದಲ್ಲಿ ಆಯಿತು. Multi Purpose Co-operative Society for Scheduled Tribes. ಇದು ಶಿಶಿಲದ ಗಿರಿಜನರ ಪುನರ್‌ವಸತಿ ಕಾಲೋನಿಯಲ್ಲಿ ಆರಂಭವಾಯಿತು. ೧೯೬೪ ರಲ್ಲಿ ಆರಂಭವಾದ ಈ ಯೋಜನೆ ೧೯೬೮ರಲ್ಲಿ ಪಕ್ಕ ಆಗುತ್ತದೆ. ಈ ಯೋಜನೆಯ ಪ್ರಕಾರ ೧೨೦ ಎಕರೆಯಷ್ಟು ಭೂಮಿ ಜನರಿಗೆ ದೊರೆಯುತ್ತದೆ. ಪ್ರತಿ ಕುಟುಂಬಕ್ಕೆ ೩ರಿಂದ ೫ ಎಕರೆ ವರೆಗೆ ಶಿಶಿಲದ ೨೫ ಕುಟುಂಬಗಳಿಗೆ ಹಂಚಿಕೆ ಆಗಿದೆ. ೧೯೭೪ರಲ್ಲಿ R and L Act ಪ್ರಕಾರ ಆಗ ತಾಲೂಕು ಅಭಿವೃದ್ಧಿ ಮಂಡಳಿ ವೃತ್ತಿಯಲ್ಲಿತ್ತು. ಈ ಕಾಯಿದೆಯ ಅಡಿಯಲ್ಲಿ ಶಿಶಿಲದಲ್ಲಿ ೧ ಲಕ್ಷದ ೮೮ ಸಾವಿರ ರೂಗಳ ಅನುದಾನದ ಯೋಜನೆಯನ್ನು ಸರ್ಕಾರ ಮಂಜೂರು ಮಾಡಿದೆ. ಈ ಹಣ ಇಡಲು Joint forming co-operation societyಯನ್ನು ಸ್ಥಾಪನೆ ಮಾಡಲಾಯಿತು. ಈ ೧.೮೮ ಲಕ್ಷ ಹಣವನ್ನು ಇಲ್ಲಿ ಇಡಲಾಯಿತು. ಈ ಯೋಜನೆಯ ಪ್ರಕಾರ ಶಿಶಿಲದಲ್ಲಿ: ಕೃಷಿ ಭೂಮಿ ಹಂಚಿಕೆ ಸೌಲಭ್ಯ ಕಲ್ಪಿಸುವುದು. ಮನೆ ನಿರ್ಮಿಸುವುದು. ಕೃಷಿ ಉಪಕರಣಗಳ ಸರಬರಾಜು. ಆಶ್ರಮ ಶಾಲೆ ಸ್ಥಾಪನೆ. ಬಾಲವಾಡಿ ಸ್ಥಾಪನೆ. ಯೋಜನಧಿಕಾರಿ ನೇಮಕ ಅಲ್ಲದೆ ಇದರ ಮೇಲೆ ಉಸ್ತುವಾರಿಗೆ Special officer of Tribal welfare ಆಗಿ P.G ಮುತ್ತಪ್ಪರವರು ಇದ್ದರು. ಇವರು ಬೆಂಗಳೂರಿನಲ್ಲಿದ್ದರೂ ಸಹ ತುಂಬಾ ಸಹಕಾರ ನೀಡಿದ್ದಾರೆ ಎಂದು ನಾರಾಯಣರವರು ಸ್ಮರಿಸುತ್ತಾರೆ.

ಕೆ. ನಾರಾಯಣರವರು ನವದೆಹಲಿಯಲ್ಲಿ ವಿಜ್ಞಾನ ಭವನದಲ್ಲಿ ನಡೆದ ಅಖಿಲ ಭಾರತ ಪಂಚಾಯತ್ ರಾಜ್ಯ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದ್ದಾರೆ. ದಿನಾಂಕ. ೧೬.೪.೧೯೮೮ರಿಂದ ೨೦೦೪ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಪರಿಷತ್ ಸಾಮಾಜಿಕ ನ್ಯಾಯ ಸ್ಥಾಯಿಸಮಿತಿ ಅಧ್ಯಕ್ಷ ಸಭೆಯಲ್ಲಿ ಭಾಗವಹಿಸಿದ್ದಾರೆ. ದಿನಾಂಕ ೨೯.೪.೧೯೮೮ರಂದು ಆಕಾಶವಾಣಿಯಲ್ಲಿ ಕರ್ನಾಡಕ ರಾಜ್ಯ ಹಾಗೂ ರಾಷ್ಟ್ರದ ಆದಿವಾಸಿ ಗಿರಿಜನರ ಸಮುದ್ರ ಅಭಿವೃದ್ಧಿ ಕುರಿತು ಸಮಗ್ರ ವಿಷಯ ಮಂಡನೆಯ ವರದಿ ಪ್ರಸಾರವಾಗಿದೆ. ೧೯೮೧ರಲ್ಲಿ ದೆಹಲಿಯಲ್ಲಿ ನಡೆದ All India panchayath Rajya conference for S.T'sನಲ್ಲಿ ಇವರು ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದಾರೆ. ಇದರ ಭಾವಚಿತ್ರವಿದೆ. ಆಗ ರಾಜೀವ್‌ಗಾಂಧಿಯವರೊಂದಿಗೆ, ಭಾವಚಿತ್ರ ತೆಗಿಸಿಕೊಂಡಿದ್ದಾರೆ. The Forest labourers co-operation society Ltd putturನ ನಿರ್ದೇಶಕರಾಗಿದ್ದಾರೆ (೩-೬-೧೯೬೯). ದೇವರಾಜ ಅರಸುರವರ ಸರ್ಕಾರದಲ್ಲಿ Karnataka state welfare boardನ ನಿರ್ದೇಶಕರಾಗಿ ನೇಮಕಗೊಂಡಿದ್ದಾರೆ.

'ನಮ್ಮಲ್ಲಿ ಆರ್ಥಿಕವಾಗಿ ಯಾರೂ ಪ್ರಬಲರಾಗಿಲ್ಲ. ಈಗ ಆಗಬೇಕಾಗಿದೆ. ಸಾಮಾಜಿಕವಾಗಿ ಸಂಘಟನಾತ್ಮಕವಾಗಿ ಬೆಳೆಯುತ್ತಿದೆ. ಮೊದಲು ನಮ್ಮಲ್ಲಿ ಸಂಘಟನಾ ಮನೋಭಾವ ಇರಲಿಲ್ಲ. ಅದು ಇನ್ನೂ ನಮ್ಮಲ್ಲಿ ಬರಲಿಲ್ಲ. ರಾಜಕೀಯವಾಗಿ ನಾವು ಬೆಳೆದಿಲ್ಲ. ನಮಗೆ ಪ್ರಾತಿನಿಧ್ಯ ದೊರೆತಿಲ್ಲ, ದೊರೆಯುತ್ತಿಲ್ಲ' ಎಂದು ದಿನಾಂಕ. ೧೩.೦೨.೨೦೦೯ ಶನಿವಾರದಂದು ಬುಡಕಟ್ಟು ಕೃಷಿಕರ ಸಂಘ ಮಡಿಕೇರಿ ಇದರ ಅಧ್ಯಕ್ಷರಾದ ಕುಡಿಯರ ಮುತ್ತಪ್ಪ ಅಬಿಪ್ರಾಯಪಟ್ಟಿದ್ದಾರೆ. ಬೆಳ್ತಂಗಡಿ ತಾಲೂಕಿನ ಮಲೆಕುಡಿಯರ

ಸಂಘ(ರಿ) ಶಿವಗಿರಿ ಕೊಯ್ಯೂರು(ಅಂಚೆ)ನಲ್ಲಿ ದಿನಾಂಕ ೧೩.೨.೯೮ರಂದು ೧೫ನೇ ವಾರ್ಷಿಕ ಸಮಾವೇಶದಲ್ಲಿ ಬಾಗವಹಿಸಿದ ಇವರು ರಾಜಕೀಯ ಪ್ರಾತಿನಿಧ್ಯತೆಯ ಕೊರತೆಯನ್ನು ಹೇಳಿದ್ದಾರೆ. ನಾವು ರಾಜರ ಕಾಲದಿಂದ ಬ್ರಿಟಿಷರ ಕಾಲದ ವರೆಗೆ ಅಲ್ಲದೆ ಸ್ವಾತಂತ್ರ್ಯದ ಅವಧಿಯಲ್ಲಿ ಮಾತ್ರವಲ್ಲದೆ ಸ್ವಾತಂತ್ರ್ಯದ ನಂತರದಲ್ಲೂ ಸಹ ನಿರಂತರವಾಗಿ ತುಳಿತಕ್ಕೆ ಒಳಗಾಗಿದ್ದೇವೆ. ಸ್ವಾತಂತ್ರ್ಯ ಬಂದರೂ ನಮಗೆ ನ್ಯಾಯಯುತ ವಾದ ಸ್ವಾತಂತ್ರ್ಯ ಸಿಕ್ಕಿಲ್ಲ, ಅದು ನಮಗೆ ಸಿಗಬೇಕಾದರೆ ನಾವು ರಾಜಕೀಯವಾಗಿ ಜಾಗೃತರಾಗಬೇಕು ವಿದ್ಯಾವಂತರಾಗಬೇಕು, ಹೋರಾಟಗಾರರಾಗಬೇಕು, ನ್ಯಾಯದ ವಿರುದ್ದ ಖಂಡಿಸಬೇಕು ಎನ್ನುತ್ತಾರೆ.

"ಹೀಗಾಗಿ ಪಕ್ಷ ರಾಜಕಾರಣ ಯಾವತ್ತೂ ಇಂತಹ ಅಲ್ಪಸಂಖ್ಯಾತ ಸಮುದಾಯಗಳನ್ನು ಆಲಕ್ಷಿಸುತ್ತಲೇ ಇರುತ್ತದೆ. ಅಲ್ಲದೆ ಸಮಯ ಸಿಕ್ಕಾಗಲೆಲ್ಲ ಇಂತಹ ಸಮುದಾಯಗಳಿಗೆ ತೋರಿಕೆಯ ಅನುಕಂಪ ತೋರಿಸಲಾಗುತ್ತದೆ. ಇದರಿಂದ ಇಂತಹ ಸಮುದಾಯಗಳಿಗೆ ಯಾವ ಪ್ರಯೋಜನ ಗಳಾಗುವುದಿಲ್ಲ." ಇದು ಮಹಾಶ್ವೇತಾದೇವಿಯವರ ಚಿಂತನೆಯಾಗಿದೆ. ಬಹುಸಂಖ್ಯಾತ ಆದಿವಾಸಿಗಳು ರಾಜಕಾರಣದಲ್ಲಿ ಮಹತ್ವದ ಪಾತ್ರ ವಹಿಸುವುದರಿಂದ ರಾಜಕಾರಣಿಗಳು ಬಹುಸಂಖ್ಯಾತರನ್ನು ಓಲೈಸಲೆಂದು ಹಲವು ಬಗೆಯ ಸರ್ಕಸ್ಸನ್ನು ಮಾಡುತ್ತಾರೆ. ಅಲ್ಲದೆ ಬಹುಸಂಖ್ಯಾತ ಆದಿವಾಸಿಗಳ ಮತಗಳನ್ನು ಗಮನದಲ್ಲಿಟ್ಟು ಕೊಂಡು ಅವರನ್ನು ಓಲೈಸುವ ಪ್ರಸಂಗಗಳು ಬಂದೇ ಬರುತ್ತವೆ. ಅಲ್ಲದೆ ಬಹುಸಂಖ್ಯಾತ ಆದಿವಾಸಿಗಳು ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಬೇಗ ಸಂಘಟಿತರಾಗುತ್ತಾರೆ ಮತ್ತು ಆಡಳಿತ ಯಂತ್ರದ ಮೇಲೆ ಒತ್ತಡ ತಂದು ಸರ್ಕಾರದ ಹಲವು ಯೋಜನೆಗಳನ್ನ ಪಡೆದುಕೊಳ್ಳುವ ಸಾಧ್ಯತೆಗಳಿರುತ್ತವೆ. ಆದರೆ ಅಲ್ಪಸಂಖ್ಯಾತ ಆದಿವಾಸಿಗಳಿಗೆ ಈ ಅವಕಾಶವಿರುವುದಿಲ್ಲ. ಅವರು ಪ್ರಯೋಜನಗಳಿಗಾಗಿ ಸರ್ಕಾರದ ಮುಂದೆ ಅಸಹಾಯಕರಾಗಿ ಕೈ ಎತ್ತಬೇಕು. ಅಲ್ಪಸಂಖ್ಯಾತರು ತಮ್ಮ ಉದ್ಧಾರಕ್ಕೆ ಸಂಘಟಿತರಾಗುವುದು ಅಪರೂಪ. ಅಕಸ್ಮಾತ್ ಸಂಘಟಿತರಾದರೂ ಸರ್ಕಾರದ ಮೇಲೆ ಒತ್ತಡ ತರುವ ಶಕ್ತಿ ಇರುವುದಿಲ್ಲ ಎಂಬ ಮಹಾಶ್ವೇತಾ ದೇವಿಯವರ ಚಿಂತನೆಯನ್ನು ಎ.ಎಸ್. ಪ್ರಭಾಕರ್‌ರವರು ವಿವರಿಸಿದ್ದಾರೆ. ಈ ಉದ್ದೇಶದ ಹಿನ್ನಲೆಯಲ್ಲಿ ವರ್ತಮಾನದ ರಾಜಕೀಯ ಪರಾಧೀನತೆ ಮತ್ತು ಪ್ರಾತಿನಿಧ್ಯಕ್ಕೆ ಸಂಬಂಧಪಟ್ಟಂತೆ ಮಲೆಕುಡಿಯ ದಿಕ್ಕು ಎತ್ತ ಸಾಗಿದೆ ಎಂಬುದನ್ನು ಪರಿಶೀಲಿಸಿದಾಗ ಕಂಡುಬರುವ ಸತ್ಯವೆಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮರಾಠಿ ನಾಯ್ಕ್, ಮಲೆಕುಡಿಯ ಮತ್ತು ಕೊರಗ ಈ ಮೂರು ಸಮುದಾಯಗಳು ಮಾತ್ರ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿವೆ. ಪರಿಶಿಷ್ಟ ಪಂಗಡಕ್ಕೆ ಸಲ್ಲಬೇಕಾದ ಶೇ.೩ರ ಪ್ರಮಾಣದ ಪ್ರಾತಿನಿಧ್ಯ ಇವರಲ್ಲಿ ಯಾರು ಪಡೆಯುತ್ತಾರೆ ಎಂಬುದನ್ನು ಪರಿಶೀಲಿಸಿದಾಗ ಇದರಲ್ಲಿನ ಸಿಂಹಪಾಲು ಇಲ್ಲಿನ ಬಹುಸಂಖ್ಯಾತ ಬುಡಕಟ್ಟು ಸಮುದಾಯವೆಂದು ಪರಿಗಣಿತವಾದ ಮರಾಠಿ ನಾಯ್ಕರ್ ರವರದ್ದಾಗಿದೆ. ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳು ಮಾತ್ರವಲ್ಲ ಸ್ಥಳೀಯ ಸಹಕಾರ ಸಂಘಗಳು ಮತ್ತು ಲ್ಯಾಂಪ್ಸ್‌ನ ಅಧಿಕಾರ ಹಿಡಿಯುವಲ್ಲಿ ಮತ್ತು ರಾಜಕೀಯ ಪ್ರಾತಿನಧ್ಯ ಪಡೆಯುವಲ್ಲಿ ಇವರು ಮುಂದಿದ್ದಾರೆ. ಇದಕ್ಕೆ ಪ್ರಮುಖವಾದ ಕಾರಣ ಇವರು ಇಲ್ಲಿ ಬಹುಸಂಖ್ಯಾತರಾಗಿದ್ದಾರೆ. ಆರ್ಥಿಕವಾಗಿ ಪ್ರಬಲರಾಗಿದ್ದಾರೆ. ರಾಜಕೀಯವಾಗಿ ಒತ್ತಡವನ್ನು ಹೇರುವಲ್ಲಿ ಮತ್ತು ತಮ್ಮ ಸಮುದಾಯದ ಪರವಾದ ನಿಲುವನ್ನು ವ್ಯಕ್ತಪಡಿಸುವಲ್ಲಿ ಸಂಘಟಿತರಾಗಿದ್ದಾರೆ. ಇವರನ್ನು ಹೊರತುಪಡಿಸಿ ಮಲೆಕುಡಿಯ ಸಮುದಾಯ ಮತ್ತು ಕೊರಗ ಸಮುದಾಯ ರಾಜಕೀಯವಾಗಿ ಅಲ್ಪಸಂಖ್ಯಾತ ಸಮುದಾಯವಾಗಿದೆ. ಮಲೆಕುಡಿಯರಲ್ಲಿ

ಕೆ.ನಾರಾಯಣ ಶಿಶಿಲರವರು ಹಿಂದೆ ಜಿಲ್ಲಾ ಪಂಚಾಯತ್ ಸದಸ್ಯರಾಗಿ ಚುನಾಯಿತರಾಗಿದ್ದಾರೆ. ರಾಜಕೀಯ ಅಧಿಕಾರದ ಅವಕಾಶ ಪಡೆದಿದ್ದಾರೆ. ಅವರ ನಂತರ ಗ್ರಾಮ ಪಂಚಾಯಿತಿ ತಾಲ್ಲೂಕು ಪಂಚಾಯಿತಿ ಸದಸ್ಯರಾಗಿ ಚುನಾಯಿತರಾಗಿ ಬಂದವರಲ್ಲಿ ಮಲೆಕುಡಿಯರು ಇದ್ದಾರೆ. ಅದರಲ್ಲಿ ಪ್ರಮುಖವಾಗಿ ಮಹಿಳೆಯರ ಪಾಲ್ಗೊಳ್ಳುವಿಕೆ ಹೆಚ್ಚು ಕಂಡುಬರುತ್ತದೆ. ಧರ್ಮಸ್ಥಳದಲ್ಲಿ ಸದಾಶಿವ ಎಂಬುವರು ಗ್ರಾಮ ಪಂಚಾಯಿತಿಯ ಸದಸ್ಯ ಮತ್ತು ಉಪಾಧ್ಯಕ್ಷರಾಗಿ ಮತ್ತು ಸಹಕಾರ ಸಂಘದ ನಿರ್ದೇಶಕರಾಗಿ ಪ್ರಾತಿನಿಧ್ಯತೆಯನ್ನು ಪಡೆದಿದ್ದಾರೆ. ಕೊಯ್ಯೂರಿನ ಮಲೆಕುಡಿಯ ಸಂಘದ ಅಧ್ಯಕ್ಷರಾದ ಸಂಜೀವ ಮಲೆಕುಡಿಯ ಕೊಯ್ಯೂರು ಗ್ರಾಮ ಪಂಚಾಯಿತಿ ಸದಸ್ಯರಾಗಿದ್ದಾರೆ. ಶ್ರೀಮತಿ ಪುಷ್ಪ ಧರ್ಮಸ್ಥಳದ ತಾಲ್ಲೂಕು ಪಂಚಾಯತಿ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ. ಅರುಣ ಕುಮಾರಿ ಬಲ್ಲಮಂಜ ಇವರು ಸಹ ತಾಲ್ಲೂಕು ಪಂಚಾಯತಿ ಸದಸ್ಯರಾಗಿ ಚುನಾಯಿತರಾಗಿರುತ್ತಾರೆ. ಅಕ್ಕರಕೋಡಿಯ ಯಮುನಾ, ಕೊಕ್ಕಡದ ಪರಮೇಶ್ವರಿ ಇವರು ಸುಬ್ರಮಣ್ಯದ ಚಂದ್ರಕಲಾ ಬಂಜಾರುಮಲೆಯ ಕೃಷ್ಣಪ್ಪ ಮತ್ತು ಹಾಲಂಗಾಯ್‌ನ ಚಿದಾನಂದ ಇವರು ನೆರಿಯಾ ಗ್ರಾಮ ಪಂಚಾಯಿತಿ ಸದಸ್ಯರಾಗಿರುತ್ತಾರೆ. ಗುಂಡ್ಯ ಸಮೀಪದ ಕೊಂಬಾರು ಗ್ರಾಮಪಂಚಾಯಿತಿಯ ಅಧ್ಯಕ್ಷರಾಗಿ ಅವಿರೋಧವಾಗಿ ಆಯ್ಕೆಯಾಗಿರುತ್ತಾರೆ. ಈಗ ಇವರು ಸ್ಥಳೀಯ ಗ್ರಾಮ ಪಂಚಾಯಿತಿ ತಾಲ್ಲೂಕು ಪಂಚಾಯಿತಿಯವರೆಗೆ ರಾಜಕೀಯ ಪ್ರಾತಿನಿಧ್ಯ ಪಡೆದುಕೊಂಡು ಆಡಳಿತವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಜನಾಂಗಿಕವಾಗಿ ಅಲ್ಪಸಂಖ್ಯಾತ ಮತ್ತು ನಿರ್ಲ್ಯಕ್ಷಿತ ಸಮುದಾಯವಾದ ಇವರು ತಮ್ಮ ಆಳ್ವಿಕೆಯ ಅಧಿಕಾರದ ಚಲಾವಣೆಯಲ್ಲಿ ಇಲ್ಲಿನ ಪಕ್ಷಗಳ ಮುಖಂಡರ ಮತ್ತು ನಾಯಕತ್ವದ ನೆರಳಲ್ಲೇ ಕೆಲಸಮಾಡುವಂತಹ ಸ್ಥಿತಿ ಇದೆ. ನಾನು ಗ್ರಾಮ ಪಂಚಾಯಿತಿ ಸದಸ್ಯನಾದರೂ ನಮ್ಮ ಬಂಜಾರುಮಲೆಗೆ ರಸ್ತೆ ರಿಪೇರಿ ಮಾಡಿಸಲು ಆಗುತ್ತಿಲ್ಲ. ಬಸ್ಸಿನ ಸೌಲಭ್ಯವನ್ನ ಕೇಳುವಂತಿಲ್ಲ. ಇಲ್ಲಿಯ ಮಕ್ಕಳಿಗೆ ಅಂಗನವಾಡಿ ಶಾಲೆಯನ್ನು ಪ್ರಾರಂಭಿಸಲು ಆಗುತ್ತಿಲ್ಲ ಎಂಬ ತನ್ನ ಅಸಹಾಯಕತೆಯನ್ನ ಕೃಷ್ಣಪ್ಪ ಹೇಳಿದಾಗ ಇವರಲ್ಲಿನ ರಾಜಕೀಯ ಪರಮಾಧಿಕಾರ ಪರಾಧೀನತೆ ಪ್ರಾತಿನಿಧ್ಯದ ಮಹತ್ವ ತಿಳಿದುಬರುತ್ತದೆ.

ಈ ಸಮುದಾಯ ಮೊದಲಿನಿಂದಲೂ ಕಾಂಗ್ರೆಸ್ ಪಕ್ಷಕ್ಕೆ ತನ್ನ ನಿಷ್ಠೆ ಮತ್ತು ಬದ್ಧತೆಯನ್ನು ತೋರಿಸುತ್ತಾ ಬಂದಿದೆ. ಅದಕ್ಕೆ ಇವರು ಕೊಡುವ ಕಾರಣ ಗೇಣಿದಾರರಾದ ನಮಗೆ ಭೂ ಸುಧಾರಣೆಯಿಂದ ಭೂಮಿ ದೊರೆಯಿತು. ಮತ್ತು ಮನೆಗಳಾದವು ಇದನ್ನು ಮಾಡಿದ್ದು, ಕಾಂಗ್ರೆಸ್ ಆಡಳಿತ ಎಂಬ ಮನೋಭಾವನೆ ಇವರಲ್ಲಿ ಬೇರೂರಿವುದರಿಂದ ನಮ್ಮ ಬೆಂಬಲ ಯಾವತ್ತೂ ಈ ಪಕ್ಷಕ್ಕೆ ನಿಷ್ಠೆ ಇವರಲ್ಲಿ ಕಂಡುಬರುತ್ತದೆ. ಬದಲಾದ ಕಾಲಘಟ್ಟಕ್ಕನುಗುಣವಾಗಿ ಬೆಳ್ತಂಗಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಆಡಳಿತಾರೂಢ ಬಿಜೆಪಿ ಪಕ್ಷಗಳ ಪ್ರಭಾವವು ಈ ಸಮುದಾಯಗಳ ಮೇಲೆ ಬೀರಿದ್ದು ಈ ಪಕ್ಷಗಳಿಂದಲೂ ಸಹ ಚುನಾಯಿತರಾಗಿ ಬಂದ ಜನಪ್ರತಿನಿಧಿಗಳು ಈ ಸಮುದಾಯದ ಕಾಳಜಿಯನ್ನು ಹೊಂದಿ ಈ ಸಮುದಾಯವನ್ನು ತಮ್ಮ ಪಕ್ಷಕ್ಕೆ ಸೆಳೆಯುವಲ್ಲಿ ನಿರಂತರವಾದ ಪ್ರಯತ್ನ ಮತ್ತು ಪೈಪೋಟಿ ನಡೆಸುತ್ತಿದ್ದಾರೆ. ಸುಲ್ಕೇರಿಯ ನಾಯಿದ ಗುರಿ ಪ್ರಕರಣದಲ್ಲಿ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳ ಪೈಪೋಟಿಯ ಫಲವಾಗಿ ಇವರು ನಿರಾಶ್ರಿತರಾಗಿ ಉಳಿಯಬೇಕಾದ ಪರಿಸ್ಥಿತಿ ಬಂದಿದೆ. ಕಾನೂನಿನ ಅಡೆತಡೆಗಳ ಮಧ್ಯೆ ಈ ರಾಜಕೀಯ ಅಧಿಕಾರದ ಪಕ್ಷಪಾತ ಧೋರಣೆ ಮತ್ತು ಭವಿಷ್ಯದಲ್ಲಿನ ರಾಜಕೀಯದ ಮತಗಳ ಗಳಿಕೆಯ ದೃಷ್ಟಿಯಿಂದ ಮಲೆಕುಡಿಯ ಸಮುಧಾಯದ ಮತಗಳನ್ನು ತಮ್ಮತ್ತ ಸೆಳೆಯುವ ಪ್ರಯತ್ನದಲ್ಲಿ ಇರುವುದು

ಕಂಡುಬರುತ್ತದೆ. ಇದರಿಂದಾಗಿ ಮಲೆಕುಡಿಯ ಸಮುದಾಯ ರಾಜಕೀಯ ಪರಾಧೀನ ರಾಗಿರುವುದು ಸ್ಪಷ್ಟವಾಗುತ್ತದೆ ಮತ್ತು ವರ್ತಮಾನ ಕಾಲ ಮಾತ್ರವಲ್ಲದೇ ಭವಿಷ್ಯದ ರಾಜಕೀಯ ಪ್ರಾತಿನಿಧ್ಯಕ್ಕಾಗಿ ನಿರಂತರವಾದ ಹೋರಾಟವನ್ನು ಮಾಡಬೇಕಾದ ಅನಿವಾರ್ಯ ಸ್ಥಿತಿ ಈ ಸಮುದಾಯದ್ದಾಗಿದೆ.

### ೫.೮. ನಕ್ಸಲ್ ಹೋರಾಟದ ಪ್ರದೇಶಗಳ ಸಮಸ್ಯೆ ಮತ್ತು ಸವಾಲುಗಳು

ಕುದುರೆಮುಖ ರಾಷ್ಟ್ರೀಯ ಉದ್ಯಾನವನ, ಯೋಜನೆಯ ಅನುಷ್ಠಾನದ ಫಲವಾಗಿ ಈ ಪ್ರದೇಶದ ವ್ಯಾಪ್ತಿಯಲ್ಲಿ ನೆಲೆಸಿರುವ ಮಲೆಕುಡಿಯರನ್ನು ಇಲ್ಲಿಂದ ಒಕ್ಕಲೆಬ್ಬಿಸುವ ಪ್ರಯತ್ನಗಳು ಸರ್ಕಾರದಿಂದ ನಡೆದಾಗಲೆಲ್ಲ ಅದನ್ನು ವಿರೋಧಿಸುವಲ್ಲಿ ಆರಂಭವಾದ ಸಂಘಟನೆ ಮತ್ತು ಹೋರಾಟವು ಈ ಪ್ರದೇಶದಲ್ಲಿ ನಕ್ಸಲ್ ಚಳುವಳಿಯ ಬೆಳವಣಿಗೆಗೆ ಕಾರಣವಾಗಿದೆ. ಈ ಪ್ರದೇಶಗಳು ಇಂದು ನಕ್ಸಲ್ ಪ್ರಭಾವಿತ ಪ್ರದೇಶಗಳೆಂದೇ ಹಣೆಪಟ್ಟಿ ಕಟ್ಟಿಕೊಳ್ಳಬೇಕಾದ ದುಸ್ಥಿತಿ ಈ ಸಮುದಾಯಕ್ಕೆ ಒದಗಿದೆ. ಅಷ್ಟೇ ಮಾತ್ರವಲ್ಲ ಈ ಪ್ರದೇಶದ ಅಭಿವೃದ್ಧಿಗೆ ಸರ್ಕಾರ ಈಗಾಗಲೇ ನಕ್ಸಲ್ ಪ್ಯಾಕೇಜ್‌ನ್ನು ಘೋಷಿಸಿದೆ. ನಾರಾವಿ, ಕುತ್ಲೂರು, ಎಳನೀರು, ಇಂದಬೆಟ್ಟು, ಸವಣಾಲು, ಸಿರ್ಲಾಲು, ಸುಲ್ಕೇರಿ, ನಾಯ್ದಗುರಿ ಮತ್ತು ಇತ್ತೀಚೆಗೆ ಶಿಶಿಲ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳಿಲ್ಲದೆ ತೊಂದರೆಯನ್ನು ಅನುಭವಿಸುತ್ತಿದ್ದಾರೆ. ಈ ಪ್ರದೇಶಗಳ ಅಭಿವೃದ್ಧಿಗಾಗಿ ಸರ್ಕಾರ ಅಭಿವೃದ್ಧಿ ಪ್ಯಾಕೇಜ್‌ನ್ನು ಘೋಷಿಸಿದ್ದರೂ, ಇದರ ಅನುಷ್ಠಾನಕ್ಕೆ ನೂರಾರು ತೊಡಕುಗಳಿವೆ. ಅರಣ್ಯ ಕಾಯ್ದೆಯಿಂದಾಗಿ ಇಲ್ಲಿ ರಸ್ತೆ, ವಿದ್ಯುತ್ ಸೌಲಭ್ಯಕ್ಕೆ ಅವಕಾಶವಾಗುತ್ತಿಲ್ಲ. ಈ ಪ್ರದೇಶಗಳಲ್ಲಿ ಅಳವಡಿಸಿರುವ ಸೋಲಾರ್ ದೀಪಗಳು ಕೆಟ್ಟುಹೋದರೆ ಅದರ ದುರಸ್ತಿಗೆ ಪ್ರಯತ್ನಗಳಾಗುತ್ತಿಲ್ಲ ಎಂದು ಈ ಸಮುದಾಯದ ಹೋರಾಟದ ಮುಂಚೂಣಿಯಲ್ಲಿರುವ ವಸಂತಿ ಕುತ್ಲೂರುರವರು ದೂರುತ್ತಾರೆ. ಪುನರ್‌ವಸತಿ ಪ್ಯಾಕೇಜ್ ಅಡಿಯಲ್ಲಿ ತಲಾ ಹತ್ತು ಲಕ್ಷ ರೂಪಾಯಿಗಳನ್ನು ಪರಿಹಾರವನ್ನು ಪಡೆದು ಕಾಡಿನಿಂದ ಹೊರಬರುವ ಕುಟುಂಬಗಳಿಗೆ ಮನೆರಸೀದಿ ಆಧಾರದ ಮೇಲೆ ಮೌಲ್ಯವನ್ನು ನಿಗಧಿಪಡಿಸಿ ಪರಿಹಾರವನ್ನು ನೀಡಬೇಕು. ಹೊರಬಂದ ಕುಟುಂಬಗಳಿಗೆ ನೌಕರಿಯನ್ನು ಕೊಡಬೇಕು. ತಲಾ ಎರಡು ಎಕರೆ ಭೂಮಿಯನ್ನು ಪರ್ಯಾಯವಾಗಿ ಕೊಡಬೇಕು. ಕುಟುಂಬದ ಇಬ್ಬರಿಗೆ ಗೌರವ ಧನ ನೀಡಬೇಕು ಎಂಬ ಬೇಡಿಕೆಗಳನ್ನು ವಸಂತಿ ಪುತ್ತೂರುರವರು ಸರ್ಕಾರದ ಮುಂದಿಟ್ಟಿದ್ದಾರೆ. ಈ ಪ್ರದೇಶದ ಆರೋಗ್ಯ ಸೇವೆಗಾಗಿ ಸಂಚಾರಿ ಆಸ್ಪತ್ರೆ ಸೌಲಭ್ಯವನ್ನು ನೀಡಲಾಗಿದೆ. ಇದು ಅಲ್ಲದೆ ಈ ಪ್ರದೇಶದ ಜನರಿಗೆ ಉದ್ಯೋಗ ಪತ್ರ, ಭಾಗ್ಯಲಕ್ಷ್ಮಿಬಾಂಡ್, ತೋಟಗಾರಿಕೆ ಇಲಾಖೆಯಿಂದ ಸಸಿ ವಿತರಣೆ, ಕೈಮಗ್ಗ ಮತ್ತು ಜವಳಿ ಇಲಾಖೆಯಿಂದ ಸಹಾಯಧನ ವಿತರಣೆ, ಯೋಜನೆಗಳು ಈ ಪ್ರದೇಶದಲ್ಲಿ ಈಗಾಗಲೇ ಅನುಷ್ಠಾನಗೊಳಿಸಲಾಗಿದೆ. ವಕ್ಕಲೆಬ್ಬಿಸುವಿಕೆ, ನಾಯ್ದಗುರಿ ಪ್ರಕರಣ ಮತ್ತು ವಿಠ್ಠಲಮಲೆಕುಡಿಯ ಪ್ರಕರಣಗಳು, ಸುಬ್ರಹ್ಮಣ್ಯದ ಮಡೆಸ್ನಾನದ ನಿಷೇಧ ಕುರಿತು ವಾದವಿವಾಧಗಳು ಈ ಸಮುದಾಯದ ವರ್ತಮಾನದ ಸವಾಲುಗಳಾಗಿವೆ.

"ಅಂದು ಏನಾದರೂ ಕುದುರೆಮುಖ ರಾಷ್ಟ್ರೀಯ ಉದ್ಯಾನವನದಂತಹ ಯೋಜನೆ ಇಲ್ಲಿ ಜಾರಿಯಾಗದೇ ಇದ್ದರೆ ನಮ್ಮ ಜನಾಂಗದ ಹುಡುಗರು ಇಂದು ಕ್ರಾಂತಿಕಾರಿ ಹೋರಾಟದ ಹಾದಿ ಹಿಡಿಯುತ್ತಿರಲಿಲ್ಲ. ಇವರ ಬದುಕು ಭವಿಷ್ಯದ ಗತಿ ಬೇರೆಯಾಗಿರುತ್ತಿತ್ತು" ಎಂಬ ಮಾತನ್ನು ಮಲೆಕುಡಿಯ ಜನಾಂಗದ ಹಿರಿಯ ಮುಖಂಡರಾದ ಕೆ. ನಾರಾಯಣ ಶಿಶಿಲರವರು ಹೇಳುತ್ತಾರೆ. ಈ ಕುದುರೆಮುಖ

ರಾಷ್ಟ್ರೀಯ ಉಧ್ಯಾನವನ ಯೋಜನೆ ಇವರ ಬದುಕನ್ನು ಆಹುತಿ ತೆಗೆದು ಕೊಳ್ಳುತ್ತದೆಂಬ ಕಲ್ಪನೆ ಅಂದು ಇವರ ಕನಸು ಮನಸ್ಸಿನಲ್ಲಿರಲಿಕ್ಕಿಲ್ಲ. ಈ ಯೋಜನೆ ಉದ್ದೇಶವೂ ಸೇರಿದಂತೆ ಇದರ ಜಾರಿಗಾಗಿ ನಡೆದು ಇದುವರೆಗಿನ ಹೋರಾಟದ ಪ್ರಭಾವ ಮತ್ತು ಪರಿಣಾಮದಿಂದ ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುತ್ತದೆ.

ದಿನಾಂಕ ೨.೩.೨೦೧೦ರಂದು ಸೋಮವಾರ ಕಾರ್ಕಳ ತಾಲೂಕಿನ ಅಜೆಕಾರು ಠಾಣೆ ವ್ಯಾಪ್ತಿಯ ಅಂಡಾರು ಗ್ರಾಮ ರಾಡಿಜೆಡ್ಡುನಲ್ಲಿ ನಡೆದ ಪೋಲೀಸರ ಗುಂಡಿಗೆ ಬಲಿಯಾದ ಮಲೆಕುಡಿಯ ಸಮುದಾಯದ ವಸಂತಗೌಡ ಯಾನೆ ಸುಂದರರವರ ತಲೆಗೆ ಸರ್ಕಾರ ೩ ಲಕ್ಷ ರೂಗಳ ಬಹುಮಾನ ಘೋಷಣೆ ಮಾಡಿತು. ಶವದ ಮರಣೋತ್ತರ ಪರೀಕ್ಷೆಗಾಗಿ ತಂದಿದ್ದಾರೆ. ಈ ಶವದ ಗುರುತು ಮಾಡಲು ಪೊಲೀಸ್ ಎನ್‌ಕೌಂಟರ್ ಬಗ್ಗೆ ವಸಂತಗೌಡರ ಮನೆಗೆ ಫೋನ್ ಮಾಡಿ ಮಾಹಿತಿ ನೀಡಿದ್ದಾರೆ. ಬೆಳಿಗ್ಗೆ ಮಣಿಪಾಲದ ಕೆ.ಎಮ್.ಸಿ ಆಸ್ಪತ್ರೆಯ ಶವಾಗಾರದಲ್ಲಿನ ಶವವನ್ನು ಗುರುತಿಸಲು ವಸಂತಗೌಡರ ತಂದೆ ಬಾಬು ಮಲೆಕುಡಿಯರ ಮತ್ತು ಇವರ ಚಿಕ್ಕಪ್ಪನ ಮಗ ಸುಧಾಕರರವರನ್ನು ಪೋಲೀಸರು ಅವರ ವಾಹನದಲ್ಲಿ ಇಲ್ಲಿಗೆ ಕರೆದುಕೊಂಡು ಬಂದು ಶವವನ್ನು ತೋರಿಸಿದ ನಂತರ ಶವವನ್ನು ನೋಡಿದ ವಸಂತಗೌಡರ ತಂದೆ ಬಾಬು ಮಲೆಕುಡಿಯ ಭಾವುಕನಾಗುತ್ತಾನೆ. ದುಃಖ ಮಡುಗಟ್ಟುತ್ತದೆ. ಶವ ನೋಡಿದ ನಂತರ ಶವದ ಮೇಲಿನ ಗಾಯದ ಗುರುತು ನೋಡಿದಾಗ ಪೊಲೀಸರು ನೇರವಾಗಿ ಗುಂಡಿಟ್ಟು ಕೊಂದ ಹಾಗೆ ಕಾಣಿಸಿದೆ ಎಂದು ಪತ್ರಿಕಾ ಪ್ರತಿನಿಧಿಗಳಿಗೆ ಪ್ರತಿಕ್ರಿಯೆ ನೀಡುತ್ತಾರೆ. ಹಿರಿಯರು ಹೇಳಿದ ಮಾತೆಲ್ಲಾ ಈಗಿನ ಹುಡುಗರು ಎಲ್ಲಿ ಕೇಳ್ತಾರೆ. ಎಲ್ಲಿಗೆ ಹೋಗ್ತಿ, ಏನು ಕೆಲಸ ಮಾಡ್ತಿ ಅಂತೆಲ್ಲಾ ನಾವು ಪ್ರಶ್ನೆ ಕೇಳಲು ಶುರು ಮಾಡಿದ ಮೇಲೆ ವಸಂತ ಮನೆಗೆ ಬಾರದೆ ೭-೮ ವರ್ಷ ಆಗಿತ್ತು ಎಂದು ಬಾಬು ಹೇಳುತ್ತಾರೆ. ಇವರೊಂದಿಗೆ ಬಂದಿದ್ದು ಬಾಬು ಮಲೆಕುಡಿಯನ ತಮ್ಮನ ಮಗ ಸುಧಾಕರ "ಕುದುರೆಮುಖ ರಾಷ್ಟ್ರೀಯ ಉದ್ಯಾನವನಕ್ಕೆ ಸಂಬಂಧ ಪಟ್ಟ ಪ್ರದೇಶದಲ್ಲಿ ವಾಸವಾಗಿರುವ ತಮ್ಮನ್ನು ಒಕ್ಕಲೆಬ್ಬಿಸಲು ಅರಣ್ಯ ಇಲಾಖೆ ನೀಡಿದ ಕಿರುಕುಳವೇ ವಸಂತಗೌಡ ನಕ್ಸಲ್ ಸಂಘಟನೆಯಲ್ಲಿ ಸೇರಿಕೊಳ್ಳುವ ಕಾರಣ ಏನಿರಬಹುದು ಎಂದು ಹೇಳುತ್ತಾನೆ. ನಾವು ಕೃಷಿಕರು ಸ್ವಲ್ಪ ಜಮೀನದೆ. ಕಷ್ಟದ ಜೀವನ ನಡೆಸುತ್ತಿದ್ದೇವೆ. ಆದರೆ ನಮ್ಮನ್ನು ಅಲ್ಲಿಂದ ಒಕ್ಕಲೆಬ್ಬಿಸಲು ಅರಣ್ಯ ಇಲಾಖೆಯವರು ಕಿರುಕುಳ ನೀಡಿದ್ದರಿಂದ ಈತ ಹೀಗಾಗಿ ಹೋದ ಇವನ ತಂಗಿ ಸುಂದರಿ ಕಳೆದ ೪-೫ ವರ್ಷಗಳಿಂದ ನಾಪತ್ತೆಯಾಗಿದ್ದಾಳೆ. ಆಕೆ ಮನೆಗೇ ಬರುತ್ತಿಲ್ಲ ಎಂದು ಸುಧಾಕರ ಹೇಳುತ್ತಾನೆ. ನಕ್ಸಲ್ ವಸಂತ ಗೌಡರವರ ವ್ಯಕ್ತಿ ಈ ಕುದುರೆಮುಖ ರಾಷ್ಟ್ರೀಯ ಉದ್ಯಾನದ ವ್ಯಾಪ್ತಿಯಲ್ಲಿರುವ ಕುತ್ಲೂರಿನಲ್ಲಿದೆ. ಬೆಳ್ತಂಗಡಿ ತಾಲೂಕಿನ ನಾರಾವಿ ಗ್ರಾಮ ಪಂಚಾವಟಿ ವ್ಯಾಪ್ತಿಯ ಕೊಟ್ಟಂದಡ್ಕದ ನಿವಾಸಿಗಳಾದ ಬಾಬು ಮಲೆಕುಡಿಯ ಮತ್ತು ಮೊದಲ ಹೆಂಡತಿಯ ಶ್ರೀಮತಿ ದಂಪತಿಗಳ ಮಗನಾದ ಆನಂದ ಯಾನೆ ವಸಂತಗೌಡ ಸೇರಿದಂತೆ ಐವರು ಮಕ್ಕಳಿದ್ದಾರೆ. ಇವರ ತಮ್ಮ ಸುರೇಶ" ಆನಂದನ ಸಾವು ಆಘಾತ ಉಂಟು ಮಾಡಿದ್ದರೂ ನಿರೀಕ್ಷಿತವೇ ಆಗಿದೆ ಎನ್ನುತ್ತಾನೆ. ಕನಿಷ್ಟ ಮೂಲಭೂತ ಸೌಲಭ್ಯಗಳಿಲ್ಲದ ಭೂ ಹಕ್ಕು ಪತ್ರ ನಿರುದ್ಯೋಗ, ಬಡತನ, ಸೇರಿದಂತೆ ಹಲವಾರು ಸಮಸ್ಯೆಗಳಲ್ಲಿ ಬದುಕುವ ಇಲ್ಲಿನ ನಿವಾಸಿಗಳು ನಿರಂತರ ಭಯದ ಆತಂಕದ ಅಭದ್ರತೆ ಸ್ಥಿತಿಯಲ್ಲಿ ಜೀವನ ಮಾಡಬೇಕಾಗಿದೆ. ಇವರ ಪರವಾಗಿ ನಡೆದ ಹೋರಾಟಗಳಲ್ಲಿ ಆನಂದ ಸಕ್ರಿಯವಾಗಿ ಭಾಗವಹಿಸುತ್ತಲೇ ನಕ್ಸಲ್ ನಿಗ್ರಹ ಪಡೆಯುವರು. ಆತನನ್ನು ಬೆನ್ನಟ್ಟಿ ಆಗ ಮನೆಗೆ ಬಂದು ವಿಚಾರಣೆ

ಮಾಡುತ್ತಿರುವ ಸಂಗತಿ ತಿಳಿಯುತ್ತದೆ. ಅಲ್ಲದೆ ಇಲ್ಲಿನ ಸ್ಥಳೀಯ ಯುವಕರಾದ ಪೂವಪ್ಪ, ಶಶಿಧರ ಮುಂತಾದವರನ್ನು ಸಹ ನಕ್ಸಲ್ ನಿಗ್ರಹ ಪಡೆಯುವರು ಆಗ ಬಂಧಿಸಿ ಪ್ರಕರಣ ದಾಖಲಿಸಿ ಮತ್ತೆ ಬಿಟ್ಟಿರುವ ಪ್ರಕರಣಗಳಿವೆ. ಬೆಳ್ತಂಗಡಿಯ ಗುರುವಾಯನಕೆರೆಯಿಂದ ಕಾರ್ಕಳ ರಸ್ತೆಯ ನಾರಾವಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಕುತತ್ಲೂರು ಎಂಬಲ್ಲಿಂದ ೨ ಕಿ.ಮೀ ಡಾಂಬರು ರಸ್ತೆಯಲ್ಲಿಸಾಗಿ ಬಳಿಕ ಕಾಡಿನ ಗುಡ್ಡದ ದಾರಿಯಲ್ಲಿ ೬ ಕಿ.ಮೀ ನಡೆದು ಹೋದಾಗ ಕುದುರೆಮುಖ ರಾಷ್ಟ್ರೀಯ ಉದ್ಯಾನ ವನಕ್ಕೆ ಸೇರಿದ ಅರಣ್ಯ ಪ್ರದೇಶದ ಮಧ್ಯೆ ಕೋಟ್ಯಂದಡ್ಕದ ಹೆಂಚಿನ ಮನೆ ಸಿಗುತ್ತದೆ. ಇಲ್ಲಿ ವಾಸವಾಗಿರುವ ಬಾಬು ಮಲೆಕುಡಿಯ ಶ್ರೀಮತಿ ದಂಪತಿಗಳ ಐವರು ಮಕ್ಕಳನ್ನು ಒಳಗೊಂಡ ಕುಟುಂಬವಾಗಿದೆ. ಇವರ ಹಿರಿಯ ಮಗ ಲೋಕಯ್ಯ ಕೆಲವು ವರ್ಷಗಳ ಹಿಂದೆ ಮರದಿಂದ ಬಿದ್ದು ಮರಣ ಹೊಂದಿದ್ದಾನೆ. ಎರಡನೇ ಮಗಳು ವಾರಿಜಾಳನ್ನು ಕಾರ್ಕಳದ ಕಬ್ಬಿನಾಲೆಯಲ್ಲಿ ನೆಲೆಸಿದ್ದಾರೆ. ಮೂರನೆಯ ಮಗ ಸುರೇಶ ಇಲ್ಲಿನ ಖಾಸಗಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾನೆ. ಇವರ ನಂತರ ಜನಿಸಿದವರು ವಸಂತ ಮತ್ತು ಸುಂದರಿಗೆ ಕನ್ಯಾಕುಮಾರಿ ಎಂಬ ಹೆಸರು ಇದೆ. ಮೊದಲನೇ ಪತ್ನಿ ಮರಣ ಹೊಂದಿದ ನಂತರ ಬಾಬು ಮಲೆಕುಡಿಯ ಲಕ್ಮೀ ಎಂಬುವವಳನ್ನು ಎರಡನೇ ವಿವಾಹವಾಗಿದ್ದಾರೆ. ಈ ಲಕ್ಷ್ಮೀಗೆ ಒಂದು ಗಂಡು ಮಗು ಇದೆ. ವಸಂತ ಹತ್ತನೇ ತರಗತಿವರೆಗೆ ಕಾರ್ಕಳದಲ್ಲಿ ಶಿಕ್ಷಣ ಪಡೆದು ನಂತರ ಇವರ ತೋಟದಲ್ಲಿ ಕೃಷಿ ಮಾಡಿಕೊಂಡಿದ್ದ ನಂತರ ಕರ್ನಾಟಕ ವಿಮೋಚನಾ ರಂಗದ ಮೂಲಕ ಪ್ರತಿಭಟನೆಯಲ್ಲಿ ಭಾಗವಹಿಸಿ ತನ್ನ ತಾಯಿ ಶ್ರೀಮತಿ ನಂತರ ೨ನೇ ವಿವಾಹ ವಾಗಿದ್ದಾನೆ. ೨ನೇ ಹೆಂಡತಿ ಲಕ್ಷ್ಮೀಗೆ ಜನಿಸಿದ ದಿನೇಶ್ ಈಗ ಕಾಸರಗೋಡಿನ ತನ್ನ ಅಜ್ಜಿ ಮನೆಯಿಂದ ಶಾಲೆಗೆ ಹೋಗುತ್ತಿದ್ದಾನೆ ಈಗ ೩ನೇ ತರಗತಿ ಕಲಿಯುತ್ತಿದ್ದಾನೆ. ಬಾಬು ಮಲೆಕುಡಿಯರ ೬೦ ಸೆಂಟ್ಸ್ ಜಾಗದಲ್ಲಿರುವ ಮೂರುಕೋಣೆಗಳ ಹೆಂಚಿನ ಮನೆ ಅಡಿಕೆ, ತಂಗಿನ ಮರಗಳ ತೋಟ ಮಾತ್ರ ಇದೆ. ಇದು ಈಗ ಕುದುರೆಮುಖ ರಾಷ್ಟ್ರೀಯ ಉದ್ಯಾನಕ್ಕೆ ಸೇರಿದೆ. ಇದನ್ನು ಬಿಟ್ಟು ಕೊಡಲು ಅರಣ್ಯ ಇಲಾಖೆ ನೋಟೀಸು ನೀಡಿದೆ. ಅಷ್ಟಾಗಿ ಕಿವಿ ಸರಿಯಾಗಿ ಕೇಳದ ಬಾಬು ಮಲೆಕುಡಿಯ ತನಗೆ ಇರುವ ಅಲ್ಪ ಭೂಮಿಯಲ್ಲಿ ಕೃಷಿಮಾಡಿಕೊಂಡು ೫೦೦ ಅಡಿಕೆ ತೋಟ ಮಾಡಿದ್ದಾರೆ. ಈ ವೇಳೆಯಲ್ಲಿ ಪೊಲೀಸರು, ನಕ್ಸಲ್ ನಿಗ್ರಹ ದಳದವರು ಇವರ ಮಗ ವಸಂತನನ್ನು ಹುಡುಕಲು ಆಗಾಗ ಬೂಟುಗಾಲಿನಲ್ಲಿ ಆಗಾಗ ಮನೆಗೆ ಬರುತ್ತಿದ್ದರು. ಕುದುರೆಮುಖ ರಾಷ್ಟ್ರೀಯ ಉಧ್ಯಾನದ ಪ್ರದೇಶದಲ್ಲಿನ ಕುತ್ಲೂರುನ ೪೦ ಮಲೆಕುಡಿಯ ಸಮುದಾಯದ ಕುಟುಂಬಗಳನ್ನು ಇಲ್ಲಿಂದ ಒಕ್ಕಲೆಬ್ಬಿಸಲು ಪ್ರಯತ್ನ ಮಾಡಿದಾಗ ಇದರ ವಿರುದ್ದ ಹೋರಾಟ ಆರಂಭವಾಗುತ್ತದೆ. ಇಲ್ಲಿನ ಕಾಡಿನ ಕಾಡುತ್ಪನ್ನ ಸಂಗ್ರಹಿಸಿ ತಲೆತಲಾಂತರಗಳಿಂದ ಕೃಷಿ ಮಾಡಿಕೊಂಡಿದ್ದ ಈ ಕುಟುಂಬಗಳನ್ನು ಇದ್ದಕ್ಕಿದ್ದಂತೆ, ಒಕ್ಕಲೆಬ್ಬಿಸಲು ಪ್ರಾರಂಭ ಮಾಡಿದಾಗ ಕರ್ನಾಟಕ ವಿಮೋಚನಾರಂಗ ಸಂಘಟನೆಯ ಮೂಲಕ ಹೋರಾಟ ಆರಂಭವಾಯಿತು. ಹಂತ ಹಂತವಾದ ಹೋರಾಟ ನಡೆಯುತ್ತದೆ. ಆಗ ನಡೆದ ಹೋರಾಟಗಾರ ಮೇಲೆ ಸರ್ಕಾರ ಮೊಕದ್ದಮೆ ಗಳನ್ನು ಹಾಕುತ್ತಲೇ ಬಂದಿದೆ. ಕಾಡಿನಲ್ಲಿ ಬೆಂಕಿ ಹಚ್ಚಿದ ಪ್ರಕರಣಕ್ಕೆ ಸಂಬಂದಿಸಿದಂತೆ ವಸಂತರ ಮೇಲೆ ಕೇಸು ಹಾಕಲಾಗಿದೆ. ಇವರ ಬಂಧನಕ್ಕೆ ವಾರೆಂಟ್ ಸಹ ಬಾರಿಯಾಗಿದೆ. ಈ ವಿಷಯ ತಿಳಿದ ವಸಂತ ಮನೆ ಬಿಟ್ಟು ಕಾಡು ಸೇರಿದ್ದು. ಅಂದಿನಿಂದ ಇಂದಿನವರೆಗೆ ವಸಂತರ ಮೇಲೆ ಒಟ್ಟು ೩೦ ಕೇಸುಗಳಿವೆ. ೨೦೦೩ರಲ್ಲಿ ಕಾರ್ಕಳದ ತಾಲೂಕಿನ ಮತ್ತಾವು ಎಂಬಲ್ಲಿ ನೆಲಬಾಂಬ್ ಹುದಿಗಿಸಿಟ್ಟ ಪೋಲೀಸರ ಜೀತನ್ನು ಉರುಳಿಸುವ ಪ್ರಯತ್ನ. ೨೦೦೮ರಲ್ಲಿ ಹೆಬ್ರದಲ್ಲಿ ನಡೆದ

ಬೋಜಶೆಟ್ಟಿ ಸುರೇಶ್ ಶೆಟ್ಟಿ ಎಂಬ ಪೊಲೀಸ್ ಮಾಹಿತಿದಾರರನ್ನು ಗುಂಡಿಟ್ಟು ಕೊಂದ ಪ್ರಕರಣ, ಕಾರ್ಕಳ ತಲೂಕಿನ ನಾಡ್ಪಾಲು ಎಂಬಲ್ಲಿ ಫಾರೆಸ್ಟ್ ಕೋಸ್ಪನ್ನು ಧ್ವಂಸ ಮಾಡಿದ್ದು, ಪೊಲೀಸರ ಮೇಲೆ ದಾಳಿ ಮಾಡಿದ್ದು, ಸಾರ್ವಜನಕರಿಂದ ಬಲವಂತವಾಗಿ ಆಧಾರ ವಸ್ತುಗಳನ್ನು ಪಡೆದಿದ್ದು ಜನರಿಗೆ ಕಿರುಕುಳ ನೀಡಿದ್ದು ಮುಂತಾದ ೩೦ ಪ್ರಕರಣಗಳಲ್ಲಿ ಆರೋಪಗಳಿವೆ. ಶೃಂಗೇರಿಯಿಂದ ವಸಂತ ವಾಂಟೆಡ್ ಲಿಸ್ಟ್‌ನಲ್ಲಿದ್ದು ಇವರ ತಲೆಗೆ ೩ ಲಕ್ಷ ಬಹುಮಾನವನ್ನು ಘೋಷಿಸಿದ್ದನ್ನು ನೋಡಿದರೆ ಇವರ ಹೋರಾಟದ ಘನತೆ ತಿಳಿದುಬರುತ್ತದೆ. ವಸಂತನ ಹುಡುಕಾಟದ ಜೊತೆಗೆ ಮನೆಗೆ ವಾರೆಂಟ್ ನೋಟಿಸ್‌ಗಳು ಸರಮಾಲೆಯಂತೆ ಬರುತ್ತಿದ್ದನು. ವಸಂತನನ್ನು ಹಾಜರುಪಡಿಸಲು ಇವರ ತಂದೆ ಬಾಬು ಮಲೆಕುಡಿಯರಿಗೆ ಒತ್ತಡವು ಬರುತ್ತದೆ ಎಂತಹ ಒತ್ತಡವೆಂದರೆ ವಸಂತನನ್ನು ಹಾಜರುಪಡಿಸಿದ್ದರೆ ಆಸ್ತಿ ಹರಾಜು ಹಾಕುವುದಾಗಿ ಹೇಳುತ್ತಾರೆ. ಇವರ ಆಸ್ತಿ ಹರಾಜಿಗೆ ಏಲಂ ಪ್ರಕಟನೆಯನ್ನು ಹೊರಡಿಸುತ್ತಾರೆ. ಆದರೆ ಇವರು ಇಲ್ಲಿಂದ ಒಕ್ಕಲೇಳಲು ಸಿದ್ದರಿಲ್ಲ. ನೂರಾರು ವರ್ಷಗಳಿಂದ ಇಲ್ಲಿರುವ ನಮ್ಮನ್ನು ಉದ್ದಾರ ಮಾಡಲು ಈವರೆಗೆಯು ಸರಕಾರದಿಂದಲೂ ಸಾಧ್ಯವಾಗಿಲ್ಲ. ಇನ್ನೂ ನಾವು ಕಾಡು ಬಿಟ್ಟು ಹೊರಹೋದ ಕೂಡಲೇ ಉದ್ದಾರ ಮಾಡಲು ಸಾಧ್ಯವೇ ಎಂಬ ಪ್ರಶ್ನೆಯನ್ನು ಹಾಕುತ್ತಾರೆ. ವಸಂತನನ್ನು ಪೊಲೀಸರು ಹುಡುಕಲು ಆರಂಭಿಸಿದ ನಂತರ ಈತ ನಕ್ಸಲ್ ಸಂಘಟನೆಯಲ್ಲಿ ಸಕ್ರಿಯನಾಗುತ್ತಾರೆ. ವಸಂತನ ತಂಗಿ ಸುಂದರಿ ಸಹ ಅಣ್ಣನ ಹಾದಿಯಲ್ಲಿದ್ದು, ದಿನಕರ ಎಂಬ ಯುವಕನೊಂದಿಗೆ ವಿವಾಹವಾಗಿ ಇವರು ಒಟ್ಟಿಗೆ ನಕ್ಸಲ್ ಸಂಘಟನೆ ಸೇರಿಕೊಳ್ಳುತ್ತಾರೆ ದಿನಕರ ಎನ್‌ಕೌಂಟರ್‌ಗೆ ಬಲಿಯಾಗುತ್ತಾನೆ.

ದಿನಾಂಕ ೨.೩.೨೦೧೦ ಸೋಮವಾರ ಸಂಜೆ ೪.೩೦ರ ಸುಮಾರಿನಲ್ಲಿ ನಕ್ಸಲ್ ಎನ್‌ಕೌಂಟರ್‌ನಲ್ಲಿ ಮೃತನಾದ ವಸಂತಗೌಡನ ಕೈಯಲ್ಲಿ ೭.೬೨ ಎಂ.ಎಂ ಸೆಲ್ಸ್ ಲೋಡಿಂಗ್ ರೈಫಲ್(ಎಸ್. ಎಲ್.ಆರ್) ಇದೆ. ಸೆಮಿ ಆಟೋ ಮ್ಯೂಜಿಕ್ ಆದ ಇದು ಅಪ್ಪಟ ದೇಸೀ ನಿರ್ಮಿತ ಮತ್ತು ತುಂಬ ಬಲಿಷ್ಟವಾದ ರೈಸಲ್ ಆಗಿತ್ತು. ಇದಕ್ಕೆ ೭.೬೨ ಮಿ.ಮೀ ಸುತ್ತಳತೆಯ ಬುಲೆಟ್‌ಗಳನ್ನು ತುಂಬಿಸುವ ೩ ಮ್ಯಾಗಝೀನ್‌ಗಳು ದೊರೆತಿವೆ. ಈ ಒಂದೊಂದು ಮ್ಯಾಗಝೀನ್‌ನಲ್ಲಿ ತಲಾ ೨೩ ಬುಲ್ಲೆಟ್ ತುಂಬಿಸಬಹುದಾಗಿದೆ. ಈ ಮ್ಯಾಗಝೀನ್‌ನನ್ನು ರೈಫಲ್‌ಗೆ ಸಿಕ್ಕಿಸಲಾಗುತ್ತದೆ. ಒಂದು ಬುಲೆಟ್ ರೈಫಲ್‌ನಿಂದ ಹೊರ ಚಿಮ್ಮುತ್ತಿದ್ದಂತೆ ಅದರ ಸ್ಥಳಕ್ಕೆ ಇನ್ನೊಂದು ಬುಲೆಟ್ ತಾನಾಗಿಯೇ ಬಂದು ನಿಲ್ಲುವ ಸ್ವಯಂ ಚಾಲನ ವ್ಯವಸ್ಥೆ ಈ ಮ್ಯಾಗಝೀನ್‌ನಲ್ಲಿದೆ. ವಸಂತಗೌಡರ ಕೈಯಲ್ಲಿ ರೈಫಲ್‌ನಲ್ಲಿ ೩ ಬುಲ್ಲೆಟ್ಟಗಳಿದ್ದವು. ಅಂದರೆ ೨೦ ಬುಲ್ಲೆಟ್‌ಗಳನ್ನು ಹಾರಿಸಿರಬೇಕು ಎಂದು ಅಂದು ಉಡುಪಿ ಎಸ್ಪಿ ಪ್ರವೀಣ್ ಕುಮಾರ್ ರವರು ಹೇಳಿದ್ದಾರೆ. ಅಲ್ಲದೆ ಆತನಲ್ಲಿದ್ದು ಇತರ ೨ ಮ್ಯಾಗಝೀನ್‌ನಲ್ಲಿ ೩೦ ಬುಲೆಟ್‌ಗಳಿದ್ದವು ಎನ್ನುವ ಪೊಲೀಸ್ ಅಧಿಕಾರಿಗಳು, ನಕ್ಸಲ್ ತಂಡದ ನಾಯಕ್ ವಿಕ್ರಂ ಗೌಡನ ಕೈಯಲ್ಲಿ ಎಕೆ ೪೭ ಇದೆ. ವಸಂತನ ಜೊತೆಗೆ ಅಂದು ಈತನೂ ಇದ್ದ ಸೋಮವಾರದ ಎನ್‌ಕೌಂಟರ್ ಸಂದರ್ಭದಲ್ಲಿ ವಿಕ್ರಮ್‌ಗೌಡನಿಂದಲೇ ಪೊಲೀಸರಿಗೆ ಗುಂಡು ಹಾರಿಸಿದ್ದಾರೆ ಎನ್ನಲಾಗುತ್ತದೆ ಎಂದು ಹೇಳಿ ಪೊಲೀಸ್ ಅಧಿಕಾರಿಗಳು, ಉತ್ತರಭಾರತದಲ್ಲಿ ಪೊಲೀಸರ ಮೇಲೆ ಧಾಳಿ ನಡೆಸುವ ನಕ್ಸಲರು ಅಲ್ಲಿಂದ ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಅಪಹರಿಸಿದ ಸಾಕಷ್ಟು ಘಟಕಗಳು ನಡೆದಿವೆ. ಈ ರೈಫಲ್‌ಗಳು ಕೈಯಿಂದ ಕೈಗೆ ಬದಲಾಗುತ್ತಾ ಮಲೆನಾಡಿನ ತನಕವು ಬಂದಿದೆ ಎಂದು ಪೊಲೀಸ್ ಅಧಿಕಾರಿಗಳು ಈ ರೈಫಲ್‌ನ್ನು ಪ್ರದರ್ಶಿಸುತ್ತಾ ವಿವರಣೆ ನೀಡಿದ್ದಾರೆ.

ದಿನಾಂಕ. ೨.೩.೨೦೧೧ರಂದು ಸೋಮವಾರ ಉಡುಪಿ ಜಿಲ್ಲೆಯ ಎನ್‌ಕೌಂಟರ್‌ನಲ್ಲಿ ನಡೆದ ವಸಂತಗೌಡನ ಹತ್ಯೆ ಕುರಿತು ಕರ್ನಾಟಕ ರಾಜ್ಯ ಗೃಹ ಸಚಿವರಾದ 'ವಿ.ಎಸ್' ಆಚಾರ್ಯರವರು ದಿನಾಂಕ ೩.೩.೨೦೧೧ರಂದು ಮಂಗಳವಾರ ವಿಧಾನಸಭೆಯಲ್ಲಿ ಮಾಹಿತಿ ನೀಡಿದ್ದಾರೆ. ಇವರು ಹೇಳುವ ಪ್ರಕಾರ ಕರ್ನಾಟಕಕ್ಕೆ ರಾಜ್ಯದಲ್ಲಿ ನಕ್ಸಲ್ ಚಳುವಳಿಯನ್ನು ಹತ್ತಿಕ್ಕಲು ಸರ್ಕಾರ ಸಂಪೂರ್ಣ ಸಫಲವಾಗಿದೆ ಎಂದು ಹೇಳಿಕೆ ನೀಡಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ನಕ್ಸಲ್ ಚಳುವಳಿ ನಿಯಂತ್ರಣದಲ್ಲಿ ಯಾವುದನ್ನು ಗಮನಹರಿಸಿದ ಕೇಂದ್ರ ಸರ್ಕಾರ ನಕ್ಸಲ್ ಪೀಡಿತ ರಾಜ್ಯಗಳ ಪಟ್ಟಿಯಿಂದ ಕರ್ನಾಟಕವನ್ನು ಕೈಬಿಟ್ಟಿದೆ ಎಂದು ಹೇಳಿದ್ದಾರೆ. ನಕ್ಸಲ್ ನಿಗ್ರಹ ಪಡೆಯು ಉಡುಪಿ ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಾರ್ಯಚರಣೆ ಮುಂದುವರಿಸಿರುವುದು ಸೇರಿದಂತೆ ಅಂಡಾರು ಗ್ರಾಮದ ಬಳಿಯ ಮೈರೋಳಿ ಅರಣ್ಯದಲ್ಲಿ ಹತನಾದ ವಸಂತಗೌಡ ಕುರಿತು ಸದನಕ್ಕೆ ಮಾಹಿತಿ ನೀಡಿ ಈ ಚಳುವಳಿಯು ನಿಯಂತ್ರಣ ದಲ್ಲಿರುವುದನ್ನು ಸಮರ್ಥಿಸಿದ್ದಾರೆ. ಮುಟ್ಲುಪಾಡಿ ಮೈರೋಳಿಯಲ್ಲಿ ನಡೆದ ಎನ್‌ಕೌಂಟರ್‌ನಲ್ಲಿ ಮಲೆಕುಡಿಯ ಸಮುದಾಯದ ನಕ್ಸಲ್ ವಸಂತ ಮೃತಪಟ್ಟ ಸ್ಥಳವನ್ನು ಬರಿದು ಮಾಡಿ ಗಿಡ ಗಂಟಿ ಕಡಿದು ಕಟ್ಟಿಗೆಯನ್ನು ಗೋರಿಯಂತೆ ರಾಶಿ ಹಾಕಿ ಮತ್ತು ಕಲ್ಲುಗುಂಪೆಯಲ್ಲಿ ವಸಂತನ ಸಮಾಧಿ ನಿರ್ಮಿಸಿದ್ದಾರೆ. ನಕ್ಸಲರ ಕ್ರಾಂತಿಕಾರಿ ಬರಹದ ಕೆಂಪು ಬ್ಯಾನರ್ ಮಾವೋವಾದಿ ನಕ್ಸಲ್ ಸಂಘಟನೆಯ ಚಿನ್ಹೆ ಇರುವ ಕೆಂಪು ಬ್ಯಾನರ್ ಸುತ್ತಿದ್ದಾರೆ. ಮತ್ತೊಂದು ಬ್ಯಾನರ್‌ನಲ್ಲಿ ಕಾಮೆಡ್ ವಸಂತ ತುಳುನಾಡಿನ ಹೆಮ್ಮೆಯ ಪುತ್ರ ಕರುನಾಡ ಕ್ರಾಂತಿಕಾರಿ ದುಡಿಯುವ ಕೈಗಳ ಕೆಚ್ಚೆದೆಯ ಜನಪ್ರಿಯ ಜನಮೆಚ್ಚಿದ ಯುವನಾಯಕ ವಸಂತ ಅಮರವೀರ ಎಂದು ಮೃತ ನಕ್ಸಲ್ ವಸಂತನಿಗೆ ನಕ್ಸಲ್ ಸಂಘಟನೆಯಿಂದ ಶ್ರದ್ಧಾಂಜಲಿ ಸಲ್ಲಿಸಿದ್ದಾರೆ. ವಸಂತ ಅಮರವಾಗಲಿ ಎಂದು ಘೋಷಣೆ ಇದೆ. ನಕ್ಸಲ್ ವಸಂತನ ಎನ್‌ಕೌಂಟರ್ ನಂತರ ರಾಜ್ಯಸರ್ಕಾರ ಹಾಗೂ ಪೊಲೀಸ್ ಇಲಾಖೆ, ಪಶ್ಚಿಮ ಘಟ್ಟದ ಮಲೆನಾಡಿನಲ್ಲಿ ನಕ್ಸಲರು ಇಲ್ಲ ಎಂದು ಘೋಷಣೆಯನ್ನು ಹೊರಡಿಸಿದ್ದಾರೆ. ಆದರೆ ಇಲ್ಲಿ ನಕ್ಸಲರ ಸಂಘಟನೆ ತೀವ್ರಗೊಂಡಿರುವುದಕ್ಕೆ ಈ ಘಟನೆ ಸಾಕ್ಷಿಯಾಗಿದೆ. ಎಂಬುದು ಮುಟ್ಲುಪ್ಪಾಡಿಯ ಜನರು ಹೇಳುತ್ತರೆ. ಎನ್‌ಕೌಂಟರ್ ನಡೆದ ಮೈರೋಳಿಯಲ್ಲಿನ ಜಾಗದಲ್ಲಿ ಬ್ಯಾನರ್ ಕಟ್ಟಿ ಸಭೆ ನಡೆಸಿದ್ದಾರೆ. ಇಲ್ಲಿನ ಸ್ಥಳೀಯ ಮಲೆಕುಡಿಯರ ಕುಟುಂಬಗಳಿಗೆ ಕರಪತ್ರ ಹಂಚಿ ನಕ್ಸಲ್ ಸಂಘಟನೆ ಬಲಪಡಿಸಲು ಕೋರಿದ್ದಾರೆ.

## ಮುಟ್ಲಪಾಡಿಯ ಜಾತ್ರೆಯ ಕೋಲ

ದಕ್ಷಿಣ ಕನ್ನಡ ಜಿಲ್ಲೆಯು ಸೇರಿದಂತೆ ಅವಿಭಜಿತ ದಕ್ಷಿಣ ಕನ್ನಡದ ಪ್ರದೇಶಗಳಾದ ತುಳುನಾಡಿನ ಸಂಸ್ಕೃತಿ ಪರಂಪರೆಯ ಜೀವಾಳವೆಂದರೆ ಇಲ್ಲಿ ಆಚರಣೆಯಲ್ಲಿರುವ ಜಾತ್ರೆ, ನೇಮ, ಉತ್ಸವಗಳಾಗಿವೆ. ಈ ಪ್ರದೇಶದ ವಾಸಿಗಳು ಈಗ ಎಲ್ಲೇ ನೆಲೆಸಿದ್ದರೂ ಸಹ ಈ ಪರಂಪರೆಯನ್ನು ಮರೆಯುವುದಿಲ್ಲ. ಬಾಂಬೆಯಲ್ಲಿ ನೆಲೆಸಿರುವ ತುಳುವರು ಅಲ್ಲಿ ಈಗಲೂ ಸಹ ಈ ನೇಮ ಉತ್ಸವಗಳನ್ನೂ ಆಚರಣೆ ಮಾಡುತ್ತ ಪ್ರತಿ ವರ್ಷ ಬಾಂಬೆಗೆ ಕರೆಸಿಕೊಂಡು ತಮ್ಮ ಆಚರಣೆ ಮಾಡುತ್ತಿದ್ದಾರೆ. ಈ ನೇಮ ಉತ್ಸವ ಜಾತ್ರೆಗಳಲ್ಲಿನ ನಂಬಿಕೆ ನಕ್ಸಲ್ ಸಂಘಟನೆಯಲ್ಲಿರುವವರನ್ನು ಸಹ ಆಕರ್ಷಿಸಿದೆ. ದಿನಾಂಕ ೨.೩.೨೦೧೧ರಂದು ಸೋಮವಾರ ನಕ್ಸಲ್ ವಸಂತನ ಹತ್ಯೆಯಾದ ಸ್ಥಳದಿಂದ ಒಂದು ಮೈಲು ದೂರದಲ್ಲಿ ಮುಟ್ಲಪಾಡಿ ಬರುತ್ತದೆ. ದಿನಾಂಕ ೩.೩.೨೦೧೧ರಂದು ಮಂಗಳವಾರ ಇಲ್ಲಿನ ಅರ್ಧನಾರೀಶ್ವರಿ ದೇವಸ್ಥಾನದ ಜಾತ್ರೆ

ಇದೆ. ಸೋಮವಾರ ಈ ಎನ್‌ಕೌಂಟರ್ ಆಗಿದೆ. ಈ ಜಾತ್ರೆಗೆ ನಕ್ಸಲರು ಪ್ರತಿವರ್ಷ ಬರುತ್ತಾರೆಂಬ ಸುಳಿವಿನೊಂದಿಗೆ ಇವರ ಬೇಟೆಗೆ ಸಜ್ಜಾದ ನಕ್ಸಲ್ ನಿಗ್ರಹ ಪಡೆಗೆ ಸಂಜೆ ಸಮಯಕ್ಕೆ ಬಲಿಯಾಗಿದೆ. ಕೋಲ: ಹೆಬ್ರಿಯ ಸಮೀಪವಿರುವ ಮುನಿಯಾಲ ಮುಟ್ಲುಪಾಡಿ ಅರ್ಧನಾರೀಶ್ವರ ದೇವರ ಸನ್ನಿಧಿಯಲ್ಲಿ ದಿನಾಂಕ ೨.೩.೨೦೧೦ರಂದು ಸೋಮವಾರ ರಾತ್ರಿ ನಡೆಯಲಿರುವ ಬ್ರಹ್ಮ ಬೈದರ್ಕಳ ಕೋಲಕ್ಕೆ ಬಂದ ನಕ್ಸಲ್ ಪಡೆಯ ವಸಂತಗೌಡ(ಆನಂದ) ಮತ್ತು ನಕ್ಸಲರ ತಂಡ ಈ ಜಾತ್ರೆಗೆ ಬುರುತ್ತಿರುವುದು ಸಹಜವಾಗಿತ್ತು. ನಕ್ಸಲ್ ರಾಜ್ಯ ನಾಯಕರಾದ ಕೊಡ್ಲು ವಿಕ್ರಮಗೌಡ ಇದೇ ಪ್ರದೇಶಕ್ಕೆ ಸೇರಿದ್ದರಿಂದಾಗಿ ಸಹಜವಾಗಿ ತನ್ನ ಪರಿಸರದ ಬಗ್ಗೆ ಕಾಳಜಿ ಇರುವುದು ತಿಳಿದು ಬರುತ್ತದೆ. ಕುತ್ಲೂರುಗೆ ಸೇರಿದ ವಸಂತಗೌಡರಿಗೆ ಸಹ ಈ ಪ್ರದೇಶದಲ್ಲಿ ಸಂಬಂಧಗಳಿದ್ದು ಹಿನ್ನೆಲೆಯಲ್ಲಿ ಸಹ ಈ ಜಾತ್ರೆ ಇವರಿಗೆ ವಿಶೇಷವಾಗಿತ್ತು. ಇದರ ಸುಳಿವನ್ನು ಅರಿತ ನಕ್ಸಲ್ ನಗ್ರಹ ಪಡೆ ಇವರನ್ನು ಬೇಟೆಯಾಡುವಲ್ಲಿ ಸಿದ್ದತೆ ಮಾಡಿಕೊಂಡು ಬನ್‌ಕೌಂಟರ್ ನಡೆಸಿರುವುದು ತಿಳಿದುಬರುತ್ತದೆ. ಎನ್‌ಕೌಂಟರಿನ ಗುರಿತಿನ ಸದ್ದು ಕೇಳಿ ಬೆದರಿದ ಹಸಿ ಬಾಣಂತಿ ಮಹಿಳೆ ತನ್ನ ಮಗುವಿನೊಂದಿಗೆ ಪಕ್ಕದಮನೆಗೆ ಓಡಿ ಹೋದ ಸಂಗಾತಿಗಳಾಗಿವೆ. ಅವಗಡ, ಸಾವು ಸಂಬಂಧಿಸಿದರೆ ಅದನ್ನು 'ಅಶೌಚ' ಎಂದು ನಂಬುವ ಇಲ್ಲಿನ ಜನರು ಇದು ಒಂದು ಸೂತಕವೆಂದು ಸೋಮವಾರ ರಾತ್ರಿ ಮೃತ ವಸಂತಗೌಡನ ಶವವನ್ನು ಅರ್ಧನಾರೀಶ್ವರ ದೇವಸ್ಥಾನದ ಎದುರುಗಡೆಯಿಂದ ಸಾಗಿಸುವುದಕ್ಕೆ ಇಲ್ಲಿನ ಜನರು, ಭಕ್ತರು ಆಕ್ಷೇಪ ಮಾಡಿದ್ದಾರೆ. ಪೊಲೀಸರು ಇದನ್ನು ಕೇಳದೆ ಶವವನ್ನು ಉಡುಪಿಗೆ ಸಾಗಿಸಿದ್ದಾರೆ. ಜನರಲ್ಲಿನ ನಂಬಿಕೆಗಳು ತಾಳೆಯಾಗಲು ಕಾರಣವೆಂಬಂತೆ ಸೋಮವಾರ ರಾತ್ರಿ ನಡೆದ ಕೋಲದ ಬ್ರಹ್ಮ ಬೈದರ್ಕಳ ನೇಮೋತ್ಸವ ಸಂದರ್ಭದಲ್ಲಿ ಕಾಲಿಗೆ ಕಟ್ಟುವ ಒಂದು ಗಗ್ಗರ ಒಡೆದು ಹೋಗಿತ್ತು. ಇದನ್ನು ಅಪಶಕುನ ಎಂದು ಭಾವಿಸಿದ ದೇವಸ್ಥಾನದವರು ಮತ್ತೆ ಪುಣ್ಯದ ವಾಚನಗಳನ್ನು ನಡೆಸಿ ಅರ್ಚಕರಿಂದ ಅಶೌಚ, ಸೂತಕದ ನಿವಾರಣೆ ಮಾಡುತ್ತಾರೆ. ಇಲ್ಲಿ ಮೃತ ದೇಹ ಸಾಗಿಸಿದ್ದರಿಂದಲೇ ಈ ರೀತಿ ಆಯಿತು ಎಂದು ಜನರು ಭಾವಿಸಿದ್ದಾರೆ.

ಪಶ್ಚಿಮಘಟ್ಟ ಪ್ರದೇಶ ವ್ಯಾಪ್ತಿಯಲ್ಲಿ ಹಬ್ಬಿಕೊಂಡಿರುವ ನಕ್ಸಲ್ ಹೋರಾಟದ ಪ್ರದೇಶಗಳಲ್ಲಿ ಕುದುರೆಮುಖ ರಾಷ್ಟ್ರೀಯ ಉದ್ಯಾನದ ಗಡಿ ಭಾಗದಲ್ಲಿದಲ್ಲಿರುವ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕು ಒಳಪಟ್ಟ ಕುತ್ಲೂರು, ನಾರಾವಿ, ನಡ, ಎಳನೀರು, ಕಬ್ಬಿನಲೆ, ಸವನಾಳು, ಮೈರೋಳಿ, ಪಿರ್ಲಾಳು, ದಿಡುಪೆ, ಮುಂತಾದ ಪ್ರದೇಶಗಳು ನಕ್ಸಲ್ ಹೋರಾಟದ ಪ್ರದೇಶಗಳೆಂದು ಪರಿಗಣಿಸಲಾಗಿದೆ. ಕುದುರೆ ಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ವಾಸವಾಗಿರುವ ಮಲೆಕುಡಿಯ ಬುಡಕಟ್ಟು ಸಮುದಾಯದ ಕುಟುಂಬಗಳನ್ನು ಇಲ್ಲಿಂದ ಸ್ಥಳಾಂತರಗೊಳಿಸುವ ಪ್ರಯತ್ನ ನಿರಂತರವಾಗಿ ಮುಂದುವರೆದುಕೊಂಡು ಬಂದಿದೆ. 'ಹಿಂದೆ ವೀರಪ್ಪ ಮೊಯ್ಲಿ ಇವರು ಕಾರ್ಕಳದ ಶಾಸಕರಾಗಿದ್ದ ಕಾಲದ ಅವಧಿಯಲ್ಲಿ ಈ ಕುದುರೆ ಮುಖ ರಾಷ್ಟ್ರೀಯ ಉದ್ಯಾನವನ ಯೋಜನೆಯನ್ನು ಜಾರಿಗೊಳಿಸಲಾಯಿತು. ಅಂದು ನಾವೇನಾದರೂ ಈ ಯೋಜನೆ ಬೇಡ ಅಂತ ಹೇಳಿದ್ದರೆ ಇಂದು ನಮ್ಮ ಸಮುದಾಯದ ಯುವಕರ ಭವಿಷ್ಯದ ದಿಕ್ಕು ಬದಲಾಗುತ್ತಿತ್ತು. ನಮ್ಮ ಹುಡುಗರ ಪ್ರಾಣ ಉಳಿಯುತ್ತಿತ್ತು' ಎಂಬ ಆತಂಕ ಮತ್ತು ಪಶ್ಚಾತ್ತಾಪವನ್ನು ಈ ಸಮುದಾಯದ ಹಿರಿಯರಾದ ಕೆ.ನಾರಾಯಣ ಶಿಶಿಲರವರು ವ್ಯಕ್ತಪಡಿಸಿದ್ದಾರೆ. ಈ ಪ್ರದೇಶದ ವ್ಯಾಪ್ತಿಯಲ್ಲಿ ವಾಸವಾಗಿರುವ ಕುಟುಂಬಗಳನ್ನು ಇಲ್ಲಿಂದ ಒಕ್ಕಲೆಬ್ಬಿಸಲು ಸರ್ಕಾರ ನಿರಂತರ

ಪ್ರಯತ್ನಗಳನ್ನು ಮಾಡುತ್ತಾ ಬಂದಿದೆ. ಅಂತೆಯೇ ಇಲ್ಲಿ ವಾಸವಾಗಿರುವ ಮೂಲ ನಿವಾಸಿಗಳು ತಮ್ಮ ನೆಲ ಭೂ ಸಂಪತ್ತು ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ನಿರಂತರವಾದ ಹೋರಾಟಗಳನ್ನು ಮಾಡುತ್ತಾ ಬಂದಿದ್ದಾರೆ. ಕರ್ನಾಟಕ ವಿಮೋಚನಾ ರಂಗ ಎಂಬ ಸಂಘಟನೆಯ ಮೂಲಕ ಆರಂಭವಾದ ಇವರ ಹೋರಾಟ ಕಾಡುತ್ಪತ್ತಿ ಸಂಗ್ರಹ ಇಲ್ಲಿಂದ ತಮ್ಮನ್ನು ಉಳಿಸಿಕೊಳ್ಳುವ ಪ್ರಯತ್ನಕ್ಕಾಗಿ ಹಂತ ಹಂತವಾದ ಪ್ರತಿಭಟನೆಗಳನ್ನು ಮಾಡುತ್ತಾ ಬಂದಿದ್ದಾರೆ. ಅದಕ್ಕೆ ಪ್ರತಿಯಾಗಿ ಸರ್ಕಾರ ಇಲ್ಲಿನ ಹೋರಾಟಗಾರರ ಮೇಲೆ ಮೊಕದ್ದಮೆಗಳನ್ನು ಹಾಕುವುದರ ಮೂಲಕ ಹೋರಾಟವನ್ನು ಹತ್ತಿಕ್ಕುವ ಪ್ರಯತ್ನ ಮಾಡಿದೆ. ಪುತ್ತೂರಿನ ವಸಂತ ಗೌಡರ ಹತ್ಯೆಯಾದ ಬಳಿಕ ದಕ್ಷಿಣ ಕನ್ನಡ ಜಿಲ್ಲಾಧಿಕಾರಿ ಗಳಾದ ಪೊನ್ನುರಾಜ್‌ರವರು ಈ ಪ್ರದೇಶದ ನಿವಾಸಿಗಳ ಸಭೆಯನ್ನು ಕರೆದು ಇಲ್ಲಿನ ೫೮ ಕುಟುಂಬಗಳನ್ನು ಒಕ್ಕಲೆಬ್ಬಿಸಲು ಮನವೊಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ಶವಾಗಾರದಲ್ಲಿ ಶವವಿಟ್ಟುಕೊಂಡು ಮಾಡಿದ ಈ ಸಭೆಯ ಒತ್ತಡ ಮತ್ತು ಆತಂಕಗಳ ಫಲವಾಗಿ ಭಯ ಭೀತಗೊಂಡ ೧೨ ಕುಟುಂಬಗಳು ಸ್ವ ಇಚ್ಛೆಯಿಂದ ಸರ್ಕಾರ ನೀಡುವ ರೂ. ಹತ್ತು ಲಕ್ಷ ಪರಿಹಾರ ಪಡೆದು ಕಾಡಿನಿಂದ ಹೊರ ಬರಲು ಸಭೆಯಲ್ಲಿ ಒಪ್ಪಿಗೆ ನೀಡಿದ್ದಾರೆ. ಈ ಬೆಳವಣಿಗೆಯಿಂದಾಗಿ ಈ ನಿವಾಸಿಗಳಲ್ಲಿ ಮತ್ತು ಸಂಘಟನೆಯ ನಾಯಕರಲ್ಲಿ ವಾದ-ವಿವಾದಗಳಿಗೆ ಅವಕಾಶವಾಯಿತು. ನೆರಿಯಾ, ಬೆಳ್ತಂಗಡಿ, ಉಜಿರೆ, ಕಕ್ಕಿಂಜ, ಚಾರ್ಮಾಡಿ, ಮುಂಡಾಜೆ ಪೇಟೆಗೆ ಬಂದು ಹೋಗಬೇಕು. ದೂರದ ಚಾರ್ಮಾಡಿ ರಸ್ತೆ ಬಂದರೆ ಇಲ್ಲಿ ಬರುವ ಬಸ್ಸುಗಳಲ್ಲಿ ವೇಗದೂತ ಬಸ್ಸುಗಳೇ ಆಗಿದ್ದು, ನಿಲುಗಡೆಗೆ ಅವಕಾಶವೇ ಇಲ್ಲದಂತಾಗಿದೆ. ಇವರಿಗೆ ನೆರಿಯಾದ ಮಾರ್ಗವೇ ತೀರಾ ಸಮೀಪದ ದಾರಿಯಾಗಿದೆ. ಬಾಂಜಾರು ಮಲೆಯ ಮಲೆಕುಡಿಯ ಕಾಲೋನಿಯ ಜನರು ಇನ್ನೂ ಮೂಲಭೂತ ಸೌಲಭ್ಯಗಳಿಂದ ದೂರ ಉಳಿದಿದ್ದಾರೆ. ಇಲ್ಲಿರುವ ಸುಮಾರು ೩೭ ಕುಟುಂಬಗಳಿಗೆ ಆಧುನಕತೆಯ ಸೌಲಭ್ಯಗಳ ಕೊರತೆ ಇದೆ. ಕಾಡಿನ ಮಧ್ಯೆ ಕೃಷಿಯನ್ನು ನಂಬಿ ಬದುಕು ಸಾಗಿಸುತ್ತಿರುವ ಇವರಿಗೆ ರಸ್ತೆ ಸಂಪರ್ಕದ ಸಮಸ್ಯೆ ಪ್ರಧಾನವಾದ ಸಮಸ್ಯೆಯಾಗಿದೆ. ಇವರು ವಾಸವಾಗಿರುವ ಪ್ರದೇಶವು ವೈ.ಎಂ.ಕೆ. ಎಸ್ಟೇಟಿನ ವ್ಯಾಪ್ತಿಯ ಒಳಗಿದ್ದು ಇವರ ಖಾಸಗಿ ಒಡೆತನದ ಭೂಮಿ ಒಳಗೆ ರಸ್ತೆ ಹಾದು ಹೋಗುತ್ತದೆ. ಈ ಖಾಸಗಿ ಮಾಲೀಕರು ತಮ್ಮ ಒಡೆತನ ಭೂಮಿಯಲ್ಲಿನ ರಸ್ತೆಯನ್ನು ಇವರು ಅವಲಂಭಿಸಿದ್ದಾರೆ. ಈ ರಸ್ತೆ ಸರ್ವ ಕಾಲದಲ್ಲಿ ಇವರಿಗೆ ತಿರುಗಾಡಲು ಅನುಕೂಲವಾಗುವಂತೆ ಇಲ್ಲಿಂದ ಗೆದ್ದು ಹೋದ ಜನಪ್ರತಿನಿಧಿಗಳು, ಅಧಿಕಾರಿಗಳು ಮಾಡಿದ ಪ್ರಯತ್ನಗಳು ಫಲಕಾರಿಯಾಗದೆ ಇವರ ಸಮಸ್ಯೆ ಸಮಸ್ಯೆಯಾಗಿಯೇ ಕಾಡುತ್ತಿದೆ. ಇದರ ಪರಿಹಾರಕ್ಕೆ ಯಾರಿಂದಲೂ ನಮಗೆ ಅನುಕೂಲವಾಗುತ್ತಿಲ್ಲ ಎಂಬ ಕೊರಗು ಜನರದ್ದಾಗಿದೆ. ಇವರಿಗೆ ಯಾವುದೇ ರೀತಿಯ ಅನಾರೋಗ್ಯ ತುರ್ತು ಚಿಕಿತ್ಸೆ ಬೇಕಾದರೆ ಇಲ್ಲಿಂದ ಕಿ.ಮೀ. ದೂರ ಇರುವ ಕಕ್ಕಿಂಜೆ ಅಥವಾ ಬೆಳ್ತಂಗಡಿಗೆ ಕಚ್ಚಾ ರಸ್ತೆಯಲ್ಲಿ ಹೋಗಬೇಕಾದ ಅನಿವಾರ್ಯತೆ ಇದೆ.

**ಸಮಸ್ಯೆಗಳು ಮತ್ತು ಸವಾಲುಗಳು**

ಸರ್ಕಾರ ಕುದುರೆಮುಖ ರಾಷ್ಟ್ರೀಯ ಉದ್ಯಾನವನದ ವ್ಯಾಪ್ತಿಯಲ್ಲಿ ವಾಸವಾಗಿರುವ ಕುಟುಂಬಗಳಿಗೆ ಒಕ್ಕಲೆಬ್ಬಿಸಲು ಪರಿಹಾರವಾಗಿ ತಲಾ ಹತ್ತು ಲಕ್ಷಗಳ ರೂಪಾಯಿಗಳ ಪರಿಹಾರವನ್ನು ಘೋಷಣೆ ಮಾಡಿದೆ. ಸರ್ಕಾರ ಘೋಷಣೆ ಮಾಡಿರುವ ಹತ್ತು ಲಕ್ಷ ರೂಪಾಯಿಗಳ ಪರಿಹಾರವು ಇವರ ಭೂಮಿ ಆಸ್ತಿ

ಮೌಲ್ಯಕ್ಕಿಂತ ಕಡಿಮೆಯಾಗಿದೆ. ಸರ್ಕಾರ ಈ ಹಣವನ್ನು ಹೊರತುಪಡಿಸಿ ಬೇರ್‍ಯಾವುದೇ ರೀತಿಯ ಪುನರ್ವಸತಿ ಯೋಜನೆಯನ್ನು ಘೋಷಿಸಿಲ್ಲ. ಹಣ ಪಡೆದವರು ಕಾಡನ್ನು ಬಿಟ್ಟು ತಮ್ಮ ಪಾಡಿಗೆ ತಾವಿರಬೇಕು. ಇದನ್ನು ಹೊರತು ಪಡಿಸಿದರೆ ತಮ್ಮ ಜಾಗಕ್ಕೆ ಯಾವುದೇ ರೀತಿಯ ಭದ್ರತೆ ದಾಖಲೆಗಳನ್ನು ಸರ್ಕಾರ ನೀಡುವುದಿಲ್ಲ. ಆದರೆ ಕಾಡಿನಿಂದ ಹೊರಗೆ ಬರುವ ಕುಟುಂಬಗಳಿಗೆ ೨೫ ಲಕ್ಷಗಳ ಪರಿಹಾರವನ್ನು ಕೊಡಬೇಕು ಮತ್ತು ಅವರಿಗೆ ನಿವೇಶನ ಎರಡು ಎಕರೆ ಭೂಮಿಯನ್ನು ಕೊಡಬೇಕು ಎನ್ನುವ ಬೇಡಿಕೆಯನ್ನು ಇಟ್ಟಿದ್ದಾರೆ. ಇದಕ್ಕೆ ಸರ್ಕಾರ ಸ್ಪಂದಿಸಿಲ್ಲ.

ಒಂದು ಕಡೆ ತಮ್ಮ ಮೂಲ ಸ್ಥಳ ಸಂಸ್ಕೃತಿ ನೆಲ ಪರಂಪರೆಯನ್ನು ಬಿಟ್ಟು ಬರಲಾಗದೇ ಇರುವ ಸ್ಥಿತಿ ಮತ್ತೊಂದು ಕಡೆ ಇನ್ನು ಎಷ್ಟು ದಿನಗಳು ಅಂತ ಈ ಬದುಕು ಸಾಗಿಸಬೇಕು. ನಮಗೆ ಜೀವಿಸಲು ಮೂಲಭೂತ ಸೌಲಭ್ಯಗಳಿಲ್ಲ, ರಸ್ತೆ ಸಂಪರ್ಕ, ಬೀದಿ ದೀಪ, ಮಕ್ಕಳಿಗೆ ಶಿಕ್ಷಣ, ಆರೋಗ್ಯ ಸೌಲಭ್ಯ ೧೦ ಕಿ.ಮೀ. ದೂರ ಬರಬೇಕು. ಹೆಣ್ಣು ಮಕ್ಕಳು ಹೆರಿಗೆಯಾಗಬೇಕಾದರೆ ಒಂದು ವಾರದ ಮೊದಲೇ ಸಂಬಂಧಿಕರ ಅಥವಾ ಆಸ್ಪತ್ರೆಗೆ ಬಂದು ಸೇರಬೇಕು. ನಾವು ಬೆಳೆದ ಬೆಳೆಗಳಿಗೆ ಕಾಡು ಪ್ರಾಣಿಗಳ ಕಾಟ ಇನ್ನು ಈ ಬದುಕು ಸಾಕು ಎಂಬ ಬಾವನೆಯಿಂದ ಕೊಟ್ಟಷ್ಟೆ ಕೊಡಲಿ ನಾವು ಹೊರಗೆ ಬರುತ್ತೇವೆಂಬ ವಾದ ಕೆಲವರದ್ದಾಗಿದೆ. ಆದರೆ ಇದು ಅಲ್ಪ ಸ್ವಲ್ಪ ಭೂಮಿಯನ್ನು ಹೊಂದಿದವರ ಅಭಿಪ್ರಾಯವಾಗಿದೆ. ಹೆಚ್ಚು ಅಂದರೆ ೪-೫ ಎಕರೆ ಅಡಿಕೆ, ತೆಂಗು, ಬಾಳೆ, ತೋಟ, ಹೊಲ, ಗದ್ದೆಗಳನ್ನು ಹೊಂದಿರುವವರು ಈ ವಾದನ್ನು ಒಪ್ಪುವುದಿಲ್ಲ. ಇವರು ಈಗ ವಾಸಮಾಡುತ್ತಿರುವ ಈ ಭೂಮಿಗೆ ಭದ್ರತೆಗೆ ಯಾವುದೇ ದಾಖಲೆ ಗಳಿರುವುದಿಲ್ಲ. ಬೇರೆಯವರಿಗೆ ಮಾರಾಟ ಮಾಡುವ ಅವಕಾಶಗಳೇ ಇರುವುದಿಲ್ಲ. ಇದು ಸಹ ಇಲ್ಲಿಂದ ಹೊರಬರಲು ಕಾರಣವಾಗಿದೆ. ರಾಷ್ಟ್ರೀಯ ಉದ್ಯಾನವನದ ನೀತಿಯಿಂದಾಗಿ ಕಾಡಿನಿಂದ ಹೊರಗೆ ಬರಲೇ ಬೇಕೆಂಬ ಧೋರಣೆ ಸಹ ಮಲೆಕುಡಿಯ ಸಮುದಾಯದ ಬದುಕಿನ ದೊಡ್ಡ ಸವಾಲಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಚಳುವಳಿ ಶಿಶಿಲದ ಸುತ್ತಮುತ್ತಲಿನ ಪ್ರದೇಶಗಳಿಗೂ ವ್ಯಾಪಿಸಿರುವುದು ತಿಳಿದುಬರುತ್ತದೆ. ಈ ಎಲ್ಲಾ ಬೆಳವಣಿಗೆಗಳ ಹಿನ್ನಲೆಯಲ್ಲಿ ದಿನಾಂಕ. ೮.೩.೨೦೯೦ರ ಸೋಮವಾರ ೧೧ ಕುಟುಂಬಗಳು ತಲಾ ಹತ್ತು ಲಕ್ಷ ರೂಗಳ ಪರಿಹಾರದ ಚೆಕ್‌ನ್ನು ಪಡೆದು ಕಾಡಿನಂದ ಹೊರಗೆ ಬಂದಿದ್ದಾರೆ. ಈ ಹೊರಗೆ ಬಂದ ಈ ಕುಟುಂಬಗಳು ಈಗ ನಿರಾಶ್ರಿತ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಸರ್ಕಾರ ಇನ್ನುಳಿದವರನ್ನು ಮನವೊಲಿಸಲು ನರಂತರವಾದ ಪ್ರಯತ್ನವನ್ನು ಮಾಡುತ್ತಿದೆ. ಈ ಪ್ರದೇಶಗಳ ಅಭಿವೃದ್ಧಿಗಾಗಿ ನಕ್ಸಲ್ ಪ್ಯಾಕೇಜ್‌ನ ಅಡಿಯಲ್ಲಿ ಅಭಿವೃದ್ಧಿಕಾರ್ಯ ಗಳನ್ನು ಜಾರಿಗೊಳಿಸಿದೆ.

### ನಕ್ಸಲ್ ಪ್ಯಾಕೇಜ್

ಪಶ್ಚಿಮಘಟ್ಟ ಪ್ರದೇಶದ ವ್ಯಾಪ್ತಿಯಲ್ಲಿ ನಕ್ಸಲ್ ಸಮಸ್ಯೆ ನಿವಾರಣೆಗೆ ರಾಜ್ಯ ಸರಕಾರ ವಿಶೇಷ ಪ್ಯಾಕೇಜನ್ನು ೨೦೧೦ರ ಜೂನ್ ೯ರಿಂದ ಒಂದು ವರ್ಷದವರೆಗೆ ಜಾರಿಗೆ ತರಲಾಗಿದೆ. ಉಡುಪಿ, ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆ, ಶಿವಮೊಗ್ಗ ಜಿಲ್ಲೆಗಳಲ್ಲಿ ಸಹ ಈ ಯೋಜನೆ ಅನುಷ್ಠಾನಕ್ಕೆ ತರಲಾಗಿದೆ. ಇದಕ್ಕಾಗಿ ಹತ್ತು ಸಾವಿರ ಕರಪತ್ರಗಳನ್ನು ಮುದ್ರಿಸಿ ಹಂಚಿಕೆ ಮಾಡಲಾಗಿದೆ. “ಹಿಂಸೆಯಿಂದ ಯಾವ ಸಾಧನೆಯೂ ಅಸಾಧ್ಯ ಸಾಮಾಜಿಕ ಅಸಮಾನತೆ ನಿವಾರಣೆಗೆ ಪ್ರಜಾ ಪ್ರಭುತ್ವಕ್ಕಿಂತ ದೊಡ್ಡ ಅವಕಾಶವಿಲ್ಲ. ಒಂದು ಬಾರಿ ಮಾಡಿದ ತಪ್ಪು ಶಾಶ್ವತವಾಗಬೇಕಿಲ್ಲ. ತುಳಿದ ತಪ್ಪು ದಾರಿಗೆ ಶಾಶ್ವತ

ವಿದಾಯ ಹೇಳಿ ಶಾಂತಿ ಪಥದಲ್ಲಿ ಸಾಗಲು ಇದೊಂದು ಸದಾವಕಾಶ" ಎಂಬ ಕರಪತ್ರವನ್ನು ಪೊಲೀಸ್ ಇಲಾಖೆಯ ವತಿಯಿಂದ ಪ್ರಕಟಿಸಲಾಗಿದೆ. ಈ ಯೋಜನೆಯ ಪ್ರಕಾರ ನಕ್ಸಲರು ಶರಣಾದರೆ ಅವರಿಗೆ ಸರಕಾರದ ವತಿಯಿಂದ ಎರಡು ಲಕ್ಷ ರೂ. ಪರಿಹಾರ ದೊರೆಯಲಿದೆ. ಸಾಲ ಸೌಲಭ್ಯವನ್ನು ಸಹ ನೀಡಲಾಗುತ್ತದೆ. ಉದ್ಯೋಗ ಮತ್ತು ಕೌಶಲ್ಯ ತರಬೇತಿ ಪಡೆಯಲು ಇಚ್ಛಿಸುವವರಿಗೆ ವರ್ಷದವರೆಗೆ ಮಾಸಿಕ ರೂ. ೨,೦೦೦ ಭತ್ಯೆ ನೀಡಲಾಗುವುದು. ವಿದ್ಯಾಭ್ಯಾಸ ಮಾಡುವಂತಹವವರಿಗೆ ಎರಡು ವರ್ಷದವರೆಗೆ ರೂ.೨೦೦೦ ಭತ್ಯೆ ನೀಡಲಾಗುವುದು. ಭೂಮಿ ಹಂಚಿಕೆ ಮಾಡಲಾಗುವುದು. ಇವರ ಮೇಲೆ ಹಾಕಲಾದ ದೂರುಗಳನ್ನು ಸರಕಾರ ಹಿಂದಕ್ಕೆ ಪಡೆಯುವುದು. ಇದು ಅಲ್ಲದೆ ಇವರಿಗೆ ಸರಕಾರಿ ಇಲ್ಲವೇ ಅರೆ ಸರಕಾರಿ ಇಲಾಖೆಗಳಲ್ಲಿ ಉದ್ಯೋಗ ನೀಡುವ ಯೋಜನೆ ಈ ನಕ್ಷಲ್ ಪ್ಯಾಕೇಜ್‌ನಲ್ಲಿದೆ. ಉಡುಪಿ, ಚಿಕ್ಕಮಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಹಲವಾರು ಸ್ವಯಂ ಪ್ರೇರಿತರಾಗಿ ಶರಣಾಗಿ ಈ ಪ್ಯಾಕೇಜ್‌ನ ಸೌಲಭ್ಯವನ್ನು ಪಡೆದಿದ್ದಾರೆ. ಇನ್ನೂ ಪಡೆಯುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಸಹ ಈ ಯೋಜನೆ ಅನುಷ್ಠಾನದಲ್ಲಿದ್ದು ಇದರ ಅನುಷ್ಟಾನಕ್ಕೆ ಪ್ರಯತ್ನಗಳು ನಡೆಯುತ್ತಿವೆ. ರಾಜ್ಯ ಸರ್ಕಾರ ನಕ್ಸಲರ ಶರಣಾಗತಿಗೆ ವಿಶೇಷ ಪ್ಯಾಕೇಜನ್ನು ದಿನಾಂಕ ೨೯.೩.೨೦೧೨ರಂದು ಗುರುವಾರ ಘೋಷಣೆ ಮಾಡಿದೆ. ನಕ್ಸಲ್ ಪ್ರಭಾವದ ಜಿಲ್ಲೆಗಳಾದ ಚಿಕ್ಕಮಗಳೂರು, ಉಡುಪಿ, ದಕ್ಷಿಣ ಕನ್ನಡ, ಶಿವಮೊಗ್ಗ ಜಿಲ್ಲೆಗಳ ವ್ಯಾಪ್ತಿಯಲ್ಲಿನ ಅರಣ್ಯ ಪ್ರದೇಶಗಳಲ್ಲಿ ನಕ್ಸಲ್ ಚಟುವಟಿಕೆಗಳಲ್ಲಿ ತೊಡಗಿರುವವರು ಸಮಾಜದ ಮುಖ್ಯ ವಾಹಿನಿಗೆ ಬರಲು ಸರ್ಕಾರ ಅವಕಾಶ ಕಲ್ಪಿಸಿ ಅವರಿಗಾಗಿ ವಿಶೇಷ ಪ್ಯಾಕೇಜ್ ಯೋಜನೆಯನ್ನು ಜಾರಿಗೆ ತಂದಿದೆ. ಶರಣಾಗುವ ಪ್ರತಿ ನಕ್ಸಲ್‌ಗೆ ೨.೦೦ ಲಕ್ಷ ರೂಪಾಯಿಗಳ ಪರಿಹಾರವನ್ನು ನಿಗದಿ ಮಾಡಲಾಗಿದೆ. ಇದರಲ್ಲಿ ಶೇ.೫೦ನ್ನು ಶರಣಾಗತಿ ಸಮಯದಲ್ಲಿ ಮತ್ತೆ ಶೇ.೫೦ನ್ನು ಜಿಲ್ಲಾ ಸಹಕಾರಿ ಬ್ಯಾಂಕ್ ಮೂಲಕ ಸಾಲ ರೂಪದಲ್ಲಿ ನೀಡುವ ಯೋಜನೆ ಇದಾಗಿದೆ. ಇವರಿಗೊಂದು ವರ್ಷದವರೆಗೆ ತಿಂಗಳಿಗೆ ೨೦೦೦ ರೂಪಾಯಿಗಳಂತೆ ಪರಿಹಾರ ಭತ್ಯೆ ನೀಡಿ ವೃತ್ತಿ ಕೌಶಲ್ಯ ತರಬೇತಿಗೆ ಅವಕಾಶ ಕಲ್ಪಿಸಲಾಗಿದೆ. ಅಲ್ಲದೇ ಶಿಕ್ಷಣ ಮುಂದುವರೆಸಲು ಸಹ ಇದೇ ರೀತಿ ೨ ವರ್ಷಗಳ ಕಾಲ ಪ್ರೋತ್ಸಾಹ ಧನಕ್ಕೆ ಅವಕಾಶವಿದೆ. ಶರಣಾಗುವವರ ಮೇಲೆ ಇರುವ ಮೊಕದ್ದಮೆಗಳನ್ನು ಹಿಂತೆಗೆದುಕೊಳ್ಳುವುದು ಸೇರಿದಂತೆ ಇತರೆ ಯೋಜನೆಗಳು ಈ ಪ್ಯಾಕೇಜ್‌ನಲ್ಲಿವೆ.

ಅಂಬಟಮಲೆಗೆ ಹೋಗುವ ರಸ್ತೆ ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ನಿರ್ಮಾಣಗೊಂಡಿದೆ. ಬಾಂಜಾರು ಮಲೆ ಇಳಿಮಳೆಗಳಿಗೆ ರಸ್ತೆ ಸಂಪರ್ಕ ಕಲ್ಪಿಸಲು ಇಲ್ಲಿನ ಎಸ್ಟೇಟ್ ಮಾಲೀಕರ ವಿರೋಧವಿದೆ. ಕುದುರೆ ಮುಖ ರಾಷ್ಟ್ರೀಯ ಉದ್ಯಾನವನವೂ ಸೇರಿದಂತೆ ಹತ್ಯಡ್ಕ, ಕೊಕ್ಕಡ, ಗುಂಡ್ಯ ಪ್ರದೇಶಗಳ ರಸ್ತೆ ಅಭಿವೃದ್ಧಿಗೆ ಅರಣ್ಯ ಕಾಯಿದೆ ಅಡ್ಡಿಯಾಗಿದೆ. ಅರಣ್ಯ ಕಾಯಿದೆಯಿಂದ ವಿದ್ಯುತ್ ಕಂಬವನ್ನು ಸಹ ಹಾಕದೇ ಇರುವ ಸ್ಥಿತಿ ಇದೆ. ಈ ಎಲ್ಲಾ ಬೆಳವಣಿಗೆಗಳಿಗಿಂತ ಮಿಗಿಲಾಗಿ ಈ ಪ್ರದೇಶದ ಜನರು ನಕ್ಸಲ್ ಹೋರಾಟದ ನಂಟು ಹೊಂದಿದ್ದಾರೆ ಎಂಬ ಆರೋಪಗಳ ಭಯದ ಕರಿನೆರಳಿನಲ್ಲಿ ಬದುಕುವ ದುಸ್ಥಿತಿ ಒದಗಿದೆ. ಇತ್ತೀಚೆಗೆ ನಡೆದ ವಿಠಲ ಮಲೆಕುಡಿಯ ಮತ್ತು ಲಿಂಗಪ್ಪ ಮಲೆಕುಡಿಯರ ಪ್ರಕರಣಗಳು ಈ ಸಮುದಾಯಕ್ಕೆ ಆತಂಕದ ಜೊತೆಗೆ ಒಂದು ಭವಿಷ್ಯದ ಸವಾಲಾಗಿದೆ.

ಕೋಷ್ಟಕ ೫.೧

ನಕ್ಸಲ್ ಪ್ಯಾಕೇಜ್ ಯೋಜನೆ(ಘೋಷಣೆ ದಿನಾಂಕ: ೨೯-೩-೨೦೧೨).

| ಕ್ರಸಂ. | ನೀಡಬೇಕಾದ ಆಯುಧ | ಪ್ರೋತ್ಸಾಹ ಧನ (ರೂ.ಗಳಲ್ಲಿ) |
|---|---|---|
| ೧ | ಎಕೆ ೪೭ ಎಕೆ೫೬/೭೪ ಬಂದೂಕು | ೧೫,೦೦೦ |
| ೨ | ಯುಎಂಜಿ/ಜಿಪಿಎಂ/ಆರ್‌ಪಿಜಿ/ಸ್ನೈಪರ್ ಬಂದೂಕು | ೨೫,೦೦೦ |
| ೩ | ಪಿಸ್ತೂಲ್ / ರಿವಾಲ್ವರ್ | ೩,೦೦೦ |
| ೪ | ರಾಕೆಟ್ | ೧,೦೦೦ |
| ೫ | ಗ್ರನೈಡ್/ಹ್ಯಾಂಡ್ ಗ್ರನೈಡ್/ಸ್ಟಿಕ್ ಗ್ರನೈಡ್ | ೫೦೦ |
| ೬ | ರಿಮೋಟ್ ಕಂಟ್ರೋಲ್ ಸಾಧನ | ೩,೦೦೦ |
| ೭ | ಐಜಡಿ | ೧,೦೦೦ |
| ೮ | ಸಿಡಿ ಗುಂಡುಗಳು | ೩,೦೦೦ |
| ೯ | ಸ್ಫೋಟಕ ವಸ್ತುಗಳು | ೧,೦೦೦ (ಪ್ರತಿ ಕೆ.ಜಿ.ಗೆ) |
| ೧೦ | ಕಡಿಮೆ ಕಾರ್ಯ ವ್ಯಾಪ್ತಿ ವಯರ್‌ಲೆಸ್ ಸೆಟ್ | ೧,೦೦೦ (ಪ್ರತಿ ಸೆಟ್‌ಗೆ) |
| ೧೧ | ಹೆಚ್ಚು ಕಾರ್ಯ ವ್ಯಾಪ್ತಿ ವಯರ್‌ಲೆಸ್ ಸೆಟ್ | ೫,೦೦೦ (ಪ್ರತಿ ಸೆಟ್‌ಗೆ) |
| ೧೨ | ಎಸ್‌ಎಎಂ ಕ್ಷಿಪಣಿಗಳು | ೨೦,೦೦೦ |
| ೧೩ | ಉಪಗ್ರಹ ದೂರವಾಣಿ | ೧೦,೦೦೦ |
| ೧೪ | ವಿಎಚ್‌ಎಫ್/ಎಚ್‌ಎಫ್ ಸಂವಹನ ಸೆಟ್‌ಗಳು | ೫,೦೦೦ |
| ೧೫ | ವಿದ್ಯುನ್ಮಾನ ಸ್ಫೋಟಕಗಳು | ೫೦ |
| ೧೬ | ಇತರೆ ಸ್ಫೋಟಕಗಳು | ೧೦ |

**ಟಿಪ್ಪಣಿಗಳು**

೧. ಪ್ರಭಾಕರ ಎ.ಎಸ್. ಬುಡಕಟ್ಟು ಅಭಿವೃದ್ಧಿ, ಮಹಾಶ್ವೇತಾದೇವಿಯವರ ಚಿಂತನೆಗಳು, ಬುಡಕಟ್ಟು ಅಭಿವೃದ್ಧಿ ಮೀಮಾಂಸೆ. ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ಪುಟ. ೩೩೨-೩೩೩, ೨೦೦೪.

೨. ಪ್ರಭಾಕರ ಎ.ಎಸ್. ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೩. ಶಂಕರ ನಾರಾಯಣ್ ರಾವ್ ಎಸ್.ಪಿ. ಬುಡಕಟ್ಟು ಸಂಸ್ಕೃತಿ ಮಾಟ-ಮಂತ್ರ-ಮೋಡಿ, ಪ್ರಭಾಕರ ಎ.ಎಸ್. ಆದಿವಾಸಿ ಆಖ್ಯಾನದ, ಆದಿವಾಸಿ ಆಖ್ಯಾನ, ಪುಟ.೨೦೫, ೨೦೬ರಲ್ಲಿ, ೨೦೦೬.

೪. ಪ್ರಭಾಕರ ಎ.ಎಸ್. ಬುಡಕಟ್ಟು ಅಭಿವೃದ್ಧಿ, ಮಹಾಶ್ವೇತಾದೇವಿಯವರ ಚಿಂತನೆಗಳು, ಪುಟ. ೩೨೬-೩೨೭ ಬುಡಕಟ್ಟು ಅಭಿವೃದ್ಧಿ ಮೀಮಾಂಸೆ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೫. ಪ್ರಭಾಕರ ಎ.ಎಸ್, ಅಲೆಮಾರಿಗಳ ಶಾಪಗ್ರಸ್ಥ ಪ್ರಯಣ, ಬುಡಕಟ್ಟು ಅಧ್ಯಯನ ೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೧೭, ೨೦೦೫.

೬. ಅದೇ ಪುಟ. ೧೧೯.

# ಸಮಾರೋಪ

ಭಾರತದ ಬುಡಕಟ್ಟು ಸಮುದಾಯದ ಅಧ್ಯಯನದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಲೆಕುಡಿಯ ಸಮುದಾಯದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಅಧ್ಯಯನದಲ್ಲಿ ಇವರ ಪಾರಂಪರಿಕ ಚದುರಿದ ನೆಲೆಗಳು ಎಸ್ಟೇಟ್ ಒಡೆತನದ ಅಡಿಯಲ್ಲಿ ಇವರ ಜೀವನವು ಜೀತದಾಳು ಪದ್ಧತಿ, ಗೇಣಿದಾರರಾಗಿ ದೇವಸ್ಥಾನದ ಊಳಿಗರಾಗಿ ಅನಾಧಿ ಕಾಲದಿಂದಲೂ ತಮ್ಮ ಸೇವೆಸಲ್ಲಿಸುತ್ತಾ ಬಂದಿದ್ದಾರೆ. ನೆರಿಯಾದ ಹೆಬ್ಬಾರರು ಮತ್ತು ಇತರ ಭೂ ಮಾಲೀಕರ ಹಿಡಿತದಲ್ಲಿ ಇವರು ಒಬ್ಬರನ್ನೊಬ್ಬರು ಕೂಡಿ ಮಾತನ್ನಾಡುವ ಸ್ಥಿತಿ ಇಲ್ಲದೆ ಅಂತರವನ್ನು ಈಗಲೂ ಕಾಪಾಡಿಕೊಂಡು ಬಂದಿದ್ದರೂ, ಇವರ ಬದುಕಿನ ಸವಾಲುಗಳಲ್ಲಿ ಇವರ ಭೂಮಿಯ ಹಕ್ಕು, ಓಡಾಡುವ ದಾರಿ, ವಾಸದ ನೆಲೆ, ಜಾಗಕ್ಕೆ ಹಕ್ಕುಪತ್ರಗಳಿಲ್ಲದೆ ಬದುಕುವ ಸ್ಥಿತಿ ಇದೆ. ಒಂದು ಕಡೆ ಎಸ್ಟೇಟ್ ಕಾಯ್ದೆ, ಮತ್ತೊಂದು ಕಡೆ ಅರಣ್ಯ ಕಾಯ್ದೆಗಳು ಇವರನ್ನು ಅತಂತ್ರಗೊಳಿಸಿರುತ್ತವೆ. ಅರಣ್ಯವಾಸಿಗಳಾದ ಇವರನ್ನು ಕುದುರೆಮುಖ ರಾಷ್ಟ್ರೀಯ ಉದ್ಯಾನವನದಿಂದ ಒಕ್ಕಲೆಬ್ಬಿಸುವ ಬೀತಿಯಲ್ಲಿರುವ ಇವರು ನಿರಾಶ್ರಿತ ಸಮಸ್ಯೆಗೆ ಸಿಲುಕಿದ್ದಾರೆ. ಮೂಲಭೂತ ಸೌಲಭ್ಯಗಳಿಗಾಗಿ ಸರ್ಕಾದ ಮೇಲೆ ನಿರಂತರವಾದ ಒತ್ತಡವನ್ನು ಹೇರುತ್ತಾ ಬಂದರೂ ಇವರ ಅಭಿವೃದ್ಧಿಗಾಗಿ ಇವರಿಗೆ ಸಿಕ್ಕಿರುವುದು ನಕ್ಸಲ್ ಪ್ರದೇಶ ಪ್ಯಾಕೇಜ್ ಮಾತ್ರ. ಇಂದು ಉನ್ನತ ಶಿಕ್ಷಣದವರೆಗೆ ಈ ಸಮುದಾಯದವರು ಶಿಕ್ಷಣ ಪಡೆದರೂ ಸಹ ಇಂದಿಗೂ ಸಹ ಇವರಿಗೆ ಸರಕಾರದ ಉದ್ಯೋಗಗಳಲ್ಲಿ ಮೀಸಲಾತಿ ಸೌಲಭ್ಯದಲ್ಲಿ ಸಮರ್ಪಕವಾದ ಪ್ರಾತಿನಿಧ್ಯ ಸೇರಿದಂತೆ ಸರಕಾರದಿಂದ ಬಂದ ಹಲವಾರು ಅಭಿವೃದ್ಧಿ ಯೋಜನೆಗಳು ಇವರಿಗೆ ಸರಿಯಾಗಿ ತಲುಪಿದ್ದರೆ ಇವರೇಕೆ ಅಭಿವೃದ್ಧಿಯಾಗಿಲ್ಲ? ಈ ಸಮುದಾಯದ ಶೋಷಣೆ, ಜೀತ ಪದ್ಧತಿ, ಧಣಿಒಕ್ಕಲು ಪದ್ಧತಿಗಳಿಂದ ಮುಕ್ತರಾದ ಇವರ ಹೋರಾಟದ ಬದುಕಿನ ಹಿಂದೆ ಇವರ ಸಂಘಟನೆ, ನಾಯಕತ್ವ, ಕುದುರೆಮುಖ ರಾಷ್ಟ್ರೀಯ ಉದ್ಯಾನವನದಿಂದ ಹೊರಬಂದ ಇವರು ಪುನರ್ವಸತಿ ಯೋಜನೆಯ ಜಾರಿಯ ಹಿನ್ನಲೆ, ಪರಿಣಾಮ ಮತ್ತು ಯೋಜನೆಯ ನಂತರದ ಸ್ಥಿತಿಗತಿ, ಅರಣ್ಯದಿಂದ ಇವರನ್ನು ಒಕ್ಕಲೆಬ್ಬಿಸುವಿಕೆಗಾಗಿ ಆಗುತ್ತಿರವ ಬೆಳವಣಿಗೆಗಳು ಇವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಪ್ರತಿನಿಧಿಸುತ್ತವೆ.

ಮಲೆಕುಡಿಯರನ್ನು ಒಂದೇ ಹೆಸರಿನಿಂದ ಗುರುತಿಸದೇ ಇರುವುದರಿಂದ ಅನನ್ಯತೆಗೆ ತೊಡಕಗಾಗಿದೆ. ಇವರನ್ನು ಕೊಡಗಿನ ಪ್ರದೇಶಗಳಲ್ಲಿ ಕುಡಿಯರೆಂದು ಕರೆದರೆ ಚಿಕ್ಕಮಗಳೂರು ಪ್ರದೇಶಗಳಲ್ಲಿ ಮಲೇರು, ಗೌಡ್ಲು ಎಂದು ಕರೆದಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳದಲ್ಲಿ ಬರ್ಕೆ ಎಂತಲೂ ನೆರಿಯಾ ಕಡೆಯಲ್ಲಿ ಗೌಡ ಎಂತಲೂ, ಬಂಟ್ವಾಳದಲ್ಲಿ ಮುಗೂಲ್ಯ ಎಂದು, ಕನ್ಯಾನದಲ್ಲಿ ಮಲೆತ್ತಾಯ ಎಂಬ ಹೆಸರುಗಳಿಂದ ಗುರುತಿಸಲಾಗಿದೆ. ಸರಕಾರದ ಪರಿಶಿಷ್ಟ ಪಂಗಡ ಪಟ್ಟಿಯಲ್ಲಿ ಇವರನ್ನು ಮಲೆಕುಡಿ, ಮಲೈಕಂಡಿ, ಮಲೇರು ಕುಡಿಯ ಎಂದು ನಮೂದಿಸಲಾಗಿದೆ. ಇಲ್ಲಿನ ಪ್ರಾದೇಶಿಕ ಭಿನ್ನತೆಗಳಿಂದಾಗಿ ಈ ಸಮುದಾಯಕ್ಕೆ ವಿಭಿನ್ನ ಹೆಸರುಗಳು ಇವರ ಅನನ್ಯತೆಗೆ ಒಂದು ಸವಾಲಾಗಿವೆ.

ಕಾಡಿನ ಅಂಚಿನಲ್ಲಿ ಬದುಕುವ ಇವರು ಕಾಡು ಪ್ರಾಣಿಗಳ ಹಾವಳಿಯಿಂದ ತೊಂದರೆಗೆ ಒಳಗಾಗಿದ್ದಾರೆ. ಗುಂಡ್ಯತೋಟದಲ್ಲಿ ರುದ್ರಪ್ಪ ಮಲೆಕುಡಿಯ ಆನೆಯ ತುಳಿತಕ್ಕೆ ಒಳಗಾಗಿ ಸತ್ತರೆ, ಗೋಳಿತೊಟ್ಟಿನಲ್ಲಿ ಮಳೆಗಾಲದಲ್ಲಿ ಹರಿಯುವ ಹೊಳೆ ದಾಟಲು ಹೋಗಿ ಮೃತಪಟ್ಟಿದ್ದಾರೆ. ಸುಲ್ಕೇರಿಯ ವೆಂಕಪ್ಪ ಮಲೆಕುಡಿಯ ವಿದ್ಯುತ್ ತಂತಿತಾಗಿ ಮೃತ ಪಟ್ಟಿದ್ದಾನೆ. ಕೊಕ್ಕಡದ ಒಬಯ್ಯ ಎತ್ತರ ಮರದಿಂದ ಆಯಾ ತಪ್ಪಿ ಬಿದ್ದು ಸೊಂಟ ಮುರಿದು ಸೊಂಟದ ಕೆಳಭಾಗದಿಂದ ಸ್ವಾಧೀನ ಇಲ್ಲದಂತಾಗಿದೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಿಕ್ಷಣವನ್ನು ಮುಂದುವರೆಸಲಾಗದೇ ಅರ್ಧಕ್ಕೆ ಶಿಕ್ಷಣವನ್ನು ಮೊಟಕುಗೊಳಿಸುವ ಸಮಸ್ಯೆ ಕಂಡು ಬಂದಿದೆ. ಮತ್ತು ಮೆಟ್ರಿಕ್ ನಂತರದ ವ್ಯಾಸಂಗಕ್ಕೆ ಜಿಲ್ಲೆಯಲ್ಲಿ ವಸತಿ ಸೌಲಭ್ಯಗಳಿಲ್ಲದೇ ಇರುವುದು ಕಂಡುಬರುತ್ತದೆ. ಪ್ರಾದೇಶಿಕವಾಗಿ ತಮ್ಮ ಮೂಲ ನೆಲೆಯಿಂದ ಒಂದಲ್ಲಾ ಒಂದು ಕಾರಣಾಕ್ಕಾಗಿ ಸ್ಥಳಾಂತರಗೊಂಡವರು ಇಲ್ಲಿದ್ದಾರೆ. ಕಾಸರಗೋಡಿನ ಮೂಲದಿಂದ ಇಲ್ಲಿಗೆ ಬಂದವರು ಇದ್ದಾರೆ. ಈಗಲೂ ಇವರ ವೈವಾಹಿಕ ಸಂಬಂಧಗಳು ಇಲ್ಲಿ ಕಂಡುಬರುತ್ತವೆ. ನೆರಿಯಾ, ನಾರಾವಿ ಬಂಜಾರು ಮಲೆಗಳಿಂದ ಜಿಲ್ಲೆಯ ವಿವಿಧ ನೆಲೆಗಳಿಗೆ ಸ್ಥಳಾಂತರಗೊಂಡ ಪರಿಸರಕ್ಕೆ ಹೊಂದಿಕೊಂಡು ಬದುಕುತ್ತಿದ್ದರೂ ಸಹ ತಮ್ಮ ಮೂಲ ಬದುಕು, ಸಂಸ್ಕೃತಿ, ಆಚಾರ ಪದ್ಧತಿಗಳು ಮಾತ್ರ ಬದಲಾಗಿರುವುದಿಲ್ಲ. ಇವರು ಮನೆ ಕಟ್ಟುವಾಗ ಗೋಡೆಗೆ ಬಳಸುವ ಸಾಂಪ್ರದಾಯಿಕ ನುಣುಪಾದ ಕಂದು ಬಣ್ಣದ, ಕೆಂಪು ಬಣ್ಣವನ್ನು ಇವರೇ ತಯಾರಿಸಿ ಬಳಸುತ್ತಿರುವುದು ಈಗಲೂ ಕಂಡುಬರುತ್ತದೆ. ದೇಶೀಯ ತಯಾರಿಕೆ ಈ ವಿಧಾನ ಇವರ ಬದುಕಿನ ಸಂಸ್ಕೃತಿಯನ್ನು ಸೂಚಿಸುತ್ತದೆ. ಇವರು ಈಗ ಕೃಷಿ ಪ್ರಧಾನವಾದ ಉದ್ಯೋಗವನ್ನು ಅವಲಂಬಿಸಿದ್ಧಾರೆ. ಇದರ ಜೊತೆಗೆ ಪಶುಸಂಗೋಪನೆಯನ್ನು ಸಹ ಇಲ್ಲಿ ಪ್ರಧಾನವಾಗಿದೆ. ಪ್ರತಿ ಮನೆಯಲ್ಲಿ ಒಂದು ಆದರೂ 'ಗೋವು' ಸಾಗಾಣಿಕೆ ಇರುವುದು ಕಂಡುಬರುತ್ತದೆ. ಪಶುಸಂಗೋಪನಾ ವಿಧಾನದಲ್ಲಿ ಸಹ ಇವರ ಪರಂಪರೆ ಇದೆ. ಇದು ಇವರು ಹೊಂದಿರುವ ದನದ ಕೊಟ್ಟಿಗೆ ನಿರ್ಮಾಣ. ಅಲ್ಲಿ ದನ ಸಾಕುವ ಪದ್ಧತಿಯಿಂದ ತಿಳಿದುಬರುತ್ತದೆ. ಪ್ರತಿ ಮನೆಯ ಹತ್ತಿರ ಪಕ್ಕದಲ್ಲಿ ಹಂಚಿನ ಹಳೆಯ ದನದ ಕೊಟ್ಟಿಗೆ ಇರುವುದು ನೋಡಿದರೆ ಇದು ಸತ್ಯವಾಗಿ ಗೋಚರವಾಗುತ್ತದೆ. ಶಿವ ಪಾರ್ವತಿಯ ಆರಾಧಕರಾದ ಇವರು ಇರುವ ಸ್ಥಳಗಳೆಲ್ಲಾ ಈವ ದೇವಾಲಯಗಳಿವೆ. ಈ ದೇವರ ಆರಾಧಕರಾಗಿ, ಸೇವಕರಾಗಿರುವ ಇವರು ರಥಕಟ್ಟುವ, ಅಲಂಕರಿಸುವಾಗ ಚಿತ್ರವನ್ನು ಬಳಸುತ್ತಿದ್ದಾರೆ. ಇದರಿಂದ ಇವರ ಚಿತ್ತದ ಬಳಕೆಯಲ್ಲಿನ ಪರಂಪರೆಯು ಕಾಡಿನೊಂದಿಗೆ ಇವರು ಹೊಂದಿದ್ದ ಸಂಬಂಧವನ್ನು ಸಂಕೇತಿಸುತ್ತದೆ. ಇಲ್ಲಿ ಇವರ ಆರಾಧನೆ ಸೇವೆ ಜೊತೆಗೆ ವೃತ್ತಿ ಕೌಶಲ್ಯ ಪ್ರಧಾನವಾಗಿ ಕಂಡುಬರುತ್ತದೆ. ಇವರು ಮನೆಗಳಿಗೆ ಹೋದಾಗ ಈಗಲೂ ವಿದ್ಯುತ್ ಸೌಲಭ್ಯವಿಲ್ಲದೆ, ಎಣ್ಣೆ ದೀಪದಲ್ಲಿಯೇ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ.

ಭಾಗ್ಯ ಜ್ಯೋತಿ, ಕುಟೀರ ಜ್ಯೋತಿಯಂತಹ ಯೋಜನೆಗಳು ಇನ್ನು ಇವರಿಗೆ ತಲುಪ ಬೇಕಾಗಿದೆ. ಇದಕ್ಕೆ ಸ್ಥಳೀಯ ಜನಪ್ರತಿನಿಧಿಗಳು ಸೇರಿಸಿದಂತೆ ಇಲಾಖೆಯ ಅಧಿಕಾರಿಗಳ ಇಚ್ಚಾಶಕ್ತಿಯ ಕೊರತೆ ಇಲ್ಲಿ ಕಂಡುಬರುತ್ತದೆ. ಧರ್ಮಸ್ಥಳದ ಸುತ್ತ ಮುತ್ತಲಿನ ನಿವಾಸಿಗಳಿಗೆ ಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆಯಿಂದಾಗಿ ಇವರಿಗೆ ಸಿಗಬೇಕಾದ ಮೂಲಭೂತ ಸೌಲಭ್ಯಗಳು ತೊರೆಯುತ್ತಿವೆ. ಮನೆಕಟ್ಟಲು ೪೦ ಸಾವಿರ ರೂ.ಗಳ ಸೌಲಭ್ಯ ಸೇರಿದಂತೆ ವಿದ್ಯುತ್ ಸಂಪರ್ಕಕ್ಕೆ ವ್ಯವಸ್ಥೆ ಆಗಿದೆ. ಇನ್ನೂ ಆಗುತ್ತಿದೆ. ಆದರೆ ಸುಬ್ರಮಣ್ಯ ದೇವಸ್ಥಾನದ ಸಮೀಪವಿರುವ ಮಲೆಕುಡಿಯ ಸಮುದಾಯದ ಕುಟುಂಬಗಳ ಸ್ಥಿತಿ ಮಾತ್ರ ತುಂಬಾ ಶೋಚನೀಯವಾಗಿದೆ. ಪ್ರತಿದಿನ ಇವರು ಇಲ್ಲಿ ದುಡಿದರೂ ಸಹ ಇವರಿಗೆ ಸಿಗಬೇಕಾದ ಮೂಲಭೂತ ಸೌಲಭ್ಯಗಳು ಮಾತ್ರ ಇವರಿಗೆ ದೊರೆಯದೇ ಇರುವುದು ಒಂದು ದುರಂತವೇ ಆಗಿದೆ. ಇವರ ಮೂಲಭೂತ ಸಮಸ್ಯೆಗಳಲ್ಲಿ ಪ್ರಧಾನವಾಗಿ ಭೂ ಮಂಜೂರಾತಿ ಹಕ್ಕು, ದಾಖಲೆಗಳು ದೊರೆಯದೇ ಇರುವುದು ಈ ಸಮುದಾಯದವರ ಬಹುದೊಡ್ಡ ಸಮಸ್ಯೆಯಾಗಿದೆ. ಎಷ್ಟೇ ಸರ್ಕಾರಗಳು ಬಂದರೂ, ಅಕ್ರಮ–ಸಕ್ರಮ ಯೋಜನೆಯ ಜಾರಿಗೆ ಇದುವರೆಗೆ ಜಾರಿಗೆ ಬಂದ ಕಾನೂನುಗಳು ಸರಿಯಾಗಿ ಕೆಲಸ ಮಾಡಿದ್ದೇ ಆದರೆ ಇವರ ಸ್ವಾದೀನದಲ್ಲಿರುವ ಭೂಮಿ ಇವರದಾಗಿ, ಇವರಿಗೆ ಭೂ ಮಂಜೂರಾತಿ ದಾಖಲೆಗಳು ಯಾವತ್ತೋ ಸಿಗಬೇಕಾಗಿತ್ತು. ನಾನು ಯಾವುದೇ ಸ್ಥಳದ ಕುಟುಂಬಗಳಿಗೆ ಬೇಟಿ ನೀಡಿದಾಗ ಎಲ್ಲರ ಬಾಯಿಂದಲೂ ಈ ಸಮಸ್ಯೆ ಕುರಿತಂತೆ ಪ್ರಶ್ನೆ ಬರುತ್ತಿದೆ. ಇದಕ್ಕೆ ಪರಿಹಾರಬೇಕು. ಇವರಿಗೆ ಭೂ ಮಂಜೂರಾತಿ ದಾಖಲೆಗಳು ದೊರೆತಾಗ ಮಾತ್ರ ಇವರ ಬದುಕಿಗೆ ಅರ್ಥ ಬರುತ್ತದೆ. ಇವರಿಗೆ ಭೂದಾಖಲೆಗಳು ಕೊಡದೆ ಇದ್ದರೂ ಸಹ ಇವರು ಹೊಂದಿರುವ ಕೃಷಿ ಜಾಗವನ್ನು ಪರಿಗಣಿಸಿ ಇವರಿಗೆ ಬಿ.ಪಿ.ಎಲ್‌ಗೆ ಬದಲಾಗಿ ಎ.ಪಿ.ಎಲ್‌ಗೆ ಕಾರ್ಡ್ ಸೌಲಭ್ಯ ದೊರೆತರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಬಿ.ಪಿ.ಎಲ್ ಫಲಾನುಭವಿಗಳನ್ನು ಗುರುತಿಸುವಲ್ಲಿ ಆದ ಲೋಪಗಳಿಂದಾಗಿ ನಿಜವಾಗಿ ದೊರೆಯಬೇಕಾದ ಬಿ.ಪಿ.ಎಲ್ ಫಾಲಾನುಭವಿಗಳಲ್ಲಿ ಎ.ಪಿ.ಎಲ್ ಕಾರ್ಡ್ ಇದೆ. ಭೂ ದಾಖಲೆಗಳಲ್ಲಿ ಮನೆಗೆ ಕರೆಂಟಿಲ್ಲ. ಆದರೆ ಇವರು ಎ.ಪಿ.ಎಲ್ ಕಾರ್ಡುದಾರರು ಆಗಿದ್ದಾರೆ. ಇದೊಂದು ವಿಪರ್ಯಾಸವಾಗಿದೆ. ಪಾರಂಪರಿಕ ಅರಣ್ಯಹಕ್ಕು ಕಾಯಿದೆ ೨೦೦೬ರ ಪರಿಣಾಮ ಜಾರಿಯಾಗಿ ಇವರ ಭೂ ಮಂಜೂರಾತಿ ದಾಖಲೆಗಳು ದೊರೆಯಬೇಕು. ಇದೊಂದು ಅವಕಾಶ ತಪ್ಪಿದರೆ ಮತ್ತೆ ಇನ್ನು ಇದಕ್ಕಾಗಿ ಕಾಯಬೇಕಾಗುತ್ತದೆ. ಮಲೆಕುಡಿಯ ಎಂಬ ಹೆಸರು ಪರಿಶಿಷ್ಟ ಪಂಗಡಗಳ ಜಾತಿ ಪಟ್ಟಿಯಲ್ಲಿಲ್ಲ. ಮಲೈ ಕುಡಿ, ಮಲೈ ಕಂಡಿ, ಮಲೇರು ಎಂಬ ಇತರ ಹೆಸರುಗಳ ಜೊತೆಗೆ ಮಲೆಕುಡಿಯವನ್ನು ಸಹ ಸಮನಾರ್ಥಕವಾಗಿ ಬಳಸುವಂತೆ ಪರಿಶಿಷ್ಟ ಪಂಗಡಗಳ ಪರಿಷ್ಕರಣೆ ಮಾಡಬೇಕು. ಶೈಕ್ಷಣಿಕವಾಗಿ ಈ ಸಮುದಾಯದಲ್ಲಿ ಎಂ.ಎ, ಎಂ.ಕಾಂ, ಎಲ್.ಎಲ್.ಬಿ. ಉನ್ನತ ವ್ಯಾಸಂಗ ಮಾಡಿದವರು ಇದ್ದಾರೆ. ಆದರೆ ಇವರು ನಿರುದ್ಯೋಗಿಗಳಾಗಿದ್ದಾರೆ. ನಿರುದ್ಯೋಗ ಸಮಸ್ಯೆ ಇಲ್ಲಿ ಕಾಡುತ್ತದೆ. ಈಗ ಇವರಲ್ಲಿ ಬಹುತೇಕ ಅತಿಥಿ ಉಪನ್ಯಾಸಕರಾಗಿದ್ದಾರೆ. ಇವರಿಗೆಲ್ಲಾ ಉದ್ಯೋಗ ದೊರೆತರೆ ಇವರ ಬದುಕು ಹಸನಾಗುತ್ತದೆ. ಪ್ರಾಥಮಿಕ ಶಿಕ್ಷಣದಿಂದ ಮೆಟ್ರಿಕ್ ಪೂರ್ವ ಶಿಕ್ಷಣದವರೆಗೆ ಮಾತ್ರ ವಸತಿನಿಲಯ ಸೌಲಭ್ಯವಿದೆ. ಮೆಟ್ರಿಕ್ ನಂತರದಲ್ಲಿ ಹಾಸ್ಟೇಲ್ ಸೌಲಭ್ಯವಿಲ್ಲದೆ ಇರುವುದರಿಂದ ಪ್ರೌಢಶಿಕ್ಷಣ ಮುಗಿಸಿ ಮುಂದೆ ಕಾಲೇಜು ಶಿಕ್ಷಣಕ್ಕೆ ಹೋಗಲು ಹಾಸ್ಟೆಲ್ ಸೌಲಭ್ಯವೇ ಇರುವುದಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಯಾವುದೇ ತಾಲೂಕು ಕೇಂದ್ರದಲ್ಲಿ ಮೆಟ್ರಿಕ್ ನಂತರ ಎಸ್.ಸಿ/ಎಸ್.ಟಿ ಕಾಲೇಜು ಹಾಸ್ಟೆಲ್ ಸೌಲಭ್ಯ ಇರುವುದಿಲ್ಲ. ಹೀಗಾಗಿ ಹುಡುಗ, ಹುಡುಗಿಯರು ಮುಂದಿನ ಶಿಕ್ಷಣಕ್ಕೆ ಹೋದರೆ ಹಾಸ್ಟೆಲ್ ಸೌಲಭ್ಯವಿಲ್ಲದೆ ಖಾಸಗಿ ಹಾಸ್ಟೆಲ್‌ನ್ನು ಅವಲಂಭಿಸಬೇಕು. ಇಲ್ಲವೇ ಬಿ.ಸಿ.ಎಮ್ ಹಾಸ್ಟೆಲ್‌ಗೆ ಸ್ಪರ್ಧೆ ಮಾಡಬೇಕು. ಇದು ಆಗದೇ ಇದ್ದರೆ ದುಬಾರಿ ಖರ್ಚು ಮಾಡಬೇಕಾದ ಸ್ಥಿತಿ ಇಲ್ಲಿದೆ. ಈ ಖರ್ಚು ಭರಿಸಲಾಗದೆ ಇಲ್ಲಿಗೆ ಶಿಕ್ಷಣ ಮೊಟಕುಗೊಳಿಸಿ ಯಾವುದೇ ಸಣ್ಣ ಮಟ್ಟ ಸಂಪಾದನೆಯ ಹಾದಿ ಹಿಡಿಯಬೇಕಾದ ಅನಿವಾರ್ಯತೆ ಇಲ್ಲಿ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿಯೇ ಇವರಲ್ಲಿ ಪ್ರೌಢಶಿಕ್ಷಣ ಮುಗಿಸಿ ಮುಂದೆ ಹೋಗಲಾರದೆ ಅರ್ಧಕ್ಕೆ ಶಿಕ್ಷಣವನ್ನು ಮೊಟಕುಗೊಳಿಸಿದವರ ಸಂಖ್ಯೆ ಹೆಚ್ಚಿದವರ ಸಂಖ್ಯೆ ಕಂಡುಬರುತ್ತದೆ. ಜಿಲ್ಲೆಯಲ್ಲಿರುವ ಆಶ್ರಮ ಶಾಲೆ, ಗಿರಿಜನ ವಸತಿ ನಿಲಯಗಳ ಸ್ಥಿತಿ ನೋಡಿದರೆ ತುಂಬಾ ಬೇಸರ ವಾಗುತ್ತದೆ. ಹರಕಲು ಮುರುಕಲು ಶೌಚಾಲಯಗಳು ಸೇರಿದಂತೆ ನೀರಿನ ಸೌಲಭ್ಯ ಇಲ್ಲದೇ ಇರುವುದು, ಶಿಕ್ಷಕರು ಇಲ್ಲದೇ ಇರುವುದು ಕಂಡುಬರುತ್ತದೆ. ಸಿಬ್ಬಂದಿ ಕೊರತೆಯು ಸೇರಿದಂತೆ ಅಗತ್ಯವಾದ ಸೌಲಭ್ಯಗಳು ದೊರೆಯಬಾಕಾಗಿದೆ. ಸುಳ್ಯ ತಾಲೂಕಿನ ಮಡಪ್ಪಾಡಿಯ ಹಾಡಿಕಲ್ಲುನ ಶಾಲೆಯಲ್ಲಿ ೫ ತರಗತಿಗೆ ಒಬ್ಬ ಶಿಕ್ಷಕ ಮಾತ್ರ ಇದ್ದಾನೆ. ಈ ೫ ತರಗತಿಗಳು ಒಂದೇ ಕೋಣೆಯಲ್ಲಿ ಆಗುತ್ತಿದೆ. ಇಲ್ಲಿ ಬರುವವರು ಎಲ್ಲರೂ ಮಲೆಕುಡಿಯರ ಮಕ್ಕಳಾಗಿದ್ದಾರೆ. ಸಂಘಟನಾತ್ಮಾಕವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಇತರ ಬುಡಕಟ್ಟು ಸಮುದಾಯದವರಲ್ಲಿ ಸಂಘಟನೆ ತೀರ ಹಿಂದುಳಿದಿದೆ. ಬೆಳ್ತಂಗಡಿ ತಾಲೂಕಿನಲ್ಲಿ ಮಾತ್ರ ಮಲೆಕುಡಿಯರ ಸಂಘ ಆಸ್ತಿತ್ವದಲ್ಲಿದೆ. ಇದರ ಹೊರತಾಗಿ ಸುಳ್ಯ, ಪುತ್ತೂರು, ಬಂಟ್ವಾಳ, ತಾಲೂಕುಗಳಲ್ಲಿ ಇವರ ಸಂಘಟನೆ ಇರುವುದಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಕ್ರಿಯವಾಗಿ ಕಾರ್ಯನಿರ್ವಾಹಿಸುತ್ತಿರುವ ಕ್ಷೇತ್ರ ಧರ್ಮಸ್ಥಳ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ನಾಗರೀಕ ಸೇವಾ ಟ್ರಸ್ಟ್ ಗುರುವಾಯನಕೆರೆಯ ವತಿಯಿಂದ ನಡೆಯುವ ಸ್ವಸಹಾಯ ಗುಂಪುಗಳಲ್ಲಿ ಇವರು ಇದ್ದಾರೆ. ಈ ಯೋಜನೆಯ ಅಡಿಯಲ್ಲಿ ಸಿಗಬೇಕಾದ ಸೌಲಭ್ಯಗಳು ಪಡೆಯುತ್ತಿದ್ದಾರೆ. ಇದರ ಹೊರತಾಗಿ ಆಯ್ಕೆ ಪರಿಸರದಲ್ಲಿನ ಯುವಕ ಸಂಘಟನೆಗಳು ಸೇರಿಕೊಂಡು ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಇದರ ಅಡಿಯಲ್ಲಿ ಎಲ್ಲಾ ತಾಲೂಕು, ವಿಭಾಗ, ಗ್ರಾಮ ಮಟ್ಟದ ಸಂಘಟನೆಯ ಅವಶ್ಯಕತೆ ಇದೆ. ನಕ್ಸಲ್ ವಸಂತಗೌಡನ ಹತ್ಯೆ ನಂತರ ನೆರಿಯಾ, ನಾರಾವಿ ಪರಿಸರ ಸೇರಿದಂತೆ ಜಿಲ್ಲೆಯಲ್ಲಿ ಸಂಘಟನೆ ಮಾಡಲು ಹೊರಟವರಿಗೆ ಇಂದು ರೀತಿಯ ಇರಿಸು ಮುರಿಸು ಆಗುತ್ತಿದೆ. ಮಾತ್ರವಲ್ಲ ಮಲೆಕುಡಿಯರು ನಕ್ಸಲರಾ? ಎಂಬ ಅನುಮಾನದ ಹುತ್ತ ಎಲ್ಲರನ್ನು ಕಾಡಾಲಾರಂಭಿಸಿದೆ. ಈಗ ಬೆಳ್ತಂಗಡಿಯ ಶಿವಗಿರಿಯಲ್ಲಿರುವ ಮಲೆಕುಡಿಯರ ಸಂಘದ ನಾಯಕತ್ವಕ್ಕೆ ಇಡೀ ಜನಾಂಗದ ಸಂಪೂರ್ಣವಾದ ಬೆಂಬಲ ದೊರೆಯಬೇಕು. ಸಣ್ಣ ಮಟ್ಟ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ, ಜನಾಂಗದ ಹಿತದೃಷ್ಟಿಯಿಂದ ಎಲ್ಲರೂ ಒಟ್ಟಾಗಿ ಸಂಡಟಿತವಾದ ಪ್ರಯತ್ನ ಮಾಡಿದಾಗ ಮಾತ್ರ ಮಲೆಕುಡಿಯ ಸಮುದಾಯದ ಸಂಘಟನೆಗೆ ದಾರಿ ಸುಗಮವಾಗುತ್ತದೆ. ಇವರಲ್ಲಿರುವ ಗುಂಪುಗಾರಿಕೆ ದೂರವಾಗಬೇಕಾಗಿದೆ.

ಧರ್ಮಸ್ಥಳ ಮತ್ತು ಸುಬ್ರಹ್ಮಣ್ಯ ದೇವಸ್ಥಾನಗಳಲ್ಲಿ ಮಲೆಕುಡಿಯ ಸಮುದಾಯದ ಪುರುಷರು ಮಹಿಳೆಯರು ಮತ್ತು ಹುಡುಗರು ಕೆಲಸ ಮಾಡುತ್ತಿದ್ದಾರೆ. ಪಹರೆಯವರಾಗಿ, ಉಗ್ರಾಣಿಗಳಾಗಿ, ಉಗ್ರಾಣಿ ಸಹಾಯಕರಾಗಿ ದೇವಸ್ಥಾನದ ಸ್ವಚ್ಚತೆ, ಸೇರಿ ಅಲಂಕಾರಕ್ಕೆ ಬೇಕಾದ ಸದ್ವತೆ, ಹಣ್ಣು ಕಾಯಿ ತರುವುದು,

ವಸತಿ ಗೃಹಗಳಲ್ಲಿ, ಬೋಜನಾಶಾಲೆಯಲ್ಲಿ ಜಾತ್ರಾ ಉತ್ಸವದ ದಿನಗಳಲ್ಲಿ ರಥ ಕಟ್ಟುವುದು, ಚಪ್ಪರ ಹಾಕುವುದು. ರಥಕ್ಕೆ ಅಲಂಕಾರ ಮಾಡುವುದು ಉತ್ಸವ ಸವಾರಿ ಹೊರಟಾಗ ದೇವರ ಮುಂದೆ ಪಟ, ಛತ್ರ, ಚಾಮರ ದೀಪ, ಹಿಡಿದು ಸಾಗುತ್ತಿರುವ ಇವರು ಇದಕ್ಕೆ ಅವಲಂಬಿತರಾಗಿ ತಮ್ಮ ಶಿಕ್ಷಣವನ್ನು ಮುಂದುವರಿಸದೆ ಇಲ್ಲಿಯೇ ಆಗುತ್ತದೆಂಬ ಭರವಸೆಯಿಂದ ಜಾತಕ ಪಕ್ಷಿಗಳಂತೆ ಕಾಯುತ್ತಿದ್ದಾರೆ. ಈ ದೇವಸ್ಥಾನದಲ್ಲಿನ ಕೆಲಸದ ಖಾಯಂ ನಿಂದಾಗಿ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಅರ್ಧಕ್ಕೆ ಬಿಡುತ್ತಿರುವ ಸ್ಥಿತಿ ಸುಬ್ರಮಣ್ಯದಲ್ಲಿ ಹೆಚ್ಚು ಕಂಡುಬರುತ್ತದೆ. ಸಣ್ಣ ಪುಟ್ಟ ಹುಡುಗರು ಬೋಜನಾಶಾಲೆಯಲ್ಲಿ ಕೆಲಸ ಮಾಡುತ್ತಿರುತ್ತಾರೆ. ಮಹಿಳೆಯರು ಸಹ ತಮ್ಮ ತಮ್ಮ ಕೆಲಸ ಮಾಡುತ್ತಿರುತ್ತಾರೆ. ಮನೆಯಲ್ಲಿ ಬೀಡಿ ಕಟ್ಟುವ ಕೆಲಸ ಮಾಡುತ್ತಾರೆ. ಜೊತೆಗೆ ತಮ್ಮತಮ್ಮ ಕೃಷಿ ತೋಟಗಳಲ್ಲಿ ಸಹ ಕೃಷಿಕರಾಗಿ ದುಡಿಯುತ್ತಾರೆ. ಇವರ ಪರಾಂಪರಿಕ ವೃತ್ತಿಗಳಲ್ಲ ಕೃಷಿ ಜೊತೆಗೆ ಕಾಡುತ್ಪತ್ತಿಗಳ ಸಂಗ್ರಹದ ವೃತ್ತಿ ಈಗಲೂ ಕಂಡುಬರುತ್ತಿದೆ. ಲ್ಯಾಂಪ್ಸ್‌ನಿಂದ ಗುತ್ತಿಗೆ ಪಡೆದವರ ಅಡಿಯಲ್ಲಿ ಇವರು ಕೆಲಸ ಮಾಡುತ್ತಿದ್ದಾರೆ. ಹಿಂದೆ ಇವರಿಗೆ ಇಂತಹ ಗುತ್ತಿಗೆ ಪಡೆದವರ ಅಡಿಯಲ್ಲಿ ಇವರು ಕೆಲಸ ಮಾಡುತ್ತಿದ್ದಾರೆ. ಹಿಂದೆ ಇವರಿಗೆ ಇಂತಹ ಗುತ್ತಿಗೆ ಪದ್ಧತಿಗಳಿರಲಿಲ್ಲ. ತಾನೇ ಸ್ವತಂತ್ರವಾಗಿ ಕಾಡಿನಲ್ಲಿನ ಕಾಡುತ್ಪತ್ತಿ ತಂದು ಮಾರಾಟ ಮಡುತ್ತಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಈಗ ಅರಣ್ಯ ಕಾನೂನು ಇದಕ್ಕೆಲ್ಲ ಅಡ್ಡಿಯಾಗಿದೆ. ಇದನ್ನು ಹೊರತಾಗಿ ಕೃಷಿಕೂಲಿ ಕಾರ್ಮಿಕರಾಗಿ ದಿನಗೂಲಿಗಳಾಗಿ ಸಹ ದುಡಿಯುತ್ತಿದ್ದಾರೆ. ಈ ವೃತ್ತಿಗಳ ಹೊರತಾಗಿ ಬೆತ್ತದಿಂದ ಬುಟ್ಟಿ ಹೆಣೆಯುವುದು ಅಲ್ಲಿ ಕಂಡುಬರುತ್ತದೆ. ಸುಬ್ರಮಣ್ಯದ ಅರಿಗುಡಿಯ ಈಗಲೂ ಬಿದಿರಿನ ಸಣ್ಣ ಪುಟ್ಟ ಕೈಬುಟ್ಟಿ ಹಣ್ಣು, ಕಾಯಿ ಇಡುವಂತಹದನ್ನು ತಯಾರಿಸಿ ದೇವಸ್ಥಾನದ ಮುಂದಿನ ಹಣ್ಣು, ಕಾಯಿ ಮಾಡುವ ಅಂಗಡಿಗಳಿಗೆ ಕೊಡುತ್ತಾರೆ. ಒಂದಕ್ಕೆ ೧.೫೦ ರೂ. ಮಾತ್ರ ಸಿಗುತ್ತದೆ. ದಿನಕ್ಕೆ ೫೦-೬೦ ಹೆಚ್ಚು ಅಂದರೆ ಇಂದು ನೂರು ಬುಟ್ಟಿ ಮಾಡುತ್ತಾರೆ.

ಶಿಶಿಲದ ಸಂಕಪ್ಪ ಮಲೆಕುಡಿಯ ತನ್ನ ಸ್ವ ಸಾಮರ್ಥ್ಯದಿಂದಲೇ ಬಿದಿರು ಬೆತ್ತ ಬಳಸಿ ವಿವಿಧ ಅಲಂಕಾರಿಕ ಆಕೃತಿಗಳನ್ನು ಮಾಡುತ್ತಿದ್ದಾರೆ. ಚಪ್ಪರ ಹಾಕುವುದು ಬಿದಿರಿನಿಂದ ಗೋಪುರ ನಿರ್ಮಾಣ ಮಾಡುವುದು, ಆನೆ, ಹೂದಾನಿ, ಕಾಲುದೀಪ ಹೀಗೆ ವಿವಿಧ ಮಾದರಿಯ ಕಲಾಕೃತಿಗಳು ಇವರಿಂದ ಮಾಡಿ ಬಂದಿವೆ. ಇವರಿಗೆ ೨೦೦೯ರ ರಾಜ್ಯ ಜಾನಪದ ಪ್ರಶಸ್ತಿ ದೊರೆತಿದೆ. ಬಿಡುವಿನಲ್ಲಿ ಮಾತ್ರ ಒಂದು ಹವ್ಯಾಸಕ್ಕಾಗಿ ಮಾಡಿದ ಇವರ ಪ್ರಯತ್ನದಿಂದ ಇದು ಸಾಧ್ಯವಾಗಿದೆ. ಇದು ಮನೆತನದ ವಂಶಪರಾಂಪರಿಕವಾಗಿ ಬಂದದಲ್ಲ ಎನ್ನುವ ವೆಂಕಪ್ಪ ಮುಂದೆ ಸಾಧಿಸುವ ಛಲವನ್ನು ಹೊಂದಿದ್ದಾರೆ.

ಗುಂಡ್ಯ ತೋಟದ ಮಲೆಕುಡಿಯರ ಮನೆಯ ಮುಂದೆ ಇರುವ ಕೊಟ್ಟಿಗೆಯಲ್ಲಿ ಮುಂದೆ ಸಾಂಪ್ರಾದಾಯಿಕ ಮೀನು ಬೇಟೆಗೆ ಬಳಸುವ ಪರಿಕರಗಳು ಮೀನು ಬಲೆ, ಮೀನು ಹಿಡಿಯುವ ಬುಟ್ಟಿ ಇದ್ದು ಹರಿಯುವ ಹೊಳೆಯಲ್ಲಿ ಮೀನು ಬೇಟೆಗೆ ಹೋಗುತ್ತಿರುವುದು ಕಂಡುಬರುತ್ತದೆ. ಹೋರಾಟದ ಬದುಕು ಇವರದ್ದಾಗಿದೆ.

ನೆರಿಯಾದ ಹೆಬ್ಬಾರರ ಗೇಟಿನ ಬಾಗಿಲು ತೆರೆಸಲು ಮಾಡಿದನ್ನು ಕೆ. ನಾರಾಯಣ, ಎಲ್ಯಣ್ಣ ರವರು ವಿವರಿಸುತ್ತಾರೆ. ಆಗೇನಾದರೂ ಇವರೆಲ್ಲ ಸೇರಿ ಹೋರಾಟ ಮಾಡದೇ ಇದ್ದರೆ ಇಂದು ಇಲ್ಲಿನವರಿಗೆ ಸ್ವಾತಂತ್ರ್ಯ ಇರುತ್ತಿರಲಿಲ್ಲ. ಎಂಬ ಸತ್ಯ ಇಲ್ಲಿದೆ. ಇದರ ನಂತರದ ಹೋರಾಟದಲ್ಲಿ ಕುದುರೆಮುಖ

ರಾಷ್ಟ್ರೀಯ ಉದ್ಯಾನವನದಿಂದ ಇಲ್ಲಿನ ನಿವಾಸಿಗಳನ್ನು ಒಕ್ಕಲೆಬ್ಬಿಸಲು ನಡೆದ ಪ್ರಯತ್ನಗಳ ವಿರುದ್ಧ ನಡೆದ ಪ್ರತಿಭಟನೆ ಹೋರಾಟಗಳಿಂದಾಗಿ ವಸಂತಗೌಡ ನಕ್ಸಲನಾದ ಬೆಳವಣಿಗೆ ಇವರ ಹೋರಾಟದ ದಿಕ್ಕನ್ನೇ ಬದಲಿಸಿದೆ. ಈ ಹಿನ್ನೆಲೆಯಲ್ಲಿದ್ದರೂ ಸರ್ಕಾರ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಮಲೆಕುಡಿಯ ಸಮುದಾಯದವರಿಗೆ ಇವರ ಒಡೆತನದ ಭೂಮಿಗೆ ದಾಖಲೆಗಳನ್ನು ಕೊಡುವ ಕೆಲಸವನ್ನು ಮೊದಲು ಮಾಡಬೇಕು. ನಂತರ ಇವರ ನೆಲೆಗಳ ಅಭಿವೃದ್ದಿಗೆ ಕ್ರಮ ತೆಗೆದುಕೊಳ್ಳಬೇಕು. ರಸ್ತೆ, ಕುಡಿಯವ ನೀರು, ವಿದ್ಯುತ್ ಸೌಲಭ್ಯ, ಮನೆ ನಿರ್ಮಾಣ, ಬಿ.ಪಿ.ಎಲ್ ಕಾರ್ಡ್ ಸೌಲಭ್ಯ ಸೇರಿದಂತೆ ಶಿಕ್ಷಣ ಸೌಲಭ್ಯ ಕಲ್ಪಿಸಬೇಕಾಗಿದೆ. ವಿಶೇಷ ಎಂದರೆ ಇವರು ವಾಸವಾಗಿರುವ ಸ್ಥಳಗಳಲ್ಲಿರುವ ಶಾಲೆಗಳಿಗೆ ಈ ಕುಟುಂಬಗಳ ಮಕ್ಕಳು ಶಾಲೆಗೆ ಹೋಗುತ್ತಿಲ್ಲ. ಈ ಮಕ್ಕಳನ್ನು ದೂರದ ಆಶ್ರಮಶಾಲೆ, ಇಲ್ಲವೇ ವಸತಿ ನಿಲಯಗಳಿಗೆ ಸೇರಿಸುತ್ತಾರೆ. ಹೀಗಾಗಿ ಇಲ್ಲಿನ ಶಾಲೆಗಳಲ್ಲಿ ಇವರ ಮಕ್ಕಳ ದಾಖಲಾತಿ ಇರುವುದಿಲ್ಲ.

ದಕ್ಷಿಣ ಕನ್ನಡ ಜಿಲ್ಲೆಯ ಬುಡಕಟ್ಟು ಸಮುದಾಯಗಳಲ್ಲಿ ಕೊರಗರು, ಮರಾಠಿ ಮತ್ತು ಮಲೆಕುಡಿಯರು ಇದ್ದಾರೆ. ಈ ಮೂರು ಸಮುದಾಯಗಳಲ್ಲಿ ಕೊರಗರ ಸಮುದಾಯದ ಅಭಿವೃದ್ದಿಗೆ ಸರ್ಕಾರ ವಿಶೇಷವಾದ ಪ್ಯಾಕೇಜ್‌ನ್ನು ನೀಡಿದೆ. ಆದರೆ ಉಳಿದ ಎರಡು ಸಮುದಾಯಗಳಾದ ಮಲೆಕುಡಿಯರಿಗೆ ಮರಾಠಿಗರಿಗೆ ಇಂತಹ ಅಭಿವೃದ್ದಿ ಪ್ಯಾಕೇಜ್ ಸೌಲಭ್ಯ ನೀಡಿಲ್ಲ. ಈ ಬಗ್ಗೆ ಸರ್ಕಾರದ ಮೇಲೆ ಒತ್ತಡ ಹೋಗುವ ಪ್ರಯತ್ನಗಳಾಗಲೀ, ಸಂಘಟನೆಗಳಾಗಲಿ ಸಕ್ರಿಯವಾಗಿಲ್ಲದೇ ಇರುವುದು ಒಂದು ಗಮನಾರ್ಹ ಸಂಗತಿಯಾಗಿದೆ. ಕೊಡಗಿನ ಕುಡಿಯರಿಗೆ ಅವರದೇ ಆದ ಸಂಸ್ಕೃತಿಯನ್ನು ಪ್ರತಿನಿಧಿಸುವ ಹಾಡು ನೃತ್ಯ ವಾದ್ಯ ಪರಂಪರೆಗಳಿವೆ. ಆದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಇಂತಹ ಪರಂಪರೆ ಕಂಡುಬರುವುದಿಲ್ಲ.

**ಅಧ್ಯಯನದ ಫಲಿತಗಳು**

ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗಲೆಲ್ಲಾ ಮಲೆಕುಡಿಯ ಸಮುದಾಯದ ಕುಟುಂಬಗಳ ಮನೆಮುಂದೆ ನಿಂತು ನನ್ನನ್ನು ಪರಿಚಯಿಸಲು ಪ್ರಯತ್ನಿಸಿದಾಗ ಬಹುತೇಕ ಮಲೆಕುಡಿಯ ಸಮುದಾಯದ ಜನರಿಂದ ಎದರಾದ ಪ್ರಶ್ನೆ ಎಂದರೆ ನೀವು ಯಾರು? ಏಕೆ ಬಂದಿದ್ದೀರಿ? ನಿಮ್ಮಿಂದ ನಮಗೇನು ಪ್ರಯೋಜನವಾಗುತ್ತದೆ? ನೀವು ನಮ್ಮ ಸಮಸ್ಯೆಗಳಿಗೆ ಪರಿಹಾರ ಕೊಡುತ್ತೀರಾ ಹೇಳಿ? ನಾವು ಕುಂತ ಜಾಗಕ್ಕೆ ನಮಗೆ ಇದುವರೆಗೂ ದಾಖಲೆಗಳೇ ಇಲ್ಲ. ನೀವು ಕೊಡಿಸುತ್ತೀರಾ ಹೇಳಿ? ನಮ್ಮ ಭೂಮಿಗೆ ಆರ್.ಟಿ.ಸಿ. ಸಿಕ್ಕಿಲ್ಲ, ಕೊಡಲಾಗುತ್ತದೆಯೇ? ನಿಮ್ಮಂತವರು ತುಂಬ ಜನರು ಬರುತ್ತಾರೆ, ಬರೆದುಕೊಂಡು ಹೋಗುತ್ತಾರೆ. ಆದರೆ ನಮ್ಮ ಸ್ಥಿತಿ ಮಾತ್ರ ಹೀಗೆಯೇ ಇದೆ. ಇವು ಕುಟುಂಬವಾರು ಮಾದರಿ ಸಮೀಕ್ಷೆಯ ಸಮಯದಲ್ಲಿ ನನಗೆ ಎದುರಾದ ಪ್ರಶ್ನೆಗಳ ಸುರಿಮಳೆಗಳಾಗಿವೆ. ಇವರು ಕೇಳುವ ಪ್ರಶ್ನೆಗಳು ಮಾತ್ರವಲ್ಲ ಇಲ್ಲಿ ಇವರ ನೋವು ಇದೆ. ಕಳಕಳಿ ಇದೆ. ಇದೆಲ್ಲಕ್ಕಿಂತಲೂ ಮಿಗಿಲಾಗಿ ವರ್ತಮಾನದ ಬದುಕಿನ ಆತಂಕವಿದೆ. ಈ ಭಯ ಆತಂಕಗಳನ್ನು ಕಟ್ಟಿಕೊಂಡೇ ಇವರು ತಮ್ಮ ಬದುಕಿನ ತುತ್ತಿನ ಚೀಲ ತುಂಬಿಸಲು ನಿರಂತರವಾದ ಸವಾಲುಗಳನ್ನು ಎದುರಿಸುವ ಸ್ಥಿತಿ ಇದೆ.

ಸಾಮಾಜಿಕವಾಗಿ ಇವರು ರೈತಾಪಿ ವರ್ಗದ ಕೃಷಿಕರಾಗಿ ಈ ಪ್ರದೇಶದಲ್ಲಿ ಗುರುತಿಸಿಕೊಳ್ಳುವುದರ ಮೂಲಕ ತಮ್ಮದೇ ಆದ ಅನನ್ಯತೆಯನ್ನು ಇವರು ಕಾಪಾಡಿಕೊಂಡು ಬಂದಿದ್ದಾರೆ. ಇವರ ವಾಸಕ್ಕೆ

ಬೇಕಾಗಿರುವ ಇವರದೇ ಆದ ನೆಲೆಗಾಗಿ ಈಗಲೂ ಪರಿತಪಿಸುತ್ತಿರುವ ಇವರು ಜಾಗದ ಮತ್ತು ಭೂಮಿಯ ಹಕ್ಕಿಗಾಗಿ ಇದುವರೆಗೂ ಮಾಡಿದ ಎಲ್ಲಾ ಪ್ರಯತ್ನಗಳು ಸಫಲವಾಗದೇ ಇರುವಾಗ ಇವರು ಅಸಹಾಯಕರಾಗಿ ನಾನು ಮಾತ್ರವಲ್ಲ ಅಧ್ಯಯನಕ್ಕೆ ಯಾರೇ ಹೋದರೂ ಇವರಿಂದ ಬರುವ ಪ್ರಶ್ನೆಗಳು ಮೇಲಿನ ಪ್ರಶ್ನೆಗಳೇ ಆಗಿರುತ್ತವೆ. ಇವು ಇವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ನಿರ್ಧರಿಸುವ ಮಾನದಂಡಗಳಾಗಿವೆ. ಈ ಪ್ರಶ್ನೆಗಳಿಗೆಲ್ಲಾ ಉತ್ತರ ಸಿಕ್ಕಿದ್ದಾದರೆ ಇವರಿಗೆ ವಸತಿಯೋಜನೆಯಡಿಯಲ್ಲಿ ಮನೆ ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲಿ ಇವರ ಜಾಗಕ್ಕೆ ದಾಖಲೆಗಳೇ ಇಲ್ಲದಿರುವಾಗ ಇವರು ವಸತಿಯೋಜನೆಯ ಫಲಾನುಭವಿಗಳಾಗುವುದಾದರೂ ಹೇಗೆ?

ಅನಾದಿ ಕಾಲದಿಂದಲೂ ಸಾಗುವಳಿ ಮಾಡಿಕೊಂಡು ಬಂದಿರುವ ಇವರದೇ ಆದ ಭೂಮಿಗೆ ದಾಖಲೆಗಳು ಇಲ್ಲದಿರುವಾಗ ಸರ್ಕಾರದ ಆರ್ಥಿಕ ಅಭಿವೃದ್ಧಿ ಯೋಜನೆಗಳು, ಬ್ಯಾಂಕಿನ ಆರ್ಥಿಕ ಸಹಾಯಕ್ಕೆ ಇವರು ಅನರ್ಹರಾಗುತ್ತಾರೆ. ಹೀಗಾಗಿ ಇವರ ಪಾಲಿಗೆ ಇವು ಗಗನಕುಸುಮಗಳಾಗಿವೆ. ನಕ್ಸಲ್ ಪ್ರಭಾವಿತ ಪ್ರದೇಶಗಳ ಸಮಸ್ಯೆಗಳಂತೂ ಇವರನ್ನು ಆತಂಕಕ್ಕೆ ದೂಡಿವೆ. ಒಕ್ಕಲೆಬ್ಬಿಸುವ ಭೀತಿಯಿಂದ ಇವರು ನಿರಾಶ್ರಿರಾಗುವ ಭಯ ಒಂದುಕಡೆಯಾದರೆ, ಪೊಲೀಸ್ ಇಲಾಖೆ ಮತ್ತು ಅರಣ್ಯ ಇಲಾಖೆಯಿಂದ ಅನುಭವಿಸುತ್ತಿರುವ ತೊಂದರೆಯು ಇವರಿಗೆ ದೊಡ್ಡ ಸವಾಲುಗಳಾಗಿವೆ. ಬಿ.ಪಿ.ಎಲ್. ಕಾರ್ಡ್, ಕುಡಿಯುವ ನೀರು, ವಿದ್ಯುತ್, ಶಾಲೆ, ಆಸ್ಪತ್ರೆ, ವೃದ್ಧಾಪ್ಯ ವೇತನ, ವಿಧವೆ ವೇತನ, ಭಾಗ್ಯಜ್ಯೋತಿ, ಗಂಗಾಕಲ್ಯಾಣ ಯೋಜನೆ ಮುಂತಾದವು ಮಾತ್ರವಲ್ಲ ಬಾಂಜಾರುಮಲೆಯಂತಹ ಪ್ರದೇಶಗಳಲ್ಲಿ ಇಲ್ಲಿನ ಮಕ್ಕಳಿಗಾಗಿ ಈಗಲೂ ಅಂಗನವಾಡಿ ಶಾಲೆಯನ್ನು ತೆರೆಯಲು ಸಾಧ್ಯವಾಗಿಲ್ಲ. ಶೌಚಾಲಯ ಸೌಲಭ್ಯವಿಲ್ಲದೇ ಇರುವ ಸ್ಥಿತಿಯಿದೆ. ಆದರೆ ಈ ಸಮುದಾಯದ ಎಲ್ಲಾ ಜನರಿಗೆ ಮತದಾನದ ಹಕ್ಕು ಮಾತ್ರ ದೊರೆತಿದೆ. ಇವರು ದೂರದ ಮತಗಟ್ಟೆಗೆ ಹೋಗಿ ತಮ್ಮ ಮತ ಚಲಾಯಿಸಿ ಬರುತ್ತಿದ್ದಾರೆ.

ಕುದುರೆಮುಖ ರಾಷ್ಟ್ರೀಯ ಉದ್ಯಾನವನ ವ್ಯಾಪ್ತಿಯ ಪ್ರದೇಶಗಳು ಬಾಂಜಾರುಮಲೆ, ಅಂಬಟಮಲೆ, ಇಳಿಮಲೆ, ನೆರಿಯಾ, ಹತ್ಯಹಡ್ಕ, ಕೊಕ್ಕಡ, ಮಡಪ್ಪಾಡಿಯ ಹಾಡಿಕಲ್ಲು, ಸುಬ್ರಹ್ಮಣ್ಯ, ಬೆಟ್ಟಂಪ್ಪಾಡಿ, ಪಾಣಜೆ, ಕನ್ಯಾನ ಪ್ರದೇಶಗಳಲ್ಲಿ ಶೈಕ್ಷಣಿಕ ಸೌಲಭ್ಯವಿಲ್ಲದೆ, ಪ್ರೌಢ ಶಿಕ್ಷಣದ ನಂತರ ಮುಂದೆ ಹೋಗಲು ಸಾಧ್ಯವಾಗದೆ ಅರ್ಧಕ್ಕೆ ಶಿಕ್ಷಣ ಮೊಟುಕುಗೊಳಿಸಿರುವವರ ಪ್ರಮಾಣ ಶೇಕಡಾ ಐವತ್ತಕ್ಕೂ ಹೆಚ್ಚಿದೆ. ಹತ್ಯಡ್ಕದಿಂದ ಅರಿಶಿನಮಗ್ಗಿಗೆ ಐದು ಕಿ.ಲೋ. ಮೀಟರ್ ದೂರ ಶಾಲೆ ಮಕ್ಕಳು ನಡೆದು ಹೋಗಿ ಬರುತ್ತಿದ್ದಾರೆ. ಕುಡಿಯುವ ನೀರಿಗಾಗಿ ಇವರು ತಾವೇ ತಮ್ಮ ಮನೆಯ ಮುಂದೆ ತೋಡಿಕೊಂಡಿರುವ ಬಾವಿ, ಇಲ್ಲವೆ ಗುಡ್ಡದ ವರತೆ ನೀರನ್ನು ಆಶ್ರಯಿಸಿದ್ದಾರೆ. ಇಲ್ಲಿ ಸರ್ಕಾರ ಕುಡಿಯುವ ನೀರಿನ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅರಣ್ಯ ಕಾಯಿದೆ ಅಡ್ಡಿಯಾಗಿದೆ.

ಸಾಮಾಜಿಕವಾಗಿ ನಕ್ಸಲ್ ನಂಟಿನ ಆರೋಪವನ್ನು ಎದುರಿಸುತ್ತಿರುವ ಈ ಸಮುದಾಯ ಸುಬ್ರಹ್ಮಣ್ಯದಲ್ಲಿನ ಮಡೆಸ್ನಾನದ ನಿಷೇಧದ ಸುಳಿಯಲ್ಲಿ ಆತಂಕಕ್ಕೆ ಒಳಗಾಗಿರುವುದು ವರ್ತಮಾನದ ಸವಾಲುಗಳಾಗಿವೆ.

ಮಲೆಕುಡಿಯ ಬುಡಕಟ್ಟು ಸಮುದಾಯವು ಪ್ರಾದೇಶಿಕವಾಗಿ ಚದುರಿದ ಸಮುದಾಯವಾಗಿದೆ. ಈ ಸಮುದಾಯವನ್ನು ಗುರುತಿಸಲು ಒಂದೇ ಹೆಸರು ಇರುವುದಿಲ್ಲ. ಇವರು ಈ ಪ್ರದೇಶದ

ಮೂಲನವಾಸಿಗಳಾದರೂ ಇವರು ವಾಸ ಮಾಡುತ್ತಿರುವ ಸ್ಥಳಗಳಿಗೆ ಭದ್ರತೆ ಹಕ್ಕುಪತ್ರದ ದಾಖಲೆಗಳಿರುವುದಿಲ್ಲ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ಹಾಡು ಕುಣಿತ ವಾದ್ಯ ಪರಿಕರಗಳು ಇವರ ಮೂಲ ಪರಂಪರೆಯನ್ನು ಸೂಚಿಸುತ್ತವೆ. ಆದರೆ ಮಲೆಕುಡಿಯ ಬುಡಕಟ್ಟು ಸಮುದಾಯಕ್ಕೆ ಅಂತಹ ಹಾಡು ಕುಣಿತ ವಾದ್ಯ ಪರಂಪರೆ ಕಂಡುಬರುವುದಿಲ್ಲ. ಅಳಿಯ ಮತ್ತು ಮಕ್ಕಳ ಕಟ್ಟು ಸಂತತಿಗಳ ನಡುವೆ ಭಿನ್ನತೆಗಳಿಂದಾಗಿ ಭೇದ–ಭಾವದ ಕಲ್ಪನೆಗಳು ಉಂಟಾಗಿವೆ. ಇದು ಇವರ ಅನನ್ಯತೆಗೆ ತೊಡಕಾಗಿದೆ. ಈ ಸಮುದಾಯದವರು ವಾಸವಾಗಿರುವ ಸ್ಥಳಗಳು ಬಹುತೇಕವಾಗಿ ರಕ್ಷಿತಾರಣ್ಯ ಪ್ರದೇಶಗಳ ಅಂಚಿನಲ್ಲಿದೆ. ಈ ರಕ್ಷಿತಾರಣ್ಯದ ಅರಣ್ಯ ಕಾಯಿದೆಯಿಂದಾಗಿ ಇವರಿಗೆ ಸಿಗಬೇಕಾದ ಮೂಲ ಭೂತ ಸೌಲಭ್ಯಗಳು ಇದುವರೆಗೂ ತಲುಪದೆ ಈ ಸೌಲಭ್ಯಗಳಿಂದ ಈ ಕುಟುಂಬಗಳು ವಂಚಿತವಾಗಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನವನದಿಂದ ಇವರನ್ನು ಒಕ್ಕಲೆಬ್ಬಿಸುವ ಪ್ರಯತ್ನಗಳು ನಡೆಯುತ್ತಿರುವುದರಿಂದ ಈ ಸಮುದಾಯವು ನಿರಾಶ್ರಿತ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಈ ಯೋಜನೆಯ ವಿರೋಧದಲ್ಲಿ ಭಾಗವಹಿಸಿದ ಈ ಸಮುದಾಯದ ಕೆಲವರು ನಕ್ಸಲ್ ಆರೋಪಕ್ಕೆ ಒಳಗಾಗಿದ್ದಾರೆ. ಈ ಸಮುದಾಯಕ್ಕೆ ಮೀಸಲಾತಿ ಪ್ರಾತಿನಿಧ್ಯ ದೊರೆಯದಿರುವುದು ಕಂಡುಬರುತ್ತದೆ. ಈ ಸಮುದಾಯದ ಮೇಲೆ ದಾಖಲಾದ ಮೊಕದ್ದಮ್ಮೆಗಳಲ್ಲಿ ಮಾನವ ಹಕ್ಕುಗಳು ಮತ್ತು ನಾಗರೀಕ ಹಕ್ಕುಗಳ ಉಲ್ಲಂಘನೆಯ ಆರೋಪ ವಿದೆ.

ಈ ಸಮುದಾಯಕ್ಕೆ ಸರಿಯಾದ ರಾಜಕೀಯ ಪ್ರಾತಿನಿಧ್ಯ ದೊರೆಯುತ್ತಿಲ್ಲ. ಈ ಸಮುದಾಯದ ಮೂಲ ನೆಲೆಗಳು ಮತ್ತು ಇತರ ನೆಲೆಗಳ ನಡುವೆ ಅಂತರ ವೇರ್ಪಟ್ಟಿದೆ. ಈ ಸಮುದಾಯಗಳನ್ನು ಒಂದುಗೂಡಿಸುವ ಪ್ರಯತ್ನಗಳು ನಡೆಯುತ್ತಿಲ್ಲ. ಈ ಸಮುದಾಯದ ವಾಸದ ನೆಲೆ ಮತ್ತು ಭೂಮಿಗೆ ದಾಖಲೆಗಳು ಇಲ್ಲದೆ ಇದೊಂದು ಅತಂತ್ರ ಸಮುದಾಯವಾಗಿದೆ.

**ಸಲಹೆಗಳು**

ಸರ್ಕಾರದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಮಲೆಕುಡಿಯ ಮತ್ತು ಮಲೆತ್ತಾಯ ಹೆಸರುಗಳು ಸೇರ್ಪಡೆಯಾಗಬೇಕು ಮತ್ತು ಇವರಿಗೆ ಸಂವಿಧಾನಾತ್ಮಕ ಮೀಸಲಾತಿ ಸೌಲಭ್ಯಗಳು ದೊರೆಯಬೇಕು. ಮೀಸಲಾತಿ ಸೌಲಭ್ಯದಲ್ಲಿ ಇವರಿಗೆ ಪ್ರಾತಿನಿಧ್ಯ ದೊರೆಯದಿರುವುದರಿಂದ ಮೀಸಲಾತಿ ವರ್ಗೀಕರಣದ ಮೂಲಕ ಸಮರ್ಪಕವಾದ ಪ್ರಾತಿನಿಧ್ಯ ದೊರೆಯುವಂತಾಗಬೇಕು. ಈ ಸಮುದಾಯದ ಮೂಲ ನೆಲ ಮತ್ತು ಭೂಮಿಗೆ ಹಕ್ಕು ಪತ್ರಗಳು ದೊರೆಯಬೇಕು. ಈ ಸಮುದಾಯದ ಶೈಕ್ಷಣಿಕ ಅಭಿವೃದ್ಧಿಗೆ ವಿಶೇಷ ಆಧ್ಯತೆ ನೀಡಬೇಕು. ಬಂಜಾರು ಮಲೆ ಮತ್ತು ಇತರ ಕಡೆಗಳಲ್ಲಿ ಅಂಗನವಾಡಿ ಮತ್ತು ಪ್ರಾಥಮಿಕ ಶಾಲೆಗಳನ್ನು ತೆರೆಯಬೇಕು. ಈ ಸಮುದಾಯಗಳ ಸಂಪರ್ಕಕ್ಕೆ ರಸ್ತೆ ಅಭಿವೃದ್ಧಿ ಮತ್ತು ಸಾರಿಗೆ ಸೌಲಭ್ಯ ಕಲ್ಪಿಸಬೇಕು. ಇದಕ್ಕಾಗಿರುವ ಕಾನೂನು ತೊಡಕುಗಳನ್ನು ನಿವಾರಿಸಬೇಕು. ಈ ಸಮುದಾಯದಲ್ಲಿ ಶಿಕ್ಷಣದ ಸ್ಥಗಿತದ ಪ್ರಮಾಣ ಹೆಚ್ಚಿದೆ. ಇದರ ಪ್ರಮಾಣದ ಹೆಚ್ಚಳಕ್ಕೆ ವಿಶೇಷ ಗಮನ ಹರಿಸಬೇಕು. ಈ ಸಮುದಾಯದ ಅಭಿವೃದ್ಧಿಗೆ ಪ್ರತ್ಯೇಕವಾದ ಅಭಿವೃದ್ಧಿ ಪ್ಯಾಕೇಜನ್ನು ಘೋಷಿಸಬೇಕು. ಈ ಸಮುದಾಯಕ್ಕೆ ಸಾಲ ಸೌಲಭ್ಯ ಮತ್ತು ವಸತಿ ಇತರ ಯೋಜನೆಗಳು ದೊರೆಯಬೇಕಾದರೆ ಇವರಿಗೆ ನಿವಾಸಿ ದೃಢೀಕರಣ, ಮನೆ ಜಾಗದ ದಾಖಲೆಗಳು ಮತ್ತು ಪಹಣಿ ಅವಶ್ಯಕವಾಗಿಬೇಕು. ಆದರೆ ಈ ದಾಖಲೆಗಳು ಇವರಲ್ಲಿ ಇಲ್ಲದೇ

ಇರುವುದರಿಂದ ಈ ಎಲ್ಲಾ ಸೌಲಭ್ಯಗಳಿಂದ ಇವರು ವಂಚಿತರಾಗಿದ್ದಾರೆ. ಆದ್ದರಿಂದ ಈ ಸಮುದಾಯಗಳಿಗೆ ಈ ಷರತ್ತುಗಳನ್ನು ಸಡಿಲಗೊಳಿಸಿ ಸರ್ಕಾರದ ಅಭಿವೃದ್ಧಿ ಯೋಜಷನೆಗಳನ್ನು ನೀಡಬೇಕು.

ಈ ಸಮುದಾಯದ ಪರಂಪರೆಯನ್ನು ಉಳಿಸಿಕೊಂಡು ಬರಲು ಪ್ರೋತ್ಸಾಹದ ಅವಶ್ಯಕತೆ ಇದೆ. ಈ ಸಮುದಾಯದ ಯುವಕ ಯುವತಿಯರ ಮೆಟ್ರಿಕ್ ನಂತರದ ಶಿಕ್ಷಣವನ್ನು ಮುಂದುವರಿಸಲು ತಾಲೂಕು ಕೇಂದ್ರಗಳಲ್ಲಿ ವಸತಿನಿಲಯ ಸೌಲಭ್ಯಳನ್ನು ಕಲ್ಪಿಸಬೇಕು. ವಿದ್ಯಾವಂತ ಯುವಕ ಯುವತಿಯರಿಗೆ ಸ್ವಯಂ ಉದ್ಯೋಗ ತರಬೇತಿ ಸೌಲಭ್ಯಗಳನ್ನು ಕಲ್ಪಿಸಬೇಕು. ಈ ಸಮುದಾಯದ ಅಭಿವೃದ್ಧಿಗೆ ಜಾರಿಗೆ ತಂದಿರುವ ಅಭಿವೃದ್ಧಿ ಯೋಜನೆಗಳು ಈ ಸಮುದಾಯಕ್ಕೆ ತಲುಪುತ್ತಿಲ್ಲ. ಈ ಸಮುದಾಯದ ಅಭಿವೃದ್ಧಿಗೆ ಅಧಿಕಾರಿಗಳ ಮತ್ತು ಜನಪ್ರತಿನಿಧಿಗಳ ಇಚ್ಛಾಶಕ್ತಿ ಬೇಕಾಗಿದೆ. ಈ ಸಮುದಾಯದ ಮತಗಳಿಕೆಯ ಪೈಪೋಟಿಯಿಂದಾಗಿ ರಾಜಕೀಯ ಪರಾಧೀನತೆ  ಕಂಡುಬರುತ್ತದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನ ವನದಿಂದ ೧೦ ಲಕ್ಷ ರೂಪಾಯಿಗಳ ಪರಿಹಾರ  ನೀಡಿ ಹೊರ ಹಾಕುವ ಪ್ರಯತ್ನದಿಂದ ಇವರು ನಿರಾಶ್ರಿತರಾಗಿದ್ದಾರೆ. ಕಾಡಿನಿಂದ ಹೊರಬಂದ ಕುಟುಂಬಗಳಿಗೆ ಪುನರ್ವಸತಿ ಸೌಲಭ್ಯಗಳನ್ನು ಕಲ್ಪಿಸಬೇಕು. ಈ ಸಮುದಾಯದ ಮೇಲೆ ಆಗಿಂದಾಗ್ಗೆ ನಡೆಯುವ ಹಲ್ಲೆ, ಹತ್ಯೆ ಪ್ರಕರಣಗಳಲ್ಲಿ ಮಾನವ ಹಕ್ಕುಗಳು ರಕ್ಷಣೆಯಾಗಬೇಕು. ಪಾರಂಪರಿಕ ಅರಣ್ಯ ಕಾಯ್ದೆಯಲ್ಲಿನ ದೋಷಗಳಿಂದಾಗಿ ಈ ಕಾಯ್ದೆಯಿಂದ ಇವರಿಗೆ ಪ್ರಯೋಜನವಾಗುತ್ತಿಲ್ಲ. ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವಯಂ ಉದ್ಯೋಗದ ಯೋಜನೆಯಡಿಯಲ್ಲಿ ಬ್ಯಾಂಕ್ ಮೂಲಕ ಆರ್ಥಿಕ ಸಹಾಯವನ್ನು ನೀಡಬೇಕು. ಮಹಿಳೆಯರಿಗೆ ಉದ್ಯಮಶೀಲ ತರಬೇತಿ ಸೌಲಭ್ಯಗಳ ಜೊತೆಗೆ ಆರ್ಥಿಕ ನೆರವು ನೀಡಬೇಕು.

## ಅನುಬಂಧಗಳು

# ೧. ಪರಾಮರ್ಶನ ಗ್ರಂಥಗಳು

೧. ಅಮೃತ ಸೋಮೇಶ್ವರ, 'ತುಳುವ ಜಾನಪದ ಕೆಲವು ನೋಟಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨. "ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯ ವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯಮಾಡುವ) ಅಧಿನಿಯಮ, ೨೦೦೬", ಅರಣ್ಯ ಭವನ, ಬೆಂಗಳೂರು, ೨೦೦೭.

೩. ಅಭಿಶಂಕರ(ಸಂ)., "Karnataka State Gazettor South Canara District", ೧೯೭೩.

೪. ಅನಂತರಾವ್ ಕೆ(ಪ್ರ.ಸಂ)., "ಸುವರ್ಣ ಕರ್ನಾಟಕ ದರ್ಶನ(೫೦ ಸಂವತ್ಸರಗಳು)", ಚಿನ್ನಪ್ಪ ಗೌಡ ಕೆ. ಮತ್ತು ಗಣನಾಥ ಎಕ್ಕಾರು., 'ಕರ್ನಾಟಕ ಜಾನಪದ ಅಧ್ಯಯನದ ನೆಲೆಗಳು' ವಿದ್ಯಹೌಸ್, ಮಂಗಳೂರು, ೨೦೦೬(ಪುಟ. ೬೦೭ರಿಂದ ೬೨೯ರ ಉಲ್ಲೇಖ).

೫. ಎಚ್ಚಸ್ಕೆ(ಸಂ)., "ಅವಲೋಕನ", ಶಿವರಾಮಕಾರಂತ ಕೆ, 'ಜನಾಂಗ ವೈವಿಧ್ಯ', ವಿಶ್ವಕನ್ನಡ ಸಮ್ಮೇಳನ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೬. ಕಾರಂತ ಎಸ್., "ಕುಡಿಯರ ಕೂಸು"-ಹರ್ಷ ಮುದ್ರಣಾಲಯ ಪುತ್ತೂರು-೧೯೫೧

೭. ಕಪಿಲ್‌ಮೋಹನ್(ಸಂ)., "ಪೊಲಿ ೨೦೦", ವೀರೇಂದ್ರ ಹೆಗ್ಗಡೆ ಡಿ., 'ಸಮಾಜ ಸೇವೆಯ ಮಾಧ್ಯಮಗಳಾಗಿ ದೇವಾಲಯಗಳು', ಪುಟ. ೨೯೫, ೩೦೨.

೮. ಕಪಿಲ್‌ಮೋಹನ್(ಸಂ)., ಮುಕುಂದ ಪ್ರಭು., "ಪೊಲಿ ಕೆನರಾ" ೨೦೦, ಬಿ.ವಿ. ಕಕ್ಕಿಲಾಯ, 'ಚಳುವಳಿಯ ನೆನಪುಗಳು', ಪುಟ. ೬೭, ೭೭, ೨೦೦೦.

೯. ಗಂಗಾಧರ ದೈವಜ್ಞ(ಸಂ)., "ಗೊಂದಲಿಗರು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೧೦.

೧೦. ಚಿನ್ನಪ್ಪ ಗೌಡ ಕೆ., "ಭೂತಾರಾಧನೆ ಜಾನಪದೀಯ ಅಧ್ಯಯನ", ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು, ೧೯೯೦.

೧೧. ಚಿನ್ನಪ್ಪ ಗೌಡ ಕೆ., 'ನೆಲೆ ತಪ್ಪಿದ ಕುಡಿಯರು' ಮುಂಗಾರು ಹುಟ್ಟು ಹಬ್ಬದ ಪುರವಣಿ, ಸೆಪ್ಟಂಬರ್ ೯, ೧೯೮೬.

೧೨. ಚಂದ್ರಶೇಖರ ಕಂಬಾರ(ಸಂ)., "ಕನ್ನಡ ಜಾನಪದ ವಿಶ್ವಕೋಶ", ಸಂಪುಟ. ೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩.

೧೩. ತಾರಿಹಳ್ಳಿ ಹನುಮಂತಪ್ಪ(ಸಂ)., "ಕರ್ನಾಟಕದ ಬುಡಕಟ್ಟು ಸಮುದಾಯಗಳು", ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೧೦.

೧೪. ತುಂಗಭದ್ರಾ ಹೋರಾಟ ಒಕ್ಕೂಟ, "ಕುದುರೆಮುಖ ಗಣಿಗಾರಿಕೆ ಪಂಚ ಮಹಾಸುಳ್ಳುಗಳು", ೨೦೦೨.

೧೫. ದಾಸ್ ಬಿ.ಕೆ., ಜನಗಣತಿಯ ವರದಿ A Brief ethnographic note on malaikudiya A Scheduled Tribe ಲೇಖನ, ೧೯೮೧.

೧೬. ದೇವರ ಕೊಂಡರೆಡ್ಡಿ. ಡಾ., ಜಯಪ್ರಕಾಶ ಮಾಲಿನ(ಸಂ), "ತುಳುನಾಡಿನ ಜೈನ ಶಾಸನಗಳು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೭. ನಾಯಕ ಹಾ.ಮಾ., ಸಂಪಾದಕರು, "ಕನ್ನಡ ವಿಶ್ವಕೋಶ" ಸಂಪುಟ-೯.ಪುಟ-(೫೦೯,೫೧೮) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾಲಯ-೧೯೭೭.

೧೮. ಪ್ರಭಾಕರ ಎ.ಎಸ್.(ಸಂ)., "ಆದಿವಾಸಿ ಆಖ್ಯಾನ", ಕಾಂತಮ್ ಸತೀಶ್, 'ಕರ್ನಾಟಕ ಜಾನಪದ ಅಧ್ಯಯನ ಸೂಚಿ', ೨೦೦೬, ಪುಟ ೫೮೦-೬೨೭.

೧೯. ಪ್ರಭಾಕರ ಎ.ಸ್.(ಸಂ)., "ಬುಡಕಟ್ಟು ಅಧ್ಯಯನ(ಪುಟ. ೧೨೬)", ಉಮೇಶ್ ಸೂರಮ್ಮನಹಳ್ಳಿ, 'ಕುದುರೆಮುಖ ಏನದು ಕಾನನದ ಕಿಚ್ಚು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೦. ಪಾರ್ವತಮ್ಮ ಸಿ., "ಆದಿವಾಸಿ ಸಮುದಾಯಗಳ ಅಭಿವೃದ್ಧಿ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೧. ಪುರುಷೋತ್ತಮ ಬಿಳಿಮಲೆ, "ಕೊರಗರ ಸಂಸ್ಕೃತಿ" ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು.- ೧೯೯೩.

೨೨. ಪ್ರಭಾಕರ ಎ.ಎಸ್., "ಆದಿವಾಸಿ ಆಖ್ಯಾನ", ಎಸ್.ಪಿ. ಶಂಕರನಾರಾಯಣ್‌ರಾವ್, 'ಬುಡಕಟ್ಟು ಸಂಸ್ಕೃತಿಯಲ್ಲಿ ಮಾಟ ಮಂತ್ರ ಮೋಡಿ'(ಲೇಖನದಲ್ಲಿನ ಪುಟ. ೨೧೯, ೨೨೩, ೨೨೪), ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ, ೨೦೦೬.

೨೩. ಪ್ರಭಾಕರ ಎ.ಎಸ್., "ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೪. ಪ್ರಭಾಕರ ಎ.ಎಸ್., "ಬುಡಕಟ್ಟು ಅಭಿವೃದ್ಧಿ ಮೀಮಾಂಸೆ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೫. ಪ್ರಭಾಕರ ಎ.ಎಸ್., ವಿಶ್ವವಿದ್ಯಾಲಯ ಧನ ಸಹಾಯ ಆಯೋಗದ ವಿಶೇಷ ನೆರವಿನ ಕಾರ್ಯಕ್ರಮ "ಕರ್ನಾಟಕ ಬುಡಕಟ್ಟುಗಳ ವಿಸ್ತೃತ ಅಧ್ಯಯನ", ಕುಡಿಯ ಮಲೆಕುಡಿಯ ಕುರಿತು ಅಧ್ಯಯನ.

೨೬. ಪ್ರಭಾಕರ ಎ.ಎಸ್., "ಆದಿವಾಸಿ ಆಖ್ಯಾನ", ಆರ್. ವಿಜಯಲಕ್ಷ್ಮಿರವರ 'ಕರ್ನಾಟಕದ ಬುಡಕಟ್ಟು ನೆಲೆಗಳು'(ಪುಟ.೧೬೦, ೧೬೧,೧೬೨,೧೭೦), ಸಿದ್ಧಾರ್ಥ ಪ್ರಕಾಶನ, ೨೦೦೬

೨೭. ಪ್ರಭಾಕರ ಎ.ಎಸ್(ಸಂ)., "ಹೆಳವರು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೮. ಪ್ರಭಾಕರ ಎ.ಎಸ್(ಸಂ)., "ಬುಡಕಟ್ಟು ಅಭಿವೃದ್ಧಿ", 'ಮಹಾಶ್ವೇತಾದೇವಿಯವರ ಚಿಂತನೆಗಳು', ಪುಟ ೩೩೨-೩೩೩ ಬುಡಕಟ್ಟು ಅಭಿವೃದ್ಧಿ ಮೀಮಾಂಸೆ. ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೪.

೨೯. ಪ್ರಶಾಂತ್ ಹೆಚ್.ಡಿ, "ಕರ್ನಾಟಕ ರಾಜ್ಯಕೋಶ" ೪, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೨೦, ೨೦೦೦.

೩೦. ಪ್ರಹ್ಲಾದ ಚಿಟಗೇರಿ., "ಚೆಂಚರ ಸಂಸ್ಕೃತಿ", ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೩೧. ಬರಗೂರು ರಾಮಚಂದ್ರಪ್ಪ(ಸಂ)., ರಾಮಚಂದ್ರ ಆಚಾರ್ ಡಿ.ವಿ(ಲೇ), "ಕುಡಿಯರ ಸಂಸ್ಕೃತಿ", ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೦೩, ೧೯೯೩.

೩೨. ಬೋರಲಿಂಗಯ್ಯ ಹಿ.ಚಿ(ಸಂ)., "ಕರ್ನಾಟಕ ಜಾನಪದ ಕಲೆಗಳ ಕೋಶ", 'ಕುಡಿಯರ ಕುಣಿತ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೯೯,೨೦೦, ೧೯೯೬.

೩೩. ಬೋರಲಿಂಗಯ್ಯ ಹಿ.ಚಿ., "ಗಿರಿಜನರು" ಪ್ರಸಾರಾಂಗ ಕನ್ನಡ ವಿ.ವಿ., ಹಂಪಿ.-೧೯೯೪.

೩೪. ಬೋರಲಿಂಗಯ್ಯ ಹಿ.ಚಿ.(ಸಂ.)., "ಕರ್ನಾಟಕ ಜಾನಪದ ಕಲೆಗಳ ಕೋಶ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೩೫. ಬೋರಲಿಂಗಯ್ಯ ಹಿ.ಚಿ., "ಗಿರಿಜನ ನಾಡಿಗೆ- ಪಯಣ", ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು, ೧೯೯೧.

೩೬. ಬೋರಲಿಂಗಯ್ಯ ಹಿ.ಚಿ., "ಕುಣುಬಿಯರು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೧೦.

೩೭. ಭಾಗ್ಯಲಕ್ಷ್ಮಿ., "ಗಣಿಗಾರಿಕೆ ಮತ್ತು ಅಭಿವೃದ್ಧಿ", ಸಖಿ ಪ್ರಕಾಶನಾ, ಹೊಸಪೇಟೆ, ೨೦೦೭.

೩೮. ಬೋರಲಿಂಗಯ್ಯ ಹಿ.ಚಿ., ಎ.ಎಸ್.ಪ್ರಭಾಕರ(ಸಂ)., "ಬುಡಕಟ್ಟು ಅಧ್ಯಯನ"-೪, ಮೈತ್ರಿ ಕೆ.ಎಂ., 'ಮಲೇರು ಮತ್ತು ಮಾಲೇರು ಕೆಲವು ಸಂದೇಹಗಳು ಮತ್ತು ಉತ್ತರಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ. ೧೯೫, ೨೦೦೫.

೩೯. ಮಹಾಲಿಂಗ ಭಟ್ ಬಿ.ಎಂ., "ದಕ್ಷಿಣ ಕನ್ನಡ ಜಿಲ್ಲೆಯ ಹವ್ಯಕ ಸಂಸ್ಕೃತಿ: ಒಂದು ಅಧ್ಯಯನ" ಪಿಎಚ್. ಡಿ. ಮಹಾಪ್ರಬಂಧ, ೨೦೦೫.

೪೦. ಮಂಗಳಾ ಶ್ರೀಧರ್., "ಬುಡಕಟ್ಟು ವೈದ್ಯಸಂಸ್ಕೃತಿ", ಮುದ್ದಪ್ಪಸ್ಮಾರಕ ಟ್ರಸ್ಟ್,ಬೆಂಗಳೂರು ೨೦೦೮

೪೧. ಮೊಹಮದ್‌ಪೀರ್., Tribunal Development Program and case study of Karnataka. An Evaluation Report Submitted to the Ministry of Welfare, Govt. of India. ಮಂಗಳೂರು ವಿಶ್ವವಿದ್ಯಾಲಯ, ೧೯೯೨.

೪೨. ಮೋಹನ್‌ಕೃಷ್ಣ ರೈ., "ತುಳು ಸಂಸ್ಕೃತಿ, ಚತುರ್ಮುಖೀ ಅಧ್ಯಯನ", ಪ್ರಾಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯.

೪೩. ಮೋಹನ್‌ಕೃಷ್ಣ ರೈ. ಕೆ., "ಕೆನರಾದ ವಿಭಜನೆ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೪೪. ಮೀನಾಕ್ಷಿ ಕೆ., ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ಶಾಲಿಯಾ ದೇವಾಂಗ ಸಮುದಾಯದ ಅಧ್ಯಯನ(ಪಿಎಚ್.ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೯-೨೩, ೨೦೦೨.

೪೫. ಹೆಚ್.ಜೆ. ಲಕ್ಕಪ್ಪಗೌಡ(ಪ್ರ.ಸಂ)., "ಕರ್ನಾಟಕ ಬುಡಕಟ್ಟುಗಳು ಸಂಪುಟ.೧", ನಾಗಣ್ಣ ಡಿ, 'ಕುಡಿಯರು ಮಲೆಕುಡಿಯ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೯೮, ಪು. ೬೧೧, ೬೧೨, ೧೯೯೮.

೪೬. ಲಾರೆನ್ಸ್ ಡಿಸೋಜ ಎಸ್.ಜೆ., "Malekudiyas a Primitive Tribe of South India" ೧೯೯೪.

೪೭. ಲಾರೆನ್ಸ್ ಡಿಸೋಜ ಎಸ್.ಜೆ., "Make MALEKUDIYAS A primitive Tribe OF South India", UNECO, CO-ACTION LEARNING CENTRE, MANGALORE, ೧೯೯೩, ೯೪.

೪೮. ವಿವೇಕ ರೈ ಬಿ.ಎ. ಮತ್ತು ಯದುಪತಿಗೌಡ., "ಮಲೆಕುಡಿಯರು", ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯದ, ಮಂಗಳೂರು, ೧೯೯೬.

೪೯. ವಿವೇಕ ರೈ. ಬಿ.ಎ(ಪ್ರ.ಸಂ)., **ತುಳುಸಾಹಿತ್ಯ ಚರಿತ್ರೆ,** ಸಂಪುಟ ೧, ಕೆಯ್ಯೂರು ರಘುಪತಿಭಟ್, 'ತುಳುನಾಡಿನ ಸ್ಥಳನಾಮ ಸ್ವರೂಪ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦೭, ೨೦೦೭.

೫೦. ಶ್ರೀಧರಗೌಡ, 'Impact of Science and Technology o Tribal Occupation. A study on Malekudiya of Belthangady Taluk'(ಮಂಗಳೂರು ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ), ೧೯೯೨.

೫೧. ಶಿವರಾಮಯ್ಯ., "ಕುದುರೆಮುಖ", ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ಪುಟ. ೬೦, ೨೦೦೩.

೫೨. ಶ್ರೀಧರ ಗೌಡ ಪಿ., "Social change among the malekudiya in Dakshina Kannada Dist", ಪಿಎಚ್.ಡಿ. ಮಹಾಪ್ರಬಂಧ, ೧೯೯೬.

೫೩. ಶ್ರೀನಿವಾಸ ಎಲ್, "ಪರಿವರ್ತನೆ ಹಾದಿಯಲ್ಲಿ ಬುಡಕಟ್ಟು ಯೋಜನೆಗಳು", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೫೪. South Canara Manual Vol.೧-೨, ೧೮೫೮.

೫೫. ಸಂಗೀತಾ ಎಂ., "ದಕ್ಷಿಣ ಕನ್ನಡದ ತೀಯಾ ಜನಾಂಗ: ಒಂದು ಸಾಂಸ್ಕೃತಿಕ ಅದ್ಯಯನ", ೨೦೦೪.

೫೬. ಸುಂದರನಾಯಕ್ ಕೆ., "ಕರಾವಳಿ ಕರ್ನಾಟಕದ ಮರಾಠಿ ಜನಾಂಗ ಪರಂಪರೆ ಮತ್ತು ಆಧುನಿಕತೆ", ದೀಪಪ್ರಿಯ ಪ್ರಕಾಶನ, ಬೆಂಗಳೂರು, ೨೦೦೮.

### ಗೆಜೆಟಿಯರ್‌ಗಳು/ನಿಘಂಟುಗಳು

೧. ಅನುಸೂಚಿತ ಬುಡಕಟ್ಟುಗಳ ಮತ್ತು ಇತರ ಪಾರಂಪರಿಕ ಅರಣ್ಯವಾಸಿಗಳ(ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ), ಅದಿನಿಯಮ, ಪರಿಶಿಷ್ಟ ಪಂಗಡಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ೧, ೨೦೦೬.

೨. ಉಪಾಧ್ಯಾಯ ಯು.ಪಿ., "ತುಳು ನಿಘಂಟು", ಸಂಪುಟ.೧-೩, ರಾಷ್ಟ್ರಕವಿ ಗೋವಿಂದ ಪೈ, ಸಂಶೋಧನಾ ಕೇಂದ್ರ, ಉಡುಪಿ, ೧೯೮೮, ೧೯೯೨, ೧೯೯೫.

೩. "ಕನ್ನಡ ವಿಶ್ವಕೋಶ", ಸಂಪುಟ.೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪುಟ.ಸಂ.೨೦ರಲ್ಲಿ 'ಮಲಯ ಕುಡಿ' ಉಲ್ಲೇಖ, ೧೯೭೨.

೪. "ಕನ್ನಡ ನಿಘಂಟು" ಕನ್ನಡ ಸಾಹಿತ್ಯ ಪರಿಷತ್ತು, ೨ನೇ ಸಂಪುಟ, ಪುಟ. ೧೯೧೨, 'ಕುಡಿಯ', ೧೯೭೬.

೫. ಕರ್ನಾಟಕ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ, ಬೆಂಗಳೂರು, ವಾರ್ಷಿಕ ಕ್ರಿಯಾ ಯೋಜನೆ, ೨೦೧೧.

೬. "ದಕ್ಷಿಣ ಕನ್ನಡ ಜಿಲ್ಲಾ ಗೆಜೆಟಿಯರ್"(ಪುಟ. ೧೩೨, ೧೩೩, ೧೭೪-೧೭೫, ೫೩೭), ಕರ್ನಾಟಕ ರಾಜ್ಯ ಗೆಜಟಿಯರ್, ಭಾಗ ೩, ೨೦೦೫.

೭. "ವಿಶ್ವಕನ್ನಡ ಕೋಶ", ಸಂಪುಟ ಒಂಭತ್ತು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪುಟ. ೫೧೯, ೫೧೮, ೧೯೭೭.

### ಪತ್ರಿಕೆ ವರದಿ/ಲೇಖನಗಳು

೧. 'ನಕ್ಸಲ್ ಪ್ರದೇಶ: ಸಂಚಾರಿ ಆರೋಗ್ಯ ಕೇಂದ್ರಕ್ಕೆ ಚಾಲನೆ', *ಪ್ರಜಾವಾಣಿ,* ಪು. ೩, ದಿನಾಂಕ ೧.೭.೨೦೦೧೨.

೨. 'ನಕ್ಸಲ್ ಪ್ರದೇಶ ಪೀಡಿತ ಪ್ರದೇಶ ಜನತೆಗೆ ಭರವಸೆ ಮಹಾಪೂರ', *ವಿಜಯಕರ್ನಾಟಕ,* ದಿನಾಂಕ ೧.೭.೨೦೦೧೨.

೩. ಬಾಲಗುರುಮೂರ್ತಿ., 'ಪಾರ್ಥಿ', *ಪ್ರಜಾವಾಣಿ,* ಸಾಪ್ತಾಹಿಕ ಪುರವಣಿ, ದಿನಾಂಕ ೧.೬.೨೦೦೮.

೪. 'ಮಲೆಕುಡಿಯರ ಮನೆತೆರವು ಪ್ರಕರಣ ಸುಲ್ಕೇರಿಗೆ ಲೋಕಾಯುಕ್ತ ಭೇಟಿ', *ಉದಯವಾಣಿ,* ಪು. ೮, ದಿನಾಂಕ ೨೦.೧.೨೦೦೧೧.

೫. ಮರಿದೇವ ಹೂಗಾರ., 'ಗುಂಡ್ಯ ಯೋಜನೆ', ಈಟಿ.ವಿ. ಅಗ್ರ ರಾಷ್ಟ್ರೀಯ ಹಾಸನ ವರದಿ, ೨೨.೫.೨೦೦೯.

೬. ರೇವಣ್ಣ ಮಾಕಳ., 'ಸವಲತ್ತು ಕೇಳಿದರೆ ಸಬೂಬು ಬೇಡ', *ಪ್ರಜಾವಾಣಿ,* ಪು. ೧, ದಿನಾಂಕ ೧.೭.೨೦೦೧೨.

೭. ಲಕ್ಷ್ಮಿಮಚ್ಚಿನ., 'ಸುಲ್ಕೇರಿ: ಪ್ಲಾಸ್ಟಿಕ್ ಶೀಟ್‌ನಡಿ ಲನೇ ದಿನ...', *ಉದಯವಾಣಿ*, ಪು. ४, ದಿನಾಂಕ ೧೨.೨.೨೦೦೯.

೮. ಲೋಕೇಶ್ ಪೆರ್ಲಂಪಾಡಿ., 'ನಮ್ಮ ಕರಾವಳಿ', *ವಿಜಯ ಕರ್ನಾಟಕ*, ದಿನಾಂಕ ೧४.೦೩.೨೦೦೮.

೯. 'ಸುಲ್ಕೇರಿ ಲೋಕಾಯುಕ್ತ ತಂಡ ಭೇಟಿ', *ಕನ್ನಡಪ್ರಭ*, ದಿನಾಂಕ ೨೦.೧.೨೦೧೧.

**ಇಂಗ್ಲಿಷ್ ಪುಸ್ತಕಗಳು/ಲೇಖನಗಳು**

1. Abhishankar K.(ed)., 1973, "South Canara Gazette", Govt. of Karnataka
2. Abbe J.A. Dubas., "Hindu manners, customs and cermonies", 1806
3. Ayer Anantha Krishna L.K., "The Mysore Tribes and Casts", Vol. II, Mysore University, 1935
4. 'Central Acts and ordinances Law and Parlimentary affairs secretriate Notification' No. Law 58 LCR 1977. Order: Notification No. 03C 12016/34, 76-SC T-V.Dated 27, July 1942.
5. 'Central Acts and ordinances Law and Parlimentary affairs s ecretriate Notification' No. Law 58 LCR, 1977.
6. "Castes and Tribes of Southern India", by Edgar Thurston superintend of Madras Govt. Museum, correspondent strangers, science Anthropologic de paris socio correspondent society of anthropologies assisted by K.Rangachary of the Madras Govt. Museum, Govt. Press Madras Publication, vol. IV, Pg No. 439
7. 'Census of India'(Karnataka),1984 Ethnographic study of Scheduled Tribes : Malekudiya and yarava series 9, paper 5, Govt. press, Bangalore.
8. 'Census of India'(Karnataka), 2011, Census Data South Canara District, Download by Intenet
9. Das B.K., 'A Brief Ethnographic note of Malekudiya', A scheduled Tribe,Director of Census Operation, Karnataka, 1981
10. Das B.K., 'Malekudiyas in Ethnographic study of schedule Tribes', Director of census operation (Mimeograph) Bangalore, 1984
11. D'Souza Lawrence S.T, 'Malekudiyas, A Primitive Tribes of South India', UNESCO – Co action. Learning centre, Mangalore, 1995
12. Edgar Thurston., 'Ethnographic notes in Southern India', a sign educational services New Delhi, 1906
13. Ghurye G.S., 'The Scheduled Tribes', popular Prasar PVT Bombay, 1995
14. Govt. of India Report of Scheduled area and Schduled Tribes Commission. In 1960-61 Mange publication Govt. of India,1960

15. Gowda Shreedhar P., "Impact of Science and Technology on Tribunal Occupation, A study on Malekudiyas of Belthangady Taluk"(M.Phil Dissertation), 1992

16. "Hand Book of Karnataka", 2005, Karnataka Gazetteer Revised Edition, 2005.

17. Iyar L.K Ananthakrishna., "The Coorge Tribes and Castes", Garden Press, Madras, 1948

18. Iyar L.K., "The Mysore Tribes and Castes", vol., Mital Publication Delhi, 1998

19. Krishna Ayyar., "Malekudi Coorge Tribes and Caste", 1948

20. Lorence D'Souza s.j., "Koragas"(a primitive Tribe of South India), UNESCO co-action learning Centre Mangalore, 1981

21. Lorence D'Souza S.J., "Malekudiyas"(a primitive Tribe of South India), UNESCO co-action learning Centre Mangalore, 1994

22. Morab S.G., 1978, "The Malekudi", A study of the customery law of hills Tribe in Karnataka Anthropological Servey of ndia Mysore.

23. Metri K.M.D, "Forest Blossoms and the Concrete Jungle", Prasaranga, Kannada University, Hampi, 2011

24. Primary census Abstract 2001, Pg-337, 339, 485-487.

# ೨. ಕುಟುಂಬವಾರು ಮಾದರಿ ಸಮೀಕ್ಷೆ ನಮೂನೆ

**ಬುಡಕಟ್ಟು ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ–೫೮೩ ೨೭೬, ತಾ: ಹೊಸಪೇಟೆ, ಜಿ: ಬಳ್ಳಾರಿ.**
**ಮಲೆಕುಡಿಯ ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳ ಅಧ್ಯಯನ (ದಕ್ಷಿಣ ಕನ್ನಡ ಜಿಲ್ಲೆಯನ್ನು ಪರಿಗಣಿಸಿ)**
**(ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಮೀಕ್ಷೆ)**

**I ಸಾಮಾನ್ಯ ಮಾಹಿತಿ**

ಎ. ಸಮೀಕ್ಷೆಯ ದಿನಾಂಕ :
ಬಿ. ಬುಡಕಟ್ಟು : ಮಲೆಕುಡಿಯ
ಸಿ. ಮಾತೃಭಾಷೆ : ತುಳು
ಡಿ. ಮನೆದೇವರು :
ಇ. ಗೋತ್ರ/ಬೆಡಗು/ಬಳಿ/ಕುಲ

ಎಫ್. ಕುಲಚಿನ್ಹೆ :
ಜಿ. ಮನೆತನದ ಹೆಸರು :
ಹೆಚ್. ಮನೆ ಸಂಖ್ಯೆ :
ಐ. ಗ್ರಾಮ/ಪಟ್ಟಣ/ನಗರ :
ಜೆ. ವಾರ್ಡ್ :
ಕೆ. ಪಂಚಾಯಿತಿ :
ಎಲ್. ತಾಲೂಕು :

ಎಂ. ಜಿಲ್ಲೆ :
ಎನ್. ಭೂ ಹಿಡುವಳಿ (ಎಕರೆಗಳಲ್ಲಿ)
೧. ಒಣ :
೨. ನೀರಾವರಿ :
ಒ. ನಿವೇಶನ, ಮನೆ ಇಲ್ಲ :
ಪಿ. ನಿವೇಶನ ಇದೆ, ಮನೆ ಇಲ್ಲ :

**II ಸಾಮಾನ್ಯ ಮಾಹಿತಿ**

| ಕ್ರ ಸಂ | ಕುಟುಂಬದ ಸದಸ್ಯರ ಹೆಸರುಗಳು | ಸಂಬಂಧ | ಲಿಂಗ | ವಯಸ್ಸು | ಶಿಕ್ಷಣ | ವೈವಾಹಿಕ ಸ್ಥಾನಮಾನ | ಕಸುಬು | ಕುಟುಂಬ ಯೋಜನೆ | ಸರ್ಕಾರಿ ಸೌಲಭ್ಯಗಳು (?) | | | | |
|---|---|---|---|---|---|---|---|---|---|---|---|---|---|
| | | | | | | | | | ಒಟಿನ ಕಾರ್ಡ್ | ವಿಧುರ ವಿಧವೆ | ಅಂಗವಿಕಲ | ವೃದ್ಧಾಪ್ಯ ವೇತನ | ಶಿಷ್ಯ ವೇತನ |
| i | ii | iii | iv | v | vi | vii | viii | ix | x | xi | xii | xiii | Xiv |
| ೧ | | ಮುಖ್ಯಸ್ಥ | | | | | | | | | | | |
| ೨ | | | | | | | | | | | | | |
| ೩ | | | | | | | | | | | | | |
| ೪ | | | | | | | | | | | | | |
| ೫ | | | | | | | | | | | | | |
| ೬ | | | | | | | | | | | | | |
| ೭ | | | | | | | | | | | | | |
| ೮ | | | | | | | | | | | | | |
| ೯ | | | | | | | | | | | | | |
| ೧೦ | | | | | | | | | | | | | |

**ಕ್ಯೂ. ಪಶು ಸಂಪತ್ತು (ಸಂಖ್ಯೆ)**
೧. ಎತ್ತು, ಹೋರಿ :
೨. ಆಕಳು, ಕರು :
೩. ಎಮ್ಮೆ, ಕೋಣ :
೪. ಕುರಿ :
೫. ಮೇಕೆ :
೬. ಕೋಳಿ :
೭

**ಆರ್. ಮನೆ ವಿವರ**
೧. ಗುಡಾರ :
೨. ಗುಡಿಸಲು :
೩. ಟಿನ್ ಮನೆ :
೪. ದಾಬಾ ಮಾಳಿಗೆ :
೫. ಆರ್.ಸಿ.ಸಿ.ಮನೆ :
೬. ಹಂಚಿನ ಮನೆ :
೭. ಆಶ್ರಯ ಮನೆ :
೮. ಬಾಡಿಗೆ ಮನೆ :
೯.
೧೦. ನಿವೇಶನ
ಅ. ಸ್ವಂತದ್ದು :
ಆ. ಸರಕಾರದ್ದು :
೧೧. ಮನೆ
ಅ. ಸ್ವಂತದ್ದು :
ಆ. ಸರಕಾರದ್ದು :
೧೨. ವಿದ್ಯುತ್
ಅ. ಸ್ವಂತದ್ದು :
ಆ. ಸರಕಾರದ್ದು :

ಎಸ್. ಇತರ ಸೌಲಭ್ಯಗಳು
೧. ಪಡಿತರ ಚೀಟಿ
೨. ಗ್ಯಾಸ್
೩. ನಲ್ಲಿ
೪. ಶೌಚಾಲಯ
೫. ಸ್ನಾನಗೃಹ
೬. ಸೈಕಲ್
೭. ರೇಡಿಯೊ
೮. ಟೇಪ್‌ರೆಕಾರ್ಡರ್
೯. ಟಿ.ವಿ.
೧೦. ದೂರವಾಣಿ ಸಂಖ್ಯೆ
೧೧. ಮೊಬೈಲ್ ಸಂಖ್ಯೆ
೧೨. ಕಂಪ್ಯೂಟರ್

## ೩. ಮಾಹಿತಿ ನೀಡಿದ ವ್ಯಕ್ತಿಗಳ ವಿವರ

೧. ದಿನೇಶ್ ನಾಯಕ್ ಎಂ, ಸಸ್ಯ ಶ್ಯಾಮಲ, ವಿಟ್ಲ, ಔಷಧೀಯ ಸಸ್ಯ, ಪರಿಸರ ಪರಿಣಿತರು, ವಿಟ್ಲ.

೨. ನಾರಾಯಣ ರೈ, ಕುಕ್ಕುವಳ್ಳಿ ಶಿಕ್ಷಕರು.

೩. ದೇವಪ್ಪ ನ್ಯಾಕ್ ಜಿ, ಅಧ್ಯಕ್ಷರು, ಲ್ಯಾಂಪ್ಸ್, ಸುಳ್ಯ

೪. ರಾಮ. ಕೆ, ವಯಸ್ಸು ೮೦ ವರ್ಷ, ಕಲ್ಲಡ್ಕ, ತೊಟದ ಮೂಲೆ ಮನೆ, ದರ್ಬೆತ್ತಡ್ಕ ಅಂಚೆ, ಒಳಮೊಗರು ಗ್ರಾಮ, ಪುತ್ತುರು ತಾಲೂಕು, ದ.ಕ. ಜಿಲ್ಲೆ.

೫. ಶಂಕರ ಕುಡಿಯ, ವಯಸ್ಸು ೭೬ ವರ್ಷ. ಕಲ್ಲಡ್ಕ, ತೊಟದ ಮೂಲೆ ಮನೆ ದರ್ಬೆತ್ತಡ್ಕ ಅಂಚೆ, ಒಳಮೊಗರು ಗ್ರಾಮ, ಪುತ್ತುರು ತಾಲೂಕು, ದ.ಕ. ಜಿಲ್ಲೆ.

೬. ಶ್ರೀಮತಿ ಗಂಗಮ್ಮ, ವಯಸ್ಸು ೬೫, ಕಲ್ಲಡ್ಕ, ತೊಟದ ಮೂಲೆ ಮನೆ, ದರ್ಬೆತ್ತಡ್ಕ ಅಂಚೆ, ಒಳಮೊಗರು ಗ್ರಾಮ, ಪುತ್ತುರು ತಾಲೂಕು, ದ.ಕ. ಜಿಲ್ಲೆ.

೭. ಆನಂದ ಕುಡಿಯ, ವಯಸ್ಸು ೩೧, ಕಲ್ಲಡ್ಕ, ತೊಟದ ಮೂಲೆ ಮನೆ, ದರ್ಬೆತ್ತಡ್ಕ ಅಂಚೆ, ಒಳಮೊಗರು ಗ್ರಾಮ, ಪುತ್ತುರು ತಾಲೂಕು, ದ.ಕ. ಜಿಲ್ಲೆ.

೮. ವಸಂತ, ವಯಸ್ಸು ೨೯, ಕಲ್ಲಡ್ಕ, ತೋಟದ ಮೂಲೆ ಮನೆ, ದರ್ಬೆತ್ತಡ್ಕ ಅಂಚೆ, ಒಳಮೊಗರು ಗ್ರಾಮ, ಪುತ್ತುರು ತಾಲೂಕು, ದ.ಕ. ಜಿಲ್ಲೆ.

೯. ನಾಗೇಶ್, ವಯಸ್ಸು ೪೫, ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಉಗ್ರಾಣಿ.

೧೦. ಅಂಗಾರ, ೬೦ ವರ್ಷ, ಕುಲಕುಂದ, ಸುಬ್ರಹ್ಮಣ್ಯ.

೧೧. ನಾರಾಯಣ, ೩೮ ವರ್ಷ, ಗ್ರಾಮ ಪಂಚಾಯಿತಿ ಸದಸ್ಯರು, ಕುಕ್ಕೆ ಸುಬ್ರಹ್ಮಣ್ಯ.

೧೨. ಶ್ರೀಮತಿ ಚಂದ್ರಿಕಾ, ೩೫ ವರ್ಷ, ಯಾತಿಲ, ಗ್ರಾಮ ಪಂಚಾಯಿತಿ ಸದಸ್ಯರು, ಕುಕ್ಕೆ ಸುಬ್ರಹ್ಮಣ್ಯ.

೧೩. ರಾಮ, ೬೫ ವರ್ಷ, ಕುಕ್ಕೆ ಸುಬ್ರಹ್ಮಣ್ಯ.

೧೪. ಕೃಷ್ಣ, ೬೦ ವರ್ಷ, ಕುಕ್ಕೆ ಸುಬ್ರಹ್ಮಣ್ಯ.

೧೫. ಲೋಕೇಶ್, ಪತ್ರಿಕಾ ವರದಿಗಾರರು ಹಾಗೂ ಛಾಯಾಗ್ರಾಹಕರು, ಶಾಂತಲಾ ಸ್ಟುಡಿಯೋ, ಕುಕ್ಕೆ ಸುಬ್ರಮಣ್ಯ.

೧೬. ಕೃಷ್ಣಪ್ಪ ತಂದೆ ಸುಬ್ಬಪ್ಪ, ೬೫ ವರ್ಷ, ದೇವರಗದ್ದೆ, ಸುಬ್ರಹ್ಮಣ್ಯ.

೧೭. ಕೋಚ ತಂದೆ, ೫೫ ವರ್ಷ, ಆದಿಸುಬ್ರಹ್ಮಣ್ಯ.

೧೮. ಕುಮಾರ ತಂದೆ ಕೃಷ್ಣಪ್ಪ, ೩೫ ವರ್ಷ, ದೇವರಗದ್ದೆ, ಸುಬಹ್ಮಣ್ಯ.

೧೯. ಜನಾರ್ಧನ ತಂದೆ ಕುಂಡ ಮಲೆಕುಡಿಯ, ೩೬ ವರ್ಷ, ದೇವರಗದ್ದೆ, ಸುಬ್ರಹ್ಮಣ್ಯ.

೨೦. ಮಾಧವ ತಂದೆ ಪೊಡಿಯ, ೨೪ ವರ್ಷ, ದೇವರಗದ್ದೆ, ಸುಬ್ರಹ್ಮಣ್ಯ.

೨೧. ಶಿವಪ್ಪ, ೨೮ ವರ್ಷ, ದೇವರಗದ್ದೆ.

೨೨. ತನಿಯಪ್ಪ ತಂದೆ ರಾಮಪ್ಪ, ೬೦ ವರ್ಷ, ಕೋಟಿಗದ್ದೆ, ಸುಬ್ರಹ್ಮಣ್ಯ.

೨೩. ಕೃಷ್ಣ, ೧೮ ವರ್ಷ, ಸುಬ್ರಹ್ಮಣ್ಯ.

೨೪. ಸುಂದರ ತಂದೆ ಕೊರಗಪ್ಪ, ೪೮ ವರ್ಷ, ದೇವರಗದ್ದೆ.

೨೫. ಉದಯ ತಂದೆ ಬಾಬು, ೩೦ ವರ್ಷ, ಸುಬ್ರಹ್ಮಣ್ಯ.

೨೬. ಬಾಸ್ಕರ ತಂದೆ ಬಾಬು ಎ, ೧೮ ವರ್ಷ, ಅರಗುಡಿ, ಸುಬ್ರಹ್ಮಣ್ಯ.

೨೭. ಸುಕೇಶ ತಂದೆ ನೋಣಯ್ಯ, ೧೫ ವರ್ಷ, ಬನಾರಿ ಮನೆ, ಬಲ್ಯ, ಕಡಬ, ಪುತ್ತೂರು ತಾಲೂಕು.

೨೮. ಸಂದೇಶ ಕೆ. ತಂದೆ ದೇಜಪ್ಪ, ೧೮ ವರ್ಷ, ದೇವರಗದ್ದೆ, ಸುಬ್ರಹ್ಮಣ್ಯ.

೨೯. ಮೋಂಡ ತಂದೆ ಡಿ. ರಾಮ, ೩೫ ವರ್ಷ, ಕೋಡಿಕಜೆ, ಸುಬ್ರಹ್ಮಣ್ಯ(ಯಜಮಾನ).

೩೦. ಸುಬಹ್ಮಣ್ಯ ಕೆ.ಎಲ್, ೩೬ ವರ್ಷ, ದೇವಸ್ಥಾನದ ಟ್ರಸ್ಟಿ.

೩೧. ಪೊಡಿಯಾ ತಂದೆ ಕೊರಗಪ್ಪ, ೫೩ ವರ್ಷ, ದೇವರಗದ್ದೆ, LAMPS ಸದಸ್ಯ.

೩೨. ದೇವಿಪ್ರಸಾದ್, ಉಪನ್ಯಾಸಕರು, ಎಸ್.ಎಸ್. ಪದವಿಪೂರ್ವ ಕಾಲೇಜು, ಸುಬ್ರಹ್ಮಣ್ಯ.

೩೩. ಸುಂದರ, ಮಲೆಕುಡಿಯ ಎ.ವಿ., ೪೨ ವರ್ಷ, ನುಚ್ಚಿಲ, ಸುಬ್ರಹ್ಮಣ್ಯ.

೩೪. ಕೃಷ್ಣ ಮಲೆಕುಡಿಯ ಎ.ವಿ, ೩೨ ವರ್ಷ, ನುಚ್ಚಿಲ, ಸುಬ್ರಹ್ಮಣ್ಯ.

೩೫. ಹರಿಣಾಕ್ಷಿ(ಬಿ.ಎ), ೨೮ ವರ್ಷ, ನುಚ್ಚಿಲ, ಸುಬ್ರಹ್ಮಣ್ಯ.

೩೬. ಗಿರಿಜ, ೪೨ ವರ್ಷ, ನುಚ್ಚಿಲ, ಸುಬ್ರಹ್ಮಣ್ಯ.

೩೭. ಚಿನ್ನಪ್ಪ ಮಲೆಕುಡಿಯ, ೫೦ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೩೮. ಶಾಂತಪ್ಪ ಮಲೆಕುಡಿಯ, ೩೫ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೩೯. ದಾಸಪ್ಪ ಮಲೆಕುಡಿಯ, ೫೨ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೦. ಹೊನ್ನಮ್ಮ ಗಂಡ ಗುಡ್ಡಪ್ಪ, ೪೦ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೧ ಐತ್ತಪ್ಪ ಮಲೆಕುಡಿಯ ತಂದೆ ರಾಮಣ್ಣ ಮಲೆಕುಡಿಯ, ೪೯ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೨. ಶ್ರೀಮತಿ ಗಿರಿಜ ಗಂಡ ಬೆಳ್ಳಿಯಪ್ಪ, ೩೫ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೩. ಕೋಚ ಮಲೆಕುಡಿಯ ತಂದೆ ಐತಪ್ಪ ಮಲೆಕುಡಿಯ, ೬೫ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೪. ಕಮಲ ಗಂಡ ಕೊರಗಪ್ಪ ಮಲೆಕುಡಿಯ, ೬೫ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೫. ಜಾನಪ್ಪ ಮಲೆಕುಡಿಯ ತಂದೆ ರಾಮಣ್ಣ ಮಲೆಕುಡಿಯ, ೩೯ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೬. ಬಾಬು ಮಲೆಕುಡಿಯ ತಂದೆ ಕೊರಗಪ್ಪ ಮಲೆಕುಡಿಯ, ೪೨ ವರ್ಷ, ಹರಿಗುಡಿ, ಸುಬ್ರಹ್ಮಣ್ಯ.

೪೭. ಕುಶಾಲಪ್ಪ ಮಲೆಕುಡಿಯ, ೪೬ ವರ್ಷ, ಕಲ್ಲುಗುಡ್ಡೆ, ಸುಬ್ರಹ್ಮಣ್ಯ.

೪೮. ರಾಘವ ಮಲೆ ತಂದೆ  ಕೂಸಪ್ಪ ಮಲೆ, ೫೫ ವರ್ಷ, ಕಲ್ಲುಗುಡ್ಡೆ, ಸುಬ್ರಹ್ಮಣ್ಯ.

೪೯. ಈರಮ್ಮ, ೭೫ ವರ್ಷ, ಕಲ್ಲುಗುಡ್ಡೆ, ಸುಬ್ರಹ್ಮಣ್ಯ.

೫೦. ರಾಮಣ್ಣ, ಬಿಲ್ ಕಲೆಕ್ಟರ್, ಗ್ರಾಮ ಪಂಚಾಯಿತಿ, ಸುಬ್ರಹ್ಮಣ್ಯ.

೫೧. ಅಕ್ಕಯ್ಯ ಗಂಡ ಲಕ್ಷ್ಮಣ, ೬೫ ವರ್ಷ, ಕಲ್ಲುಗುಡ್ಡೆ, ಸುಬ್ರಹ್ಮಣ್ಯ.

೫೨. ಕರಿಯಪ್ಪ ತಂದೆ ವೀರಪ್ಪ, ೪೫ ವರ್ಷ, ಸುಬ್ರಮಣ್ಯ.

೫೩. ಶ್ಯಾಮಣ್ಣ ತಂದೆ ಬಾಬುಗೌಡ KPTCL, ೫೦ ವರ್ಷ, ಮಂಗಳೂರು, ಬೋಳಂತೂರು ಗುಂಡೆಮಜಲು, ಬಂಟ್ವಾಳ.

೫೪. ಮೋನಪ್ಪ ತಂದೆ ಬಾಬುಗೌಡ, ೪೬ ವರ್ಷ, ಬೋಳಂತೂರು ಗ್ರಾಮ, ಸುರಿಬೈಲು ಅಂಚೆ, ಬಂಟ್ವಾಳ.

೫೫. ತನಿಯಪ್ಪ ಮಲೆ ತಂದೆ ಐತಪ್ಪ, ೫೦ ವರ್ಷ, ಸಿಂಬಳ ಮನೆ, ನೆರಿಯ, ಬೆಳ್ತಂಗಡಿ.

೫೬. ಬಾಬು ಮಲೆ, ಗುಂಡ್ಯ ತೋಟ ಮನೆ, ಸಿರಿಬಾಗಿಲು, ಕೊಂಬಾರು ಗ್ರಾಮ ಪಂಚಾಯಿತಿ, ಪುತ್ತೂರು.

೫೭. ಸಂತೋಷ್ ಕುಮಾರ್, ೨೭ ವರ್ಷ, ಶಿಕ್ಷಕರು, ಸರ್ಕಾರಿ ಹಿ. ಪ್ರಾ. ಶಾಲೆ, ಪೇರಲತ್ತಡ್ಕ, ಪುತ್ತೂರು.

೫೮. ಸಂಕಪ್ಪ ಮಲೆಕುಡಿಯ ತಂದೆ ರಾಮ ಮಲೆಕುಡಿಯ, ೬೦ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ ಪುತ್ತೂರು.

೫೯. ತಾರಾನಾಥ ತಂದೆ ನಾರಾಯಣ, ೨೬ವರ್ಷ, ಪೈಂತಿ, ಮೊಗೇರು ಮನೆ, ಇರ್ದೆ ಗ್ರಾಮ ಪುತ್ತೂರು.

೬೦. ಮಹಾಲಿಂಗ ತಂದೆ ರಾಮಣ್ಣ, ೬೮ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ, ಪುತ್ತೂರು.

೬೧ ಚೆನ್ನಪ್ಪ ತಂದೆ ಕೊರಗಪ್ಪ, ೭೫ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ, ಪುತ್ತೂರು.

೬೨ ನಾರಾಯಣ ತಂದೆ ಚೆನ್ನಪ್ಪ, ೩೭ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ, ಪುತ್ತೂರು.

೬೩. ಮುತ್ತಮ್ಮ ತಂದೆ ರಾಮ ಮಲೆಕುಡಿಯ,    ೪೫ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ, ಪುತ್ತೂರು.

೬೪. ಬಾಲಕೃಷ್ಣ ಗೌಡ, ೫೫ ವರ್ಷ, ಪೈಂತಿ ಮೊಗೇರು ಮನೆ, ಇರ್ದೆ ಗ್ರಾಮ, ಪುತ್ತೂರು.

೬೫. ಹರಿಪ್ರಕಾಶ್ ಬೈಲಾಡಿ, ಉಪನ್ಯಾಸಕರು, ೪೩ ವರ್ಷ, ಸರ್ಕಾರಿ ಪದವಿ ಪೂರ್ವ ಕಾಲೇಜು, ಬೆಳಿಯೂರುಕಟ್ಟೆ, ಪುತ್ತೂರು.

೬೬. ಚನ್ನಬಸವಯ್ಯ, ಉಪನ್ಯಾಸಕರು, ೪೩ ವರ್ಷ, ಸರ್ಕಾರಿ ಪದವಿ ಪೂರ್ವ ಕಾಲೇಜು, ಬೆಟ್ಟಂಪ್ಪಾಡಿ, ಪುತ್ತೂರು.

೬೭. ಶಂಭು ಭಟ್, ಅಧ್ಯಕ್ಷರು, ಗ್ರಾಮ ಪಂಚಾಯಿತಿ, ಇರ್ದೆ ಬೆಟ್ಟಂಪ್ಪಾಡಿ, ಪುತ್ತೂರು.

೬೮. ವಿಶ್ವನಾಥ, ತಂದೆ ಚೆಂಕ್ರ ಮಲೆಕುಡಿಯ, ೩೦ ವರ್ಷ, ಮಲ್ಲಡ್ಕ ಮನೆ, ಕಡಿರುದ್ಯಾವರ ಗ್ರಾಮ, ಮಿತ್ತಬಾಗಿಲು ಪಂಚಾಯಿತಿ, ಬೆಳ್ತಂಗಡಿ.

೬೯. ಮುತ್ತಪ್ಪ ಮಲೆಕುಡಿಯ ತಂದೆ ಬಾಬು ಮಲೆಕುಡಿಯ, ೪೮ ವರ್ಷ, ಪಾಲಡ್ಕ ಮನೆ, ಬಲ್ಲೆಮಂಜೆ ಪೋಸ್ಟ್-ಗ್ರಾಮ ಪಂಚಾಯಿತಿ, ಬೆಳ್ತಂಗಡಿ.

೭೦. ವಸಂತ ಕುಮಾರ್, ಅತಿಥಿ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಉಪ್ಪಿನಂಗಡಿ, ೩೫ ವರ್ಷ, ಹಾಡಿಕಲ್ಲು ಮಡಪ್ಪಾಡಿ, ಸುಳ್ಯ.

೭೧. ಪೋಡಿಯ ಎಂ, ಕೊಕ್ಕಡ.

೭೨. ಕಿಟ್ಟ ಮಲೆಕುಡಿಯ, ೭೫ ವರ್ಷ, ಕುರ್ಲೆ, ಕೊಕ್ಕಡ.

೭೩. ತಿಮ್ಮಯ್ಯ, ೪೦ ವರ್ಷ, ಕುರ್ಲೆ, ಕೊಕ್ಕಡ.

೭೪. ಮಾದಪ್ಪ, ೩೭ ವರ್ಷ, ಕುರ್ಲೆ, ಕೊಕ್ಕಡ.

೭೫. ಹೊನ್ನಪ್ಪ, ೬೩ ವರ್ಷ, ಕುರ್ಲೆ, ಕೊಕ್ಕಡ.

೭೬. ನಾರಾಯಣ ಬರಿಕೆ, ೫೨ ವರ್ಷ, ಪಿತ್ತಲಕೋಡಿ, ಪಟ್ರಮೆ.

೭೭. ಬಾಬು, ೪೮ ವರ್ಷ, ಮುಂಡ್ರಪಳಿಕೆ, ಕೊಕ್ಕಡ.

೭೮. ಲಿಂಗಪ್ಪ, ಪೊನ್ನತ್ತಿಮಾರು(ಪಟ್ರಮೆ, ಅಂಚೆ ಇಲಾಖೆ).

೭೯. ಸುಂದರ, ೪೯ ವರ್ಷ, ಪೊನ್ನತ್ತಿಮಾರು.

೮೦. ಯಮುನ, ೬೦ ವರ್ಷ, ಕಕ್ಕುದೋಳಿ, ಕೊಕ್ಕಡ.

೮೧. ಶಾಂತಮ್ಮ, ೬೫ ವರ್ಷ, ಕಕ್ಕುದೋಳಿ.

೮೨. ವಸಂತ, ಕೊಕ್ಕಡ.

೮೩. ಹೊನ್ನಪ್ಪ ಮಲೆಕುಡಿಯ, ೫೦ ವರ್ಷ, ಗ್ಯಾಂಗ್ ಮೆನ್, ಗುಂಡ್ಯ ತೋಟ.

೮೪. ರವಿ ಮಲೆಕುಡಿಯ ತಂದೆ ಬಾಬು ಮಲೆಕುಡಿಯ, ೩೧ ವರ್ಷ, ಗುಂಡ್ಯ ತೋಟ.

೮೫. ಯಮುನ ಗಂಡ ಲಿಂಗಪ್ಪ ಮಲೆಕುಡಿಯ, ೪೫ ವರ್ಷ, ಗುಂಡ್ಯತೋಟ.

೮೬. ತನಿಯಪ್ಪ ಮಲೆಕುಡಿಯ, ಪುಟ್ಟಣ್ಣ ಮಲೆಕುಡಿಯ, ಗುಂಡ್ಯತೋಟ.

೮೭. ವೆಂಕಮ್ಮ ಗಂಡ ಲೇಟ್ ಪುಟ್ಟಣ್ಣ ಮಲೆಕುಡಿಯ, ೮೦ ವರ್ಷ, ಗುಂಡ್ಯತೋಟ.

೮೮. ವಾಸಮ್ಮ ಗಂಡ ಲೇಟ್ ತನಿಯಪ್ಪ, ೫೮ ವರ್ಷ, ಗುಂಡ್ಯತೋಟ.

೮೯. ಬಾಲಪ್ಪ ಮಲೆಕುಡಿಯ ತಂದೆ ಶಂಕರ ಮಲೆಕುಡಿಯ, ೫೫ ವರ್ಷ, ಗುಂಡ್ಯತೋಟ.

